# ಕನ್ನಡ ಐತಿಹಾಸಿಕ ಕಾದಂಬರಿಗಳಲ್ಲಿ ಮಹಿಳಾ ಪಾತ್ರಗಳು

(ಕನ್ನಡ ವಿಶ್ವವಿದ್ಯಾಲಯಕ್ಕೆ ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.)
ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕರು

ಲಕ್ಷ್ಮೀಬಾಯಿ ಎಲ್.ವಿ.

ಮಾರ್ಗದರ್ಶಕರು

ಡಾ. ಎ. ಸುಬ್ಬಣ್ಣ ರೈ

ಪ್ರಾಧ್ಯಾಪಕರು



ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೫

# ಕನ್ನಡ ಐತಿಹಾಸಿಕ ಕಾದಂಬರಿಗಳಲ್ಲಿ ಮಹಿಳಾ ಪಾತ್ರಗಳು

(ಕನ್ನಡ ವಿಶ್ವವಿದ್ಯಾಲಯಕ್ಕೆ ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.)
ಪದವಿಗಾಗಿ ಸಾದರಪಡಿಸಿದ ಮಹಾಪ್ರಬಂಧ)



ಸಂಶೋಧಕರು

**ಲಕ್ಷ್ಮಿಬಾಯಿ ಎಲ್.ವಿ.**

ಮಾರ್ಗದರ್ಶಕರು

**ಡಾ. ಎ. ಸುಬ್ಬಣ್ಣ ರೈ**

ಪ್ರಾಧ್ಯಾಪಕರು




ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೫

# ಸಂಶೋಧಕರ ಘೋಷಣಾ ಪತ್ರ

**ಕನ್ನಡ ಐತಿಹಾಸಿಕ ಕಾದಂಬರಿಗಳಲ್ಲಿ ಮಹಿಳಾ ಪಾತ್ರಗಳು** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗದ ಪ್ರಾಧ್ಯಾಪಕರಾದ **ಡಾ. ಎ. ಸುಬ್ಬಣ್ಣ ರೈ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

Lalo

**(ಲಕ್ಷ್ಮಿಬಾಯಿ ಎಲ್.ವಿ.)**
ಪಿಎಚ್.ಡಿ. ಸಂಶೋಧನಾ ವಿದ್ಯಾರ್ಥಿನಿ
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ-೫೮೩ ೨೭೬**

**ದಿನಾಂಕ** : 11-05-2015
**ಸ್ಥಳ** : ವಿದ್ಯಾರಣ್ಯ

# ಮಾರ್ಗದರ್ಶಕರ ದೃಢೀಕರಣ ಪತ್ರ

**ಲಕ್ಷ್ಮಿಬಾಯಿ ಎಲ್.ವಿ.** ಇವರು ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಕನ್ನಡ ಐತಿಹಾಸಿಕ ಕಾದಂಬರಿಗಳಲ್ಲಿ ಮಹಿಳಾ ಪಾತ್ರಗಳು** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದಾರೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**(ಡಾ. ಎ. ಸುಬ್ಬಣ್ಣ ರೈ)**
ಪ್ರಾಧ್ಯಾಪಕರು
ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ–೫೮೩ ೨೭೬**

ದಿನಾಂಕ : ೧೧.೫.೨೦೧೫
ಸ್ಥಳ : ವಿದ್ಯಾರಣ್ಯ

# ಪರಿವಿಡಿ

ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ ವ್ಯಾಪ್ತಿ ಮತ್ತು ವೈಧಾನಿಕತೆ

---

೧.೧. ಅಧ್ಯಯನದ ಉದ್ದೇಶ

೧.೨. ಅಧ್ಯಯನದ ವ್ಯಾಪ್ತಿ

೧.೩. ಅಧ್ಯಯನದ ವೈಧಾನಿಕತೆ

# ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವೈಧಾನಿಕತೆ

ಕನ್ನಡದಲ್ಲಿ ಹೊಸ ಹೊಸ ಸಾಹಿತ್ಯ ರೂಪಗಳು ವೈವಿಧ್ಯತೆಗಳಿಂದ ಸಮೃದ್ಧವಾಗಿ ಬೆಳೆದುಬಂದಿವೆ. ಪ್ರಾಚೀನ ಕಾಲದಲ್ಲಿ ಚಂಪೂ, ರಗಳೆ, ಷಟ್ಪದಿ, ಸಾಂಗತ್ಯ ಹೇಗೆ ಮುಖ್ಯವೋ ಹಾಗೇ ಆಧುನಿಕ ಕಾಲದಲ್ಲಿ ಕಾದಂಬರಿ, ಕಾವ್ಯ, ಕಥೆ, ನಾಟಕ, ಪ್ರಬಂಧ, ವಿಮರ್ಶೆ, ಆತ್ಮಚರಿತ್ರೆ, ಜೀವನ ಚರಿತ್ರೆಗಳು ಮುಖ್ಯವಾಗಿವೆ. ಆಧುನಿಕ ಕನ್ನಡ ಸಾಹಿತ್ಯವು ಪ್ರಮುಖವಾಗಿ ನವೋದಯ, ಪ್ರಗತಿಶೀಲ, ನವ್ಯ, ದಲಿತ ಬಂಡಾಯ ಎಂಬ ಸಾಹಿತ್ಯ ಘಟ್ಟಗಳಾಗಿ ಅತ್ಯಂತ ಜನಪ್ರಿಯವಾಗಿವೆ. ಇಂಥ ಸಾಹಿತ್ಯ ರೂಪಗಳಲ್ಲಿ ಕಾದಂಬರಿಯು ಅತ್ಯಂತ ಪ್ರಮುಖವಾದುದು. ಕಾದಂಬರಿಯು ತನ್ನ ಆಳ-ವಿಸ್ತಾರಗಳನ್ನು ಹೆಚ್ಚಿಸಿಕೊಳ್ಳುತ್ತಲೇ ಇಂದು ಕನ್ನಡದ ಪ್ರಮುಖ ಸಾಹಿತ್ಯ ಪ್ರಕಾರವಾಗಿ ಬೆಳೆದುನಿಂತಿವೆ. ಕನ್ನಡ ಕಾದಂಬರಿಗಳು ಸಾಮಾಜಿಕ, ಪೌರಾಣಿಕ, ಐತಿಹಾಸಿಕ, ಪತ್ತೇದಾರಿ ಎಂಬ ವಿವಿಧ ಪ್ರಭೇದಗಳಲ್ಲಿ ರಚನೆಗೊಂಡಿವೆ. ಸಾಹಿತ್ಯ ಕ್ಷೇತ್ರದಲ್ಲಿ ಐತಿಹಾಸಿಕ ಕಾದಂಬರಿಗಳು ತಮ್ಮದೇ ಆದ ಸಮಕಾಲೀನ ಬದುಕಿನ ಒಳನೋಟಗಳನ್ನೂ, ಇತಿಹಾಸದ ಅಂಶಗಳನ್ನೂ ತೆರೆದಿಟ್ಟಿವೆ.

ಪುರಾಣ ಮತ್ತು ಇತಿಹಾಸವನ್ನು ಮುರಿದು ಕಟ್ಟುವ ಕಾರ್ಯ ಸೃಜನಶೀಲ ಸಾಹಿತ್ಯದಲ್ಲಿ ಮೊದಲಿನಿಂದಲೂ ನಡೆದುಕೊಂಡು ಬಂದಿದೆ. ಅಂಥ ಪರಂಪರೆಯಲ್ಲಿ ಹಲವಾರು ಕೃತಿಗಳು ರಚನೆಗೊಂಡಿರುವುದು ವಿನೂತನವಾಗಿದೆ. ಕನ್ನಡ ಕಾವ್ಯಗಳಲ್ಲಿ ಪ್ರಾಚೀನ ಕಾಲದಿಂದಲೂ ಚಾರಿತ್ರಿಕ ಸಂಗತಿಗಳು ದೊರೆಯುತ್ತವೆಯಾದರೂ ಅವುಗಳ ಬಳಕೆಯ ವಿಧಾನಗಳು ಬದಲಾಗಿ ರುವುದನ್ನು ಕಾಣುತ್ತೇವೆ. ಪ್ರಾಚೀನ ಕಾವ್ಯಗಳಲ್ಲಿ ಇತಿಹಾಸ ವಸ್ತು ಪ್ರಾಸಂಗಿಕವಾಗಿತ್ತೇ ಹೊರತು ಪ್ರಧಾನವಾಗಿರಲಿಲ್ಲ. ಮಧ್ಯಕಾಲೀನ ಮತ್ತು ಆಧುನಿಕ ಕಾಲದಲ್ಲಿ ಇತಿಹಾಸವೇ ಪ್ರಧಾನವಾಯಿತು. ಇತಿಹಾಸದ ಮೇಲೆ ರಚಿತವಾಗಿರುವ ಕೃತಿಗಳನ್ನು ಐತಿಹಾಸಿಕ ಕೃತಿಗಳೆಂದು ಕರೆಯಲಾಯಿತು. ಹೀಗೆ ಪುರಾಣದಲ್ಲಿ ಸೇರಿಕೊಂಡ ಇತಿಹಾಸವು ಬೇರ್ಪಟ್ಟು ಎರಡು ಪ್ರತ್ಯೇಕ ಶಿಸ್ತುಗಳಾಗಿ ಬೆಳೆದು ಬಂದವು.

ಚಾರಿತ್ರಿಕ ವಸ್ತುವಿನ ಪ್ರಜ್ಞೆಯು ಪ್ರಾಚೀನ ಕಾಲದ ಕವಿಗಳಲ್ಲಿ ಇತ್ತು ಎನ್ನುವುದನ್ನು ಆ ಕಾಲದಲ್ಲಿ ರಚನೆಗೊಂಡ ಕೃತಿಗಳನ್ನು ವೀಕ್ಷಿಸಿದಾಗ ಗೊತ್ತಾಗುತ್ತದೆ. ಪಂಪ ಕವಿಯು ಪುರಾಣ ವಸ್ತುವನ್ನು ತನ್ನ ಕೃತಿಗೆ ಅಳವಡಿಸಿದರೂ, ಐತಿಹಾಸಿಕ ವ್ಯಕ್ತಿಯಾದ ಅರಿಕೇಸರಿಯನ್ನು ತನ್ನ

ಕಾವ್ಯದ ನಾಯಕನನ್ನಾಗಿ ಮಾಡಿಕೊಂಡಿದ್ದಾನೆ. ಹೀಗಾಗಿ ಇತಿಹಾಸ ಮತ್ತು ಪುರಾಣವನ್ನು ಬಳಸಿಕೊಂಡರೂ ಅವುಗಳ ಅಂತರವನ್ನು ಒಡೆಯುವ ಕೆಲಸ ಮೊದಲೇ ನಡೆದಿತ್ತು.

ಕಾದಂಬರಿಗಳು ಸಮಾಜಕ್ಕೆ ಹಿಡಿದ ಕನ್ನಡಿಗಳು. ಅಲ್ಲಿ ಕಾಣುವುದು ಸಮಾಜದ ಒಳಿತು ಕೆಡುಕಿನ ಮುಖ. ಕಾದಂಬರಿಕಾರರು ಸಮಾಜದಿಂದ ಪ್ರಭಾವಿತರಾದಂತೆ, ಸಮಾಜದ ಮೇಲೂ ತಮ್ಮ ಬರವಣಿಗೆಯ ಮುಖಾಂತರ ಪ್ರಭಾವ ಬೀರುತ್ತಾರೆ. ಇಂಗ್ಲೀಷ್ ಸಾಹಿತ್ಯವನ್ನು ಚೆನ್ನಾಗಿ ಬಲ್ಲ ಕನ್ನಡದ ಸಾಹಿತಿಗಳು ಸ್ವತಂತ್ರವಾದ ಕಾದಂಬರಿಗಳನ್ನು ಬರೆದರು. ಬಂಗಾಳಿ, ಮರಾಠಿ ಭಾಷೆಗಳಿಂದ ಉಜ್ವಲವಾದ ದೇಶಪ್ರೇಮ ಮತ್ತು ಭಾಷಾಭಿಮಾನವನ್ನು, ಸ್ವಾಭಿಮಾನವನ್ನು ತುಂಬಿದ ಸ್ವಾರಸ್ಯಪೂರ್ಣ ಕೃತಿಗಳನ್ನು ಅನುವಾದಿಸಿದರು. ಇವರಲ್ಲಿ ವೆಂಕಟೇಶ ತಿರುಕೋ, ಗಳಗನಾಥ, ಬಿ. ವೆಂಕಟಾಚಾರ್ಯರು ಪ್ರಮುಖರು. ಆಧುನಿಕ ಸಂದರ್ಭದಲ್ಲಿ ಗಳಗಳನಾಥರ ಕಾದಂಬರಿಗಳು ತೀರಾ ಮೊದಲಿನ ಕೃತಿಗಳಾದರೂ ಚಾರಿತ್ರಿಕ ವ್ಯಕ್ತಿ, ಘಟನೆಗಳನ್ನು ಆಧರಿಸಿ ಬರೆದವುಗಳಾಗಿವೆ.

ಮಾನವರ ಸಾಹಸ ವೃತ್ತಿ, ಶೌರ್ಯ, ಧೈರ್ಯ, ಆಶೆ-ನಿರಾಶೆಗಳು ಬಹುಮಟ್ಟಿಗೆ ಎಲ್ಲ ಕಾಲಮಾನದಲ್ಲಿ ಒಂದೇ ತೆರನಾಗಿರುತ್ತವೆ. ಆದರೆ ಮನುಷ್ಯರ ಸ್ವಭಾವದಿಂದಾಗಿ ವ್ಯತ್ಯಾಸ ಹೊಂದುತ್ತವೆ. ಅವರ ಸ್ವಭಾವವನ್ನೂ, ಭಾವರಸಗಳನ್ನೂ ಕೆರಳಿಸಿ, ಸಾಗಿಸಿಕೊಂಡು ಹೋಗುವ ಕೆಲಸದಲ್ಲಿ ಇತಿಹಾಸ ಅರ್ಥಾತ್ ಅವರ ಕಾಲದ ಸಂಸ್ಕೃತಿ, ಜನಜೀವನ, ಸಮಸ್ಯೆ, ಪರಿಸರ ಆವರಣಗಳು ಕಾರಣವಾಗುತ್ತವೆ. ಇದರಿಂದ ಆ ಕಾಲದ ಜನಜೀವನದ ಬಣ್ಣವೆಂತಹದು? ಎಂದು ತೋರಿಸಿಕೊಡುವ ಕೆಲಸ ಐತಿಹಾಸಿಕ ಕಾದಂಬರಿಕಾರರ ಮೇಲೆ ಬೀಳುತ್ತದೆ. ಐತಿಹಾಸಿಕ ಕಾದಂಬರಿಕಾರರು ಆಯಾ ಕಾಲದ ಬದುಕಿನ ಧ್ವನಿ, ವಿಧಿ-ವಿಧಾನಗಳನ್ನು, ಸತ್ವ, ಗಟ್ಟಿತನ ಇವೆಲ್ಲವುಗಳನ್ನು ಅರ್ಥ ಮಾಡಿಕೊಂಡು ಕಾದಂಬರಿಗಳನ್ನು ರಚಿಸಬೇಕಾಗುತ್ತದೆ. ಆ ಕಾಲದ ಈ ಎಲ್ಲ ಸಂಗತಿಗಳನ್ನು ಅರ್ಥೈಸಿಕೊಳ್ಳಲು ಐತಿಹಾಸಿಕ ದಾಖಲೆಗಳ ಮೂಲಕ ಸಂದರ್ಭೋಚಿತ ಕಲ್ಪನೆಗಳನ್ನು ಬೆರೆಸಿ, ಆ ಕಾಲಕ್ಕೆ ಹೋಗಿ ವಿಚಾರ ಮಾಡಬೇಕಾಗುತ್ತದೆ. ಈ ದಿಸೆಯಲ್ಲಿ ಅವರಿಗೆ ಲಿಖಿತ ಹಾಗೂ ಮೌಖಿಕ ದಾಖಲೆಗಳು ಆಧಾರವಾಗುತ್ತವೆ.

ಐತಿಹಾಸಿಕ ಕಾದಂಬರಿ ಎಂದರೆ ಕೇವಲ ಇತಿಹಾಸದ ನಿರೂಪಣೆಯಲ್ಲ. ಆ ಕಾಲದ ವಾತಾವರಣದ ಚಿತ್ರಣ. ಎ.ಆರ್. ಕೃಷ್ಣಶಾಸ್ತ್ರಿ ಅವರ ಪ್ರಕಾರ ಚರಿತ್ರೆಯೆಂದರೆ ಕೇವಲ ರಾಜಕೀಯ ಚರಿತ್ರೆಯಾಗಬೇಕಿಲ್ಲ. ರಾಜರ ಕಾಲ, ಯುದ್ಧ, ತಂತ್ರ ಇವು ಅಷ್ಟೇ ದೇಶದ ಚರಿತ್ರೆಯಲ್ಲ. ರಾಜನೊಬ್ಬನಿಂದ ದೇಶವಾಗುವುದಿಲ್ಲ. ದೇಶವೆಂದರೆ ಅದರ ಪ್ರಜೆಗಳು, ಅವರ ಆಗುಹೋಗುಗಳು, ದೇಶದ ಚರಿತ್ರೆಯ ಹಾಸುಹೊಕ್ಕುಗಳು. ಆದ್ದರಿಂದ ಜನರ ಆರ್ಥಿಕ ಸ್ಥಿತಿ, ಸುಖ-ಸಂಪತ್ತುಗಳು, ಧರ್ಮ, ಕರ್ಮ, ಶಾಂತಿ, ಸಂತೃಪ್ತಿ, ಕಲೆ, ಶಾಸ್ತ್ರ, ಸಾಹಿತ್ಯ ಇವೆಲ್ಲವೂ ದೇಶದ ಚರಿತ್ರೆಯಲ್ಲಿ ಬರತಕ್ಕವುಗಳೇ, ಬರಬೇಕಾದವುಗಳೇ'' (ಮುಗಳಿ ರಂ.ಶ್ರೀ; ೧೯೬೩; ಪು. ೧೨೨). ಈ ಹೇಳಿಕೆ ಐತಿಹಾಸಿಕ ಕಾದಂಬರಿಗಳ ರಚನೆಯ ಉದ್ದೇಶವನ್ನು ಇನ್ನಷ್ಟು

ಸ್ಪಷ್ಟಪಡಿಸುತ್ತದೆ. ಇದನ್ನು ಕುರಿತು ಲಿಖಿತ ದಾಖಲೆಗಳು ಕಾದಂಬರಿಗೆ ಸಾಮಗ್ರಿಯನ್ನು ಒದಗಿಸುತ್ತವೆ. ಈ ಆಗಿಹೋದ ಪ್ರಭುಗಳ ಹಾಗೂ ಪ್ರಜೆಗಳ ವೀರಜೀವನ, ತ್ಯಾಗ ಮನೋಭಾವ, ಧರ್ಮಾಭಿಮಾನ, ಸಾಹಿತ್ಯ, ಸಂಸ್ಕೃತಿ, ಕಲೆಗಳಿಗೆ ಅವರಿಂದ ಸಂದ ಸೇವೆ, ಪ್ರಜೆಗಳ ಸ್ವಾಮಿನಿಷ್ಠೆ, ರಾಜಕೀಯ ಏರುಪೇರುಗಳಿಂದ ನಿರ್ಮಾಣವಾಗುವ ಸಾಮಾಜಿಕ, ಆರ್ಥಿಕ, ರಾಜಕೀಯ ಬದಲಾವಣೆಗಳೆಲ್ಲ ಐತಿಹಾಸಿಕ ಕಾದಂಬರಿಗೆ ವಸ್ತುಗಳಾಗಿ ನಿಲ್ಲುತ್ತದೆ. ಐತಿಹಾಸಿಕ ವ್ಯಕ್ತಿಗಳ ಚಿತ್ರಣಕ್ಕಾಗಿ ಕಾಲಗರ್ಭದಲ್ಲಿ ಮಸುಕಾಗಿ ಹೋಗಿದ್ದ ವ್ಯಕ್ತಿಗಳು ಮೂರ್ತಿವತ್ತಾಗಿ ಎದ್ದು ಬಂದು ಸಹೃದಯರಿಗೆ ರಸಾನಂದ ನೀಡಬೇಕಾದರೆ ಲೇಖಕರು ಅನೇಕ ಆಕರ ಪರಿಕರಗಳನ್ನು ಅವಲಂಬಿಸಬೇಕಾಗುತ್ತದೆ. ಈ ದಿಸೆಯಲ್ಲಿ ಆತನಿಗೆ ಲಿಖಿತ ಹಾಗೂ ಮೌಖಿಕ ದಾಖಲೆಗಳು ಆಧಾರವಾಗುತ್ತವೆ. ಶಾಸನ, ತಾಮ್ರಪಟಗಳು, ವಿದೇಶಿ ಬರಹಗಾರರು ಬರೆದಿಟ್ಟ ನಿರೂಪಣೆ, ಕಡತಗಳು ಲಿಖಿತ ದಾಖಲೆಯಾದರೆ, ಜನಪದ ಕಥೆ, ಲಾವಣಿ ಪದ, ಪರಂಪರಾಗತವಾಗಿ ಉಳಿದುಕೊಂಡು ಬಂದ ಐತಿಹ್ಯಗಳು ಮೌಖಿಕ ದಾಖಲೆಗಳಾಗಿರುತ್ತವೆ. ಇವೆಲ್ಲವುಗಳನ್ನು ಆಧರಿಸಿ ಕಾದಂಬರಿಗಳಲ್ಲಿ ಕಟ್ಟಿಕೊಡುವ ಕ್ರಿಯೆ ಐತಿಹಾಸಿಕ ಕಾದಂಬರಿಕಾರರ ಹೊಣೆಗಾರಿಕೆ ಆಗುತ್ತದೆ. ಐತಿಹಾಸಿಕ ಕಾದಂಬರಿಯಲ್ಲಿ ಐತಿಹಾಸಿಕ ವಸ್ತುವಿನೊಂದಿಗೆ ಆ ಕಾಲದ ಜೀವನದ ಪುನರ್‌ನಿರ್ಮಾಣ ಅತ್ಯಂತ ಅವಶ್ಯಕ. ಇತಿಹಾಸ ಕಾಲದ ಜೀವನದ ಪುನರ್‌ನಿರ್ಮಾಣವೆಂದರೆ ಆ ಕಾಲದ ಜನತೆಯ ಆಸೆ-ಆಕಾಂಕ್ಷೆಗಳು, ದುಃಖ-ದುಮ್ಮಾನಗಳು, ಅವರು ಎದುರಿಸಿದ ಸಮಸ್ಯೆಗಳು, ಕಂಡುಕೊಂಡ ಪರಿಹಾರಗಳು ಇವೇ ಮೊದಲಾದವುಗಳ ಚಿತ್ರಣ. ಕಲಾತ್ಮಕ ಚಿತ್ರಣದಿಂದ ಒಂದು ಐತಿಹಾಸಿಕ ವಾತಾವರಣ ನಿರ್ಮಿಸುವುದು ಸಾಧ್ಯ. ಐತಿಹಾಸಿಕ ಕಾದಂಬರಿ ಬರೀ ಚರಿತ್ರೆಯ ಸಂಗತಿಗಳಿಗೆ ಅಂಟಿಕೊಂಡು ಹೋದರೆ ಸಾಲದು. ಅದು ಇತಿಹಾಸಕಾರನ ಕೆಲಸವಾಗಿರುತ್ತದೆ. ಚರಿತ್ರೆ ಯಾವುದೊಂದು ಕಾಲದ ಘಟನೆಯನ್ನು, ವ್ಯಕ್ತಿಗಳನ್ನು ಪ್ರಧಾನವಾಗಿಟ್ಟು ಕೊಂಡು ರಚಿತವಾಗಿರುತ್ತದೆ. ಇದರಲ್ಲಿ ಜಯಾಪಜಯಗಳು, ಆಯಾ ಕಾಲದಲ್ಲಿ ನಡೆದ ಘಟನೆಗಳು ಪ್ರಧಾನವಾಗುತ್ತವೆ. ಇತಿಹಾಸವನ್ನು ಅದರ ಚಲನಶೀಲ ಕ್ರಮದಲ್ಲಿ ಅರಿಯಲು ಮತ್ತು ಪುನಃ ಇತಿಹಾಸದ ಆಗು-ಹೋಗುಗಳನ್ನು ರೂಪಿಸಿಕೊಳ್ಳಲು ಐತಿಹಾಸಿಕ ಕಾದಂಬರಿಗಳ ಅಧ್ಯಯನ ಸಹಾಯಕವಾಗುತ್ತದೆ.

ಕನ್ನಡದಲ್ಲಿ ಪ್ರಕಟವಾಗಿರುವ ಐತಿಹಾಸಿಕ ಕಾದಂಬರಿಗಳನ್ನು ಗಮನಿಸಿದರೆ, ಸುಮಾರು ಎರಡುನೂರ ಐವತ್ತಕ್ಕೂ ಮೀರಿ ಕಾದಂಬರಿಗಳು ಬಂದಿದ್ದರೂ ಕೂಡ ಐತಿಹಾಸಿಕ ಮಹಿಳೆಯರನ್ನು ಕುರಿತಂತೆ, ಕಾದಂಬರಿಗಳನ್ನು ರಚಿಸಿದ ಲೇಖಕಿಯರ ಸಂಖ್ಯೆ ಬೆರಳೆಣಿಕೆಯಲ್ಲಿ ಅಷ್ಟೇ ಕಂಡು ಬರುತ್ತದೆ.

ಕನ್ನಡ ಐತಿಹಾಸಿಕ ಕಾದಂಬರಿಗಳ ಮೂಲ ಪ್ರೇರಣೆ ಬಹುಮಟ್ಟಿಗೆ ಚಾರಿತ್ರಿಕ ವ್ಯಕ್ತಿಗಳೆ. ಇದರ ಯಶಸ್ಸು ಮತ್ತು ಅಪಯಶಸ್ಸು ಎರಡು ನೆಲೆಗಳಲ್ಲಿ ಅರ್ಥೈಸಬಹುದು. ಮದಕರಿನಾಯಕ, ಚೆನ್ನಬಸವನಾಯಕ, ಚಿಕವೀರ ರಾಜೇಂದ್ರ, ವಿಷ್ಣುವರ್ಧನ, ಅಮೋಘವರ್ಷ ನೃಪತುಂಗ, ಬಸವಣ್ಣ, ಅಲ್ಲಮಪ್ರಭು ಮುಂತಾದ ವ್ಯಕ್ತಿಗಳ ಬಗ್ಗೆ ಅನೇಕ ಐತಿಹಾಸಿಕ ಕಾದಂಬರಿಗಳು

ರಚಿತವಾಗಿವೆ. ಐತಿಹಾಸಿಕ ಹಿನ್ನೆಲೆಯಲ್ಲಿ ಪುರುಷರನ್ನು ಕುರಿತು ರಚನೆಯಾದ ಕಾದಂಬರಿಗಳ ಪ್ರಮಾಣ ಹೆಚ್ಚಾಗಿ ಕಂಡುಬಂದರೆ, ಸ್ತ್ರೀಯರನ್ನು ಕುರಿತು ರಚನೆಯಾದದ್ದು ಬಹು ವಿರಳವಾಗಿದೆ ಎನ್ನಬಹುದು. ಆದರೂ ನಮ್ಮ ನಾಡಿನ ಸಮಗ್ರ ಚರಿತ್ರೆಯಲ್ಲಿ ಮಹಿಳೆಯರನ್ನು ಅಲಕ್ಷಿಸುವಂತಿಲ್ಲ. ಸಾಹಿತ್ಯ, ಸಂಸ್ಕೃತಿ, ಧರ್ಮ, ಕಲಾ ಪ್ರೇಮಿಗಳಾಗಿ, ಆಡಳಿತ ಚತುರೆಯರಾಗಿ, ರಾಜಕೀಯವಾಗಿ ಹೀಗೆ ಎಲ್ಲ ಕ್ಷೇತ್ರಗಳಲ್ಲೂ ಮಹಿಳೆಯರ ಕಾಣಿಕೆಯನ್ನು ಮರೆಯುವಂತಿಲ್ಲ. ಇಂತಹ ಚಾರಿತ್ರಿಕ ಮಹಿಳೆಯರನ್ನು ಕುರಿತಾಗಿ ಹಾಗೂ ಅವರ ಜೀವನ ಚರಿತ್ರೆ, ವ್ಯಕ್ತಿತ್ವವನ್ನು ಕುರಿತು ಅಧ್ಯಯನ ಮಾಡಿರುವುದು ಕಂಡುಬರುತ್ತದೆ.

ಮಹಿಳಾ ಬರಹಗಾರರು ಸ್ತ್ರೀಯನ್ನು ಕುರಿತು ಕಾದಂಬರಿಗಳನ್ನು ರಚಿಸಿದ್ದರೂ ಕೂಡ ಅವರ ಕಾದಂಬರಿಗಳು ಕೌಟುಂಬಿಕ ನೆಲೆಯಲ್ಲಿ ರಚಿಸಿದ ಕೃತಿಗಳಾಗಿವೆ. ಶಾಂತದೇವಿ ಮಾಳವಾಡ, ಮಾತೆ ಮಹಾದೇವಿ, ಪಂಡಿತ ಸೀತಮ್ಮ ಬೇಲಿ, ಕೆ.ವಿ. ರಾಜೇಶ್ವರಿ, ಸಿ.ಎನ್. ಜಯಲಕ್ಷ್ಮಿ ಮುಂತಾದವರು ಇತಿಹಾಸದ ವಿವಿಧ ಕ್ಷೇತ್ರಗಳಲ್ಲಿ ಸಾಧನೆಗೈದ ಮಹಿಳೆಯರನ್ನು ಕುರಿತು ತಮ್ಮ ವೈಯಕ್ತಿಕ ನಂಬಿಕೆ ಹಾಗೂ ಆಲೋಚನೆಗಳ ನೆಲೆಗಳಲ್ಲಿ ಕೃತಿಗಳನ್ನು ರಚಿಸಿರುವುದು ಕಂಡುಬರುತ್ತದೆ.

ಐತಿಹಾಸಿಕ ಮಹಿಳೆಯರನ್ನು ಕುರಿತಂತೆ ಕಾದಂಬರಿಗಳನ್ನು ಬರೆದವರಲ್ಲಿ ಬಸವರಾಜ ಕಟ್ಟೀಮನಿ, ತಿಪ್ಪೇರುದ್ರಸ್ವಾಮಿ, ಕೆ.ವಿ. ಅಯ್ಯರ್, ಸಿ.ಕೆ. ನಾಗರಾಜರಾವ್, ಮ.ನ. ಮೂರ್ತಿ, ಸಮೇತನಹಳ್ಳಿ ರಾಮರಾಯ, ಲಕ್ಕಪ್ಪ ಶಿರಹಟ್ಟಿ, ನಾ. ಡಿಸೋಜ, ಕೊರಟಿ ಶ್ರೀನಿವಾಸರಾವ್, ಜಿ. ಬ್ರಹ್ಮಪ್ಪ, ಅ.ನ. ಕೃಷ್ಣರಾಯ, ಬಿ.ಎಲ್. ವೇಣು, ರಾ.ಮೋ. ವಿಶ್ವಾಮಿತ್ರ, ಮಾಸ್ತಿ, ತ.ರಾ.ಸು, ದೇವುಡು ಮುಂತಾದವರು ಪ್ರಮುಖರು. ಇವರೆಲ್ಲರೂ ಪುರುಷರು. ಸ್ತ್ರೀಯರಿಗಿಂತ ಪುರುಷರೇ ಐತಿಹಾಸಿಕ ಮಹಿಳೆಯರ ಜೀವನ ಚರಿತ್ರೆಯನ್ನು, ವ್ಯಕ್ತಿತ್ವವನ್ನು ಹೆಚ್ಚಾಗಿ ಚಿತ್ರಿಸಿದ್ದು ಕಂಡುಬರುತ್ತದೆ.

ಒಂದು ನಾಡಿನ ಇತಿಹಾಸ ಒಂದು ನಿರ್ದಿಷ್ಟ ಕಾಲವನ್ನು ಪುನರ್‌ಸೃಷ್ಟಿ ಮಾಡಿ ಕ್ರಿಯೆಯನ್ನು ಆ ಯುಗದಲ್ಲಿ ನಿರೂಪಿಸಲಾಗುತ್ತದೆ. ಸಾಮಾನ್ಯವಾಗಿ ಐತಿಹಾಸಿಕ ವ್ಯಕ್ತಿಗಳು ಇವುಗಳಲ್ಲಿ ಮುಖ್ಯ ಪಾತ್ರಧಾರಿಗಳಾಗಿರುತ್ತಾರೆ. ಅಂಥವುಗಳಲ್ಲಿ ಕಾದಂಬರಿಯಲ್ಲಿ ಕಂಡು ಬರುವ ಮಹಿಳಾ ಪಾತ್ರವೂ ಸಹ ಮುಖ್ಯ ಕೇಂದ್ರಬಿಂದುವಾಗಿದೆ. "ಹೆಣ್ಣು ಸಾವಿರಾರು ವರ್ಷಗಳ ಪರಂಪರೆಯಲ್ಲಿ ಹಾದು ಬಂದಿದ್ದಾಳೆ. ಹಲವು ಸಾಮಾಜಿಕ ಸ್ತರಗಳಲ್ಲಿ ಹೆಜ್ಜೆಯೂರಿ ನಡೆದಿದ್ದಾಳೆ. ಕರ್ನಾಟಕ ಕಂಡ ಎಲ್ಲ ಐತಿಹಾಸಿಕ ಯುಗಗಳಲ್ಲಿ ಆಕೆಯ ಸಹಯೋಗವಿದೆ. ಇವಳು ಎದುರಿಸಿದ ಸವಾಲುಗಳು ಇಕ್ಕಟ್ಟು - ಬಿಕ್ಕಟ್ಟುಗಳು ಕಡಿಮೆಯಲ್ಲ. ಇಂಥ ಪ್ರತಿಕೂಲ ಪರಿಸರದಲ್ಲಿಯೂ ಆಕೆಯ ಚೈತನ್ಯ ಬತ್ತದೆ, ಚಿಗುರುತ್ತ, ಪುಟಿಯುತ್ತ ಚರಿತ್ರೆಯುದ್ದಕ್ಕೂ ಪ್ರಕಟವಾಗಿದೆ. ಮಹಿಳೆಯರು ಮಾಡಿದ ಸಾಧನೆಗಳು, ಬೀರಿದ ಪ್ರಭಾವಗಳು, ನೀಡಿದ ಕೊಡುಗೆಗಳು ಬೃಹತ್ ಗ್ರಂಥಗಳಿಗೆ ವಸ್ತುವಾಗುವಷ್ಟು ವ್ಯಾಪಕ ಪ್ರಮಾಣದಲ್ಲಿದೆ"(ಕಮಲಾ ಹಂಪನಾ; ೨೦೧೩; ಪು. ೫೧). ಹೀಗೆ ಮಹಿಳೆಯನ್ನೇ ಕೇಂದ್ರಬಿಂದುವನ್ನಾಗಿರಿಸಿಕೊಂಡು ಕಾದಂಬರಿಯು ಯಾವ ರೀತಿಯಲ್ಲಿ ಈಕೆಯ ಚಿತ್ರಣವನ್ನು ಕಟ್ಟಿಕೊಡುತ್ತದೆ ಎಂಬುದನ್ನು ಪ್ರಸ್ತುತ ಅಧ್ಯಯನದ ಮೂಲಕ ನೋಡಲಾಗಿದೆ.

## ೧.೧. ಅಧ್ಯಯನದ ಉದ್ದೇಶ

ಸ್ತ್ರೀ ಜಾಗೃತಿಯನ್ನು ಮತ್ತು ಸ್ತ್ರೀಪರ ಆಲೋಚನೆಯನ್ನು ಕುರಿತು ಹೆಚ್ಚು ಹೆಚ್ಚು ಆಲೋಚನೆ ಮಾಡುವ ಇಂದಿನ ಸಂದರ್ಭದಲ್ಲಿ, ಕನ್ನಡ ಸಂಸ್ಕೃತಿಯಲ್ಲಿ ಆಗಿಹೋದ ಐತಿಹಾಸಿಕ ಮಹಿಳೆಯರನ್ನು ಕುರಿತ ಸಾಹಿತ್ಯವನ್ನು, ಇತಿಹಾಸ ನಿಷ್ಠೆಯನ್ನು, ಐತಿಹಾಸಿಕ ಬದ್ಧತೆಯನ್ನು ಅಷ್ಟೇ ಆಸಕ್ತಿಯಿಂದ ಅವಲೋಕಿಸುವುದು ಅವಶ್ಯಕವೂ, ಅನಿವಾರ್ಯವೂ ಆಗಿರುತ್ತದೆ. ಆ ಮೂಲಕ ಸಾಧನೆಯ ಇತಿಹಾಸದಲ್ಲಿ, ಪ್ರತಿಭಟನೆಯ ಚರಿತ್ರೆಯಲ್ಲಿ ಮಹಿಳೆಯರನ್ನು ಗುರುತಿಸುವ ಹಾಗೂ ಅರಿತುಕೊಳ್ಳುವ ದೃಷ್ಟಿಯಿಂದ ಐತಿಹಾಸಿಕ ಕಾದಂಬರಿಗಳನ್ನು ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ.

ಪ್ರಸ್ತುತ ಕಾದಂಬರಿಗಳು ಐತಿಹಾಸಿಕ ವಿಷಯವನ್ನು ಒಳಗೊಂಡಿವೆ. ಐತಿಹಾಸಿಕ ಪಾತ್ರಗಳು ಸಮಾಜಮುಖಿಯಾದ ಸಂಘಟನಾ ಕಾರ್ಯಗಳನ್ನು ನಿರ್ಮಿಸುವ ಪಾತ್ರಗಳಾಗಿರುತ್ತವೆ. ಈ ಪಾತ್ರಗಳೊಂದಿಗೆ ವಿಘಟನಾ ಪಾತ್ರಗಳು ಕೂಡ ಇರುವ ಸಾಧ್ಯತೆ ಇದೆ. ಹೀಗಾಗಿ ಸಮಾಜಪರ ಮತ್ತು ವಿರೋಧವಾದ ಪಾತ್ರಗಳು ಕ್ರಿಯಾತ್ಮಕವಾಗುವುದರ ಮೂಲಕ ಇತಿಹಾಸ ಸೃಷ್ಟಿಯಾಗುತ್ತದೆ. ಶಾಸನ, ಕಾವ್ಯ ಹಾಗೂ ಇತರ ಬರಹ ರೂಪದಲ್ಲಿ ಇದು ದೊರೆಯುತ್ತದೆ. ಒಂದು ಕಾದಂಬರಿ ಇಂತಹ ಪಾತ್ರಗಳ ಸುತ್ತ ಕಥೆಯನ್ನು ಹೆಣೆಯುತ್ತದೆ. ಕೆಲವೊಮ್ಮೆ ಅವಶ್ಯಕವೆನಿಸಿದಲ್ಲಿ ಕಾಲ್ಪನಿಕ ಪಾತ್ರಗಳು ಸೃಜನಾತ್ಮಕ ಬರಹಗಾರರಿಂದ ನಿರ್ಮಿತವಾಗುತ್ತವೆ. ಇಂತಹ ಮೂಲ ಪಾತ್ರಗಳು, ಕಲ್ಪಿತ ಪಾತ್ರಗಳು ಅವುಗಳ ಕ್ರಿಯಾತ್ಮಕತೆಯನ್ನು ಪರಿಚಯಿಸುವುದು ಅಧ್ಯಯನದ ಉದ್ದೇಶವಾಗಿದೆ.

ಇತಿಹಾಸದಲ್ಲಿ ಸಂಭವಿಸುವ ಘಟನೆಗಳು ಎರಡು ನೆಲೆಗಳಲ್ಲಿ ಇರುವ ಸಾಧ್ಯತೆ ಇದೆ. ಲೌಕಿಕದಿಂದ ಬೇರೆಯಾದ ಕೇವಲ ಪೌರಾಣಿಕ ನೆಲೆಯಲ್ಲಿ ಘಟಿಸಬಹುದಾದ ಸಂಗತಿಗಳು ಕೆಲವಾದರೆ ಇನ್ನೂ ಕೆಲವು ಲೌಕಿಕ ಅಂತರ್ಗತವಾಗಿರುತ್ತವೆ. ಇಂತಹ ಸಂಗತಿಗಳನ್ನು ನಿರ್ಮಿಸುವಲ್ಲಿ ಸೃಜನಶೀಲ ಲೇಖಕರು ತಮ್ಮ ಆಲೋಚನೆಗೆ ಅನುಗುಣವಾಗಿ ಸಂಗತಿಗಳನ್ನು ಪುನರ್‌ಸೃಷ್ಟಿಸುವ ಜವಾಬ್ದಾರಿ ಹೊಂದಿರುತ್ತಾರೆ. ಇತಿಹಾಸದ ದಾಖಲೆಗಳಲ್ಲಿ ದೊರಕುವ ಕೆಲವೊಂದು ಚಾರಿತ್ರಿಕ ಸಂದರ್ಭಗಳನ್ನು ಪೂರ್ಣ ಪ್ರಮಾಣದ ಸಾಹಿತ್ಯ ಕೃತಿಯಾಗಿ ಹೇಗೆ ಪುನರ್‌ಸೃಷ್ಟಿಸಲಾಗಿದೆ ಎಂಬುದನ್ನು ಅವಲೋಕಿಸುವುದೇ ಅಧ್ಯಯನದ ಆಶಯವಾಗಿದೆ.

ಸ್ತ್ರೀ ಪರಾವಲಂಬಿ ಎಂಬ ಸಾಮಾನ್ಯ ಧೋರಣೆ ಒಂದಿದೆ. ಆದರೆ ಅವಕಾಶ ದೊರೆತಲ್ಲಿ ಆಕೆ ಕೂಡ ಹೇಗೆ ಸ್ವಾವಲಂಬಿಯಾಗಿ ಬದುಕಬಲ್ಲಳು; ವಿವಿಧ ಕ್ಷೇತ್ರಗಳಲ್ಲಿ ತನ್ನನ್ನು ತಾನು ಹೇಗೆ ಕ್ರಿಯಾಶೀಲಳಾಗಿ ತೊಡಗಿಸಿಕೊಳ್ಳಬಲ್ಲಳು ಎಂಬುದನ್ನು ಗಮನಿಸುವುದು ಈ ಅಧ್ಯಯನದ ಇನ್ನೊಂದು ಉದ್ದೇಶವಾಗಿದೆ.

ಇವೇ ಮೊದಲಾದ ಉದ್ದೇಶಗಳನ್ನು ಕನ್ನಡದ ಕೆಲವು ಪ್ರಾತಿನಿಧಿಕ ಐತಿಹಾಸಿಕ ಕಾದಂಬರಿಗಳಲ್ಲಿನ ಮಹಿಳಾ ಪಾತ್ರಗಳನ್ನು ಅಧ್ಯಯನ ಮಾಡುವುದರ ಮೂಲಕ ಸಕಾರಗೊಳಿಸಿಕೊಳ್ಳಲು ಇಲ್ಲಿ ಪ್ರಯತ್ನಿಸಲಾಗಿದೆ.

## ೧.೨. ಅಧ್ಯಯನದ ವ್ಯಾಪ್ತಿ

ಕನ್ನಡ ನಾಡಿನ ಚರಿತ್ರೆಗೆ ಸಂಬಂಧಪಟ್ಟ ಕಾದಂಬರಿಗಳನ್ನಷ್ಟೇ ಅಧ್ಯಯನಕ್ಕೆ ಪ್ರಮುಖ ಆಕರಗಳಾಗಿ ಬಳಸಿಕೊಳ್ಳಲಾಗಿದೆ. ಒಟ್ಟು ಭಾರತೀಯ ಇತಿಹಾಸಕ್ಕೆ ಸಂಬಂಧಿಸಿದ ಕಾದಂಬರಿಗಳನ್ನು ಇಲ್ಲಿ ಪರಿಗಣಿಸಿಲ್ಲ. ಅಧ್ಯಯನದ ದೃಷ್ಟಿಯಿಂದ ಕೆಲವು ಪ್ರಾತಿನಿಧಿಕ ಕಾದಂಬರಿಗಳಾದ, ಬಸವರಾಜ ಕಟ್ಟೀಮನಿ ಅವರ 'ಗಿರಿಯ ನವಿಲು', ಎಚ್. ತಿಪ್ಪೇರುದ್ರಸ್ವಾಮಿ ಅವರ 'ಕದಳಿಯ ಕರ್ಪೂರ', ಮಾತೆ ಮಹಾದೇವಿ ಅವರ 'ತರಂಗಿಣಿ', ಸಿ.ಕೆ. ನಾಗರಾಜರಾವ್ ಅವರ 'ಪಟ್ಟಮಹಾದೇವಿ ಶಾನ್ತಲದೇವಿ', ಕೆ.ವಿ. ಅಯ್ಯರ್ ಅವರ 'ಶಾಂತಲಾ', ಮ.ನ. ಮೂರ್ತಿ ಅವರ 'ನಾಟ್ಯ ರಾಣಿ ಶಾಂತಲಾ', ಸಮೇತನಹಳ್ಳಿ ರಾಮರಾಯರ ಸವತಿ ಗಂಧವಾರಣೆ; ದೇವುಡು ಅವರ 'ಚೆನ್ನಾ' ಜಿ. ಬ್ರಹ್ಮಪ್ಪ ಅವರ 'ದಾನಚಿಂತಾಣಿ' ಅ.ನ.ಕೃ ಅವರ 'ವೀರರಾಣಿ ಕಿತ್ತೂರ ಚೆನ್ನಮ್ಮ', ಕೆ.ವಿ. ರಾಜೇಶ್ವರಿ ಅವರ 'ವೀರವನಿತೆ ಕಿತ್ತೂರ ಚೆನ್ನಮ್ಮ', ಶಾಂತಾದೇವಿ ಮಾಳವಾಡರ ಶೂರರಾಣಿ ಕೆಳದಿಯ ಚೆನ್ನಮ್ಮಾ ಮತ್ತು ದಾನ ದಾಸೋಹಿ ದಾನಮ್ಮ. ನಾ. ಡಿಸೋಜ ಅವರ 'ಚೆನ್ನಿ ಚೆನ್ನಮ್ಮ ಚೆನ್ನಮ್ಮಾಜಿ'. ಲಕ್ಕಪ್ಪ ಶಿರಹಟ್ಟಿ ಅವರ 'ವೀರರಾಣಿ ಮಹಾಮುತ್ಸದ್ಧಿ ಕೆಳದಿಯ ಚೆನ್ನಮ್ಮ'. ಕೊರಟಿ ಶ್ರೀನಿವಾಸರಾವ್ ಅವರ 'ಕುಮಾರರಾಮ'. ರಾ.ಮೋ. ವಿಶ್ವಾಮಿತ್ರ ಅವರ 'ಅಭಯರಾಣಿ', ಬಿ.ಎಲ್. ವೇಣು ಅವರ 'ವೀರವನಿತೆ ಒನಕೆ ಓಬವ್ವ', ಬಿ. ಪುಟ್ಟಸ್ವಾಮಯ್ಯ ಅವರ 'ಕ್ರಾಂತಿ ಕಲ್ಯಾಣ', 'ದ್ವಾಸುಪರ್ಣಾ', ತ.ರಾ.ಸು ಅವರ 'ಕಂಬನಿಯ ಕುಯಿಲು', 'ರಕ್ತರಾತ್ರಿ', 'ರಾಜ್ಯದಾಹ', ತಿರುಗು ಬಾಣ', ಮಾಸ್ತಿ ಅವರ ಚೆನ್ನಬಸವನಾಯಕ, ಮುಂತಾದ ಕೃತಿಗಳಲ್ಲಿ ಕಂಡು ಬರುವ ಮಹಿಳಾ ಪಾತ್ರಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇದರಂತೆ ಕನ್ನಡ ಐತಿಹಾಸಿಕ ಕಾದಂಬರಿಗಳಲ್ಲಿ ಚಿತ್ರಿತವಾಗಿರುವ ಕೇಂದ್ರ ಮಹಿಳಾ ಪಾತ್ರಗಳಿಗೆ ಪ್ರಮುಖ ಆದ್ಯತೆಯನ್ನು ನೀಡಿ ಉಳಿದಂತೆ ಪೋಷಕ ಪಾತ್ರಗಳಾಗಿ ಚಿತ್ರಿತವಾದ ಮಹಿಳಾ ಪಾತ್ರಗಳನ್ನು ಅದಕ್ಕೆ ಪೂರಕವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

## ೧.೩. ಅಧ್ಯಯನದ ವೈಧಾನಿಕತೆ

ಇಲ್ಲಿ ಮುಖ್ಯವಾಗಿ ಆಕರಮುಖಿ ವಿಶ್ಲೇಷಣಾತ್ಮಕ ಅಧ್ಯಯನ ವಿಧಾನವನ್ನು ಅನುಸರಿಸಲಾಗಿದೆ. ಪ್ರಾಸಂಗಿಕವಾಗಿ, ಸಾಹಿತ್ಯ ಮತ್ತು ಇತಿಹಾಸದ ಅಂತರ್‌ಶಿಸ್ತೀಯ ಅಧ್ಯಯನ ಕ್ರಮ ಮತ್ತು ಸ್ತ್ರೀವಾದಿ ಸಾಹಿತ್ಯ ಚಿಂತನೆಯ ಕ್ರಮವನ್ನು ಬಳಸಿಕೊಳ್ಳಲಾಗಿದೆ.

□□

ಅಧ್ಯಾಯ : ಎರಡು

# ಪ್ರಸ್ತಾವನೆ-ವಿಷಯ ಪ್ರವೇಶ

---

**೨.೧. ಇದುವರೆಗಿನ ಅಧ್ಯಯನಗಳ ಸಮೀಕ್ಷೆ**

**೨.೨. ಸಾಹಿತ್ಯ ಮತ್ತು ಇತಿಹಾಸದ ಅಂತಃಸಂಬಂಧದನೆಲೆಗಳು**

೨.೨.೧. ಮೌಖಿಕ ಸಾಹಿತ್ಯ ಸಂದರ್ಭ

೨.೨.೨. ಪ್ರಾಚೀನ ಸಾಹಿತ್ಯ ಸಂದರ್ಭ

೨.೨.೩. ಮಧ್ಯಕಾಲೀನ ಸಾಹಿತ್ಯ ಸಂದರ್ಭ

೨.೨.೪. ಆಧುನಿಕ ಸಾಹಿತ್ಯ ಸಂದರ್ಭ

# ಅಧ್ಯಾಯ : ಎರಡು

# ಪ್ರಸ್ತಾವನೆ - ವಿಷಯ ಪ್ರವೇಶ

## ೨.೧. ಇದುವರೆಗಿನ ಅಧ್ಯಯನಗಳ ಸಮೀಕ್ಷೆ

ಕನ್ನಡದಲ್ಲಿ ಐತಿಹಾಸಿಕ ಕಾದಂಬರಿಕಾರರು ಹಾಗೂ ಕಾದಂಬರಿಗಳನ್ನು ಕುರಿತು ವ್ಯಾಪಕವಾದ ಅಧ್ಯಯನ ಇದುವರೆಗೆ ನಡೆದಿಲ್ಲ. ಗಳಗನಾಥರು, ತರಾಸು, ಅನಕೃ, ಬಸವರಾಜ ಕಟ್ಟಿಮನಿ, ಬಿ. ಪುಟ್ಟಸ್ವಾಮಯ್ಯ, ಶ್ರೀನಿವಾಸರಾವ್ ಕೊರಟಿ, ಹೆಚ್. ತಿಪ್ಪೇರುದ್ರಸ್ವಾಮಿ ಮೊದಲಾದ ಲೇಖಕರು ನೂರಕ್ಕೂ ಹೆಚ್ಚು ಐತಿಹಾಸಿಕ ಕಾದಂಬರಿಗಳನ್ನು ರಚಿಸಿದ್ದಾರೆ. ಇಂಥ ಐತಿಹಾಸಿಕ ಕಾದಂಬರಿಗಳ ಕುರಿತಾದ ಅಧ್ಯಯನಗಳಲ್ಲಿ ಮೀನಾಕ್ಷಿ ಜಂಗಮನಿ ಅವರ "ಚಾರಿತ್ರಿಕ ಕಾದಂಬರಿ ಸಾಂಸ್ಕೃತಿಕ ಸಂಕಥನ" ಎಂಬ ಕೃತಿಯು ಪ್ರಮುಖವಾದುದು. ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಈ ಪಿಎಚ್.ಡಿ. ಮಹಾಪ್ರಬಂಧವು ೨೦೧೦ರಲ್ಲಿ ಪುಸ್ತಕ ರೂಪದಲ್ಲಿ ಪ್ರಕಟವಾಯಿತು. ಕದಂಬರ ಕಾಲದಿಂದ ಮೊದಲುಗೊಂಡು ಸ್ವಾತಂತ್ರ್ಯೋತ್ತರ ಕಾಲದವರೆಗಿನ ಕರ್ನಾಟಕದ ಚಾರಿತ್ರಿಕ ಘಟನೆಗಳು ಕಾದಂಬರಿಕಾರರ ಕಣ್ಣಿಗೆ ಹೇಗೆ ಕಂಡಿವೆ ಮತ್ತು ಅವರು ಆ ಘಟನೆಗಳನ್ನು ನಿರೂಪಿಸಿರುವುದರಲ್ಲಿ ಕಂಡುಬರುವ ಸಾಂಸ್ಕೃತಿಕ ಒಳನೋಟಗಳನ್ನು ಆಧಾರ ಸಹಿತವಾಗಿ ಪ್ರಬಂಧಕಾರರು ಗುರುತಿಸಿದ್ದಾರೆ. ಕದಂಬ, ಗಂಗರು, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ, ವಿಜಯನಗರ, ಮೈಸೂರು, ಮರಾಠ ದೊರೆಗಳು, ಮುಸ್ಲಿಂ ದೊರೆಗಳು ಮತ್ತು ಇತರ ಪಾಳೆಯಗಾರರ ಆಡಳಿತಾವಧಿಯನ್ನು ಸಾಮಾಜಿಕ, ಧಾರ್ಮಿಕ, ರಾಜಕೀಯ, ಆರ್ಥಿಕ, ಕಲಾತ್ಮಕ ಎಂದು ಅಧ್ಯಯನದ ಅನುಕೂಲಕ್ಕಾಗಿ ವಿಭಜನೆ ಮಾಡಿಕೊಂಡಿದ್ದಾರೆ.

೨೦೦೫ರಲ್ಲಿ ಶಕೀಲಾ ಎಂ. ಮೋಮಿನ್ ಅವರ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದ "ಚಾರಿತ್ರಿಕ ಮಹಿಳೆಯರನ್ನು ಕುರಿತು ಕನ್ನಡದ ಕಾದಂಬರಿಗಳು" ಎಂಬ ಪಿಎಚ್.ಡಿ. ಮಹಾಪ್ರಬಂಧವೊಂದನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ. ಒಟ್ಟು ಕಾದಂಬರಿಗಳ ಹುಟ್ಟು ಹಾಗೂ ಬೆಳವಣಿಗೆಯನ್ನು ದಾಖಲಿಸುವುದರ ಜೊತೆಗೆ ಐತಿಹಾಸಿಕ ಕಾದಂಬರಿಗಳ ಹುಟ್ಟು ಬೆಳವಣಿಗೆಯನ್ನು ಗುರುತಿಸುತ್ತಾ, ಚಾರಿತ್ರಿಕ ಮಹಿಳೆಯರನ್ನು ಕುರಿತ ಕನ್ನಡ ಕಾದಂಬರಿಗಳನ್ನು ಅಧ್ಯಯನಕಾರರು ಮಹಾಪ್ರಬಂಧದ ಮೂಲ ಆಕರಗಳನ್ನಾಗಿ ಬಳಸಿಕೊಂಡಿದ್ದಾರೆ.

ಹನ್ನೆರಡನೆಯ ಶತಮಾನದ ಶಿವಶರಣರಲ್ಲಿ ಮಿಂಚಿದ ಮಹಿಳಾಮಣಿ ಅಕ್ಕಮಹಾದೇವಿಯಿಂದ ೧೭ನೇ ಶತಮಾನದ ಕೆಳದಿಯ ಚೆನ್ನಮ್ಮಾಜಿಯವರೆಗಿನ ಚಾರಿತ್ರಿಕ ಮಹಿಳೆಯರನ್ನು ಕುರಿತ

ಕಾದಂಬರಿಗಳನ್ನು ತೌಲನಿಕ ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ಕಾದಂಬರಿಗಳಲ್ಲಿನ ಚಾರಿತ್ರಿಕ ಮಹಿಳೆಯರ ಜೀವನ ಚರಿತ್ರೆಯನ್ನು ಅಧ್ಯಯನಕಾರರು ಮೂರು ಪ್ರಮುಖ ನೆಲೆಗಳಲ್ಲಿ ಗುರುತಿಸಿದ್ದಾರೆ.

೧. ಕಾದಂಬರಿಗಳಲ್ಲಿ ಬರುವ ಐತಿಹಾಸಿಕ ಅಂಶಗಳು, ಶಾಸನ, ಕಾವ್ಯ, ಐತಿಹ್ಯ, ವಿದೇಶಿಯರ ಬರಹಗಳಲ್ಲಿ ದಾಖಲೆಯಾಗಿರುವ ಅಂಶಗಳನ್ನು ಗಮನಿಸುವುದು.

೨. ಪೌರಾಣಿಕ ಅಂಶಗಳು : ಇಂದಿನ ವಾಸ್ತವಿಕ ಜಗತ್ತನ್ನು ಕಾದಂಬರಿಯಲ್ಲಿ ಆರೋಪಿಸುವುದು. ಅಂದಂದಿನ ವಾಸ್ತವಿಕತೆಯನ್ನು ಗುರುತಿಸುವುದು.

೩. ಕಾಲ್ಪನಿಕ ಅಂಶಗಳು : ಪವಾಡ ಸಂಗತಿಗಳನ್ನು ನಿರ್ವಹಿಸುವ ರೀತಿಯನ್ನು ಸ್ಪಷ್ಟಪಡಿಸುವುದು.

ಎಂ.ಎಸ್. ಪಾಟೀಲ್ ಅವರು ಪಿಎಚ್.ಡಿ. ಪದವಿಗಾಗಿ ಗುಲಬರ್ಗಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ "ತ.ರಾ.ಸು. ಹಾಗೂ ಅವರ ಕಾದಂಬರಿಗಳು" ಎಂಬ ಮಹಾಪ್ರಬಂಧವು ೧೯೯೩ರಲ್ಲಿ ಪುಸ್ತಕ ರೂಪದಲ್ಲಿ ಪ್ರಕಟವಾಗಿದೆ. ಕನ್ನಡದ ಜನಪ್ರಿಯ ಕಾದಂಬರಿಕಾರರಲ್ಲಿ ತ.ರಾ.ಸು. ಅವರದು ದೊಡ್ಡ ಹೆಸರು. ಇವರ ಸಾಮಾಜಿಕ ಕಾದಂಬರಿಗಳು, ಐತಿಹಾಸಿಕ ಕಾದಂಬರಿಗಳು ಮತ್ತು ಪೌರಾಣಿಕ ಕಾದಂಬರಿಗಳನ್ನು ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ಕಂಬನಿಯ ಕುಯಿಲು, ರಾಜ್ಯದಾಹ, ರಕ್ತರಾತ್ರಿ, ತಿರುಗುಬಾಣ, ಹೊಸಹಗಲು, ವಿಜಯೋತ್ಸವ ಭಾಗ-೧, ವಿಜಯೋತ್ಸವ ಭಾಗ-೨, ಕಸ್ತೂರಿ ಕಂಕಣ ಭಾಗ-೧, ಕಸ್ತೂರಿ ಕಂಕಣ ಭಾಗ-೨, ಹಂಸಗೀತೆ, ದುರ್ಗಾಸ್ತಮಾನ. ಇವು ಚಿತ್ರದುರ್ಗದ ಪಾಳೆಯಗಾರರ ಕುರಿತಾದ ಹನ್ನೊಂದು ಕಾದಂಬರಿಗಳಾದರೆ, ನೃಪತುಂಗ, ಸಿಡಿಲಮೊಗ್ಗು, ಶಿಲ್ಪಶ್ರೀ, ಕೀರ್ತಿನಾರಾಯಣ, ಅಗ್ನಿರಥ-ಮುಕ್ತಿಪಥ, ಇವು ಐದು ಕಾದಂಬರಿಗಳು ಭಿನ್ನ ಭಿನ್ನ ಐತಿಹಾಸಿಕ ವಸ್ತುಗಳನ್ನು ಪಡೆದುಕೊಂಡಿರುವುದರಿಂದ ಅಧ್ಯಯನಕಾರರು ಅವುಗಳನ್ನು ಬೇರೆ ಬೇರೆಯಾಗಿಯೇ ನೋಡಿದ್ದಾರೆ.

ಕಂಬನಿಯ ಕುಯಿಲು ಕಾದಂಬರಿಯಲ್ಲಿ ಗಂಡು ಸಂತಾನವಿಲ್ಲದೆ ಮಡಿದ ಮದಕರಿನಾಯಕನ ಅನಂತರ ರಾಜ್ಯದ ಅಧಿಕಾರ ಪಡೆಯಲು ಹವಣಿಸುವ ದಳವಾಯಿಗಳ ಕುತಂತ್ರಕ್ಕೆ ಛಲದಿಂದ ತಿರುಗೇಟು ನೀಡುವ ಓಬವ್ವ ನಾಗತಿಯ ನಿಲುವು, ಸೌಮ್ಯ ಸುಂದರಳಾಗಿ ಕಂಡ ಗಿರಿಜೆ, ರಾಜ್ಯದಾಹ, ರಕ್ತರಾತ್ರಿ, ತಿರುಗುಬಾಣ ಕಾದಂಬರಿಗಳಲ್ಲಿ ಕ್ರಮೇಣ ಉಗ್ರರೂಪವಾಗಿ ಕಾಣಸಿಗುತ್ತಾಳೆ. ಮಲ್ಲವ್ವ ನಾಗತಿಯ ಪಾತ್ರ ಮೊದಮೊದಲು ಸಪ್ಪೆಯಾಗಿ, ಮುಂದೆ ಸ್ವಾರ್ಥದ ಪಾತ್ರವಾಗಿ ಕಾಣಿಸಿದರೆ, ತಿರುಗುಬಾಣ ಕಾದಂಬರಿಯ ಕೊನೆಗೆ ಕಾಣಸಿಗುವ ಮಲ್ಲಭಟ್ಟರ ಹಳ್ಳಿಯ ನಾಗತಿಯ ಪಾತ್ರ ಮಾನವೀಯತೆಯನ್ನು ಮಿಡಿಯುವ ಪಾತ್ರವಾಗಿದೆ. ಹೀಗೆ ಸ್ತ್ರೀ ಪಾತ್ರಗಳನ್ನು ಪ್ರಬಂಧಕಾರರು ಅಧ್ಯಯನದಲ್ಲಿ ಚರ್ಚೆಗೆ ಒಳಪಡಿಸಿದ್ದಾರೆ.

ಅದೇ ರೀತಿಯಾಗಿ ಆರ್. ಮಹೇಶ್ ಅವು ೨೦೦೮ರಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ "ತರಾಸು ಅವರ ಕಾದಂಬರಿಗಳಲ್ಲಿ ಸ್ತ್ರೀ ಸಂವೇದನೆ" ಎಂಬ ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧವನ್ನು ಕೂಡ ಇಲ್ಲಿ ಪ್ರಸ್ತಾಪಿಸಬಹುದಾಗಿದೆ. ಸ್ತ್ರೀ ಪ್ರಧಾನವಾದ ಇಂದಿರಾ, ಇಂದಿರೆ, ವಾಗ್ದೇವಿ, ಮಾಡಿದುಣ್ಣೋ ಮಹಾರಾಯ, ಕಾನೂರು ಹೆಗ್ಗಡತಿ, ಸರಸಮ್ಮನ

ಸಮಾಧಿ ಎಂಬ ಕಾದಂಬರಿಗಳಲ್ಲಿನ ಸ್ತ್ರೀ ಪಾತ್ರಗಳ ಚಿತ್ರಣಗಳನ್ನು ಹಿನ್ನೆಲೆಯಾಗಿರಿಸಿಕೊಂಡು ಅಧ್ಯಯನಕಾರರು ತ.ರಾ.ಸು. ಅವರ ಸಾಮಾಜಿಕ ಕಾದಂಬರಿಗಳು, ಪೌರಾಣಿಕ ಕಾದಂಬರಿಗಳು ಮತ್ತು ಐತಿಹಾಸಿಕ ಕಾದಂಬರಿಗಳಲ್ಲಿ ಕಂಡುಬರುವ ಸ್ತ್ರೀ ಪಾತ್ರವನ್ನು ವಿಶ್ಲೇಷಣೆಗೆ ಒಳಪಡಿಸಿದ್ದಾರೆ.

ತ.ರಾ.ಸು. ಅವರ ಐತಿಹಾಸಿಕ ಕಾದಂಬರಿಗಳಲ್ಲಿ ಕಂಡುಬರುವ ಸ್ತ್ರೀ ಸಂವೇದನೆಯನ್ನು ತ್ಯಾಗ (ಅರ್ಪಣೆ) ಸಹಗಮನ ರಾಜಕೀಯ (ಆಡಳಿತ) ಸೇಡಿನ ಮನೋಭಾವ, ಪ್ರಾದೇಶಿಕ ಅಂಶಗಳನ್ನು ಅಧ್ಯಯನಕಾರರು ಗುರುತಿಸಿದ್ದಾರೆ.

ದೊಡ್ಡಮನಿ ಜೆ.ಪಿ. ಅವರ "ಶರಣರ ಕುರಿತ ಕನ್ನಡ ಕಾದಂಬರಿಗಳು" ಎಂಬ ಕೃತಿಯು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪಿಎಚ್.ಡಿ. ಮಹಾಪ್ರಬಂಧವಾಗಿದೆ. ೧೯೯೬ರಲ್ಲಿ ಪುಸ್ತಕ ರೂಪದಲ್ಲಿ ಪ್ರಕಟವಾಯಿತು. ಹನ್ನೆರಡನೆಯ ಶತಮಾನದ ಶರಣರ ಆಂದೋಲನದ ಫಲವಾಗಿ ಸಾಮಾಜಿಕ, ಧಾರ್ಮಿಕ, ಸಾಹಿತ್ಯಿಕ ಬದಲಾವಣೆಗಳು ಕಂಡುಬರುವುದರೊಂದಿಗೆ ಸರ್ವಸಮಾನತೆಯ ತಳಹದಿಯ ಮೇಲೆ ಅನುಭವ ಮಂಟಪ ರಚನೆಯಾಯಿತು. ಇದರಲ್ಲಿ ಅನೇಕ ಶರಣ-ಶರಣೆಯರು ಆಧ್ಯಾತ್ಮಿಕ ಚರ್ಚೆಯಲ್ಲಿ ಪಾಲ್ಗೊಂಡರು. ಅವರ ಆದರ್ಶ ಬದುಕು ಹಾಗೂ ವಚನ ರೂಪದಲ್ಲಿ ವ್ಯಕ್ತಪಡಿಸಿದ ವಿಚಾರಗಳಿಂದ ಪ್ರಭಾವಿತರಾದ ಲೇಖಕರು ಕೃತಿಗಳನ್ನು ರಚಿಸಿದರು. ಶರಣರ ಜೀವನ ಕುರಿತಾಗಿ ಮಧ್ಯಕಾಲೀನ ಹಾಗೂ ಆಧುನಿಕ ಸಂದರ್ಭಗಳಲ್ಲಿ ರಚನೆಯಾದ ಒಟ್ಟಾರೆ ಸಾಹಿತ್ಯವನ್ನು ಹಿನ್ನೆಲೆಯಾಗಿರಿಸಿಕೊಂಡು ಬಸವಣ್ಣ, ಅಲ್ಲಮಪ್ರಭುದೇವ, ಸಿದ್ಧರಾಮ, ಅಕ್ಕಮಹಾದೇವಿ, ಚೆನ್ನಬಸವಣ್ಣ ಹಾಗೂ ಆದ್ಯಯರಂತಹ ಶರಣರನ್ನು ಕುರಿತು ಕನ್ನಡದಲ್ಲಿ ರಚನೆಯಾದ ಕಾದಂಬರಿಗಳನ್ನು ತೌಲನಿಕ ಅಧ್ಯಯನಕ್ಕೆ ಒಳಪಡಿಸಿದ್ದಾರೆ.

ಎಂ.ಎನ್. ಚಲವಾದಿ ಅವರು ೨೦೦೯ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ 'ಕನ್ನಡದಲ್ಲಿ ಚಾರಿತ್ರಿಕ ಕಾದಂಬರಿಗಳು" ಎಂಬ ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧವನ್ನು ಇಲ್ಲಿ ಉಲ್ಲೇಖಿಸಬಹುದು. ಚಾರಿತ್ರಿಕ ಕಾದಂಬರಿಗಳ ಉಗಮ ಮತ್ತು ವಿಕಾಸವನ್ನು ದಾಖಲಿಸುವುದ ರೊಂದಿಗೆ ಬಾದಾಮಿ ಮತ್ತು ಕಲ್ಯಾಣ ಚಾಲುಕ್ಯರ ಕುರಿತ ಕಾದಂಬರಿಗಳನ್ನು ಅಧ್ಯಯನಕಾರರು ಅಧ್ಯಯನದ ಮೂಲ ಆಕರಗಳನ್ನಾಗಿ ಬಳಸಿಕೊಂಡಿದ್ದಾರೆ. ಇಮ್ಮಡಿ ಪುಲಕೇಶಿ, ವಿಕ್ರಮಾದಿತ್ಯರ ಜೀವನದ ವಿವಿಧ ಘಟ್ಟಗಳಾದ ಬಾಲ್ಯಜೀವನ, ಶೈಕ್ಷಣಿಕ, ವೈವಾಹಿಕ, ಸಾಹಿತ್ಯ, ಶಿಲ್ಪಕಲೆ, ರಾಜಕೀಯ ಸಾಧನೆಗಳೊಂದಿಗೆ ಬಾದಾಮಿ ಮತ್ತು ಕಲ್ಯಾಣಿ ಚಾಲುಕ್ಯರ ಸಮಗ್ರ ರಾಜಕೀಯ ವ್ಯವಸ್ಥೆಯ ಬಗ್ಗೆ ಚರ್ಚಿಸಿದ್ದಾರೆ.

ಎಂ.ಎಸ್. ವೇದಾ ಅವರು "ಬಿ. ಪುಟ್ಟಸ್ವಾಮಯ್ಯನವರ ನಾಟಕ ಮತ್ತು ಕಾದಂಬರಿಗಳು: ಒಂದು ಅಧ್ಯಯನ" ಎಂಬ ಪಿಎಚ್.ಡಿ. ಮಹಾಪ್ರಬಂಧವನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ್ದಾರೆ. ಬಿ. ಪುಟ್ಟಸ್ವಾಮಯ್ಯನವರ ಜೀವನ ಸಾಧನೆ, ವ್ಯಕ್ತಿತ್ವ ನಾಟಕಗಳ ಪರಿಚಯ ಮಾಡಿಕೊಡುವುದರ ಜೊತೆಯಲ್ಲಿ ಅನುವಾದಿತ ಕಾದಂಬರಿಗಳು, ಐತಿಹಾಸಿಕ ಕಾದಂಬರಿಗಳು ಮತ್ತು ಸಾಮಾಜಿಕ ಕಾದಂಬರಿಗಳ ಬಗ್ಗೆ ಚರ್ಚಿಸಿದ್ದಾರೆ.

ಅಕ್ಕನ ಕುರಿತ "ಕನ್ನಡ ಕಾದಂಬರಿಗಳು" ಎಂಬ ಎಂ.ಫಿಲ್ ಸಂಪ್ರಬಂಧವನ್ನು ೨೦೦೭ರಲ್ಲಿ ಜಮುನ ಅವರು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಹನ್ನೆರಡನೆಯ ಶತಮಾನದಲ್ಲಿ ಆಗಿಹೋದ ಐತಿಹಾಸಿಕ ವ್ಯಕ್ತಿಯೋರ್ವಳ ಸಾಹಿತ್ಯಿಕ ಚಿತ್ರಣವಲ್ಲದೇ ಲೌಕಿಕ ಬದುಕನ್ನು ತ್ಯಜಿಸಿ, ಆಧ್ಯಾತ್ಮಿಕ ಗುರಿಯನ್ನು ಮುಟ್ಟಿದ ಶಿವಯೋಗಿಣಿ, ಅಕ್ಕನ ಜೀವನವನ್ನು ಕುರಿತು ಬಸವರಾಜ ಕಟ್ಟೀಮನಿವರ 'ಗಿರಿಯ ನವಿಲು' ತಿಪ್ಪೇರುದ್ರಸ್ವಾಮಿಯವರ 'ಕದಳಿಯ ಕರ್ಪೂರ', ಮಾತೆ ಮಹಾದೇವಿಯವರ 'ತರಂಗಿಣಿ' ಕಾದಂಬರಿಗಳನ್ನು ಪ್ರಬಂಧಕಾರರು ತಮ್ಮ ಅಧ್ಯಯನದ ವಸ್ತುವನ್ನಾಗಿಸಿದ್ದಾರೆ. ಅಕ್ಕನ ಜೀವನದಲ್ಲಿ ನಡೆದಂತಹ ಘಟನೆಗಳು, ಅದಕ್ಕೆ ಸಂಪ್ರದಾಯ ವಾದಿಗಳ ವಿರೋಧ, ಅವಳ ಆಧ್ಯಾತ್ಮಿಕತೆ ಇವೇ ಮುಂತಾದ ಐತಿಹಾಸಿಕ ಅಂಶಗಳನ್ನು ಇಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಇವುಗಳ ಜೊತೆಗೆ ಸಿ.ಆರ್. ಶ್ಯಾಮಲ ಅವರು ೧೯೯೧ರಲ್ಲಿ ಎಂ.ಫಿಲ್. ಪದವಿಗಾಗಿ ಮುಂಬಯಿ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದ "ತರಾಸು ಅವರ ಚಿತ್ರದುರ್ಗದ ಮೇಲಿನ ಕಾದಂಬರಿಗಳ ಐತಿಹಾಸಿಕ ಅಧ್ಯಯನ" ಎಂಬ ಸಂಪ್ರಬಂಧವನ್ನು ಇಲ್ಲಿ ಪ್ರಸ್ತಾಪಿಸಬಹುದಾಗಿದೆ.

ಇಂತಹ ಅಧ್ಯಯನಗಳ ಜೊತೆಗೆ ಕನ್ನಡ ಐತಿಹಾಸಿಕ ಕಾದಂಬರಿಗಳಿಗೆ ಸಂಬಂಧಿಸಿದಂತೆ ಹಲವಾರು ಬಿಡಿಲೇಖನಗಳು ಪತ್ರಿಕೆ ಮತ್ತು ಪುಸ್ತಕಗಳಲ್ಲಿ ಪ್ರಕಟವಾಗಿವೆ. ಅವುಗಳೆಂದರೆ,

| | | |
|---|---|---|
| ವಿಜಯಶ್ರೀ ಸಬರದ | - | ಹೈದ್ರಬಾದ್ ಕರ್ನಾಟಕದ ಐತಿಹಾಸಿಕ ಕಾದಂಬರಿಗಳು ಒಂದು ವಿವೇಚನೆ |
| ಮು. ಶಿವನಂಜಯ್ಯ | - | ಮಾಸ್ತಿಯವರ ಚಿಕವೀರ ರಾಜೇಂದ್ರ |
| ಕೃಷ್ಣಮೂರ್ತಿ ಕಿತ್ತೂರ | - | ಗಳಗನಾಥ ಕೃತ ಕನ್ನಡಿಗರ ಕಾದಂಬರಿಗಳು |
| ಕೆ. ರಮಾನಂದ | - | ಕನ್ನಡದಲ್ಲಿ ಐತಿಹಾಸಿಕ ಕಾದಂಬರಿಗಳು |
| ಎಂ.ಎಚ್. ಕೃಷ್ಣಯ್ಯ | - | ಕಟ್ಟೀಮನಿ ಅವರ ಚಾರಿತ್ರಿಕ ಕಾದಂಬರಿಗಳ ಸ್ವರೂಪ |
| ತಾಳ್ತಜೆ ವಸಂತಕುಮಾರ | - | ಐತಿಹಾಸಿಕ ಎರಡು ಕಾದಂಬರಿಗಳು |
| ಎಲ್.ಎಸ್. ಶೇಷಗಿರಿರಾವ್ | - | ಶ್ರೀನಿವಾಸರ ಎರಡು ಕಾದಂಬರಿಗಳು |
| ಕೊರಟಿ ಶ್ರೀನಿವಾಸರಾವ್ | - | ಕನ್ನಡ ಕಾದಂಬರಿಗಳಲ್ಲಿ ಇತಿಹಾಸ |
| ರಾಘವೇಂದ್ರ ಪಾಟೀಲ | - | ಆನಂದಕಂದರ ಐತಿಹಾಸಿಕ ಕಾದಂಬರಿಗಳು |
| ಬಿ.ಎಂ. ಶರಭೇಂದ್ರಯ್ಯ | - | ಚಿತ್ರದುರ್ಗದ ಇತಿಹಾಸ ಮತ್ತು ತರಾಸು ಕಾದಂಬರಿಗಳು |
| ಎಂ.ಜಿ. ಬಿರಾದಾರ | - | ತರಾಸು ಹಾಗೂ ಅವರ ಕಾದಂಬರಿಗಳು |
| ಎಂ.ಹೆಚ್. ಕೃಷ್ಣಯ್ಯ | - | ಐತಿಹಾಸಿಕ ಕಾದಂಬರಿ ಒಂದು ಸಮೀಕ್ಷೆ |
| ಆಮೂರ ಜಿ.ಎಸ್. | - | ಕನ್ನಡ ಕಾದಂಬರಿಯ ಬೆಳವಣಿಗೆ |

ಎಸ್.ವಿ. ಶ್ರೀನಿವಾಸರಾವ್ - ಆನಂದಕಂದ ಸಾಹಿತ್ಯವಾಚಿಕೆ

ಮಾಲಿನಿ ಮಲ್ಯ ಬಿ. - ಐತಿಹಾಸಿಕ ಕಾದಂಬರಿಗಳು

ಬಸವರಾಜ ಸಾದರ - ಬಸವರಾಜ ಕಟ್ಟೀಮನಿಯವರ ಕಾದಂಬರಿಗಳು

ಇದುವರೆಗಿನ ಅಧ್ಯಯನಗಳನ್ನು ಗಮನಿಸಿದರೆ ನಿರ್ದಿಷ್ಟ ಪರಿಕಲ್ಪನೆಗಳನ್ನು ಇರಿಸಿಕೊಂಡು ಕನ್ನಡ ಐತಿಹಾಸಿಕ ಕಾದಂಬರಿಗಳನ್ನು ವಿಶ್ಲೇಷಣೆಗಳಿಗೆ ಒಳಪಡಿಸಿದ ಅಧ್ಯಯನಗಳು ತೀರ ಕಡಿಮೆ ಎಂದು ಹೇಳಬಹುದಾಗಿದೆ. ಕೆಲವು ಅಧ್ಯಯನಗಳು ಕರ್ನಾಟಕದ ಅರಸು ಮನೆತನಗಳಿಗೆ ಸಂಬಂಧಿಸಿದ ಕಾದಂಬರಿಗಳನ್ನು ಐತಿಹಾಸಿಕವಾಗಿ ಅಧ್ಯಯನಕ್ಕೆ ಒಳಪಡಿಸಿದರೆ, ಇನ್ನೂ ಕೆಲವು ಕನ್ನಡ ನಾಡಿನ ಶಿವಶರಣ-ಶಿವಶರಣೆಯರ ಜೀವನವನ್ನಾಧರಿಸಿದ ಕಾದಂಬರಿಗಳನ್ನು ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ಮತ್ತೆ ಕೆಲವು ಲೇಖಕ ಕೇಂದ್ರಿತ ಅಧ್ಯಯನಗಳಾಗಿವೆ. ಐತಿಹಾಸಿಕ ಕಾದಂಬರಿಗಳಲ್ಲಿನ ಸ್ತ್ರೀ ಪಾತ್ರಗಳ ನೆಲೆಯಿಂದ ಕೈಗೊಂಡ ಅಧ್ಯಯನಗಳು ತೀರ ವಿರಳವಾಗಿದೆ. ಹಾಗಾಗಿ ಇಲ್ಲಿ ಪ್ರಸ್ತಾಪಿಸಲಾದ ಕೆಲವು ಅಧ್ಯಯನಗಳನ್ನು ಆನುಷಂಗಿಕ ಆಕರಗಳಾಗಿಸಿಕೊಂಡು ಕನ್ನಡ ಐತಿಹಾಸಿಕ ಕಾದಂಬರಿಗಳಲ್ಲಿ ವಿವಿಧ ಸ್ತ್ರೀಪಾತ್ರಗಳು ಹೇಗೆ ಮೂಡಿಬಂದಿವೆ ಎಂಬುದನ್ನು ಕಂಡುಕೊಳ್ಳಲು ಇಲ್ಲಿ ಪ್ರಯತ್ನಿಸಲಾಗುವುದು.

### ೨.೨. ಸಾಹಿತ್ಯ ಮತ್ತು ಇತಿಹಾಸದ ಅಂತಃಸಂಬಂಧದ ನೆಲೆಗಳು

ಮಾನವ ಸಮುದಾಯವು ಅನಾಗರಿಕ ಸ್ಥಿತಿಯಿಂದ ನಾಗರಿಕ ಸ್ಥಿತಿಯತ್ತ ಹೋದಂತೆ ಅವರ ಯೋಚನೆಗಳು ಸಹ ಬೆಳೆಯುತ್ತ ಹೋಯಿತು. ಸಾಮಾಜಶಾಸ್ತ್ರ, ರಾಜಕೀಯ, ಪೌರಾಣಿಕ, ಧಾರ್ಮಿಕ, ಚರಿತ್ರೆ, ಮನಃಶಾಸ್ತ್ರೀಯ, ಸಾಹಿತ್ಯಿಕ ಹೀಗೆ ಹಲವಾರು ಜ್ಞಾನಶಾಖೆಗಳು ವಿಸ್ತರಿಸಿಕೊಂಡಿವೆ. ಅಧ್ಯಯನದ ದೃಷ್ಟಿಯಿಂದ ಅವುಗಳು ಒಂದಕ್ಕೊಂದು ಸಂಬಂಧ ಇಲ್ಲವೆಂಬಂತೆ ಬೇರೆ ಬೇರೆಯಾಗಿಯೇ ಬೆಳೆದುನಿಂತು ಹೆಮ್ಮರವಾಗಿವೆ. ಆದರೂ ಸಹ ಅನೇಕ ಸಂದರ್ಭದಲ್ಲಿ ಒಂದು ಜ್ಞಾನಶಾಖೆ ಮತ್ತೊಂದು ಜ್ಞಾನಶಾಖೆಯೊಂದಿಗೆ ತಳುಕು ಹಾಕಿಕೊಂಡಿರುತ್ತವೆ. ಇದನ್ನು ಸೂಕ್ಷ್ಮವಾಗಿ ನೋಡಿದಾಗ ಮಾತ್ರ ಈ ಸಂಬಂಧ ಗೊತ್ತಾಗುತ್ತದೆ. ಸಾಹಿತ್ಯ ಮತ್ತು ಇತಿಹಾಸ ಅಧ್ಯಯನ ಶಿಸ್ತುಗಳ ನಡುವೆಯೂ ಇದೇ ರೀತಿಯ ಸಂಬಂಧ ಇರುವುದನ್ನು ಕಾಣಬಹುದು. ಇವುಗಳು ಪರಸ್ಪರ ಬಿಡಿಸಲಾರದ ಸಂಬಂಧವನ್ನು ಹೊಂದಿವೆ.

ಇತಿಹಾಸ ಪದದ ಮೂಲ ಅರ್ಥ ಹೀಗಿದೆ. ಇಂಗ್ಲೀಷ್ ಪದ 'ಹಿಸ್ಟರಿ' ಎಂಬುದು ಗ್ರೀಕ್ ಪದ 'ಹಿಸ್ಟೇರಿಯಾ'ದಿಂದ ಬಂದುದು. ಹಿಸ್ಟೇರಿಯಾ ಎಂದರೆ ವಿಚಾರಣೆ ಎಂದರ್ಥ. ಸತ್ಯಾನ್ವೇಷಣೆಯೇ ಇದರ ಗುರಿ. ಸಂಸ್ಕೃತ ಪದವಾದ 'ಇತಿಹಾಸ' ಇದೇ ಅರ್ಥವನ್ನು ಸೂಚಿಸುತ್ತದೆ. 'ಇತಿ' ಎಂದರೆ ಹೀಗೆ, 'ಹ' ಎಂದರೆ ಖಚಿತವಾಗಿ 'ಆಸ್' ಎಂದರೆ ನಡೆಯಿತು ಎಂದರ್ಥ. ಅಂದರೆ ಶೋಧನೆಯ ಫಲವಾಗಿ ತಿಳಿದು ಬರುವುದೇ ಇತಿಹಾಸ. ಇತಿಹಾಸ ಎನ್ನುವ ಪದಕ್ಕೆ ನಿಘಂಟಿನಲ್ಲಿ ಚರಿತ್ರೆ, ಗತಿಸಿಹೋದ ಕಾಲ ಎಂಬ ಅರ್ಥಗಳು ಇವೆ.

ಕ್ರಿ.ಪೂ. ಮೂರನೇ ಶತಮಾನದಿಂದಲೇ ಸಾಹಿತ್ಯ ಮತ್ತು ಇತಿಹಾಸದ ಸಂಬಂಧದ ಬಗ್ಗೆ ಚರ್ಚಿಸುತ್ತಾ ಬರಲಾಗಿದೆ. ಸಾಹಿತ್ಯ ಮತ್ತು ಇತಿಹಾಸದ ಸ್ವರೂಪ ಹಾಗೂ ಸಂಬಂಧದ ಬಗ್ಗೆ ಮಾತನಾಡಿದವರಲ್ಲಿ ಅರಿಸ್ಟಾಟಲ್ ಮೊದಲಿಗ ಎಂದು ಹೇಳಬಹುದು.

ಇತಿಹಾಸ ಮತ್ತು ಸಾಹಿತ್ಯದ ಕುರಿತು ಅನೇಕ ವಿದ್ವಾಂಸರ ವ್ಯಾಖ್ಯಾನಗಳು ಈ ರೀತಿಯಾಗಿವೆ. ಇತಿಹಾಸದ ಪಿತಾಮಹನೆಂದು ಗುರುತಿಸುವ ಹೆರೊಡೊಟಸ್ ಕೂಡ ಸಾಹಿತ್ಯ ಮತ್ತು ಇತಿಹಾಸದ ಸ್ವರೂಪದ ಬಗ್ಗೆ ಮಾತಾಡಿದ್ದಾನೆ. ಆತನ ಪ್ರಕಾರ "ಕಾವ್ಯದ ಉದ್ದೇಶ ಹೇಗೆ ಆನಂದವೋ ಹಾಗೆಯೇ ಇತಿಹಾಸವು ಓದುಗನಿಗೆ ಸಂತೋಷದಾಯಕವಾಗಿರಬೇಕು"(ರಾಮೇಗೌಡ; ೧೯೯೨; ಪು. ೧೪).

ಅರಿಸ್ಟಾಟಲ್‌ನ The Poetics ಗ್ರಂಥವನ್ನು ಎನ್. ಬಾಲಸುಬ್ರಹ್ಮಣ್ಯ ಅವರು ಅನುವಾದಿಸಿದ್ದಾರೆ. ಅವರು ತಮ್ಮ ಪೀಠಿಕಾ ಭಾಗದಲ್ಲೇ ಈ ಎರಡು ಶಾಸ್ತ್ರಗಳ ಸ್ವರೂಪ ಸಂಬಂಧ ಮತ್ತು ಉದ್ದೇಶಗಳ ಬಗ್ಗೆ ಅರಿಸ್ಟಾಟಲನ ಕೆಲವು ವಿಚಾರಗಳನ್ನು ಹೇಳಿದ್ದಾರೆ. "ಅರಿಸ್ಟಾಟಲ್ ಕಾವ್ಯ ಮತ್ತು ಇತಿಹಾಸವನ್ನು ಹೋಲಿಸುತ್ತಾ, ಇತಿಹಾಸಕ್ಕಿಂತಲೂ ಕಾವ್ಯವೇ ಹೆಚ್ಚು ತಾತ್ವಿಕ ಮತ್ತು ಘನೋದ್ದೇಶವುಳ್ಳದೆಂದು ಹೇಳಿದ್ದಾನೆ. ಇದಕ್ಕೆ ಕಾರಣ ಇತಿಹಾಸಕ್ಕಿಂತ ಸೂಕ್ಷ್ಮವಾಗಿ ಯಥಾರ್ಥವಾಗಿ ಭೂತ ಅಥವಾ ವರ್ತಮಾನ ಸಂಗತಿಗಳನ್ನು ಕಾವ್ಯವು ಪ್ರದರ್ಶಿಸುತ್ತದೆ ಎಂದಲ್ಲ. ತಾತ್ಕಾಲಿಕವಾಗಿ, ಕ್ಷಣಿಕವಾದ ವ್ಯಕ್ತಿಗತವಾದ ಸಿದ್ಧ ಸತ್ಯಗಳನ್ನು ಇತಿಹಾಸವು ಚಿತ್ರಿಸಿದರೆ, ಕಾವ್ಯವಾದರೋ ಸಾರ್ವತ್ರಿಕವಾದ ಚಿರವಾದ ಸಂಭವನೀಯ ಸತ್ಯಗಳನ್ನು ಅನುಕರಿಸುತ್ತದೆ. ಸಿದ್ಧ ಸತ್ಯವು ಕಾವ್ಯದ ವಸ್ತುವಾಗಿ ಆಗಲಾರದೆಂದಾಗಲೀ, ಆಗಬಾರದೆಂದಾಗಲೀ ಅಲ್ಲ; ಆದರೆ ಅದಕ್ಕಿಂತಲೂ ಸಂಭಾವ್ಯ ಸತ್ಯವೇ ಮೇಲಾದುದು ಎಂದು ಅರಿಸ್ಟಾಟಲ್‌ನ ಅಭಿಪ್ರಾಯ. ಅದೂ ಅಲ್ಲದೆ ಕವಿಯ ಉದ್ದೇಶವು ನಡೆದ ಸಂಗತಿಯನ್ನು ತಿಳಿಸುವುದಲ್ಲ ನಡೆಯಬಹುದಾದುದನ್ನು ತಿಳಿಸುವುದು; ಸಿದ್ಧವಾಗಿರುವುದಕ್ಕಿಂತಲೂ ಹೆಚ್ಚಾಗಿ ಸಾಧ್ಯವಾದುದನ್ನು ಚಿತ್ರಿಸುವುದು"(ಬಾಲಸುಬ್ರಹ್ಮಣ್ಯ ಎನ್; ೧೯೯೧; ಪು. ೧೩).

ಭಾರತೀಯರಲ್ಲಿ ಚಾರಿತ್ರಿಕ ಪ್ರಜ್ಞೆಯು ಯಾವ ರೀತಿಯಿದೆ ಎನ್ನುವುದರ ಕುರಿತು ಅಲ್ಬೆರುನಿ ಈ ರೀತಿ ಗುರುತಿಸುತ್ತಾನೆ. "ಭಾರತೀಯರಲ್ಲಿ ಚಾರಿತ್ರಿಕ ಪ್ರಜ್ಞೆಯಿದೆ. ಆದರೆ ಅವು ಕಾಲಾನುಕ್ರಮದಲ್ಲಿ ನಿಯಮಬದ್ಧವಾಗಿ ರೂಪನಿಷ್ಠ ದಾಖಲೆಯಾಗಿ ಸಿಗದೆ, ಅವರ ಸಾಹಿತ್ಯ ಕೃತಿಗಳಲ್ಲಿ, ಕಾವ್ಯಗಳಲ್ಲಿ ಇತಿಹಾಸವು ಹುದುಗಿರುತ್ತದೆ. ಆದ್ದರಿಂದ ಚಾರಿತ್ರಿಕ ಅಂಶಗಳನ್ನು ಬೇರ್ಪಡಿಸುವ ಮೂಲಕ ಧ್ವನಿ ರೂಪದ ಇತಿಹಾಸವನ್ನು ತಿಳಿಯಬಹುದೆಂದು ಅರುಹಿದ್ದಾರೆ" (ವಿಜಯಶ್ರೀ ಸಬರದ (ಸಂ); ೨೦೦೫; ಪು. ೨೭).

ಶರಭೇಂದ್ರಯ್ಯ ಬಿ.ಎಂ. ಅವರ ಪ್ರಕಾರ "ಇತಿಹಾಸ ಮತ್ತು ಸಾಹಿತ್ಯದ ಸಂಬಂಧ ನಿನ್ನೆ ಮೊನ್ನೆಯದೇನಲ್ಲ; ಎಂದು ಸಾಹಿತ್ಯ ಸೃಷ್ಟಿಯಾಗಿದೆಯೋ ಅಂದೇ ಇತಿಹಾಸವೂ ತನ್ನ ಅಸ್ತಿತ್ವವನ್ನು ಪಡೆದುಕೊಂಡಿದೆ. ಹೀಗೆ ಹೇಳಿದಾಕ್ಷಣ ಸಾಹಿತ್ಯ ಸೃಷ್ಟಿಗಿಂತ ಮುಂಚೆ ಇತಿಹಾಸವೇ ಇರಲಿಲ್ಲ ಎಂದರ್ಥವಲ್ಲ. ಇತಿಹಾಸ ಮೊದಲು ಅಕ್ಷರರೂಪ ಪಡೆದದ್ದು ಅಥವಾ

ದಾಖಲೆಗೊಂಡದ್ದು ಸಾಹಿತ್ಯದಿಂದ. ಭಾರತೀಯ ಸಂದರ್ಭದಲ್ಲಿ ಇತಿಹಾಸ ಮೊದಲು ಮೂಡಿಬಂದದ್ದೇ ಸಾಹಿತ್ಯದ ಮೂಲಕ. ಪ್ರಾಚೀನ ಕಾಲದ ಕಾವ್ಯಗಳಾದ ನಾಲ್ಕು ವೇದಗಳಲ್ಲೂ ಇತಿಹಾಸದ ತುಣುಕುಗಳನ್ನು ಕಾಣಬಹುದು"(ಮಹೇಶ್ ತಿಪ್ಪಶೆಟ್ಟಿ; ೨೦೦೧; ಪು. ೭೪).

ಇತಿಹಾಸವೆಂದರೆ ಅದು ಕೇವಲ ರಾಜಮಹಾರಾಜರ ವೈಭವದ ವಿಲಾಸಮಯ ಜೀವನ ಚಿತ್ರವೆಂದಾಗಲೀ, ಅವರು ನಡೆಸಿದ ಯುದ್ಧಗಳ ವರ್ಣನೆಯೆಂದಾಗಲೀ ಅಲ್ಲ. ಅದು ಆ ದೇಶದ ಜೀವನಾಡಿಯಾದ ಜನತೆಯ ಇತಿಹಾಸವಾಗಿರಬೇಕು ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಅಂದರೆ ಸಾಮಾನ್ಯ ಜನ ಬದುಕಿದ ರೀತಿ, ಅವರ ನಡೆನುಡಿಗಳು, ಆಚಾರ ಸಂಪ್ರದಾಯಗಳು, ಅವರು ಅನುಸರಿಸಿದ ಧರ್ಮ, ಬೆಳಗಿದ ಕಲೆ, ಜೀವನ ಸಮಸ್ಯೆಗಳು ಮುಂತಾದ ಮಾನವ ಸಹಜ ಚಟುವಟಿಕೆಯ ವಿವರಗಳನ್ನು ಒಳಗೊಂಡಿದ್ದರೆ ಚರಿತ್ರೆಯ ರಚನೆಯು ಇಂದಿನ ಜನಾಂಗದ ಪ್ರತಿಯೊಬ್ಬರ ಜ್ಞಾನದ ಅರಿವಿಗೆ ಉತ್ತಮವಾದ ರೀತಿಯಲ್ಲಿ ಪ್ರತಿಬಿಂಬಿಸುವಂತಾಗುತ್ತದೆ.

ಭಾರತೀಯರಲ್ಲಿ ಚರಿತ್ರೆ ಒಂದು ಕಾಲಘಟ್ಟದವರೆಗೆ ಒಂದು ಪ್ರತ್ಯೇಕ ಶಿಸ್ತಾಗಿ ಬೆಳೆಯದೇ ಸಾಹಿತ್ಯದ ಒಂದು ಭಾಗವಾಗಿ ಪುರಾಣದ ಹೆಸರಿನಲ್ಲಿ ಕಾವ್ಯದ ಹೆಸರಿನಲ್ಲಿ ಸೃಷ್ಟಿಯಾಗುತ್ತಿತ್ತು. ಹಿಂದೆ ನಮ್ಮ ರಾಜಮಹಾರಾಜರ ಚರಿತ್ರೆ ಬಹುತೇಕವಾಗಿ ದೊರೆಯುವುದು ಪುರಾಣ ಇಲ್ಲವೇ ಕಾವ್ಯಗಳಲ್ಲೇ ಎಂದು ಹೇಳಬಹುದು. ಅಲ್ಲದೆ ಹಲವಾರು ಸಂದರ್ಭದಲ್ಲಿ ಸಾಹಿತ್ಯ ಸೃಷ್ಟಿ ಇತಿಹಾಸವನ್ನು ಅವಲಂಬಿಸಿದೆ. ಹಾಗೆಯೇ ಚರಿತ್ರೆಯ ಬರವಣಿಗೆಗೆ ಸಾಹಿತ್ಯ ಮೂಲ ಆಕರಗಳಲ್ಲಿ ಒಂದಾಗಿದೆ. ಅದರ ಮೂಲಕ ತನ್ನ ಉದ್ದೇಶವನ್ನು ಜನರಿಗೆ ಸಂವಹನಗೊಳ್ಳಲು ಪ್ರಯತ್ನಿಸಿದೆ ಮತ್ತು ಚರಿತ್ರೆಯ ಮೂಲಕ ಪ್ರಸ್ತುತ ಸವಾಲುಗಳನ್ನು ಅರ್ಥ ಮಾಡಿಕೊಳ್ಳಲು ಮತ್ತು ಮುಂದಿನ ಭವಿಷತ್ತಿನ ಬಗ್ಗೆ ಉತ್ತರ ಹುಡುಕಲು ಸಹಕಾರಿಯಾಗಿದೆ. ಸಾಹಿತ್ಯ ಸೃಷ್ಟಿಗೆ ಕೆಲವು ಸಂದರ್ಭದಲ್ಲಿ ಹೇಗೆ ಚರಿತ್ರೆ ಮುಖ್ಯವಾಗುತ್ತದೆಯೋ ಹಾಗೆಯೇ ಚರಿತ್ರೆಯ ಬರವಣಿಗೆಗೆ ಸಾಹಿತ್ಯ ಮೂಲ ಆಕರಗಳಲ್ಲಿ ಒಂದಾಗಿದೆ. ಮೂಲಭೂತವಾಗಿ ಈ ಎರಡು ಅಧ್ಯಯನ ಶಿಸ್ತುಗಳು ಮನುಷ್ಯ ಕೇಂದ್ರಿತವಾದವುಗಳು ಒಂದು ಭೂತಕಾಲದ ಮನುಷ್ಯನನ್ನು ಆತನಿಗೆ ಸಂಬಂಧಿಸಿದ ಎಲ್ಲ ವಿವರಗಳನ್ನು ತಿಳಿಸುತ್ತದೆ. ಇದನ್ನೇ ಎಂ. ಚಿದಾನಂದಮೂರ್ತಿಯವರು ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಕೃತಿಯಲ್ಲಿ ಇತಿಹಾಸ ಎಂದರೇನು? ಎನ್ನುವ ಪ್ರಶ್ನೆಗೆ ಈ ರೀತಿ ವಿವರಿಸಿದ್ದಾರೆ. "ಜನತೆ ಬದುಕಿದ ರೀತಿ ಅನುಸರಿಸಿದ ಧರ್ಮ ಕಟ್ಟಿದ ಕಲೆ ಅವರ ಜೀವನ ಸಮಸ್ಯೆ ಜೀವನ ಮೌಲ್ಯ ಇತ್ಯಾದಿಗಳ ವಿವರಣೆಯೇ(ಚಿದಾನಂದಮೂರ್ತಿ ಎಂ; ೧೯೬೬; ಪು. ೧) ಇತಿಹಾಸ ಎನ್ನುತ್ತಾರೆ.

ಚರಿತ್ರೆ ಎನ್ನುವ ಶಿಸ್ತು ಸಾಹಿತ್ಯದಿಂದ ಬೇರೆಯಾದ ಮೇಲೆ ತನ್ನದೇ ಆದ ಉದ್ದೇಶ, ಸಿದ್ಧಾಂತಗಳನ್ನು ಹೊಂದಿದ್ದರೂ ಸಾಹಿತ್ಯ ಮತ್ತು ಚರಿತ್ರೆ ಎರಡೂ ಶಿಸ್ತುಗಳ ನಡುವೆ ಪರಸ್ಪರ ಬಿಡಿಸಲಾರದ ಸಂಬಂಧವಿದೆ. ಹಾಗಾಗಿ ಈ ಎರಡು ಶಿಸ್ತುಗಳು ಬೇರೆ ಬೇರೆ ಉದ್ದೇಶವನ್ನು ಹೊಂದಿವೆ ಎನಿಸಿದರೂ ಅವುಗಳ ಅಂತಿಮ ಉದ್ದೇಶ ಒಂದೇ ಆಗಿರುತ್ತದೆ. ಅದು ಮಾನವ

ಕುಲದ ಏಳಿಗೆ; ಆದರೆ ಎರಡು ಶಿಸ್ತುಗಳು ತಮ್ಮ ಉದ್ದೇಶ ತಲುಪಲು ಹೊರಡುವ ಮಾರ್ಗ ಬೇರೆ. ಹಾಗಾಗಿ ಎರಡು ಅಧ್ಯಯನ ಶಿಸ್ತುಗಳು ಪರಸ್ಪರ ಸಂಬಂಧ ಪಡೆದಿವೆ ಒಂದಕ್ಕೊಂದು ಪೂರಕವಾಗಿದೆ.

## ೨.೨.೧. ಮೌಖಿಕ ಸಾಹಿತ್ಯ ಸಂದರ್ಭ

ಜಾನಪದ ಸಾಹಿತ್ಯ ಮೊದಲು ಮೌಖಿಕ ಪರಂಪರೆಯಿಂದ ಉದ್ಭವಿಸಿತು. ಮಾತಿನ ಮುಖಾಂತರವೇ ತಮ್ಮದೇ ಆದ ಭಾವನೆಗಳನ್ನು ಅಭಿವ್ಯಕ್ತಿಸಿಕೊಂಡರು. ಮೌಖಿಕ ಸಂಪ್ರದಾಯದ ಈ ಜಾನಪದ ಸಾಹಿತ್ಯ ಒಮ್ಮೆ ಶಿಷ್ಟ ಸಾಹಿತ್ಯಕ್ಕೆ ಮಾರ್ಪಾಡುಗೊಂಡಿತು. ಜನಪದಕ್ಕೆ ಬಂದಂತಹ ಜಾನಪದ ಸಾಹಿತ್ಯದಲ್ಲಿ ತನ್ನದೇ ಆದಂತಹ ಕೊಡುಕೊಳ್ಳುವಿಕೆಗಳು ನಿರಂತರವಾಗಿ ನಡೆಯುತ್ತಲೇ ಇದೆ. ಜಾನಪದ ಸಾಹಿತ್ಯ ಬದುಕಿನ ಎಲ್ಲ ಸಮಸ್ತ ವಿಷಯಗಳನ್ನು ಒಳಗೊಂಡಿದೆ. ಅದು ಮಾನವನ ಇರುವಿಕೆಯನ್ನು ಚಿತ್ರಿಸುತ್ತದೆ. ಬದುಕಿನ ನಾನಾ ರೀತಿಯ ಮಜಲುಗಳನ್ನು ಎಳೆಎಳೆಯಾಗಿ ಬಿಡಿಸುತ್ತಾ ಹೋಗುತ್ತದೆ. ಜಾನಪದ ಸಾಹಿತ್ಯದ ವಿವಿಧ ಪ್ರಕಾರಗಳಾದ ಗಾದೆ, ಒಗಟು, ಕಥೆ, ಲಾವಣಿ, ಐತಿಹ್ಯ, ಯಕ್ಷಗಾನ, ಸಣ್ಣಾಟ, ದೊಡ್ಡಾಟ, ಬಯಲಾಟ ಮುಂತಾದ ವಿಷಯಗಳು ಇದರಲ್ಲಿದೆ. ಪುರಾಣ ವ್ಯಕ್ತಿಗಳು ದೇವ-ದಾನವರ ಪವಾಡಗಳು, ಐತಿಹಾಸಿಕ ವೀರರು, ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ವೀರರು, ನಾಡಿನ ರಕ್ಷಣೆಗಾಗಿ, ಮಾನವ ರಕ್ಷಣೆಗಾಗಿ, ಪ್ರಾಣ ಕಳೆದುಕೊಂಡ ಸಾಮಾನ್ಯರು, ರಾಜರ ಯುದ್ಧ, ಸೌಹಾರ್ದ ಮುಂತಾದ ಅನೇಕ ವೀರರ ಕುರಿತು, ಜನಪದ ಕವಿಗಳು ತಮ್ಮದೇ ಆದ ಕಥೆ ಕಟ್ಟಿ, ಹಾಡು ರಚಿಸಿ ಹಾಡುತ್ತಾ ಅವರನ್ನು ಹೊಗಳುತ್ತಾ ತಮ್ಮದೇ ಆದ ಜೀವನವನ್ನು ರೂಪುಗೊಳಿಸಿಕೊಂಡಿದ್ದಾರೆ.

ಮೌಖಿಕ ರೂಪದಲ್ಲಿ ಲಭ್ಯವಿರುವ ಮಾಹಿತಿಗಳನ್ನು ಬಳಸಿಕೊಂಡು ಅವನ್ನು ಮುಖ್ಯ ಆಕರವನ್ನಾಗಿಸಿಕೊಂಡು ಬರೆಯುವ ಇತಿಹಾಸಕ್ಕೆ ನಾವು 'ಮೌಖಿಕ ಇತಿಹಾಸ' ಎಂದು ಕರೆಯಬಹುದು. ಇದಕ್ಕೆ ಪರ್ಯಾಯವಾಗಿರುವ ಇತಿಹಾಸ 'ಲಿಖಿತ ಇತಿಹಾಸ'. ಇದು ಪಾರಂಪರಿಕವಾಗಿ ಗತವನ್ನು ಅಧ್ಯಯನ ಮಾಡುವ ಕ್ರಮ. 'ಭಾರತೀಯರಿಗೆ ಚಾರಿತ್ರಿಕ ಪ್ರಜ್ಞೆಯಿಲ್ಲ' ಎಂಬ ವಸಾಹತುಶಾಹಿಯ ವಾದವನ್ನು ಮುರಿದು, ದೇಶೀಯ ನೆಲೆಯಲ್ಲಿ, ಸಮಷ್ಟಿ ವಿವೇಕದಿಂದ ನಮ್ಮ ಚರಿತ್ರೆಯನ್ನು ಪುನರ್‌ವ್ಯಾಖ್ಯಾನಿಸಿಕೊಳ್ಳುವ ಅಗತ್ಯವನ್ನು ೨೦ನೇ ಶತಮಾನದ ವೈಚಾರಿಕ ಗದ್ಯ ನಮಗೆ ತೋರಿಸಿಕೊಟ್ಟಿದೆ. ಆಧುನಿಕ ಸಂದರ್ಭದ ಗದ್ಯ ಸಮಕಾಲೀನ ಚಾರಿತ್ರಿಕ ಕ್ರಮವನ್ನು ನಿರೂಪಿಸಿದರೆ, ಮೌಖಿಕ ಪರಂಪರೆ ಬಹುರೂಪಿ ಸಾಹಿತ್ಯದ ಅಲಕ್ಷಿತರ ಇತಿಹಾಸವನ್ನು ಭಿನ್ನನೆಲೆಯಲ್ಲಿ ಕಟ್ಟಿಕೊಡುತ್ತದೆ.

"ಜನಪದರಲ್ಲಿ 'ಗತ'ವನ್ನು ಕಟ್ಟಿಕೊಳ್ಳುವ ಪ್ರಜ್ಞೆ ಚರಿತ್ರೆ, ಪುರಾಣ, ಐತಿಹ್ಯ, ಕಲ್ಪನೆಯ ವಿವರಗಳಲ್ಲಿ ಅಡ್ಡಾಡಿ ಬರುತ್ತದೆ. ಇವರ ಮಹಾಕಥನಗಳು ಸಹ ಇಷ್ಟಿಗಳ ಸಮೇತ ಬರೆದು ಯಾವುದೋ ಒಂದು ಐತಿಹಾಸಿಕ ಘಟನೆಯೊಂದಿಗೆ ತನ್ನನ್ನು ಸಮೀಕರಿಸಿಕೊಂಡಂತೆ ಕಾಣುವುದಿಲ್ಲ" (ಇಸ್ಮಾಯಿಲ್ ಜಬೀರ್ ಬಾವಾಜಿ; ೨೦೦೮-೦೯; ಪು. ೯೭).

ಜನಪದ ಕಥನಗಳು ಮತ್ತು ಶಿಷ್ಟ ಚರಿತ್ರೆ ಎಂಬ ಎರಡು ಸಂಕಥನಗಳು, ಎರಡು ಸಮುದಾಯಗಳು ಗತವನ್ನು ಪರಿಭಾವಿಸುವ ಕ್ರಮಗಳು ಎಂದು ಭಾವಿಸುವುದಾದರೆ ಇವುಗಳೆರಡೂ

ಪರಸ್ಪರ ವೈರುಧ್ಯದ ಅಂತರವನ್ನು ಹೊಂದಿರುತ್ತವೆ ಎಂದೇ ಅರ್ಥ. ಕಾರಣ "ಜನ ತಮ್ಮ ಸಾಂಸ್ಕೃತಿಕ ನಾಯಕರ ಬಗ್ಗೆ ಕಟ್ಟುವ ಚರಿತ್ರೆಗಳಲ್ಲಿ ಅವರ ಸಮಕಾಲೀನ ಬಾಳಿನ ಅನೇಕ ಒತ್ತಡಗಳು ಭಾಗವಹಿಸುತ್ತವೆ. ಈ ಕಥೆಗಳು ಚರಿತ್ರೆಯ ಕಾಲ ಕಲ್ಪನೆಯನ್ನು ಮುರಿಯುತ್ತವೆ" (ಅದೇ. ಪು. ೯೮).

ಮಧ್ಯಕಾಲೀನ ಕರ್ನಾಟಕದ ಸಮಾಜದಲ್ಲಿರುವ ಎಲ್ಲಾ 'ಪ್ರಗತಿಪರ' ಎನ್ನಬಹುದಾದ ಘಟನೆಗಳು ಅಥವಾ ಸಂಗತಿಗಳು ಸಮುದಾಯ ಪರವಾಗಿದ್ದಂತಹವು. ಈ ಕಾರಣದಿಂದಾಗಿಯೇ ಸಾಂಸ್ಕೃತಿಕ ಚರಿತ್ರೆ 'ಜನಮುಖಿ ಜಾತ್ರೆ' ಅಥವಾ 'ಸಮುದಾಯ ಚರಿತ್ರೆ'ಯಾಗಿ ರೂಪುಗೊಂಡಿರುವುದು. ಹಾಗೇನೇ ಸಾಂಪ್ರದಾಯಿಕ ಚರಿತ್ರೆಯಲ್ಲಿ ಈ ಸಾಂಸ್ಕೃತಿಕ ಚರಿತ್ರೆಯ ಭಾಗ ಎನ್ನಬಹುದಾದ ಪುರಾಣ ಮತ್ತಿತರ ಅಂಶಗಳ ರಚನೆಯನ್ನು ಕೂಡ ಕಾಣಬಹುದು. ಸಾಂಪ್ರದಾಯಿಕ ಇತಿಹಾಸ ಅಂದಾಕ್ಷಣ ಅಲ್ಲಿ ಕೇವಲ ಸಾಂಪ್ರದಾಯಿಕ ಆಕರಗಳು ಮಾತ್ರ ಇದ್ದವು ಎನ್ನಲಾಗದು. "ಶಾಸನಗಳ ರಚನೆಯ ಜೊತೆಜೊತೆಗೆ ಪುರಾಣಗಳ ರಚನೆಯೂ ಆಗಿರುವುದನ್ನು ಅಲಕ್ಷಿಸುವಂತಿಲ್ಲ. ಒಂದೆಡೆ ಬಹಿರಂಗ ಪುರಾಣಗಳು ರಚನೆಯಾಗುತ್ತಿದ್ದವು. ಇದೇ ಕಾಲಕ್ಕೆ ಚಾರಿತ್ರಿಕ ಕಾವ್ಯಗಳ ರಚನೆಯೂ ಆರಂಭವಾಯಿತು"(ಗೋಪಾಲ್‌ರಾವ್ ಎಚ್.ಎಸ್.; ೧೯೯೬; ಪು. ೨೮).

ಚರಿತ್ರೆಯ ನಿರೂಪಣೆಗೆ ಹಲವಾರು ಆಕರ ಸಾಮಗ್ರಿಗಳಿವೆ. ಅವುಗಳನ್ನು ಲಿಖಿತ ಮತ್ತು ಅಲಿಖಿತ ಎಂದು ವಿಭಾಗ ಮಾಡಲಾಗಿದೆ. ಈ ಅಲಿಖಿತದಲ್ಲಿ ಮೌಖಿಕ ಸಾಹಿತ್ಯವೂ ಸೇರುತ್ತದೆ. ಇದರಲ್ಲಿ ಕಥನಗೀತೆಗಳು, ಲಾವಣಿಗಳು, ಐತಿಹ್ಯ, ಪುರಾಣ, ಕಥೆ, ಗಾದೆ, ನಂಬಿಕೆ, ಆಚರಣೆಗಳೆಲ್ಲವೂ ಸೇರುತ್ತವೆ. ಹಾಗಾಗಿಯೇ "ಮೌಖಿಕ ಆಕರಗಳಾಗಿರುವ 'ಕಥನಗೀತೆಗಳು' ಸ್ಥಳೀಯ ಚರಿತ್ರೆಯ ಆಕರವೆಂದು ಸ್ವೀಕಾರಾರ್ಹವಾಗಿವೆ. ಸಾಹಸ ತೋರಿದ ವ್ಯಕ್ತಿ ವೀರಮರಣ ಹೊಂದಿದ ತರುವಾಯ ಅವನ ಬಗ್ಗೆ ಬೆಳೆದುಬಂದ ಮೌಖಿಕ ಸಾಹಿತ್ಯದಲ್ಲಿ ಕಥನಗೀತೆಗಳು ರಂಜನೀಯವೆನಿಸಿವೆ. ಅರಸ, ಅಸಾಮಾನ್ಯ ವ್ಯಕ್ತಿಗಳ ಸಾಧನೆ, ವೀರಮರಣವನ್ನು ವೀರಗಲ್ಲು, ಮಾಸ್ತಿಕಲ್ಲುಗಳಲ್ಲಿ ಗೋಚರಿಸುವಂತೆ ಕೆತ್ತಲಾಗಿದೆ. ಎಲ್ಲಿಯೂ ದಾಖಲಾಗದವರ ವಿವರವು ಮೌಖಿಕ ಕಥಾನಕಗಳಲ್ಲಿ ವ್ಯಕ್ತಪಡುವುದು ಸ್ಥಳೀಯ ಮಹತ್ವ ಹೊಂದಿರುವುದು ಗಮನಾರ್ಹವಾಗಿದೆ" (ಅದೇ. ಪು. ೮೧).

ಯಾವುದೋ ಒಂದು ಕಾರಣಕ್ಕೆ ಲಿಖಿತ ಮತ್ತು ಮೌಖಿಕ ಪರಂಪರೆಗಳನ್ನು ಇಬ್ಭಾಗ ಮಾಡುವಲ್ಲಿ ಯಾವುದೇ ಅನಿವಾರ್ಯತೆಗಳಾಗಲೀ ಅಥವಾ ಅವಶ್ಯಕತೆಗಳಾಗಲೀ ಇಲ್ಲ. ಕೆಲವೊಮ್ಮೆ ಲಿಖಿತ ಪರಂಪರೆಯು ಮೌಖಿಕ ಪರಂಪರೆಯ ಹಲವಾರು ಅಂಶಗಳನ್ನು ತನ್ನ ಮೂಲ ಬರವಣಿಗೆಯ ಸಾಧನಗಳನ್ನಾಗಿ ಮಾಡಿಕೊಂಡ ಅನೇಕ ಉದಾಹರಣೆಗಳಿವೆ. ಮೌಖಿಕ ಪರಂಪರೆಯು ಲಿಖಿತ ಪರಂಪರೆಯ ಬಹುಮುಖ್ಯ ಲಕ್ಷಣವಾಗಿದೆ. ಹಾಗಾಗಿ ಮೌಖಿಕತೆಯ ಕುರಿತಾಗಿ ಖಚಿತತೆಯ ಬಗ್ಗೆ ಮಾತನಾಡುವುದು ಅಷ್ಟೊಂದು ಸಮಂಜಸವಾಗಲಾರದೆಂದೆನಿಸುತ್ತದೆ. ಕಾರಣ ವೇದಗಳನ್ನು ರಕ್ಷಿಸಿಕೊಂಡು ಬಂದ ಸ್ಥಿತಿಯನ್ನು ಗಮನಿಸಿದರೆ ಗೊತ್ತಾಗುತ್ತದೆ.

ಶತಶತಮಾನಗಳಿಂದ ಅವುಗಳನ್ನು ಬಾಯಿ, ಕಿವಿ, ಮಾತಿನ ಮೂಲಕ ಉಳಿಸಿಕೊಂಡು ಬರಲಾಗಿದೆ. ನಂತರಕ್ಕೆ ಅವುಗಳು ಲಿಖಿತ ರೂಪಕ್ಕೆ ಬಂದಿವೆ. ಹೀಗೆ ಮೌಖಿಕ ಪರಂಪರೆಯಲ್ಲಿ ಚರಿತ್ರೆಯು ಯಾವ ರೀತಿ ಅಡಕವಾಗಿದೆ ಎಂಬುದು ಗೊತ್ತಾಗುತ್ತದೆ.

ಕನ್ನಡ ನಾಡಿನಲ್ಲಿ ಅನೇಕ ಸ್ತ್ರೀಪುರುಷರು ನಾಡು-ನುಡಿಗಾಗಿ; ಸ್ವಾತಂತ್ರ್ಯ ಹೋರಾಟಕ್ಕಾಗಿ; ಸಾಮಾಜಿಕ ಸಮಾನತೆಗಾಗಿ ಹೋರಾಡಿ ತಮ್ಮ ಪರಾಕ್ರಮವನ್ನು ಮೆರೆದಿದ್ದಾರೆ. ಉದಾಹರಣೆಗೆ, ಕಿತ್ತೂರು ಚೆನ್ನಮ್ಮ, ಸಂಗೊಳ್ಳಿ ರಾಯಣ್ಣ, ಅಬ್ಬಕ್ಕರಾಣಿ, ಬೆಳವಡಿ ಮಲ್ಲಮ್ಮ, ಒನಕೆ ಓಬವ್ವ ಮುಂತಾದವರು ತೋರಿದ ಶೌರ್ಯ ಸ್ಮರಣೀಯವಾದುದು. ನ್ಯಾಯ ನೀತಿ, ಧರ್ಮಕ್ಕಾಗಿ ಹೋರಾಡಿದ ಮಹನೀಯರನ್ನು ಕುರಿತು ಜನಪದ ಕವಿಗಳು ಅವರ ನಡೆನುಡಿ, ಪರಾಕ್ರಮ ಅವರು ಮೆರೆದ ಆದರ್ಶಗಳನ್ನು ಹೃದಯತುಂಬಿ ಹಾಡಿ ಹೊಗಳಿದ್ದಾರೆ.

ಸೋಮಶೇಖರ ಇಮ್ರಾಪುರ ಅವರು "ಜಾನಪದ ಕಿತ್ತೂರಿನ ಕಿಡಿಗಳು" ಎಂಬ ಕೃತಿಯನ್ನು ಬರೆದಿದ್ದಾರೆ. ಇದರಲ್ಲಿ ಕಿತ್ತೂರುಚೆನ್ನಮ್ಮ, ಸಂಗೊಳ್ಳಿ ರಾಯಣ್ಣ, ಕಿತ್ತೂರಿನ ಇತರ ವೀರರು ಹಾಗೂ ಕಿತ್ತೂರಿನ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ವೀರರ ರೀತಿ ನೀತಿಗಳನ್ನು ಚಿತ್ರಿಸಿದ್ದಾರೆ. ಹಿರೇಮಠ ಅವರ 'ಕಿತ್ತೂರನಾಡು ಹಾಗೂ ಸಂಸ್ಕೃತಿ' ಕೃತಿಯಲ್ಲಿ ಕಿತ್ತೂರಿನ ಇತಿಹಾಸ ಮತ್ತು ಚನ್ನಮ್ಮಳ ವೀರ ಹೋರಾಟಗಳ ಬಗ್ಗೆ ಮಾಹಿತಿಯಿದೆ. ತಿ.ತಾ. ಶರ್ಮರ 'ಕರ್ನಾಟಕ ಸ್ವಾತಂತ್ರ್ಯ ಸಂಗ್ರಾಮ' ಕೃತಿಯಲ್ಲಿ ಕಿತ್ತೂರು ಚೆನ್ನಮ್ಮ, ಸಂಗೊಳ್ಳಿ ರಾಯಣ್ಣ ಸುರಪುರದ ಚಿಕ್ಕ ವೆಂಕಟಪ್ಪನಾಯಕ, ನರಗುಂದದ ಬಂಡಾಯ, ಹಲಗಲಿ ವೀರರು ಇನ್ನೂ ಮುಂತಾದ ಲೇಖನಗಳಿವೆ. ನಿಂಗಣ್ಣ ಸಣ್ಣಕ್ಕಿ ಅವರು ಪ್ರಕಟಿಸಿದ 'ಲಾವಣಿ ಸಾಹಿತ್ಯದಲ್ಲಿ ಸಂಗೊಳ್ಳಿ ರಾಯಣ್ಣ" ಇದರಲ್ಲಿ ಸಂಗೊಳ್ಳಿ ರಾಯಣ್ಣನ ವಿವಿಧ ಚರಿತ್ರೆಗಳನ್ನು ಲಾವಣಿಗಳ ಮೂಲಕ ಚಿತ್ರಿಸಿದ್ದಾರೆ. ಬಿ.ಎಸ್. ಗದ್ದಿಮಠರವರ 'ಜನತಾ ಗೀತೆಗಳು' ಇದರಲ್ಲಿ ವೀರಕಂಪಿಲಿರಾಯ, ಕುಮಾರರಾಮ ಇತ್ಯಾದಿ ವೀರರ ಜೀವನ ಚಿತ್ರಣವಿದೆ.

ಸುರಪುರ ಸಂಸ್ಥಾನದ ೩ನೇ ವೆಂಕಟಪ್ಪನಾಯಕನು ಸ್ವಾತಂತ್ರ್ಯ ಪ್ರೇಮಿಯಾಗಿದ್ದನು. ಈತನಿಗೆ ಕಿತ್ತೂರು ಸಂಪೂರ್ಣವಾಗಿ ಬ್ರಿಟಿಷರ ವಶಕ್ಕೊಳಪಟ್ಟ ಸಂಗತಿ ತಿಳಿದು ಬಹಳ ದುಃಖಿತನಾದನು. ಆ ವಿವರಣೆಯನ್ನು ಜನಪದ ನುಡಿಯೊಂದು ಈ ರೀತಿ ಹೇಳುತ್ತದೆ.

"ಕೆಂಪಾನ ಮಾರಿಯ ಕುಂಪನಿ ಸರಕಾರ
ಚೆನ್ನವ್ವನ ಬಂಧಿಸಿದ ಸುದ್ದಿ ತಿಳಿದ |ವೆಂಕಟಪ್ಪ
ಮಮ್ಮಲ ಮರುಗಿ ಕುಂತಾನ"

(ಅಮರೇಶ ಯತಗಲ್; ೨೦೦೭; ಪು. ೮೨)

ಶಿವಶರಣ ಸಾಧು ಸತ್ಪುರುಷರ ವೀರಗೀತೆಗಳು ನಮ್ಮಲ್ಲಿ ಸಾಕಷ್ಟು ಸಿಗುತ್ತವೆ. ಅವರು ತಮ್ಮ ಜೀವನದುದ್ದಕ್ಕೂ ಸಾಧಿಸಿದ ಸಾಧನೆ ಅವರಲ್ಲಿರುವ ಭಕ್ತಿ ಅಗಾಧವಾದುದು. ಜೈನ ಕವಿಗಳ ಕಾಲ ಗತಿಸಿದ ನಂತರ ಹನ್ನೆರಡನೇ ಶತಮಾನದಲ್ಲಿ ಭಕ್ತಿಯ ಉತ್ಕೃಷ್ಟವಾದ ನೆಲೆ ಬೆಳೆಯಿತು. ಜನರಲ್ಲಿ ಅಡಗಿದ್ದ ಜಾತಿಭೇದ, ಮೂಢನಂಬಿಕೆ, ಸಂಪ್ರದಾಯಗಳನ್ನು ಕಿತ್ತೊಗೆದು

ಜನಮನಕ್ಕೆ ಸುಜ್ಞಾನದ ದಾರಿ ತೋರಿಸಿದ ಶಿವಶರಣರು ನಾಡಿನ ತುಂಬ ಕೀರ್ತಿಯನ್ನು ಗಳಿಸಿದವರು. ಇಂಥ ಶಿವಶರಣರನ್ನು ನಮ್ಮ ಜನಪದರು ಸದಾಕಾಲ ನೆನೆಯುತ್ತಾರೆ. ಮಾದರಹರಳಯ್ಯ, ಬಸವಣ್ಣ ಅಲ್ಲಮ, ಅಕ್ಕಮಹಾದೇವಿ, ಚೆನ್ನಬಸವಣ್ಣ, ಸಿದ್ಧರಾಮ, ಕಿನ್ನರಿಬೊಮ್ಮಯ್ಯ ಮುಂತಾದ ಶಿವಶರಣರ ಹಾಡುಗಳು ಜಾನಪದದಲ್ಲಿ ಸಾಕಷ್ಟು ಸಿಗುತ್ತದೆ. ಶಿವಾನಂದ ಗುಬ್ಬಣ್ಣನವರು ಸಂಪಾದಿಸಿದ ಬಸವಣ್ಣ ನಿನ್ನ ಹೆಸರು ದಸೆದೆಸೆಗೆ ಶಿವಮಂತ್ರ, ಕ್ಯಾತನಹಳ್ಳಿ ರಾಮಣ್ಣನವರು ಸಂಪಾದಿಸಿದ ಬಿಜಾಪುರ ಜಿಲ್ಲೆಯ ಲಾವಣಿಗಳು, ಗದ್ದಿಗಮಠ ಬಿ.ಎಸ್. ಅವರ 'ಕನ್ನಡ ಜಾನಪದ ಗೀತೆಗಳು' ಮುಂತಾದ ಕೃತಿಯಲ್ಲಿ ಶಿವಶರಣರ ಜೀವನ ಕುರಿತ ವಿವರಗಳನ್ನು ಕಾಣಬಹುದು.

ಕಾದ್ರೊಳ್ಳಿಯ ನೀಲಕಂಠಪ್ಪ ಪತ್ತಾರ ಹಾಗೂ ಹಣ್ಣಿಕೇರಿ ಶಿವಾನಂದ ಕವಿಗಳು ಸಣ್ಣಾಟಗಳ ರಚನೆಯಲ್ಲಿ ಖ್ಯಾತರಾದವರು. ಶಿವಾನಂದ ಕವಿಯು ಬರೆದ 'ಅಲ್ಲಮಪ್ರಭು" ಸಣ್ಣಾಟವು 'ಮಾಯೆ ಆಟ' ಎಂದೇ ಪ್ರಸಿದ್ಧವಾಗಿದೆ. ಶಾಂತಾ ಇಮ್ರಾಪುರ ಅವರು ಸಂಪಾದಿಸಿರುವ 'ಅಕ್ಕಮಹಾದೇವಿ'ಯೂ ಭಕ್ತಿ ಪ್ರಧಾನವಾದ ಕಥೆಯನ್ನೊಳಗೊಂಡ ಸಣ್ಣಾಟವಾಗಿದೆ.

ಶೋಭಾದೇವಿ ಚೆಕ್ಕಿ ಅವರ 'ಬೆಳ್ಳಕ್ಕಿ ಹಿಂಡು' ಕೃತಿಯಲ್ಲಿ ಅಕ್ಕಮಹಾದೇವಿಯ ಬಗ್ಗೆ ಹೇಳಲಾಗಿದೆ.

ಮಹಾದೇವಿಯಕ್ಕ ಬಾರೇ ಇಹಪರದ
ಸುಖವತೋರೇ ಮಹಾದೇವಿಯಕ್ಕ ಬಾರೇ ||
ಉಡುತಡಿಯ ಗ್ರಾಮದಲ್ಲಿ ಶಿವಶರಣ ಸುಮತಿ ತಾಯಿ
ಶಿವಭಕ್ತ ನಿರ್ಮಲರಿಗೆ ಮಗಳಾಗಿ ಜನಿಸಿ ಬಂದಿ ||

(ಶೋಭಾದೇವಿ ಚೆಕ್ಕಿ; ೨೦೦೪; ಪು. ೫೬)

ಲಿಂಗದೇವರು ಹಳೆಮನೆಯವರ 'ಧೀರ ಟೀಪು' ಮತ್ತು ಜೀ.ಶಂ.ಪರಮಶಿವಯ್ಯನವರ "ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು" ಎಂಬ ಕೃತಿಯಲ್ಲಿ ಟಿಪ್ಪುಸುಲ್ತಾನ ಕುರಿತು ಅನೇಕ ಲಾವಣಿ ಪದಗಳು ರಚನೆಕೊಂಡಿವೆ.

### ೨.೨.೨. ಪ್ರಾಚೀನ ಸಾಹಿತ್ಯ ಸಂದರ್ಭ

ಆದಿಕವಿ ಪಂಪನಿಂದಲೇ ಸಾಹಿತ್ಯ ಮತ್ತು ಚರಿತ್ರೆಯ ಸಂಬಂಧ ಆರಂಭವಾಗಿರುವ ಪ್ರಕ್ರಿಯೆಯಾಗಿವೆ. ಕೇವಲ ನಿರ್ದಿಷ್ಟ ಚರಿತ್ರೆಯ ಘಟನೆಗಳು ಮಾತ್ರ ಇತಿಹಾಸವೆನಿಸಿಕೊಳ್ಳದೇ ಮನುಷ್ಯ ಸಂಬಂಧದ ಎಲ್ಲಾ ಕ್ರಿಯಾಚರಣೆಗಳು ಕೂಡ ಚರಿತ್ರೆಯ ನಿರ್ಮಿತಿಯಲ್ಲಿ ಪಾತ್ರವಹಿಸುತ್ತವೆ. ಹೀಗಾಗಿ ಸಾಹಿತ್ಯ ಕೃತಿ ಒಂದರ್ಥದಲ್ಲಿ ಸೃಜನಶೀಲ ಚರಿತ್ರೆಯೇ ಆಗಿರುತ್ತದೆ. ಈ ದೃಷ್ಟಿಯಿಂದ ಗತಕಾಲದ ಮಾನವನ ಎಲ್ಲ ಚಲನವಲನವನ್ನು ಇತಿಹಾಸವೆಂದು ಗುರುತಿಸುವುದಾದರೆ ಸಾಹಿತ್ಯ ಇದಕ್ಕಿಂತ ಮುಂದೆ ಹೋಗಿ ಆಶಯವನ್ನು ವ್ಯಕ್ತಪಡಿಸುವ ಚೌಕಟ್ಟನ್ನು ಪಡೆಯುತ್ತದೆ.

ಪಂಪ ತನ್ನ ಸಮಕಾಲೀನ ಚರಿತ್ರೆಯನ್ನು ಪುರಾಣದಲ್ಲಿ ಐಕ್ಯಗೊಳಿಸಿದ್ದಾನೆ. ಸಾಹಿತ್ಯದ ಒಂದು ಭಾಗವಾಗಿ ಪುರಾಣಗಳು ಚರಿತ್ರೆಯಲ್ಲಿ ಬೆಸೆದುಕೊಂಡಿತು. ಸುಮಾರು ೧೪ನೇ

ಶತಮಾನದವರೆಗೆ ಬಹಳ ಪ್ರಚಾರದಲ್ಲಿತ್ತು. ಹರಿಹರ, ರಾಘವಾಂಕ, ಚಾಮರಸರು ತಮ್ಮ ಕೃತಿಯಲ್ಲಿ ಚಾರಿತ್ರಿಕ ವ್ಯಕ್ತಿಯನ್ನು ಪುರಾಣೀಕರಿಸಿ ರಚಿಸಿದ್ದಾರೆ. ಬಸವರಾಜದೇವ ರಗಳೆ, ಮಹಾದೇವಿಯಕ್ಕನ ರಗಳೆ, ಬಸವ ಪುರಾಣ, ಪ್ರಭುಲಿಂಗಲೀಲೆ ಮುಂತಾದ ಕೃತಿಗಳಲ್ಲಿ ಚಾರಿತ್ರಿಕ ವ್ಯಕ್ತಿಗಳ ವಿವರಗಳೇ ಸಿಗುತ್ತವೆ. ಪಂಪ ತನ್ನ ವಿಕ್ರಮಾರ್ಜುನವಿಜಯದಲ್ಲಿ ಮಹಾಭಾರತದ ಅರ್ಜುನನನ್ನು ಕಥಾನಾಯಕನ್ನಾಗಿ ಮಾಡಿಕೊಂಡಿದ್ದರೂ, ಇನ್ನೊಂದ.ರ್ಥದಲ್ಲಿ ನೋಡಿದರೆ ಇದು ಅರಿಕೇಸರಿಯ ಕುರಿತಾಗಿರುವ ಕಾವ್ಯವೆನಿಸುತ್ತದೆ. ಚರಿತ್ರೆಯ ಬಹುಮುಖ್ಯ ಅಂಶಗಳು ಇದರಲ್ಲಿ ಸೇರಿವೆ. ಮನುಷ್ಯನ ಯೋಚನೆಗಳು, ಭಾವನೆಗಳು, ಆ ಕಾಲದ ಚಿಂತನೆಗಳು ಎಲ್ಲವನ್ನು ಕಾವ್ಯದಲ್ಲಿ ಅಂತಸ್ಥಗೊಳಿಸಿದ್ದಾನೆ. ಇದನ್ನೇ ಬಸವರಾಜ ಕಲ್ಗುಡಿಯವರು ಹೀಗೆ ವಿವರಿಸಿದ್ದಾರೆ. "ಚಾರಿತ್ರಿಕ ನಿಖರ ದಾಖಲೆಗಾಗಿ ಒದ್ದಾಡುವವರಿಗೆ ಪುರಾಣಗಳ ಚೌಕಟ್ಟು ಚರಿತ್ರೆಯ ದರ್ಶನವನ್ನು ನೋಡುವ ಪರ್ಯಾಯ ದಾರಿಯನ್ನು ಬಿಚ್ಚಿಡುತ್ತದೆ. ಇಲ್ಲಿ ಚರಿತ್ರೆಯು ತನ್ನ ನಗ್ನ ಸ್ವರೂಪವನ್ನು ಬಿಚ್ಚಿ ತೋರುವಂಥದ್ದಲ್ಲ. ಅದು ಪುರಾಣಗಳ ಚೌಕಟ್ಟಿನೊಳಗೆ ಕಂಡು ಕಾಣದ ಹಾಗೇ ಗೌಪ್ಯವಾಗಿರುವಂಥದ್ದು. ಹೀಗೆ ಪುರಾಣದ ಕಲ್ಪಕತೆಯಲ್ಲಿ ಇತಿಹಾಸದ ವಸ್ತುವನ್ನು ಅಡಕವಾಗಿಸುವ ಕಲೆ ನಮ್ಮ ಕವಿಗಳಿಗೆ ಅಚ್ಚುಮೆಚ್ಚಿನ ವಿಧಾನವಾಗಿದೆ. ಪುರಾಣಕಾವ್ಯ ಹಾಗೂ ಇತಿಹಾಸ ಇವುಗಳನ್ನು ಒಂದರೊಳಗೊಂದು ಬಂಧಿಸುವ ಕಲೆಯನ್ನು ಅರಿತ ಕವಿ ವಾಸ್ತವವಾಗಿ ಅತ್ಯುತ್ತಮ ಕಲೆಗಾರನು ಇತಿಹಾಸ ದಾರ್ಶನಿಕನೂ ಆಗಿರುತ್ತಾನೆ" (ಬಸವರಾಜ ಕಲ್ಗುಡಿ; ೧೯೯೩; ಪು. ೧೮).

ಸಾಹಿತ್ಯ ಮತ್ತು ಚರಿತ್ರೆ ಶಿಸ್ತುಗಳು ಅಂತಿಮವಾಗಿ ಮನುಷ್ಯನನ್ನೇ ಕೇಂದ್ರವಾಗಿಟ್ಟು ಕೊಂಡಿರುವುದು ಅಧ್ಯಯನದಿಂದ ತಿಳಿದುಬರುತ್ತದೆ. ಚರಿತ್ರೆ ಗತಕಾಲದ ಜೀವನವನ್ನು ಪುನರಾಚಿಸಿದರೆ, ಸಾಹಿತ್ಯ ವಾಸ್ತವ ಮತ್ತು ಭವಿಷ್ಯದಲ್ಲಿನ ಜನಜೀವನವನ್ನು ರೂಪಿಸುತ್ತದೆ. ಇದಕ್ಕೆ ಆಕರವಾಗಿ ಐತಿಹಾಸಿಕ ವ್ಯಕ್ತಿಯನ್ನು ಬಳಸಿದರೂ ಅದರ ಮುಖ್ಯ ಉದ್ದೇಶ ಇತಿಹಾಸ ಹೇಳುವುದಲ್ಲ. ಮುಂದಿನ ಭವಿಷ್ಯವನ್ನು ಅರ್ಥೈಸಿಕೊಳ್ಳಲು ವರ್ತಮಾನವನ್ನು ಅರ್ಥ ಮಾಡಿಕೊಳ್ಳಲು ಚರಿತ್ರೆಗೆ ಮೊರೆ ಹೋಗಬಹುದು. ಕನ್ನಡ ಸಾಹಿತ್ಯದಲ್ಲಿ ಅನೇಕ ಕೃತಿಗಳು ವಸ್ತು, ವಿಷಯಕ್ಕಾಗಿ ಪುರಾಣ, ಇತಿಹಾಸವನ್ನು ಅವಲಂಬಿಸಿವೆ. ಪಂಪನಿಂದ ಹಿಡಿದು ಇಂದಿನವರೆಗೆ ಇದನ್ನು ನೋಡಬಹುದು. ಪಂಪನು ತನ್ನ ದೊರೆಯ ಕುರಿತು ಕಾವ್ಯ ರಚಿಸಲು ಮಹಾಭಾರತದ ಕಥಾವಸ್ತುವನ್ನು ಆಯ್ಕೆ ಮಾಡಿಕೊಂಡ ಮುಂದಿನ ಅನೇಕ ಕವಿಗಳು ತಮ್ಮ ಆಶ್ರಯದಾತರನ್ನು ಕುರಿತು ಕೃತಿ ರಚನೆ ಮಾಡುವಾಗ ಪುರಾಣಕ್ಕೆ ಮೊರೆಹೋಗಿರುವುದನ್ನು ಕಾಣಬಹುದು. ಭಾರತೀಯರಿಗೆ ಚಾರಿತ್ರಿಕ ಪ್ರಜ್ಞೆ ಬೆಳೆದ ನಂತರ ನೇರವಾಗಿ ಇತಿಹಾಸದ ವಸ್ತುವನ್ನು ಆಯ್ಕೆ ಮಾಡಿಕೊಂಡರು. ಇದಕ್ಕೆ ಮೊದಲು ಪುರಾಣವನ್ನು ಆಕರವಾಗಿ ಬಳಸಿಕೊಂಡರೂ ಅದರಲ್ಲಿ ಐತಿಹಾಸಿಕ ಘಟನೆಗಳನ್ನು ಪರೋಕ್ಷವಾಗಿ ಸೇರಿಸಿದ್ದಾರೆ. ಇಂದು ಪುರಾಣ ಮತ್ತು ಇತಿಹಾಸಗಳೆರಡು ಬೇರೆ ಬೇರೆ ಅಧ್ಯಯನಶಿಸ್ತುಗಳಾಗಿ ಬೆಳೆದಿದೆ. ಅನೇಕ ಬರಹಗಾರರು ಇತಿಹಾಸವನ್ನು ಹತ್ತು ಹಲವು ರೀತಿಯಲ್ಲಿ ಬಳಸಿಕೊಳ್ಳುತ್ತಿದ್ದಾರೆ. ಹಾಗೆಯೇ ಅನೇಕ ಕೃತಿಕಾರರೂ ಕೂಡ ತಮ್ಮ

ಕೃತಿಗಳಿಗೆ ಐತಿಹಾಸಿಕ ವ್ಯಕ್ತಿ, ಘಟನೆಗಳನ್ನು, ಸನ್ನಿವೇಶಗಳನ್ನು, ಕಲೆ, ಸಂಸ್ಕೃತಿ ಮಹಿಳೆಯರನ್ನು ಕೇಂದ್ರವಸ್ತುವನ್ನಾಗಿ ಬಳಸಿಕೊಳ್ಳುತ್ತಿದ್ದಾರೆ.

ಐತಿಹಾಸಿಕ ವಸ್ತುವಿಷಯವನ್ನು ಕೃತಿಯಲ್ಲಿ ಹೇಗೆ ತರಬೇಕು ಎನ್ನುವುದು ಕೃತಿಕಾರರ ಪ್ರತಿಭೆಯನ್ನು ಅವಲಂಬಿಸಿದೆ. ಐತಿಹಾಸಿಕ ವ್ಯಕ್ತಿಯನ್ನು ಐತಿಹಾಸಿಕ ಘಟನೆಗಳನ್ನು ಐತಿಹಾಸಿಕ ಸನ್ನಿವೇಶಗಳನ್ನು ಸಮಕಾಲೀನ ಪ್ರಜ್ಞೆಯ ಮೂಲಕ ಪ್ರತಿಭಾವಂತ ಕೃತಿಕಾರರ ವರ್ತಮಾನವನ್ನು ಅರ್ಥೈಸಲು ಪ್ರಯತ್ನಿಸುತ್ತಾನೆ. ಕವಿಗಳು ಆಶ್ರಯದಾತರಾದ ರಾಜಪರಂಪರೆ, ಅವರ ಜೀವನ ವಿಚಾರ, ಅವರ ಶೌರ್ಯ-ಔದಾರ್ಯ, ವ್ಯಕ್ತಿತ್ವದ ಘನತೆ, ಕಲಾಪ್ರೇಮ, ಸಮದರ್ಶಿತ್ವಗಳನ್ನು ಪರಿಚಯಿಸಲೆಂದೇ ಕಾವ್ಯ ರಚಿಸುತ್ತಿದ್ದರು. ಇಂಥ ಕೃತಿಗಳಲ್ಲಿ ಸಮಕಾಲೀನ ಸಂಗತಿಗಳನ್ನು ವೈಭವೀಕರಣ ಹಾಗೂ ಸಾಹಿತ್ಯವೆಂದು ಸಾಬೀತುಪಡಿಸಲು ಅಗತ್ಯವಾದ ಕಾಲ್ಪನಿಕ ಉತ್ಪ್ರೇಕ್ಷಿತ ವರ್ಣನೆಗಳೊಂದಿಗೆ ಇತಿಹಾಸ ಮತ್ತು ಕಾವ್ಯಗಳನ್ನು ಒಟ್ಟೊಟ್ಟಿಗೆ ಹೊಸೆಯುವ ಪ್ರಯತ್ನ ಮಾಡುತ್ತಿದ್ದರು.

### ವಿಕ್ರಮಾರ್ಜುನವಿಜಯ

ಕಾವ್ಯದ ಕಥಾ ನಾಯಕನೊಡನೆ ಸಮಕಾಲೀನ ರಾಜನೊಬ್ಬನನ್ನು ಅಭೇದಗೊಳಿಸಿ ಬರೆಯುವುದು ಪಂಪನ ಕಾಲದಿಂದಲೂ ಕಾಣಬಹುದು. ಪಂಪ ತನ್ನ ವಿಕ್ರಮಾರ್ಜುನ ವಿಜಯದಲ್ಲಿ ಕಥಾ ನಾಯಕನಾದ ಅರ್ಜುನನೊಡನೆ ತನ್ನ ಆಶ್ರಯದಾತನಾದ ಇಮ್ಮಡಿ ಅರಿಕೇಸರಿಯನ್ನು ಸಮೀಕರಿಸಿ ಬರೆದಿದ್ದಾನೆ. ಕಾವ್ಯದಲ್ಲಿ ಚಾರಿತ್ರಿಕ ಅಂಶಗಳು ನೇರವಾಗಿಯೂ ಪರೋಕ್ಷವಾಗಿಯೂ ಇಲ್ಲಿ ಕಾಣಿಸಿಕೊಳ್ಳಲು ಕಾರಣವಾಯಿತು. ಐತಿಹಾಸಿಕ ವಿಷಯದ ಮೊಟ್ಟಮೊದಲ ಉಪಲಬ್ಧ ಕಾವ್ಯವಾಗಿ 'ಪಂಪ ಭಾರತ' ತನ್ನ ಮಹತ್ವವನ್ನು ಕಾಪಾಡಿಕೊಂಡಿದೆ.

ಸಾಮಾನ್ಯವಾಗಿ ರಾಜನ ಆಶಯ ಪಡೆದು ಅವನನ್ನು ಕುರಿತು ಕಾವ್ಯರಚಿಸುವುದು ವಾಡಿಕೆ. ಅರಿಕೇಸರಿಯ ಮೇಲಿನ ಪ್ರೀತಿಯೇ ತನ್ನ ಕಾವ್ಯವನ್ನು ಬರೆಯಲು ಕಾರಣವೆಂದು ಪಂಪ ಸ್ಪಷ್ಟವಾಗಿ ಹೇಳಿಕೊಂಡಿದ್ದಾನೆ. ಅರಿಕೇಸರಿ ಪಂಪನಿಗೆ ಧನಕನಕಾದಿಗಳನ್ನು ಕೊಟ್ಟು ತನ್ನ ಕೀರ್ತಿಯನ್ನು ಭೂಮಿಯಲ್ಲಿ ಸ್ಥಾಪಿಸುವುದಕ್ಕಾಗಿ ಇಂಥ ಇತಿಹಾಸ ಕಥೆಯನ್ನು ರಚಿಸುವಂತೆ ಒಪ್ಪಿಸಿದನೆಂದು ಹೇಳಿಕೊಳ್ಳಲಾಗಿದೆ.

ಕಾವ್ಯದ ಆರಂಭದಲ್ಲಿ ಅರಿಕೇಸರಿಯ ವಂಶಾವಳಿಯ ನೇರ ಪ್ರಸ್ತಾಪವಿದೆ. ಆಶ್ವಾಸದ ಪ್ರಾರಂಭದ ಪದ್ಯ ಆಶ್ರಯದಾತನ ಪ್ರಶಸ್ತಿಯನ್ನೊಳಗೊಂಡಿದ್ದು ಮುಕ್ತಾಯದ ಪ್ರತಿ ಪದ್ಯದಲ್ಲಿಯೂ ಅವನ ಸ್ಮರಣೆ ಇದೆ. ಸಾಮಾನ್ಯವಾಗಿ ಚಕ್ರವರ್ತಿಯನ್ನು ಹೊಗಳಿ ನಾಯಕನಾಗಿ ಮಾಡಿ ಕೃತಿ ರಚಿಸುತ್ತಾರೆ. ಆದರೆ ಸಾಮಂತ ರಾಜನೊಬ್ಬನನ್ನು ಕುರಿತು ಬರೆಯಲು ಅರಿಕೇಸರಿಯ ಸರಳ ಉದಾತ್ತ ಗುಣಗಳೇ ಕಾರಣವಾಗಿದೆ.

ಪಂಪನ ವಿಕ್ರಮಾರ್ಜುನವಿಜಯ ಕೃತಿಯಲ್ಲಿ ಚರಿತ್ರೆಯ ಅಂಶಗಳನ್ನು ಮಲ್ಲೇಪುರಂ ಜಿ. ವೆಂಕಟೇಶ್ ಅವರು ಈ ರೀತಿ ಗುರುತಿಸಿದ್ದಾರೆ. "ಪಂಪ ತನ್ನ ವಿಕ್ರಮಾರ್ಜುನವಿಜಯ ಕೃತಿಯಲ್ಲಿ ಸಾಧಿಸುವ ಚರಿತ್ರೆಯ ಗುಣಾತ್ಮಕ ನೆಲೆಯ ಆಶಯ ಬೇರೆಯದೇ ಆದ ಆಕೃತಿಯನ್ನು

ನಿರ್ಮಿಸುತ್ತದೆ. ಹೀಗೆ ಆಕೃತಿ ನೆಲೆಗಳನ್ನು ನಿರ್ಮಿಸುವ ಪಂಪನ ಮನಸ್ಸು ಒಟ್ಟು ಸಂಸ್ಕೃತಿ ಚರಿತ್ರೆಯ ಭಾಗವಾಗಿಯೇ ನೋಡಿಕೊಳ್ಳುತ್ತದೆ. ವ್ಯಕ್ತಿ ಸಮಾಜ ಮತ್ತು ಸಂಸ್ಕೃತಿಯ ಕಡೆ ಚಲಿಸುವ ಪಂಪನ 'ಚರಿತ್ರೆ' ಪರಿಕಲ್ಪನೆಯ ಗ್ರಹಿಕೆ ಅನನ್ಯ ಮತ್ತು ವಿಶಿಷ್ಟ. ಇಂಥ ವಿಶಿಷ್ಟಕ್ಕೆ ಎರಡು ಮುಖ್ಯ ನೆಲೆಗಳಿವೆ. ಮೊದಲನೆಯದು ಕವಿ ವ್ಯಾಪಾರದ ನೆಲೆ. ಮತ್ತೊಂದು ಚಾರಿತ್ರಿಕ ಕಾವ್ಯಾಂತರ್ಗತ ನೆಲೆ. ಇವೆರಡು ನೆಲೆಗಳು ಕಾವ್ಯದ ಅನನ್ಯತೆಯನ್ನು ಉಳಿಸಿಕೊಂಡು ಚರಿತ್ರೆಯನ್ನು ನಿರೂಪಿಸುತ್ತವೆ" (ಮಲ್ಲೇಪುರಂ ಜಿ. ವೆಂಕಟೇಶ; ೧೯೯೬; ಪು. ೧೪೮).

**ಭುವನೈಕರಾಮಾಭ್ಯುದಯ**

ಸಮಕಾಲೀನ ರಾಜನನ್ನು ಪುರಾಣದ ವ್ಯಕ್ತಿಯೊಡನೆ ಸಮೀಕರಿಸಿ ಕಾವ್ಯ ರಚಿಸುವ ಸಾಲಿಗೆ ಪೊನ್ನನ 'ಭುವನೈಕರಾಮಾಭ್ಯುದಯ'ವೂ ಸೇರುತ್ತದೆ. ಪೊನ್ನ ರಾಷ್ಟ್ರಕೂಟ ಮುಮ್ಮಡಿ ಕೃಷ್ಣನ ಆಶ್ರಯದಲ್ಲಿದ್ದು, ಅವನನ್ನು ಕುರಿತೇ 'ಭುವನೈಕರಾಮಾಭ್ಯುದಯ'ವನ್ನು ರಚಿಸಿದ್ದಾನೆ. ಮುಮ್ಮಡಿ ಕೃಷ್ಣನಿಗೆ 'ಭುಮನೈಕರಾಮ' ಎಂಬ ಬಿರುದಿದ್ದು, ಪೊನ್ನ ಸ್ತುತಿಸಿರುವುದು ಇವನನ್ನೇ ಎಂಬುದು ಬಹುಮಟ್ಟಿಗೆ ಖಚಿತವಾಗಿರುವ ಅಂಶ. ರಾಷ್ಟ್ರಕೂಟರಿಗೂ, ಚೋಳರಿಗೂ ನಡೆದ ಯುದ್ಧವನ್ನು ಕುರಿತು 'ಭುವನೈಕರಾಮಾಭ್ಯುದಯ' ವಿವರಿಸುತ್ತದೆ ಎಂಬುದು ಸಾಮಾನ್ಯ ಅಭಿಪ್ರಾಯ. ಮುಮ್ಮಡಿ ಕೃಷ್ಣಚೋಳ ರಾಜಾದಿತ್ಯನ ಮೇಲೆ ಸಾಧಿಸಿದ ವಿಜಯವೇ ಇದು. "ಮುಮ್ಮಡಿ ಕೃಷ್ಣ ಉತ್ತರ ಮತ್ತು ದಕ್ಷಿಣ ಭಾರತವನ್ನೆಲ್ಲ ಗೆದ್ದ ರಾಷ್ಟ್ರಕೂಟರ ಅತ್ಯಂತ ಪ್ರಸಿದ್ಧ ರಾಜರಲ್ಲೊಬ್ಬನೆಂದು ಖ್ಯಾತಿವೆತ್ತವನು. ಈ ವಿಸ್ತಾರವಾದ ಅರ್ಥದಲ್ಲಿಯೂ 'ಭುವನೈಕ ರಾಮ'ನೆಂಬ ಬಿರುದು ಅವನಿಗೆ ಬಂದಿರಬಹುದು. ಈಗ ದೊರೆಯುವ ಪದ್ಯಗಳಲ್ಲಿ 'ತಕ್ಕೋಳ' ಯುದ್ಧದ ತುಣುಕುಗಳು ಸಿಕ್ಕುತ್ತವೆ. ಉಳಿದ ಕಾವ್ಯ ಭಾಗಗಳಲ್ಲಿ ಕೃಷ್ಣನ ಇತರ ವಿಜಯಗಳು ಪ್ರಸ್ತಾಪಿತ ವಾಗಿರಬೇಕು. ಇಷ್ಟಾದರೂ ಭುವನೈಕರಾಮಾಭ್ಯುದಯ ಕೃಷ್ಣನನ್ನು ಕುರಿತ ನೇರ ಇತಿಹಾಸ ಕಾವ್ಯವೇನೂ ಅಲ್ಲ. ಅಲ್ಲಲ್ಲಿ ಅವನ ಪರವಾಗಿರುವ ವಿಜಯ ಪ್ರಶಸ್ತಿಗಳನ್ನು ಪಂಪನಂತೆಯೇ ಪೊನ್ನನೂ ಸೇರಿಸಿರಬೇಕೆನಿಸುತ್ತದೆ" (ರಾಮೇಗೌಡ; ೧೯೯೨; ಪು. ೧೩೬) ಎಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

'ಭುವನೈಕರಾಮಾಭ್ಯುದಯ'ವು ರಾಮಾಯಣದ ಕಥೆಯೊಂದಿಗೆ ಸೇರಿಸಿ ಹೇಳಿದ ಕಾವ್ಯವೆಂಬುದು ಸಾಮಾನ್ಯ ಅಭಿಪ್ರಾಯ. ಆದರೆ ರಾಮಾಯಣದಲ್ಲಿ ಗಜಯುದ್ಧದ ಪ್ರಸ್ತಾಪಕ್ಕೆ ಅವಕಾಶ ಕಡಿಮೆಯಿರುವುದರಿಂದ ಇದು ರಾಮಾಯಣದೊಡನೆ ಸೇರಿಸಿ ಹೇಳಿದ ಕಾವ್ಯವಾಗಿರದೆ, ಶುದ್ಧ ಚಾರಿತ್ರಿಕ ಕಾವ್ಯವಾಗಿರುವ ಸಂಭವವಿದೆ ಎಂಬುದು ಭೋಯಿಯವರ ಮತ್ತೊಂದು ತಕರಾರು. ಇದರೊಡನೆ ಪೊನ್ನನ ರಾಮಕಥಾ ಪ್ರಶಸ್ತಿಯು ಹೆಚ್ಚು ಇತಿಹಾಸ ಕಾವ್ಯವಾಗಿ ತೋರುವುದು. ಪುರಾಣದ ಮೊಗವಾಡ ಕಟ್ಟಿಕೊಂಡು ಕುಣಿವ ಇತಿಹಾಸ ಮಾತ್ರವಲ್ಲ ಎಂಬ ಬೇಂದ್ರೆಯವರ ಅಭಿಪ್ರಾಯವನ್ನು ಹೋಲಿಸಬಹುದು (ಅದೇ; ೧೩೯).

**ಸಾಹಸಭೀಮವಿಜಯ**

ಇತಿಹಾಸದ ವಸ್ತುವನ್ನು ಬಳಸಿಕೊಂಡು ಕೃತಿ ರಚನೆ ಮಾಡಿ ಪಂಪ, ಪೊನ್ನರ ಪರಂಪರೆಯನ್ನೇ ರನ್ನನೂ ಸಹ ಅನುಸರಿಸಿದ್ದಾನೆ. ಮಹಾಭಾರತದ ಕಥಾನಾಯಕನಾದ

ಭೀಮನೊಡನೆ ರನ್ನನು ತನ್ನ ಆಶ್ರಯದಾತನಾದ ಸತ್ಯಾಶ್ರಯ ಇರಿವ ಬೆಡಂಗನನ್ನು ಸಮೀಕರಿಸಿ ಕಾವ್ಯವನ್ನು ರಚಿಸಿದ್ದಾನೆ. ಸತ್ಯಾಶ್ರಯ ರಾಜಕುಮಾರನಾಗಿದ್ದಾಗಲೇ ತಂದೆಯಾದ ತೈಲಪನ ಜೊತೆಯಲ್ಲಿ ಅನೇಕ ಯದ್ಧಗಳಲ್ಲಿ ಭಾಗವಹಿಸಿ, ತನ್ನ ಅಸಾಧಾರಣ ಸಾಹಸ ಪರಾಕ್ರಮವನ್ನು ತೋರಿದ್ದ. ಕವಿ "ಈ ವೀರ ರಾಜಕುಮಾರನ ಯುದ್ಧ ಸಾಹಸಗಳನ್ನು ಸ್ಮಾರಕಗೊಳಿಸಲು ಪ್ರಚೋದಿತನಾಗಿರಬೇಕು. ಇದರ ಫಲವೇ ನಮ್ಮ ಮುಂದಿರುವ ಅತ್ಯುತ್ತಮ ಕೃತಿ ಗದಾಯುದ್ಧ" (ರಾಮಾನುಜಯ್ಯಂಗಾರ್ ಎಂ.ವಿ (ಸಂ); ೧೯೨೫; ಪು. ಉಪೋದ್ಘಾತ). ಹೀಗಾಗಿ ಕವಿ ತನ್ನ ಸಮಕಾಲೀನ ಅಂಶಗಳನ್ನು ಸೇರಿಸಲು ಪ್ರಯತ್ನಿಸಿ ಚಾರಿತ್ರಿಕ ಧ್ವನಿಯಿರುವ ಕಾವ್ಯವನ್ನಾಗಿ ಮಾಡಿದ್ದಾನೆ ಎಂದು ರಾಮಾನುಜಯ್ಯಂಗಾರ್ ಅವರು ಅಭಿಪ್ರಾಯಪಟ್ಟಿದ್ದಾರೆ.

ಎನಿಸಿದ ಸತ್ಯಾಶ್ರಯ ದೇ
ವನೆ ಪೃಥ್ವೀವಲ್ಲಭಂ ಕಥಾನಾಯಕ ನಾ
ಗನಿ ಲಜನೊಳ್ ಪೋಲಿಸಿ ಪೇ
ಳ್ದಿನೀ ಗದಾಯುದ್ಧಮಂ ಮಹಾಕವಿ ರನ್ನಂ (೧-೩೧)

ಸತ್ಯಾಶ್ರಯ ರಾಜನನ್ನು ಕಥಾನಾಯಕನಾದ ಭೀಮನೊಡನೆ ಹೋಲಿಸಿ ಗದಾಯುದ್ಧವನ್ನು ಬರೆದಿದ್ದೇನೆಂದು ಕವಿಯೇ ಸ್ಪಷ್ಟಪಡಿಸಿದ್ದಾನೆ. ಇದರಲ್ಲಿ "ಸತ್ಯಾಶ್ರಯನೂ ಭೀಮನೂ ಅಭಿನ್ನರಾಗುತ್ತಾರೆ. ಕಾವ್ಯದುದ್ದಕ್ಕೂ ಈ ಅಭೇದ ಕಲ್ಪನೆಯನ್ನು ಮುಂದುವರಿಸಿಕೊಂಡು ಹೋಗಿರುವುದು ಗೊತ್ತಾಗುತ್ತದೆ. ಇದರಿಂದ ಕಾವ್ಯಕ್ಕೆ ಪುರಾಣ ಗುಣದೊಡನೆ ಸಮಕಾಲೀನ ಇತಿಹಾಸ ಧ್ವನಿಯೂ ಸೇರಿಕೊಂಡಿದೆ" (ರಾಮೇಗೌಡ; ೧೯೯೨; ಪು. ೧೪೭). 'ಸಾಹಸಭೀಮ ವಿಜಯ' ಸತ್ಯಾಶ್ರಯ ಆಳುತ್ತಿದ್ದ ಕಾಲದ ರಾಜಕೀಯ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತದೆ. ರನ್ನ ಕಲಿಯೂ ಆಗಿದ್ದರಿಂದ ಪಂಪನಂತೆ ಈತನು ಯುದ್ಧದಲ್ಲಿ ಭಾಗವಹಿಸುತ್ತಿದ್ದನು. ಇದರಿಂದ ತನ್ನ ದೊರೆಯು ಸೈನ್ಯದಲ್ಲಿ ಹೋರಾಡಿದ ರೀತಿ, ಪರಾಕ್ರಮವನ್ನು ಸ್ವತಃ ಕಂಡ ಕವಿಯು ಅವನ ಕುರಿತು ಈ ಕಾವ್ಯವನ್ನು ರಚಿಸಿದ್ದಾನೆ.

'ಗದಾಯುದ್ಧ'ದ ಪ್ರತಿ ಆಶ್ವಾಸಾಂತ್ಯದಲ್ಲಿಯೂ ಸತ್ಯಾಶ್ರಯನ ಪರವಾಗಿರುವ ಗದ್ಯವೊಂದು ಬರುತ್ತದೆ. ಕವಿ ಇದರಲ್ಲಿ ತನ್ನ ರಚನೆಯನ್ನು ಕುರಿತು ಹೇಳುವಾಗ, "ಚಾಳುಕ್ಯ ಚಕ್ರವರ್ತಿ ಶ್ರೀ ಸಾಹಸಭೀಮವಿಜಯದೊಳ್" ಎಂದೇ ಹೇಳುತ್ತಾನೆ. ಅಷ್ಟರಮಟ್ಟಿಗೆ ತನ್ನ ಆಶ್ರಯದಾತನನ್ನು ಅಭೇದಗೊಳಿಸುವುದಕ್ಕೆ ಪ್ರಯತ್ನಿಸಿದ್ದಾನೆ. ಆದರೆ ಕಾವ್ಯದ ವಸ್ತುಪುರಾಣವೇ ಹೊರತು ಇತಿಹಾಸವಲ್ಲ. ಈ ರೀತಿ ಆಶ್ವಾಸಾಂತ್ಯದಲ್ಲಿ ಮಾತ್ರವಲ್ಲದೆ ಕಾವ್ಯದುದ್ದಕ್ಕೂ ಭೀಮನೊಡನೆ ಸತ್ಯಾಶ್ರಯನ ಬಿರುದುಗಳ ಉಲ್ಲೇಖದಿಂದ ಇತಿಹಾಸದ ಧ್ವನಿಯನ್ನು ಜೀವಂತವಾಗಿಡಲು ಹೆಣಗಿದಂತಿದೆ" (ರಾಮೇಗೌಡ; ೧೯೯೨; ಪು. ೧೬೮) ಎಂದು ರಾಮೇಗೌಡರು ತಮ್ಮ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

**ಕಬ್ಬಿಗರ ಕಾವ್ಯ**

ಸಮಕಾಲೀನ ರಾಜನನ್ನು ಪುರಾಣ ವ್ಯಕ್ತಿಯೊಡನೆ ಸಮೀಕರಿಸುವ ಕಾವ್ಯ ಪರಂಪರೆಯ ಮುಂದಿನ ಉದಾಹರಣೆಯಾಗಿ ಆಂಡಯ್ಯನ 'ಕಬ್ಬಿಗರ ಕಾವ್ಯ' ಕಾಣಿಸಿಕೊಳ್ಳುತ್ತದೆ. ಕನ್ನಡ ಸಾಹಿತ್ಯದಲ್ಲಿ ಕವಿಗಳು ತಮ್ಮ ಕಾವ್ಯಗಳಲ್ಲಿ ಆಶ್ರಯದಾತ ದೊರೆಯನ್ನು ಚಿರಸ್ಥಾಯಿಗೊಳಿಸುವ

ಪದ್ಧತಿ ಪಂಪ, ಪೊನ್ನ, ರನ್ನರ ನಂತರ ಇಳಿಮುಖವಾಯಿತೆಂದೇ ಹೇಳಬಹುದು. ಆದರೆ ಇದಕ್ಕೆ ಕಬ್ಬಿಗರ ಕಾವ ಸ್ವಲ್ಪಮಟ್ಟಿಗೆ ಹೊರತಾಗುತ್ತದೆ. ಪುರಾಣ ಕಥಾನಾಯಕನೊಡನೆ ಆಶ್ರಯದಾತ ದೊರೆಯನ್ನು ಸೇರಿಸಿ ಹೇಳುವುದು ಮಾತ್ರವಲ್ಲದೆ, ಇಡೀ ಕಥಾವಸ್ತುವನ್ನು ಐತಿಹಾಸಿಕ ಧ್ವನಿಯಾಗಿ ಪರಿವರ್ತಿಸುವುದರಲ್ಲಿ ಇದು ತನ್ನದೇ ಆದ ಪ್ರಾಮುಖ್ಯತೆಯನ್ನು ಹೊಂದಿದೆ. ಪುರಾಣ ಪ್ರಸಿದ್ಧ 'ಕಾಮವಿಜಯ'ದ ಜೈನ ಸಂಪ್ರದಾಯದ ಕಥೆ ಇದರ ವಸ್ತು. ಇದರಲ್ಲಿ ಸಮಕಾಲೀನ ರಾಜನಾದ ಹಾನುಂಗಲ್ಲಿನ ಕದಂಬ ಕಾಮದೇವನ ವಿಜಯದ ಕಥೆಯನ್ನು ಸಮಾವೇಶಗೊಳಿಸಿರುವುದು ಇದರ ಚಾರಿತ್ರಿಕ ಧ್ವನಿಯಾಗಿದೆ. ಆಂಡಯ್ಯ ಪಂಪ, ರನ್ನರ ಪರಂಪರೆಯಲ್ಲಿಯೇ ನಡೆದಿದ್ದರೂ ರಚನಾ ವಿಧಾನದಲ್ಲಿ ಕೆಲವೊಂದು ಮಾರ್ಪಾಡುಗಳನ್ನು ಮಾಡಿದ್ದಾನೆ. ಪುರಾಣ ಪ್ರಸಿದ್ಧ ಕಾಮನ ಕಥೆಯನ್ನು ಹೇಳುತ್ತಲೇ ಕದಂಬ ಕಾಮದೇವನ ರಾಜಕೀಯ ಹೋರಾಟದ ಕಥೆಯನ್ನು ಹೆಣೆಯುತ್ತಾ ಹೋಗುವುದು ಮುಖ್ಯವಾಗಿದೆ.

ಆಂಡಯ್ಯನಿಗೆ ಕಬ್ಬಿಗರ ಕಾವವನ್ನು ಬರೆಯಲು ಮುಖ್ಯವಾದ ಪ್ರೇರಣೆಗಳಲ್ಲಿ ರುದ್ರಭಟ್ಟನ ಜಗನ್ನಾಥ ವಿಜಯವೂ ಮುಖ್ಯವಾಗಿದೆ. ಅದರ ನಾಂದೀ ಪದ್ಯವೂ ಒಂದಾಗಿದೆ. ಇದರಲ್ಲಿ ಬರುವ 'ಅರಿಕಾಮಧ್ವಂಸಿ' ಮತ್ತು 'ಯುದ್ಧರಂಗ ತ್ರಿಣೇತ್ರ' ಎಂಬ ಮಾತುಗಳು ಪ್ರಮುಖವಾದವು. ಇಲ್ಲಿಯ ಅರಿಕಾಮ ವೀರಬಲ್ಲಾಳನಿಗೆ ಸಮನಾಗಿ ಮೆರೆದ ಆಂಡಯ್ಯನ ಪ್ರೀತಿ ಪಾತ್ರ ದೊರೆ ಕದಂಬ ಕಾಮದೇವನೇ ಆಗಿದ್ದಾನೆ. "ಯುದ್ಧರಂಗ ತ್ರಿಣೇತ್ರ ರುದ್ರಭಟ್ಟನ ಆಶ್ರಯದಾತನೂ ಕಾಮದೇವನ ಎದುರಾಳಿಯೂ ಆದ ಹೊಯ್ಸಳ ಚಕ್ರವರ್ತಿ ಇಮ್ಮಡಿ ವೀರಬಲ್ಲನೇ ಆಗಿದ್ದಾನೆ. ಕಾಮನು ಸೋತುಹೋದ ಒಂದು ಕಾಲದಲ್ಲಿ ರುದ್ರಭಟ್ಟನು ಮೇಲಿನಂತೆ ವೀರಬಲ್ಲಾಳನ ಸ್ತುತಿ ಮಾಡಿರಲು, ಕಾಮನ ಗೆಲುವು ಮುಂದೊಮ್ಮೆ ದೊರೆತ ಉಬ್ಬಿನಲ್ಲಿ ರುದ್ರಭಟ್ಟನಿಗೆ ಉತ್ತರ ಕೊಡಲೆಂದು ಆಂಡಯ್ಯನು ಕಬ್ಬಿಗರ ಕಾವವನ್ನು ಬರೆದನೆಂಬಂತೆ ಭಾಸವಾಗುತ್ತದೆ" (ಮುಗಳಿ ರಂ.ಶ್ರೀ. (ಸಂ); ೧೯೪೪; ಪು. ೨೧) ಎಂದು ರಂ.ಶ್ರೀ ಮುಗಳಿಯವರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಪ್ರಾಚೀನ ಕಾಲದ ಕವಿಗಳು ಪುರಾಣದೊಂದಿಗೆ ಇತಿಹಾಸವನ್ನು ಬೆರೆಸಿ ಕಾವ್ಯಗಳನ್ನು ರಚಿಸತೊಡಗಿದರೆ, ಮಧ್ಯಕಾಲೀನ ಕಾಲಘಟ್ಟದಲ್ಲಿ ಇತಿಹಾಸದಲ್ಲಿ ಪುರಾಣವನ್ನು ಸೇರಿಸಿ ಶಿವಶರಣರ ಕುರಿತು ಕವಿಗಳು ಕಾವ್ಯವನ್ನು ರಚಿಸಿದರು. ಅಲ್ಲದೆ ಇದೇ ಮಧ್ಯಕಾಲೀನ ಸಂದರ್ಭದಲ್ಲಿ ರಾಜರನ್ನು ಮತ್ತು ಸಾಮಾನ್ಯ ಪ್ರಜೆಯನ್ನು ಕುರಿತಾದ ಕಾವ್ಯಗಳನ್ನು ರಚಿಸಿದರು.

### ೨.೨.೩. ಮಧ್ಯಕಾಲೀನ ಸಾಹಿತ್ಯ ಸಂದರ್ಭ

ಹನ್ನೆರಡನೆಯ ಶತಮಾನದಲ್ಲಿ ಉಂಟಾದ ಪ್ರಮುಖ ಕ್ರಾಂತಿಗಳಲ್ಲಿ ಶರಣರಿಂದ ನಡೆದ ಕ್ರಾಂತಿಯೂ ಒಂದು. ಈ ಕ್ರಾಂತಿಯ ನೇತಾರ ಬಸವಣ್ಣ. ಅಲ್ಲಮಪ್ರಭು, ಚನ್ನಬಸವಣ್ಣ, ಸಿದ್ಧರಾಮ, ಹಡಪದ ಅಪ್ಪಣ್ಣ, ಅಕ್ಕಮಹಾದೇವಿ, ಅಕ್ಕನಾಗಮ್ಮ, ನೀಲಾಂಬಿಕೆ, ಗಂಗಾಂಬಿಕೆ ಮುಂತಾದ ಶರಣ - ಶರಣೆಯರು ಕ್ರಾಂತಿಯಲ್ಲಿ ಪ್ರಮುಖವಾದ ಪಾತ್ರವನ್ನು ವಹಿಸಿದ್ದಾರೆ. ಸ್ತ್ರೀ - ಪುರುಷ, ಬಡವ - ಶ್ರೀಮಂತ, ಉಚ್ಚ-ನೀಚ - ಇಂತಹ ಎಲ್ಲ ತಾರತಮ್ಯಗಳನ್ನು ಮೆಟ್ಟಿ

ಸಮಾನಾವಕಾಶದ ಅಡಿಪಾಯದ ಮೇಲೆ ಅನುಭವ ಮಂಟಪ ರಚನೆಯಾಯಿತು. ಕಲ್ಯಾಣದಲ್ಲಿ ಸಮ್ಮಿಲನರಾದ ಶರಣ-ಶರಣೆಯರು ಆಧ್ಯಾತ್ಮಿಕ ವಿಷಯಗಳ ಕುರಿತು ಜಿಜ್ಞಾಸೆಗಿಳಿದರು; ಅಲ್ಲದೆ ಸಮಾಜ ಪರಿವರ್ತನೆಗೆ ಪ್ರಯತ್ನಿಸಿದರು. ಸ್ತ್ರೀಯರಿಗೆ, ಶೂದ್ರರಿಗೆ, ಅಸ್ಪೃಶ್ಯರಿಗೆ, ವೇದ, ಪುರಾಣ ಆಗಮಗಳ ಅಧ್ಯಯನದ ಅವಕಾಶವನ್ನು ಕಲ್ಪಿಸಿಕೊಟ್ಟರು.

ಶರಣರ ಚೈತನ್ಯಪೂರ್ಣವಾದ ಮತ್ತು ರೋಚಕವಾದ ಜೀವನ, ಅವರು ಬಾಳಿದ ತತ್ವ, ಅವರು ಬೆಳಕಿಗೆ ತಂದ ಸಿದ್ಧಾಂತ, ಸರ್ವಕ್ಷೇತ್ರಗಳಲ್ಲಿ ಇಟ್ಟ ಕ್ರಾಂತಿಯ ಹೆಜ್ಜೆಗಳು ಹರಿಹರನಿಂದ ಹಿಡಿದು ಈ ಕಾಲದವರೆಗೆ ಅವರನ್ನು ಕುರಿತು ಸಾಹಿತ್ಯ ರಚಿಸಲಿಕ್ಕೆ ಪ್ರಚೋದನೆಯನ್ನೊದಗಿಸುತ್ತ ಬಂದಿದೆ. ಅಂತೆಯೇ ರಗಳೆ, ಷಟ್ಪದಿ, ಸಾಂಗತ್ಯ, ತ್ರಿಪದಿ ಮುಂತಾದ ಸಾಹಿತ್ಯ ಪ್ರಕಾರಗಳಲ್ಲಿ ಶರಣರ ಜೀವನ ಚರಿತ್ರೆ ಹರಿದುಬಂದಂತೆ ಆಧುನಿಕ ಸಾಹಿತ್ಯ ಪ್ರಕಾರಗಳಾದ ನಾಟಕ, ಕಥೆ, ಕಾವ್ಯ, ಕಾದಂಬರಿಗಳಲ್ಲಿಯೂ ಕಥಾವಸ್ತುಗಳಾಗಿ ಸ್ಥಾನ ಪಡೆದಿವೆ.

ಶರಣಾಂದೋಲನಕ್ಕಿಂತ ಮುಂಚೆಯೇ ಏಕಾಂತರಾಮಯ್ಯ, ಗೊಗ್ಗಿದೇವ, ಕೊಂಡಗುಳಿ ಕೇಶಿರಾಜ ಮತ್ತು ಆದಯ್ಯ ಇವರು ವೈಯಕ್ತಿಕವಾಗಿ ಕ್ರಾಂತಿಯ ದಿಟ್ಟ ಹೆಜ್ಜೆಗಳನ್ನಿಟ್ಟವರು. ಸಮಾನತೆಯನ್ನು ಸಾಧಿಸುವ ಸಲುವಾಗಿ ಶರಣರರು ಬಸವಣ್ಣನ ನೇತೃತ್ವದಲ್ಲಿ ಕ್ರಾಂತಿಯಲ್ಲಿ ಭಾಗವಹಿಸಿದರು.

### ಬಸವಣ್ಣ

ಬಸವಣ್ಣನವರ ವ್ಯಕ್ತಿತ್ವ ಏಕಮುಖವಾದುದಲ್ಲ. ಬಿಜ್ಜಳನ ಆಸ್ಥಾನದ ಅರ್ಥಮಂತ್ರಿ, ಭಕ್ತಿಭಂಡಾರಿ, ಸಮಾಜಸುಧಾರಕ, ಕಾಯಕನಿಷ್ಠೆ, ಕ್ರಾಂತಿಕಾರಿ, ಯುಗ ಪ್ರವರ್ತಕರಾಗಿದ್ದಾರೆ. ಇಂತಹ ಐತಿಹಾಸಿಕ ಪುರುಷನಾದ ಬಸವಣ್ಣನನ್ನು ಕುರಿತು ಕನ್ನಡದಲ್ಲಿ ಹರಿಹರನ - ಬಸವರಾಜದೇವರ ರಗಳೆ, ಭೀಮಕವಿಯ - ಬಸವಪುರಾಣ; ಸಿಂಗಿರಾಜನ - ಅಮಲಬಸವಚಾರಿತ್ರ; ಷಡಕ್ಷರದೇವನ - ಬಸವರಾಜ ವಿಜಯಂ ಮುಂತಾದ ಕೃತಿಗಳು ಬಸವಣ್ಣನ ಜೀವನ ಚರಿತ್ರೆಯ ಮೇಲೆ ಪ್ರಕಾಶ ಬೀರುತ್ತವೆ. ಬಸವಣ್ಣನ ಕುರಿತ ಘಟನಾವಳಿಗಳ ನಿರೂಪಣೆ ಕನ್ನಡ ಕಾವ್ಯಗಳಲ್ಲಿ ಒಂದೇ ತೆರನಾಗಿಲ್ಲ. ಹರಿಹರ ಒಂದು ಬಗೆಯಾಗಿ ಬಸವಣ್ಣನ ಜೀವನ ಚರಿತ್ರೆಯನ್ನು ರೂಪಿಸಿದರೆ, ಬಸವ ಪುರಾಣದ ಭೀಮಕವಿ ಅದಕ್ಕೆ ತದ್ವಿರುದ್ಧವಾಗಿದ್ದಾನೆ.

> "ಇಲ್ಲಿ ಪ್ರಸಾದಮಂ ಕುಡದಿರ್ದ ಬಳಿವಿಡಿದು
> ಅಲ್ಲಿ ಪ್ರಸಾದಮಂ ವಾದಿನಿಂದಂ ಪಡೆದು" (ದೊಡ್ಡಮನಿ ಜೆ.ಪಿ; ೧೯೯೬; ಪು. ೫೨)

ಎನ್ನುವ ಮಾತುಗಳಿಂದ ಬಸವಣ್ಣನ ಜನನದ ಉದ್ದೇಶ ಭೂಲೋಕದಲ್ಲಿ ಪ್ರಸಾದದ ಮಹಿಮೆಯನ್ನು ಅರುಹುವುದು ಆಗಿದೆ ಎಂದು ಹರಿಹರ ಕವಿಯು ತನ್ನ ಬಸವರಾಜದೇವರ ರಗಳೆಯಲ್ಲಿ ಚಿತ್ರಿಸಿದ್ದಾನೆ.

### ಅಲ್ಲಮಪ್ರಭುದೇವರು

ಕಲ್ಯಾಣದ ಕ್ರಾಂತಿಯ ಅನೇಕ ಶರಣರ ಶಕ್ತಿಗಳಲ್ಲಿ ಪ್ರಭುಶಕ್ತಿಯೂ ಒಂದು. ಹರಿಹರನ ಪ್ರಭುದೇವರಗಳೆ, ಚಾಮರಸನ 'ಪ್ರಭುಲಿಂಗಲೀಲೆ', ಎಳಂದೂರು 'ಹರೀಶ್ವರನ-ಪ್ರಭುದೇವರ ಪುರಾಣ' ಈ ಕೃತಿಗಳು ನೇರವಾಗಿ ಅಲ್ಲಮಪ್ರಭುದೇವರನ್ನು ಕುರಿತವುಗಳು.

ರಾಘವಾಂಕನ - ಸಿದ್ಧರಾಮಚಾರಿತ್ರ; ಭೀಮಕವಿಯ-ಬಸವಪುರಾಣ, ಲಕ್ಕಣ್ಣದಂಡೇಶನ - ಶಿವತತ್ವಚಿಂತಾಮಣಿ; ಸಿಂಗಿರಾಜನ - ಸಿಂಗಿರಾಜಪುರಾಣ; ಅದೃಶ್ಯಕವಿಯ - ಪ್ರೌಢದೇವರಾಯನಕಾವ್ಯ; ವಿರೂಪಾಕ್ಷಪಂಡಿತನ - ಚನ್ನಬಸವಪುರಾಣ; ಚಿಕ್ಕನಂಜೇಶನ - ಸಿದ್ಧನಂಜೇಶನಕಾವ್ಯ ಮತ್ತು ರಾಘವಾಂಕನ ಚಾರಿತ್ರ, ಷಡಕ್ಷರದೇವನ - ವೃಷಭೇಂದ್ರವಿಜಯ ಮುಂತಾದ ಕೃತಿಗಳು ಪ್ರಭುದೇವನ ಜೀವನದ ಕೆಲವೊಂದು ಘಟನೆಗಳನ್ನು ಚಿತ್ರಿಸುತ್ತವೆ. ಅಲ್ಲದೆ ಅಸಂಖ್ಯಾತ ಕವಿಗಳು ತಮ್ಮ ಕೃತಿಗಳಲ್ಲಿ ಸ್ತುತಿಸಿದ್ದಾರೆ.

ಜನನ, ಅವತಾರ ಕಲ್ಪನೆ, ಜನ್ಮಭೂಮಿ, ತಂದೆ-ತಾಯಿ, ನಾಮಕರಣ, ಬಾಲ್ಯ, ಯೌವನ, ಗುರುದರ್ಶನ, ಲೋಕೋದ್ಧಾರ, ಸಾಹಿತ್ಯ ಮತ್ತು ಅಂಕಿತ, ಐಕ್ಯ ಮುಂತಾದ ವಿಷಯಗಳು ಪ್ರಭುದೇವನ ಜೀವನ ಚರಿತ್ರೆಯಲ್ಲಿ ಹರಿಹರನದು ಒಂದು ದೃಷ್ಟಿಯಾದರೆ, ಚಾಮರಸನದು ಅದಕ್ಕೆ ಸಂಪೂರ್ಣ ಭಿನ್ನವಾದ ದೃಷ್ಟಿಕೋನವಾಗಿದೆ.

ಹರಿಹರನ ಪ್ರಭುದೇವರ ರಗಳೆಯಲ್ಲಿ 'ನಿರ್ಮಾಯ'ನೆಂಬ ಶರಣನೊಬ್ಬನು ಶಿವ ಸಭೆಗೆ ಬರುತ್ತ ಅಲ್ಲಿಯ ಹೆಣ್ಣೊಂದನ್ನು ನೋಡಿ ಮೋಹಿಸುತ್ತಾನೆ. ಶಿವನು ಅವರೀರ್ವರನ್ನು ನೋಡಿ-

"ನೀವಿರ್ವರುಂ ಪೋಗಿ ವಸುವತಿಯೊಳಗೆಪುಟ್ಟಿ
ಕಾವಂಗೆ ವಶರಾದ ಸಕಲಸುಖಮಂಮುಟ್ಟಿ" (ಸುಂಕಾಪುರ (ಸಂ); ೧೯೭೬; ಪು. ೩)

ನಂತರ ಕೈಲಾಸಕ್ಕೆ ಬರಬೇಕೆಂದು ಶಾಪ ಕೊಡುತ್ತಾನೆ. ಈ ನಿಮಿತ್ತ ಪ್ರಭುದೇವ ಭೂಲೋಕದಲ್ಲಿ ಅಲ್ಲಮನಾಗಿ ಜನಿಸುತ್ತಾನೆ ಎಂದು ಪ್ರಭುದೇವರರಗಳೆಯಲ್ಲಿ ನೋಡಿದರೆ, ಚಾಮರಸನ ಪ್ರಭುಲಿಂಗಲೀಲೆ ಮುಂತಾದ ಕಾವ್ಯಗಳಲ್ಲಿ ಪ್ರಭುದೇವ ಶಿವನ ಅವತಾರವೇ ಆಗಿದ್ದಾನೆ. ಇಲ್ಲಿಯ ಮಾಯೆ ಪಾರ್ವತಿಯ ತಾಮಸ ಕಳೆಯಾಗಿದ್ದಾಳೆ.

**ಸಿದ್ಧರಾಮನ ಜೀವನ ಚರಿತ್ರೆ**

ಶರಣಾಂದೋಲನದ ಮಹಾಚೇತನಗಳಲ್ಲಿ ಶಿವಯೋಗಿ ಸಿದ್ಧರಾಮನೂ ಒಬ್ಬ. ರಾಘವಾಂಕನ 'ಸಿದ್ಧರಾಮ ಚರಿತ್ರೆ'ಯು ಸಿದ್ಧರಾಮನ ಸಮಗ್ರ ಜೀವನ ಚರಿತ್ರೆಯನ್ನು ಒದಗಿಸುವ ಉಪಲಬ್ಧವಾದ ಏಕೈಕ ಕೃತಿಯಾಗಿದೆ. ಹರಿಹರನ ರೇವಣಸಿದ್ಧೇಶ್ವರ ರಗಳೆಯಲ್ಲಿ, ಪ್ರಭುದೇವರ ರಗಳೆಯಲ್ಲಿ, ಲಿಂಗಾರ್ಚನೆಯ ರಗಳೆಯಲ್ಲಿ ಏಕಾಂತರಾಮಿ ತಂದೆಗಳ ರಗಳೆಯಲ್ಲಿ, ಹಾವಿನಹಾಳಕಲ್ಲಯ್ಯನ ರಗಳೆಯಲ್ಲಿ ಸಿದ್ಧರಾಮನ ಜೀವನಕ್ಕೆ ಸಂಬಂಧಿಸಿದ ಬಿಡಿ ಬಿಡಿ ಘಟನೆಗಳ ಪ್ರಸ್ತಾಪವಿದೆ. ಭೀಮಕವಿಯ ಬಸವಪುರಾಣ, ಚಾಮರಸನ ಪ್ರಭುಲಿಂಗಲೀಲೆ, ಲಕ್ಕಣ್ಣದಂಡೇಶನ ಶಿವತತ್ವ ಚಿಂತಾಮಣಿ, ಗುಬ್ಬಿಯ ಮಲ್ಲಣಾರ್ಯನ ಭಾವಚಿಂತಾರತ್ನ, ಚಿಕ್ಕನಂಜೇಶನ ರಾಘವಾಂಕ ಚಾರಿತ್ರ, ಅದೃಶ್ಯ ಕವಿಯ ಪ್ರೌಢದೇವರಾಯನ ಕಾವ್ಯ, ವಿರೂಪಾಕ್ಷಪಂಡಿತನ ಚನ್ನಬಸವ ಪುರಾಣ, ಸಿಂಗಿರಾಜನ ಸಿಂಗಿರಾಜನಪುರಾಣ ಮುಂತಾದ ಕೃತಿಗಳು ಸಿದ್ಧರಾಮನ ಜೀವನ ಚರಿತ್ರೆಯ ವಿವಿಧ ಘಟನೆಗಳ ಮೇಲೆ ಬೆಳಕು ಚೆಲ್ಲುತ್ತವೆ. ಅಲ್ಲದೆ ನಾಲ್ಕು ಶೂನ್ಯ ಸಂಪಾದನೆಗಳು ಆತನ ಜೀವನ ಚರಿತ್ರೆಯನ್ನು ರಚಿಸಲು ಸಹಕಾರಿಯಾಗಿವೆ.

ಸಿದ್ಧರಾಮನ ಜನನ ಸ್ಥಳ ಈಗ ಮಹಾರಾಷ್ಟ್ರದಲ್ಲಿರುವ ಸೊಲ್ಲಾಪುರ. ಹರಿಹರನು ಇದಕ್ಕೆ 'ಸುವರ್ಣವಲ್ಲಿ', 'ಸುವರ್ಣವಲ್ಲಿಪುರ' ಎಂದು ಕರೆದಿದ್ದರೆ, ರಾಘವಾಂಕನು 'ಸೊನ್ನಲಿಗೆ' ಎಂದು ಹೆಸರಿಸಿದ್ದಾನೆ. ಶಾಸನ ಮತ್ತು ಕಾವ್ಯ, ಪುರಾಣ, ಚರಿತ್ರೆಗಳಲ್ಲಿ ಈ ವಿಷಯ ಕುರಿತು ಏಕಾಭಿಪ್ರಾಯವಿದೆ. ಇದಲ್ಲದೆ ಸೊಲ್ಲಾಪುರದ ಮಧ್ಯದಲ್ಲಿ ಸಿದ್ಧರಾಮನು ಕಟ್ಟಿಸಿದ ಕೆರೆ, ಕಪಿಲಸಿದ್ಧ ಮಲ್ಲಿಕಾರ್ಜುನ ದೇವಾಲಯಗಳು ಇಂದಿಗೂ ಸಿದ್ಧರಾಮನ ಬಗ್ಗೆ ಆತನ ಹುಟ್ಟೂರಿನ ಬಗ್ಗೆ ಐತಿಹಾಸಿಕ ಆಧಾರಗಳಾಗಿ ನಿಂತಿವೆ.

### ಅಕ್ಕಮಹಾದೇವಿ

ಅಕ್ಕಮಹಾದೇವಿಗೆ ಶರಣ ಪರಂಪರೆಯಲ್ಲಿ ವೈಶಿಷ್ಟ್ಯಪೂರ್ಣವಾದ ಸ್ಥಾನವಿದೆ. ಹರಿಹರನ 'ಮಹಾದೇವಿಯಕ್ಕನ ರಗಳೆ', ರಾಚ ಕವಿಯ ಮಹಾದೇವಿಯಕ್ಕನ ಸಾಂಗತ್ಯ; ಚನ್ನಬಸವಾಂಕನ ಮಹಾದೇವಿಯಕ್ಕನ ಪುರಾಣಗಳು, ಅಕ್ಕಮಹಾದೇವಿಯಕ್ಕನನ್ನೇ ಕೇಂದ್ರ ಪಾತ್ರವಾಗಿರಿಸಿಕೊಂಡು ರಚನೆಯಾದ ಕೃತಿಗಳು. ಚಾಮರಸನ ಪ್ರಭುಲಿಂಗಲೀಲೆ, ವಿರೂಪಾಕ್ಷ ಪಂಡಿತನ ಚನ್ನಬಸವಪುರಾಣ, ಸಿದ್ಧನಂಜೇಶನ ಗುರುರಾಜ ಚಾರಿತ್ರ್ಯದಲ್ಲಿ ಹಾಗೂ ನಾಲ್ಕು ಶೂನ್ಯ ಸಂಪಾದನೆಕಾರರು ಮತ್ತು ಕವಿಗಳು ಅಕ್ಕನ ಜೀವನ ಚರಿತ್ರೆಯ ಕೆಲವು ಸಂಗತಿಗಳನ್ನು ಹೇಳುತ್ತಾರೆ.

ಈ ಕಾವ್ಯಗಳಲ್ಲಿಯೂ ಸಹ ಅಕ್ಕಮಹಾದೇವಿಯ ಜನನದ ಹಿನ್ನೆಲೆ, ಹುಟ್ಟೂರು, ತಂದೆ-ತಾಯಿ, ನಾಮಕರಣ, ಲಿಂಗದೀಕ್ಷೆ, ಮದುವೆ ಮತ್ತು ಕಿನ್ನರಿ ಬ್ರಹ್ಮಯ್ಯನ ಭೇಟಿ, ಕಲ್ಯಾಣದಲ್ಲಿ ಅಕ್ಕಮಹಾದೇವಿ ಪುನಃ ಕಾಶಿಕಭೇಟಿ, ಐಕ್ಯ ಮುಂತಾದ ವಿಷಯಗಳ ಬಗ್ಗೆ ಕವಿಗಳು ತಮ್ಮದೇ ಆದ ಅಭಿಪ್ರಾಯ ಮತ್ತು ಭಿನ್ನಾಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಅಕ್ಕನ ಜೀವನದಲ್ಲಿ ಮಹತ್ವಪೂರ್ಣವಾದ ಘಟನೆ ಎಂದರೆ ಕಿನ್ನರಿ ಬ್ರಹ್ಮಯ್ಯನ ಭೇಟಿ, ಉಡುತಡಿಯಿಂದ ದಿಗಂಬರೆಯಾಗಿ ಮಹಾದೇವಿ ಕಲ್ಯಾಣದತ್ತ ಬರುತ್ತಿರುವಳೆಂಬ ವಿಷಯ ಅಲ್ಲಮಪ್ರಭುವಿಗೆ ತಿಳಿದುಬರುತ್ತದೆ. ಅವಳು ಕಾಮಸಂಹಾರಿ ಎಂಬುದನ್ನು ಸಕಲ ಜನಸಮುದಾಯಕ್ಕೆ ತಿಳಿಸಿಕೊಡುವ ಉದ್ದೇಶದಿಂದ ಕಿನ್ನರ ಬ್ರಹ್ಮಯ್ಯನನ್ನು ಒಪ್ಪಿಸಿ ಅವಳ ಹತ್ತಿರ ಕಳುಹಿಸುತ್ತಾನೆ. ಆಗ ಇಬ್ಬರಿಗೂ ವಾಗ್ವಾದ ನಡೆದು ಕಿನ್ನರಯ್ಯ ಭಕ್ತಿಭಾವದಿಂದ ಸರ್ವಾಂಗಗಳನ್ನು ಪರೀಕ್ಷಿಸಿ ನೋಡುತ್ತಾನೆ. ಆಗ ಅಕ್ಕಮಹಾದೇವಿ ಕಾಮನನ್ನು ಸುಟ್ಟು ಭಸ್ಮವನ್ನು ತೋರಿಸುತ್ತಾಳೆ ಎಂಬ ವಿಷಯ ಗುಮ್ಮಳಾಪುರದ ಸಿದ್ಧಲಿಂಗಯತಿಗಳು ಮತ್ತು ಗೊಳೂರ ಸಿದ್ಧವೀರಣ್ಣೊಡೆಯರ ಶೂನ್ಯ ಸಂಪಾದನೆಯಲ್ಲಿ ಕಂಡು ಬರುತ್ತದೆ.

### ಚನ್ನಬಸವಣ್ಣ

ಕಲ್ಯಾಣಕ್ರಾಂತಿಯ ಆಂದೋಲನದಲ್ಲಿ ಚನ್ನಬಸವಣ್ಣನ ಪಾತ್ರ ಪ್ರಮುಖವಾದುದು. ಚನ್ನಬಸವಣ್ಣ ತನ್ನ ಅಗಾಧವಾದ ಜ್ಞಾನದಿಂದ ಶರಣರಲ್ಲಿಯೇ ವಿಶಿಷ್ಟ ಸ್ಥಾನವನ್ನು ದೊರಕಿಸಿಕೊಂಡವನು. ಈತನನ್ನು ಕುರಿತು ವಿರೂಪಾಕ್ಷಪಂಡಿತ 'ಚನ್ನಬಸವಪುರಾಣ' ಕೃತಿಯನ್ನು ರಚಿಸಿದ್ದಾನೆ. ಪ್ರಾಸಂಗಿಕವಾಗಿ ಈತನ ಜೀವನ ಚರಿತ್ರೆಗೆ ಸಂಬಂಧಿಸಿದ ಘಟನೆಗಳನ್ನು ವೀರಶೈವ ಪುರಾಣ ಮತ್ತು ಕಾವ್ಯಗಳು ಹೇಳುತ್ತವೆ.

**ಆದಯ್ಯ**

ಹರಿಹರನ 'ಆದಯ್ಯನ ರಗಳೆ', ರಾಘವಾಂಕನ 'ಸೋಮನಾಥ ಚರಿತ್ರ' ಆದಯ್ಯನನ್ನು ಕುರಿತ ಸ್ವತಂತ್ರ ಕೃತಿಗಳು. ಲಕ್ಕಣದಂಡೇಶನ ಶಿವತತ್ವ ಚಿಂತಾಮಣಿ, ಮಲ್ಲಣಾರ್ಯನ ವೀರಶೈವಾಮೃತ ಮಹಾಪುರಾಣ, ಸಿದ್ಧನಂಜೇಶನ ರಾಘವಾಂಕ ಚರಿತೆ, ವಿರೂಪಾಕ್ಷ ಪಂಡಿತ ಚನ್ನಬಸವಪುರಾಣ ಮುಂತಾದ ಕೃತಿಗಳು ಆದಯ್ಯನ ಜೀವನ ಚರಿತ್ರೆಯ ಮೇಲೆ ಬೆಳಕು ಚೆಲ್ಲುತ್ತವೆ. ಪುಲಿಗೆರೆಯಲ್ಲಿ ಸೌರಾಷ್ಟ್ರ ಸೋಮೇಶ್ವರನ ಮೂರ್ತಿ ಸ್ಥಾಪಿಸಿದವನು 'ಆದಯ್ಯ'ನೆಂದು ಈ ಕೃತಿಗಳು ಹೇಳುತ್ತವೆ.

ಒಟ್ಟಿನಲ್ಲಿ ಈ ಎಲ್ಲ ಕವಿಗಳ ಕಾವ್ಯ/ಕೃತಿಗಳಲ್ಲಿ ಶರಣರ ಜನನ, ಬಾಲ್ಯ ನಾಮಕರಣ, ಅಂಕಿತ, ಮದುವೆ, ಯೌವನ, ಕಲ್ಯಾಣದಲ್ಲಿ ಶರಣರ ಭೇಟಿ, ಚರ್ಚೆ, ಐಕ್ಯ ಮುಂತಾದ ವಿಷಯಗಳ ಕುರಿತು ಸಮಗ್ರವಾದ ಮಾಹಿತಿಯನ್ನು ನೀಡುತ್ತವೆ.

**ರಾಮನಾಥ ಚರಿತ**

"ನಂಜುಂಡ ಕವಿಯ ರಾಮನಾಥ ಚರಿತ ಕನ್ನಡದ ಮೊಟ್ಟಮೊದಲ ಐತಿಹಾಸಿಕ ಕಾವ್ಯವೆಂದು ಪ್ರಸಿದ್ಧಿ ಹೊಂದಿದೆ" (ರಾಮೇಗೌಡ; ೧೯೯೨; ಪು. ೧೯೬). ರಾಮನಾಥ ಚರಿತೆಯ ಕಥಾನಾಯಕನಾದ ಕುಮಾರರಾಮ 'ಇತಿಹಾಸವೀರ' ಆಗಿರುವಂತೆಯೇ 'ಐತಿಹ್ಯವೀರ'ನಾಗಿಯೂ ಪ್ರಸಿದ್ಧನಾಗಿದ್ದಾನೆ. ಕುಮಾರರಾಮ ವೀರ ಮತ್ತು ಶೀಲಗಳ ಸಾಮರಸ್ಯ ಮೌಲ್ಯದ ಪ್ರತೀಕವಾಗಿದ್ದಾನೆ. ಇಂಥ ಇತಿಹಾಸ ಪ್ರಸಿದ್ಧ ವ್ಯಕ್ತಿಯ ಮೇಲೆ ಕ್ರಮೇಣ ಕಥೆಗಳು ಕಟ್ಟಿಕೊಳ್ಳುತ್ತಾ ಹೋಗುತ್ತವೆ.

ಇತಿಹಾಸದ ದೃಷ್ಟಿಯಿಂದ ಮಹತ್ವವೆನಿಸುವ ಅನೇಕ ಸಂಗತಿಗಳು ರಾಮನಾಥ ಚರಿತ'ದಿಂದ ವ್ಯಕ್ತವಾಗಿವೆ. ಅವುಗಳನ್ನು ರಾಮೇಗೌಡರು ಈ ರೀತಿಯಾಗಿ ಗುರುತಿಸಿದ್ದಾರೆ.

೧. ಕಂಪಿಲನ ವಂಶ ವೃತ್ತಾಂತ, ರಾಜ್ಯ, ರಾಜಧಾನಿ, ರಾಮನಾಥನ ಜನನ ದಿವ್ಯಾಶ್ವಲಾಭ ಮೊದಲಾದ ವೈಯಕ್ತಿಕ ವಿಚಾರಗಳು.

೨. ರಾಮನಾಥ - ಹೊಯ್ಸಳ ವೀರಬಲ್ಲಾಳರ ಯುದ್ಧ ಪ್ರಸಂಗ.

೩. ರಾಮನಾಥ - ಕಾಕತೀಯ ರುದ್ರರ ಕಾಳಗ.

೪. ಕಪಿಲೇಶ್ವರಿ ಕಾಳಗ.

೫. ಕಂಪಿಲಿಯ ಮೇಲೆ ದೆಹಲಿ ಸುಲ್ತಾನನ ದಂಡೆಯಾತ್ರೆ.

೬. ಇತರ ರಾಜಕೀಯ, ಯುದ್ಧ ವಿಷಯ ವಿವರಗಳು; ಇವುಗಳಲ್ಲಿ ಕೆಲವು ನೇರ ವಿಷಯಗಳಾಗಿವೆ. ಇನ್ನು ಕೆಲವು ಪರೋಕ್ಷವಾಗಿ ನೆರವಿಗೆ ಬರುತ್ತದೆ (ರಾಮೇಗೌಡ; ೧೯೯೨; ಪು. ೧೯೮) ಎಂದಿದ್ದಾರೆ.

"ಸುರಿತಾಳ ರಾಜಕಾರ್ಯಕೆ ಸುತ್ತಣರಸುಗ
ಳಿರಬೇಕೆನಗೆಂದು ನಿಮ್ಮ

ಹರಿದಾಟವ ಸೈರಿಸಿದನಲ್ಲದೊಡಮ್ಮ
ನರಪತಿಗೆಣೆಯ ನಿಮ್ಮವರು"

ಈ ಪದ್ಯ ನಮಗೆ ಹಲವಾರು ಸಂಗತಿಗಳನ್ನು ಬಿಟ್ಟು ಕೊಡುತ್ತದೆ. ಹೊಯ್ಸಳರೊಡನೆ ಕಂಪಿಲರ ಕಲಹ ಮೊದಲಿನಿಂದಲೂ ಇತ್ತೆಂಬುದರ ಕಡೆಗೆ ಗಮನ ಸೆಳೆಯುತ್ತದೆ. ಇಬ್ಬರ ಕಲಹದಿಂದ ಮೂರನೆಯವರಿಗೆ ಲಾಭವಾಗುತ್ತದೆಂಬ ಸಂಗತಿಯನ್ನು ಪದ್ಯ ಹೇಳುತ್ತದೆ. ಅಂದರೆ ಕಂಪಿಲ-ಹೊಯ್ಸಳರ ಕಲಹದಿಂದ ದೆಹಲಿಯ ಸುಲ್ತಾನನ ಪ್ರವೇಶವಾಗಬಹುದೆಂಬ ಎಚ್ಚರಿಕೆ ಪದ್ಯದಿಂದ ಅರ್ಥವಾಗುವುದು.

ಚಾರಿತ್ರಿಕ ಕಾವ್ಯಗಳು ಸಾಮಾನ್ಯವಾಗಿ ರಾಜಮಹಾರಾಜರ ವಿಷಯವನ್ನೇ ಹೇಳುತ್ತಿದ್ದರೂ ಸಾಮಂತ ಮಾಂಡಳಿಕ ಪಾಳೆಯಗಾರ ಮೊದಲಾದವರ ಚರಿತ್ರೆಯನ್ನು ವಸ್ತುವಾಗಿಸಿಕೊಂಡಿರುವುದು ಒಂದು ಮುಖ್ಯ ಸಂಗತಿಯಾಗಿದೆ. ಇಂಥ ಪರಂಪರೆಗೆ 'ನಿಂಬ-ಸಾಮಂತಚರಿತೆ' ಮತ್ತು 'ಇಮ್ಮಡಿ ಚಿಕ್ಕಭೂಪಾಲನ ಸಾಂಗತ್ಯ' ಸೇರುತ್ತವೆ.

**ನಿಂಬ ಸಾಮಂತ ಚರಿತೆ**

೧೭ನೇ ಶತಮಾನದಲ್ಲಿ ಜೀವಿಸಿದ್ದನೆಂದು ಹೇಳಲಾಗುವ ಪಾರ್ಶ್ವನೆಂಬ ಕವಿಯು 'ನಿಂಬ ಸಾಮಂತ ಚರಿತೆ' ಎಂಬ ಗ್ರಂಥವೊಂದನ್ನು ರಚಿಸಿದ್ದಾನೆ.

ಕೊಲ್ಲಾಪುರದ ಶಿಲಾಹಾರದಲ್ಲಿ ಪ್ರಸಿದ್ಧನಾದ ಗಂಡರಾದಿತ್ಯನ ಸಾಮಂತನೇ ನಿಂಬ. ಈತ ತನ್ನ ರಾಜನ ಪರವಾಗಿ ಬಿಜ್ಜಳನ ಜೊತೆಯಲ್ಲಿ ಹೋರಾಡಿ ಮಡಿದ ಸಂಗತಿಯೇ ಇದರ ವಸ್ತು. ಕಾವ್ಯದ ವಸ್ತುವನ್ನು ಕುರಿತು ಕವಿ ಹೀಗೆ ಹೇಳಿದ್ದಾನೆ.

"ಸ್ವಾಮಿ ಕಾರ್ಯದ ಎಡರಿನೊಳು
ತ್ತಾ ಮಹಾರಣದೊಳಗೆ ಕಾದಲು
ನೇಮದಿಂದಾ ಹಾರಾಕಾಯ ನಿವೃತ್ತಿ ವ್ರತದಿಂದ."

(ರಾಮೇಗೌಡ; ೧೯೭೨; ಪು. ೨೪೧).

**ಇಮ್ಮಡಿ ಚಿಕ್ಕ ಭೂಪಾಲನ ಸಾಂಗತ್ಯ**

ಈ ಕಾವ್ಯವು ಇಮ್ಮಡಿ ಚಿಕ್ಕಭೂಪಾಲ ಮತ್ತು ಅವನ ಮಗ ತೋಂಟದರಾಯರು ಪರಬಲದ ವಿರುದ್ಧ ಹೋರಾಡಿ ವೀರಮರಣಗಳನ್ನು ಅಪ್ಪಿದ ವಸ್ತುವನ್ನು ಒಳಗೊಂಡಿದೆ. ಈ ಕಾವ್ಯವನ್ನು 'ಗುರುಸಿದ್ಧ ಮಲ್ಲಿಕಾರ್ಜುನನ ಆದೇಶದ ಮೇರೆಗೆ ಹೇಳಿದೆನೆಂದು ಕವಿ ಹೇಳಿಕೊಂಡಿದ್ದಾನೆ. "ಕ್ರಿ.ಶ. ೧೫೪೩ ಇಲ್ಲವೆ ೧೬೦೩ರಲ್ಲಿ ಈ ಕೃತಿ ಹುಟ್ಟಿರಬೇಕೆಂದು ವಿದ್ವಾಂಸರ ಅಭಿಪ್ರಾಯವಾಗಿದೆ"(ಕಲಬುರ್ಗಿ ಎಂ.ಎಂ., ಹಿರೇಮಠ ಬಿ.ಆರ್., ಕುಲಕರ್ಣಿ ಬಿ.ಎಸ್.(ಸಂ); ೧೯೭೭; ಪು. ಪೀಠಿಕೆ viii).

ಇಮ್ಮಡಿ ಚಿಕ್ಕ ಭೂಪಲ ಮತ್ತು ಚಿನ್ನಾಜಮ್ಮರ ಮಗನೇ ತೋಟೇಂದ್ರ. ಈ ತಂದೆ ಮಗ ಇಬ್ಬರು ವೀರರಿಗೆ ವೀರರಾಗಿ, ಹೇಡಿಗಳಿಗೆ ವಿರೋಧಿಯಾಗಿ, ಲಿಂಗಜಂಗಮ ಭಕ್ತರಾಗಿ,

ಯುದ್ಧ, ಧರ್ಮ, ದಾನಗಳ ವೀರರಾಗಿ ಮೆರೆದವರು. ತೋಟೇಂದ್ರನ ಹೆಂಡತಿಯಾದ ಚನ್ನಬಸವಮ್ಮನ ಲಾವಣ್ಯ ಕುರಿತು ಒಂದು ಸಂಧಿಯಲ್ಲಿ ವರ್ಣಿಸಿದರೆ, ಇನ್ನೊಂದು ಸಂಧಿಯಲ್ಲಿ ತೋಟೇಂದ್ರನ ಬೇಟೆಯ ವರ್ಣನೆಯಿದೆ.

ಕಾವ್ಯದಲ್ಲಿ ಐತಿಹಾಸಿಕ ಸಾಮಗ್ರಿ ಇರುವುದು ಕಡೆಯ ಆರು ಸಂಧಿಗಳಲ್ಲಿ ಮಾತ್ರ. ಕೃತಿಯ ಮುಖ್ಯ ಚಾರಿತ್ರಿಕ ವಿಷಯವೆಂದರೆ, "ಹಾವಳೀಂದ್ರ ಪೆನುಗೊಂಡವನ್ನು ವಶಪಡಿಸಿ ಕೊಂಡಿದ್ದು. ಅದರ ಪರಿಣಾಮವಾಗಿ ಹಾವಳೀಂದ್ರನಿಗೂ ಇಮ್ಮಡಿ ಚಿಕ್ಕ ಭೂಪಾಲನಿಗೂ ಯುದ್ಧ ಸಂಭವಿಸಿದ್ದು. ಈ ಘಟನೆಯ ಮೇಲೆ ಇಡೀ ಕೃತಿಯ ಐತಿಹಾಸಿಕ ಸಾಮಗ್ರಿ ನಿಂತಿರುವಂತಿದೆ" ಎಂದು ರಾಮೇಗೌಡರು ಅಭಿಪ್ರಾಯಪಟ್ಟಿದ್ದಾರೆ(ರಾಮೇಗೌಡ; ೧೯೮೨; ಪು. ೨೬೨).

**ಸಿರುಮಣನಾಯಕನ ಸಾಂಗತ್ಯ**

ಸಿದ್ಧ ಕವಿಯು ರಚಿಸಿರುವ 'ಸಿರುಮಣನಾಯಕನ ಸಾಂಗತ್ಯ' ಸಿರುಮಣನ ಜೀವನ ಚರಿತ್ರೆಯನ್ನು ತಿಳಿಸುತ್ತದೆ. ಇದು ಕ್ರಿ.ಶ. ೧೭೦೦ರಲ್ಲಿ ರಚಿತವಾಗಿದೆ. 'ಸಿರುಮಣನಾಯಕನ ಸಾಂಗತ್ಯ' ಐದು ವಿಸ್ತೃತ ಸಂಧಿಗಳನ್ನು ಒಳಗೊಂಡಿದ್ದು, ಸಾಳುವ ನರಸಿಂಹರಾಯ ಸಿರುಮಣನ ಮೇಲೆ ದಂಡೆತ್ತಿ ಹೋಗುವ ಪ್ರಯಾಣದಿಂದ ಹಿಡಿದು ಬೂದಿಹಾಳಿನ ಪತನದವರೆಗಿನ ಕಥೆ ಇದರ ವಸ್ತುವಾಗಿದೆ.

"ವಿಜಯನಗರದ ಬೃಹತ್ ಸೈನ್ಯವನ್ನು ಎದುರಿಸಿ ಶೌರ್ಯದಿಂದ ಹೋರಾಡಿದ ಸಿರುಮಣ ಮತ್ತು ಅವನ ಮಕ್ಕಳ ಕತೆ ನಾಡಿನ ಇತಿಹಾಸದಲ್ಲಿ ಚಿರಸ್ಮರಣೀಯವಾದುದು"(ಶ್ರೀನಿವಾಸ ಎಂ.ವಿ.; ೧೯೭೭; ಪ್ರಸ್ತಾವನೆ-IV) ಎಂಬ ಹೊಗಳಿಕೆಗೆ ಪಾತ್ರವಾಗುತ್ತದೆ.

**ಕಂಠೀರವ ನರಸರಾಜ ವಿಜಯ**

ಕಂಠೀರವ ನರಸರಾಜರ ಆಸ್ಥಾನದಲ್ಲಿ ಗೋವಿಂದ ವೈದ್ಯ ಕವಿಯಿದ್ದನು. ಈತನು ತನ್ನ ಆಶ್ರಯದಾತ ದೊರೆಯ ವೀರಚರಿತ್ರೆಯನ್ನು ಬರೆದಿದ್ದಾನೆ. ಕಂಠೀರವ ನರಸರಾಜ ವಿಜಯ ಹೆಸರೇ ಹೇಳುವಂತೆ ನರಸರಾಜರ ಸಾಧನೆಗಳನ್ನು ದಿಗ್ವಿಜಯಗಳನ್ನು ಹೇಳುವ ಕೃತಿ. ನರಸರಾಜ ಶ್ರೀರಂಗಪಟ್ಟಣವನ್ನು ರಾಜಧಾನಿ ಮಾಡಿಕೊಂಡು ಕ್ರಿ.ಶ. ೧೬೩೮ರಿಂದ ೧೬೫೯ರವರೆಗೆ ಮೈಸೂರು ಪ್ರಾಂತವನ್ನು ಆಳಿದವನು. ಮಹಮದೀಯರನ್ನು ಯಶಸ್ವಿಯಾಗಿ ಹಿಮ್ಮೆಟ್ಟಿಸಿ, 'ರಣಧೀರ' ಎಂಬ ಬಿರುದಿನ ಮೂಲಕ ಪ್ರಸಿದ್ಧನಾದ ನರಸರಾಜರು ಇತಿಹಾಸದಲ್ಲಿ ಗಮನಾರ್ಹ ಸ್ಥಾನವನ್ನು ಪಡೆದಿದ್ದಾರೆ.

ಇದೊಂದು 'ಚಾರಣಕಾವ್ಯ' ಎಂಬುದು ಬೆಟಗೇರಿ ಕೃಷ್ಣಶರ್ಮರ ಅಭಿಪ್ರಾಯ. "ಉತ್ಸಾಹವನ್ನು ಸೂರೆ ಮಾಡುತ್ತ ಹೋಗುವಂತಹ ಯುದ್ಧ ವಿಷಯವು ಪ್ರಧಾನವಸ್ತುವಾಗಿ ಉಳ್ಳುದು; ವೀರರಸ ಪ್ರಚುರವಾದುದು. ಮತ್ತೆ ಇದರಲ್ಲಿಯ ಯುದ್ಧವು ಯಾವುದೋ ದೇಶದ ಯಾವುದೋ ಕಾಲದ ಯಾರಲ್ಲಿಯೋ ನಡೆದ ಯುದ್ಧವಲ್ಲ. ಕನ್ನಡಿಗರು ತಮ್ಮ ರಾಜನ - ತಮ್ಮ ದೇಶದ

ಅಭಿಮಾನ-ವಿಶ್ವಾಸಗಳಿಂದ ತಮ್ಮ ವೈರಿಗಳೊಂದಿಗೆ ನಡೆಯಿಸಿದ ಯುದ್ಧ. ಪ್ರತಿಯೊಂದರಲ್ಲೂ ಕನ್ನಡ ದೊರೆಗೆ ಜಯವು ದೊರೆತ ಯುದ್ಧ. ಆದುದರಿಂದಲೇ ಇದು 'ಚಾರಣಕಾವ್ಯ'. ಬರೆದವನು 'ಚಾರಣಕವಿ' ಎಂದಿದ್ದಾರೆ"(ಬೆಟಗೇರಿ ಕೃಷ್ಣಶರ್ಮ; ೧೯೬೩; ಪು. ೧೨೦).

ಕಂಠೀರವ ನರಸರಾಜ ವಿಜಯ ಕೃತಿಯಲ್ಲಿ ಒಟ್ಟು ೨೬ ಸಂಧಿಗಳಿವೆ. ವಂಶ ವಿಸ್ತಾರ ವರ್ಣನೆ ಮತ್ತು ಕಂಠೀರವ ನರಸರಾಜರ ಜನನದ ವರ್ಣನೆ ಎಂಬ ಸಂಧಿಗಳೊಂದಿಗೆ ೧೧ ರಿಂದ ೧೯ರವರೆಗಿನ ಸಂಧಿಗಳಲ್ಲಿ ಇತಿಹಾಸದ ವಿವರಗಳು ಹೆಚ್ಚಾಗಿವೆ. ಈ ೯ ಸಂಧಿಗಳು ಮೈಸೂರಿನ ಮೇಲೆ ರಣಮಲ್ಲಾಖಾನನ ದಾಳಿ ಮತ್ತು ಅದನ್ನು ಯಶಸ್ವಿಯಾಗಿ ಹಿಮ್ಮೆಟ್ಟಿಸಿದ ನರಸರಾಜ ಮತ್ತು ದಳವಾಯಿ ನಂಜರಾಜನ ಯುದ್ಧಚಿತ್ರಗಳನ್ನು ಹೇಳುತ್ತವೆ.

**ಚಿಕದೇವರಾಜ ವಿಜಯ ಮತ್ತು ಚಿಕದೇವರಾಜ ವಂಶಾವಳಿ**

ಚಿಕದೇವರಾಜ ಒಡೆಯರ ಕಾಲದಲ್ಲಿ ಮಂತ್ರಿಯಾಗಿ ಕೆಲಸ ಮಾಡಿದವನು ತಿರುಮಲಾರ್ಯ ಇವನು ಕವಿಯು ಆಗಿದ್ದು 'ಚಿಕದೇವರಾಜ ವಿಜಯ', 'ಚಿಕದೇವರಾಜ ವಂಶಾವಳಿ', 'ಅಪ್ರತಿಮವೀರ ಮತ್ತು ಚಿಕದೇವರಾಯ' ಶತಕ ಕೃತಿಯನ್ನು ರಚಿಸಿದ್ದಾನೆ. ಚಿಕದೇವರಾಜ ವಿಜಯ ಮತ್ತು ಚಿಕದೇವರಾಜ ವಂಶಾವಳಿಯಲ್ಲಿ ಕವಿಯು ತನ್ನ ಆಶ್ರಯದಾತನಾದ ಚಿಕದೇವರಾಜನ ಚರಿತ್ರೆಯ ಚಿತ್ರಣಕ್ಕೆ ಮೀಸಲಾದ ಕಾವ್ಯವಾಗಿದೆ. ಕವಿಗೆ ಈ "ವಿಷಯ ಪ್ರಮುಖವಾದದ್ದು, ಚರಿತ್ರೆ - ವರ್ಣನೆಗಳಿಂದ ಪ್ರಚುರವಾಗಿದ್ದು"(ಮುಗಳಿ ರಂ.ಶ್ರೀ; ೧೯೬೪; ಪು. ೩೨೨). ಇದು ಇತಿಹಾಸವನ್ನು ಕಾವ್ಯಮಯವಾಗಿ ವರ್ಣಿಸುವ ಗ್ರಂಥವಾಗಿದೆ.

ಇದರಲ್ಲಿ ಚಿಕದೇವರಾಜ ಹಿಂದಿನ ದೊರೆಗಳ ವಂಶಾವಳಿ ಮತ್ತು ಅವರ ಕಾಲದ ರಾಜಕೀಯ ಘಟನೆಗಳಿವೆ. ಆದರೆ ಚಿಕದೇವರಾಜನ ಬಾಲ್ಯ, ವಿದ್ಯಾಭ್ಯಾಸ, ಕಲಾ ಪ್ರೌಢಿಮೆಗಳನ್ನು ಹೇಳುವುದೇ ಕೃತಿಯ ಮುಖ್ಯ ಉದ್ದೇಶ. ಕವಿಗೆ ತನ್ನ ಅರಸನ ಬಗ್ಗೆ ಅತಿಶಯವಾದ ಭಕ್ತಿಗೌರವಗಳು ಇರುವುದರಿಂದ, ತನ್ನ ರಾಜನನ್ನು ವೈಭವೀಕರಿಸಿ ಕೃತಿ ರಚಿಸಿದ್ದಾನೆ.

ಚಿಕದೇವರಾಜ ವಂಶಾವಳಿ ಹೆಸರೇ ಹೇಳುವಂತೆ ಮೈಸೂರರಸರ ವಂಶವೃತ್ತಾಂತಕ್ಕೆ ಸಂಬಂಧಿಸಿದ ಕೃತಿ, ಅಂದರೆ ಹಿಂದಿನ ರಾಜರ ಚರಿತ್ರೆಯನ್ನು ತಿಳಿಸುತ್ತದೆ. ರಾಜವೊಡೆಯರಿಂದ ಆರಂಭಿಸಿ ದೇವರಾಜನವರೆಗಿನ ವಿವರಗಳೇ ಇದರ ಕಥಾವಸ್ತುವಾಗಿದೆ.

**ಕೆಳದಿನೃಪವಿಜಯ**

'ಕೆಳದಿನೃಪವಿಜಯ' ಕೃತಿಯನ್ನು ಲಿಂಗಣ್ಣ ಕವಿಯು ರಚಿಸಿದ್ದಾನೆ. ಕನ್ನಡದ ಚಾರಿತ್ರಿಕ ಕೃತಿಯಲ್ಲಿ ಕೆಳದಿನೃಪವಿಜಯ ಕೃತಿಯೇ ಕಡೆಯದಾಗಿದೆ. ಈ ಹಿಂದಿನ ಚಾರಿತ್ರಿಕ ಕೃತಿಗಳು ಒಬ್ಬ ವ್ಯಕ್ತಿಯ ಸುತ್ತ ಚಿತ್ರಿತವಾಗಿದ್ದರೆ, ಇದು ಇಡೀ ಒಂದು ರಾಜಕೀಯ ವಂಶದ ರಾಜರೆಲ್ಲರ ಚರಿತ್ರೆಯನ್ನು ತಿಳಿಸುತ್ತದೆ. ಕೆಳದಿ ಮನೆತನಕ್ಕೆ ಸೇರಿದ ಎಲ್ಲ ರಾಜರ ಇತಿಹಾಸವನ್ನು ಈ ಕೃತಿ ವಸ್ತುವನ್ನಾಗಿರಿಸಿಕೊಂಡಿದೆ. ಈ ಮನೆತನವನ್ನು ಸ್ಥಾಪಿಸಿದ ಚೌಡಪ್ಪನಾಯಕನಿಂದ ಹಿಡಿದು ಈ ವಂಶದ ಕೊನೆಯ ಅರಸು ಸೋಮಶೇಖರನಾಯಕನವರೆಗೆ ಆಳ್ವಿಕೆ ನಡೆಸಿದ ೧೮ ರಾಜರ ರಾಜಕೀಯ ಆಗುಹೋಗುಗಳನ್ನು ಈ ಕೃತಿ ವಿವರಿಸುತ್ತದೆ.

ಕೆಳದಿರಾಜ್ಯದ ಸ್ಥಾಪನೆಯಿಂದ ಆರಂಭಿಸಿ ಪತನದವರೆಗೂ ಆಳಿದ ಅರಸರ ಬಗ್ಗೆ ಕವಿಯೂ ಸಮಾನ ಅವಕಾಶವನ್ನು ಕೊಟ್ಟು ಈ ಕೃತಿಯನ್ನು ಬರೆದಿರುವುದು ಇದರ ಇನ್ನೊಂದು ಗುಣವಾಗಿದೆ. ಪ್ರತಿಯೊಬ್ಬ ರಾಜನೂ ಪಟ್ಟವೇರಿದ ದಿವಸ ತಿಂಗಳು ಅವರು ಆಳ್ವಿಕೆ ನಡೆಸಿದ ವರ್ಷ ಅಂದಿನ ರಾಜಕೀಯದ ಸ್ಥಿತಿಗತಿಗಳನ್ನು ಕವಿಯು ತನ್ನ ಕೃತಿಯಲ್ಲಿ ಕಟ್ಟಿಕೊಟ್ಟಿದ್ದಾನೆ.

ಕೆಳದಿಯ ಕೊನೆಯ ಅರಸನಾದ ಸೋಮಶೇಖರನಾಯಕನ ಆಂತರಿಕ ಪಿತೂರಿಗೆ ಬಲಿಯಾಗಿ ಮಾದಕ ವಸ್ತುವಿನ ಚಟಕ್ಕೆ ಒಳಗಾಗುತ್ತಾನೆ. ಕೆಳದಿಯ ಕೆಲವು ದುಷ್ಟ ಜನರು ಬಿಜಾಪುರದ ಸುಲ್ತಾನನ ಜೊತೆ ಸೇರಿ ಸೋಮಶೇಖರ ನಾಯಕನನ್ನು ಕೊಲೆ ಮಾಡುತ್ತಾರೆ. ಸೋಮಶೇಖರನ ಹೆಂಡತಿ ಚನ್ನಮ್ಮಾಜಿ ತೋರಿದ ಧೈರ್ಯ ಇತಿಹಾಸ ಪ್ರಸಿದ್ಧವಾದದು. ಚನ್ನಮ್ಮಾಜಿಯೂ ಔರಂಗಜೇಬನ ಸೈನ್ಯವನ್ನು ಸೋಲಿಸಿದ್ದುದಲ್ಲದೆ ಶಿವಾಜಿಯ ಕಿರಿಯ ಮಗನಾದ ರಾಜಾರಾಮನಿಗೆ ರಕ್ಷಣೆಯನ್ನು ಸಹ ನೀಡುತ್ತಾಳೆ. ಯಾರಿಗೂ ಹೆದರದೇ ಧೈರ್ಯ ಛಲದಿಂದ ತನ್ನ ಸಾಮ್ರಾಜ್ಯವನ್ನು ಕಾಪಾಡಿಕೊಳ್ಳುತ್ತಾಳೆ. ಕವಿಯು ಚೆನ್ನಮ್ಮಾಜಿಯ ರಾಜಕೀಯ ಸಾಧನೆಗಳನ್ನು ವಿವರಿಸಿದ್ದಾನೆ. ಇವೇ ಮೊದಲಾದ ಕನ್ನಡ ಕಾವ್ಯಗಳಲ್ಲದೆ, ಗಂಗಾದೇವಿಯ 'ಮಧುರವಿಜಯ' ಎಂಬ ಸಂಸ್ಕೃತ ಗ್ರಂಥವು ಕನ್ನಡ ನಾಡಿನ ಇತಿಹಾಸದ ಕುರಿತಾದ ಕಾವ್ಯವಾಗಿ ಇಲ್ಲಿ ಪ್ರಸ್ತುತವೆನಿಸುತ್ತದೆ.

ಕನ್ನಡ ಕಾವ್ಯಗಳಲ್ಲಿ ಪ್ರಾಚೀನ ಕಾಲದಿಂದಲೂ ಚಾರಿತ್ರಿಕ ಸಂಗತಿಗಳು ದೊರೆಯುತ್ತವೆ ಯಾದರೂ ಕಾಲದಿಂದ ಕಾಲಕ್ಕೆ ಕವಿಯಿಂದ ಕವಿಗೆ ಬದಲಾವಣೆ ಹೊಂದುತ್ತಾ ಸಾಗಿರುವುದನ್ನು ಕಾಣುತ್ತೇವೆ. ಪಂಪ, ಪೊನ್ನ, ರನ್ನ, ಆಂಡಯ್ಯರ ಕಾವ್ಯಗಳಲ್ಲಿ ಇತಿಹಾಸ ಪ್ರಾಸಂಗಿಕವಾಗಿದ್ದರೆ ಹರಿಹರ, ರಾಘವಾಂಕ, ಚಾಮರಸ, ಭೀಮಕವಿ, ಷಡಕ್ಷರದೇವ, ಸಿಂಗಿರಾಜ, ವಿರೂಪಾಕ್ಷ ಪಂಡಿತ, ಲಕ್ಕಣ್ಣ ದಂಡೇಶ ಮುಂತಾದವರು ಇತಿಹಾಸದೊಂದಿಗೆ ಪುರಾಣವನ್ನು ಸೇರಿಸಿ ಕಾವ್ಯ ರಚಿಸತೊಡಗಿದರು.

ನಂಜುಂಡ ಕವಿ, ಪಾರ್ಶ್ವಕವಿ, ಮಲ್ಲಿಕಾರ್ಜುನ, ಗೋವಿಂದ ವೈದ್ಯ, ತಿರುಮಲಾರ್ಯ ಲಿಂಗಣ್ಣಕವಿಯವರ ಕಾವ್ಯಗಳಲ್ಲಿ ಇತಿಹಾಸವು ಪ್ರಧಾನವಾಗಿರುವುದನ್ನು ಕಾಣಬಹುದು. ಪ್ರಾಚೀನ ಕಾಲದ ಕೃತಿಗಳಲ್ಲಿ ಪುರಾಣವನ್ನು ಇತಿಹಾಸಕ್ಕೆ ಇಳಿಸುವ ಕಾರ್ಯ ನಡೆದರೆ, ಮಧ್ಯಕಾಲೀನ ಶಿವಶರಣರನ್ನು ಕುರಿತಾದ ಸಂದರ್ಭದಲ್ಲಿ ಇತಿಹಾಸವನ್ನು ಪುರಾಣಕ್ಕೆ ಏರಿಸುವ ಕಾರ್ಯ ನಡೆದಿದೆ. ನಂತರ ಇದೇ ಮಧ್ಯಕಾಲೀನ ಸಂದರ್ಭದ ಅರಸರನ್ನು ಕುರಿತಾದ ಕಾವ್ಯಗಳಲ್ಲಿ ಸಂಬಂಧಪಟ್ಟ ರಾಜರನ್ನು, ರಾಜರ ಜೀವನವನ್ನು ವೈಭವೀಕರಿಸುವ ಕಾರ್ಯ ನಡೆದಿದೆ.

### ೨.೨.೪. ಆಧುನಿಕ ಸಾಹಿತ್ಯ ಸಂದರ್ಭ

ಕನ್ನಡದಲ್ಲಿ ಕಾಲಕಾಲಕ್ಕೆ ಇತಿಹಾಸ ಆಧಾರಿತ ಸಾಹಿತ್ಯ ನಿರ್ಮಾಣವಾಗುತ್ತಾ ಬಂದಿದೆ. ಇಂತಹ ಸಾಹಿತ್ಯ ಮತ್ತು ಚರಿತ್ರೆಗಿರುವ ಸಂಬಂಧ, ಅಭಿವ್ಯಕ್ತಿಯ ಮಾಧ್ಯಮ, ಸ್ವರೂಪ ಹಾಗೂ ಅಧ್ಯಯನ ವಿಧಾನಗಳಲ್ಲಿನ ವ್ಯತ್ಯಾಸ ಇವುಗಳನ್ನು ಕುರಿತು ವ್ಯಾಪಕವಾದ ಚರ್ಚೆ ನಡೆದಿವೆ. ಚರಿತ್ರೆ ಮತ್ತು ಸಾಹಿತ್ಯ ಅಂತರಸಂಬಂಧವನ್ನು ಹೊಂದಿದ್ದು ಒಂದಕ್ಕೊಂದು

ಪೂರಕವಾಗಿದೆ ಎಂದೂ ಹೇಳಿದರೂ ಅವೆರಡರ ಸಂಬಂಧ ಅಷ್ಟು ಸರಳವಾದುದಲ್ಲ. ಅದು ಕಾಲದಿಂದ ಕಾಲಕ್ಕೆ ಭಿನ್ನ ವ್ಯಾಖ್ಯಾನಗಳನ್ನು ಪಡೆದುಕೊಳ್ಳುತ್ತದೆ.

ಇತಿಹಾಸವು ಎಲ್ಲಾ ಜ್ಞಾನಶಾಖೆಗಳಂತೆ ಮಾನವನ ಜ್ಞಾನದ ಒಂದು ಅವಿಭಾಜ್ಯ ಅಂಗ ಅಥವಾ ಜ್ಞಾನಶಿಸ್ತಾಗಿದೆ. ಇತಿಹಾಸ ಎಂಬುದು ಮೇಲ್ನೋಟಕ್ಕೆ ದಾಖಲೆಗಳ ಮೊತ್ತವಾಗಿ ಕಾಣುತ್ತದೆ. ನಮ್ಮ ಮುಂದಿನ ಪೀಳಿಗೆಗೆ 'ಇಂದನ್ನು' 'ನಾಳೆಗೆ' ದಾಖಲಿಸಿಡುವ ಪ್ರಕ್ರಿಯೆಯೇ ಇತಿಹಾಸ. ಇವುಗಳು ಸಂಕ್ಷಿಪ್ತವಾಗಿಯೂ ಇರಬಹುದು ಅಥವಾ ವಿವರಣಾತ್ಮಕವಾಗಿಯಾದರೂ ಇರಬಹುದು. ರಾಜರು, ಅವರ ಪರಿವಾರ, ಅವರ ಆಡಳಿತ ವೈಖರಿ, ಆರ್ಥಿಕತೆ, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಹೀಗೆ ಪ್ರತಿಯೊಂದು ವಿಷಯವೂ ಕೂಡ ಮಾನವ ಇತಿಹಾಸದ ಒಂದು ಭಾಗವಾಗಿ ಕಾಣುತ್ತದೆ. ಇತಿಹಾಸವೆನ್ನುವುದು ಮಾನವನ ಮನಸ್ಸಿನ ಕುತೂಹಲವನ್ನು ತೃಪ್ತಿಗೊಳಿಸುವುದರ ಜೊತೆಗೆ ಬದಲಾಗುತ್ತಿರುವ ಪ್ರಪಂಚಕ್ಕೆ ಹೊಂದಾಣಿಕೆ ಮಾಡಿಕೊಳ್ಳಲು ನೆರವಾಗುತ್ತದೆ. ಈ ಹಿನ್ನೆಲೆಯಲ್ಲಿ ನೋಡಿದಾಗ ವರ್ತಮಾನ ರೂಪುಗೊಂಡ ಬಗೆಯನ್ನು ತಿಳಿದುಕೊಳ್ಳಬಹುದು. ವ್ಯಕ್ತಿಯೂ ತನ್ನ ನೆನಪುಗಳ ಮುಖಾಂತರ ಪೂರ್ವಿಕರ ಸಾಧನೆಗಳನ್ನು ಅರಿತು ತಾನು ಬದುಕುವ ಪರಿಸರವನ್ನು ರೂಪಿಸಿಕೊಳ್ಳುತ್ತಾನೆ. ಹೀಗೆ ಪ್ರತಿ ವ್ಯಕ್ತಿ ಅವರವರ ಪೂರ್ವಿಕರನ್ನು ಅರಿತು ಬಾಳುವಲ್ಲಿ ಇತಿಹಾಸ ಅತೀ ಮುಖ್ಯ ಪಾತ್ರವಹಿಸುತ್ತದೆ.

ಇತಿಹಾಸವೆಂಬುದು ಮಾನವನ ಅನುಭವದ ಎಲ್ಲ ಕಥನಗಳನ್ನು ಕ್ರೋಢೀಕರಿಸುವ ಅಧ್ಯಯನ ಮಾದರಿ. ಇತಿಹಾಸವು ಒಟ್ಟಾರೆಯಾಗಿ ಇಡೀ ಮಾನವರ ಕುಲ ಬೆಳವಣಿಗೆಯನ್ನು ಗ್ರಹಿಸಲು ತುಂಬಾ ಅನುಕೂಲವಾದ ಒಂದು ಅಧ್ಯಯನ ಶಿಸ್ತಾಗಿ ರೂಪುಗೊಂಡಿರುವುದರ ಜೊತೆಗೆ ಜೀವಿಗಳ ಕಾರ್ಯ ಸಾಧನೆಯ ಕಥನವಾಗಿದೆ. ಸಾಹಿತ್ಯ ಮತ್ತು ತತ್ವಶಾಸ್ತ್ರಗಳಂತಹ ವಿಷಯಗಳಿಗೂ ಇತಿಹಾಸ ಮೂಲ ಉದ್ದೇಶ ಈಡೇರಿಕೆಯ ಬಹುಮುಖ್ಯ ಸಾಧನವಾಗಿದೆ. ಇದು ಭೂತಕಾಲ ಮತ್ತು ವರ್ತಮಾನ ಕಾಲಗಳನ್ನು ಒಂದು ಕಡೆ ಬೆಸೆಯುವ ಸರಪಳಿಯ ಕೊಂಡಿಯಂತೆ. "ಈ ಜಗತ್ತಿನಲ್ಲಿ ಮಾನವ ಜೀವಿಸಲು ಪ್ರಾರಂಭಿಸಿದುದರಿಂದ ಇಂದಿನವರೆಗೆ ರಾಜಕೀಯ, ಸಾಮಾಜಿಕ, ಆರ್ಥಿಕ, ಧಾರ್ಮಿಕ, ಸಾಹಿತ್ಯಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಆತನ ಸಾಧನೆಗಳು ಮತ್ತು ವಿಫಲತೆಯ ಯಥಾರ್ಥ ನಿರೂಪಣೆಯೇ ಇತಿಹಾಸ. ಈ ನಿರೂಪಣೆಯು ಕಾಲಾನುಕ್ರಮದ ನೆಲೆಯ ಮೇಲೆ ಸತ್ಯಕ್ಕೆ ಚ್ಯುತಿ ಬಾರದಂತೆ ಇರಬೇಕು. ಅನಾಗರಿಕತೆಯಿಂದ ನಾಗರಿಕತೆಯತ್ತ ಮಾನವನ ಮುನ್ನಡೆಯನ್ನು ಇತಿಹಾಸ ನಿರೂಪಿಸುತ್ತದೆ. "ಇತಿಹಾಸವು ಒಂದು ಸಾಮಾಜಿಕ ಪ್ರವೃತ್ತಿ. ಮಾನವ ಸಮಾಜದ ವಿಕಾಸ ಹೇಗೆ ತುಂಬಾ ಸರಳ ರೀತಿಯಿಂದ ಪ್ರಾರಂಭವಾಗಿ ಸಂಕೀರ್ಣವಾದ ಅನೇಕ ಕತೆಯಲ್ಲಿ ಕೊನೆಗೊಂಡಿದೆ ಎಂಬ ಸ್ಪಷ್ಟ ಚಿತ್ರಣ ನಮಗೆ ಇಲ್ಲಿ ದೊರೆಯುತ್ತದೆ"(ಇಸ್ಮಾಯಿಲ್ ಜಬೀರ್ ಬಾವಾಜಿ; ೨೦೦೯; ಪು. ೯೧-೯೨).

"ಇತಿಹಾಸವನ್ನು ಕೇವಲ ಇತಿಹಾಸವಾಗಿಯೇ ಗ್ರಹಿಸುವುದು ಒಂದು ಬಗೆಯದು. ಆ ಇತಿಹಾಸವು ಚರಿತ್ರೆಯ ಕೃತಿಗಳಲ್ಲಿ ದೊರಕುತ್ತದೆ. ಆ ಇತಿಹಾಸವನ್ನು ಸಾಹಿತ್ಯ ಕೃತಿಯಾಗಿ

ಪರಿವರ್ತಿಸಿ ನೀಡಿದಾಗ ಅದು ಓದುಗರಿಗೆ ಮೇಲ್ನೋಟಕ್ಕೆ ಸಾಹಿತ್ಯವನ್ನು ಅಷ್ಟೇ ಆಳದಲ್ಲಿ ಪರೋಕ್ಷವಾಗಿ ಒಂದು ಕಾಲದ ಇತಿಹಾಸವನ್ನೂ ಉಣಬಡಿಸುತ್ತದೆ ಮತ್ತು ಸಾಹಿತ್ಯದ ಮೂಲಕ ಇತಿಹಾಸವು ಹೆಚ್ಚು ಓದುಗರನ್ನು ತಲುಪುತ್ತದೆ"(ಪ್ರೇಮಾಭಟ್; ೨೦೦೨; ಮುನ್ನಡಿ; iii) ಎಂದು ಎಂ. ಚಿದಾನಂದಮೂರ್ತಿಯವರು ಇತಿಹಾಸ ಮತ್ತು ಸಾಹಿತ್ಯದ ಕುರಿತು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಮಾರ್ಕ್ಸ್‌ವಾದವು ಚರಿತ್ರೆಯನ್ನು 'ವಾಸ್ತವ ಪರಿಸ್ಥಿತಿ' ಎಂದೂ, ಸಾಹಿತ್ಯವನ್ನು ವಾಸ್ತವ ಪರಿಸ್ಥಿತಿಯ ಪ್ರತಿಬಿಂಬ ಎನ್ನುತ್ತದೆ. ಹೀಗಾಗಿ ಕೃತಿಯ ಹೊರಗಿನ ಚಾರಿತ್ರಿಕ ಸಂದರ್ಭವನ್ನು ಗ್ರಹಿಸಲು ಕೃತಿಯ ಒಳಗಿನ ಚಾರಿತ್ರಿಕ ಘಟನೆಗಳನ್ನು, ಚಾರಿತ್ರಿಕ ದ್ವಂದ್ವಗಳನ್ನು ಗ್ರಹಿಸಲು ಕೃತಿಯ ಹೊರಗಿನ ಚಾರಿತ್ರಿಕತೆಯನ್ನು ಬಳಸಿಕೊಳ್ಳಬಹುದು ಎನ್ನುತ್ತದೆ. ಆದರೆ ಅನಂತರ ಬಂದ ನವಚಾರಿತ್ರಿಕವಾದವು ಚರಿತ್ರೆ ಎಂದರೆ, "ಗತಕಾಲದ ಸತ್ಯ ಮತ್ತು ವಾಸ್ತವ ಸಂಗತಿಗಳ ವಿನ್ಯಾಸವಲ್ಲ. ಚರಿತ್ರೆ ಸ್ಥಿರವಾದುದು ಅಲ್ಲ, ಚರಿತ್ರೆ ಸಾಹಿತ್ಯಕ್ಕೆ ಹಿನ್ನೆಲೆ ಒದಗಿಸುವುದಿಲ್ಲ" (ಶೋಭಾರಾಣಿ ಎನ್.; ೨೦೦೭; ಪು. ೨೨) ಎನ್ನುತ್ತದೆ. ಆದರೆ ಸಾಹಿತ್ಯ-ಸಾಹಿತ್ಯೇತರ ವಲಯಗಳ ನಡುವೆ ಇರುವ ಸಂಬಂಧಗಳನ್ನು ಗುರುತಿಸುವುದೂ ಅಷ್ಟೇ ಅಗತ್ಯ ಎಂದೂ ಭಾವಿಸುತ್ತದೆ. ಏಕೆಂದರೆ ಜಗತ್ತಿನಲ್ಲಿ ಸತ್ಯ ಎಂಬುದು ನಿರಂತರವಾದುದಲ್ಲ. ಒಂದು ಚಾರಿತ್ರಿಕ ಕಾಲಮಾನದಲ್ಲಿ ಸತ್ಯವೆಂದು ಕಂಡದ್ದು ಅನಂತರದಲ್ಲಿ ಹಾಗೆನ್ನಿಸದೇ ಇರಬಹುದು. ಹಾಗಾಗಿ ಚರಿತ್ರೆಯೊಳಗಿನ ಸಾಪೇಕ್ಷ ಸತ್ಯವನ್ನು ಹಿಡಿಯುವ ನಿರಂತರ ಶೋಧನೆ ಸಾಹಿತ್ಯದ ಕೇಂದ್ರದಲ್ಲಿರುತ್ತದೆ. ಈ ಶೋಧನೆಯೇ ಭಿನ್ನ ಶಿಸ್ತುಗಳ ನಡುವೆ ಸಂಬಂಧ ಕಲ್ಪಿಸುತ್ತದೆ. ಸಾಹಿತ್ಯವು ಚಾರಿತ್ರಿಕ ಕಾಲಮಾನದ ಅತಿಸೂಕ್ಷ್ಮ ವಿವರಗಳನ್ನು ಹಿಡಿಯಬಹುದಾದ್ದರಿಂದ ಅದು ಕಟ್ಟಿಕೊಡುವ ತಾತ್ವಿಕತೆ, ಸತ್ಯ ಚರಿತ್ರೆಯ ಸತ್ಯಕ್ಕಿಂತ ಭಿನ್ನವಾಗಿರಲೂಬಹುದು.

"ಲೇಖಕನೊಬ್ಬ ಇತಿಹಾಸದ ವ್ಯಕ್ತಿ, ಘಟನೆಗಳನ್ನು ವಸ್ತುವಾಗಿಸಿಕೊಂಡು ಕೃತಿ ರಚನೆ ಮಾಡಹೊರಟಾಗ ವಸ್ತು ಇತಿಹಾಸದ್ದು ಎಂಬ ಕಾರಣಕ್ಕೇ ಅವನ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಒಂದು ಬಗೆಯ ನಿರ್ಬಂಧ ಅಥವಾ ಮಿತಿ ತಂತಾನೆ ಏರ್ಪಡುತ್ತದೆ ಎನ್ನುವುದು ಸ್ಪಷ್ಟ. ಅವನು ತನ್ನ ಕೃತಿಯನ್ನು ಬರಿಯ ಇತಿಹಾಸವಾಗಿಸುವುದೂ ಅಲ್ಲ; ಬರಿಯ ಸಾಹಿತ್ಯವಾಗಿಸುವುದೂ ಸಲ್ಲ. ಏಕೆಂದರೆ ಆ ಕೃತಿ ಕೇವಲ ಇತಿಹಾಸವಾದರೆ ನೀರಸವಾಗುತ್ತದೆ; ಕೇವಲ ಸಾಹಿತ್ಯವಾದರೆ ಇತಿಹಾಸಕ್ಕೆ ಹೊರತಾಗುತ್ತದೆ. ಹಾಗಾಗಿ ಅದು ಇತಿಹಾಸದ ನಿರ್ದಿಷ್ಟ ವಿವರಗಳ ಜತೆಗೆ ಸಾಹಿತ್ಯದ ಕಲಾತ್ಮಕತೆ ಸೇರಿದ ಒಂದು ಅಪರೂಪದ ಸೃಷ್ಟಿಯಾಗಬೇಕಾಗುತ್ತದೆ"(ರಾಜಶೇಖರಪ್ಪ ಬಿ.; ೨೦೦೧; ಪು. ೨).

ಸಾಹಿತ್ಯ ಮತ್ತು ಚರಿತ್ರೆಗಳಿಗಿರುವ ಸಂಬಂಧವನ್ನು ಕುರಿತು ಎರಡು ಬಗೆಯ ದೃಷ್ಟಿಕೋನಗಳಿವೆ.

೧. ಸಾಹಿತ್ಯವು ಚರಿತ್ರೆಯನ್ನು ಅವಲಂಬಿಸಿದ್ದು, ಪಠ್ಯ ಮತ್ತು ಸಂದರ್ಭಕ್ಕೆ ಇರುವ ಸಂಬಂಧವೇ ಸಾಹಿತ್ಯ ಮತ್ತು ಚರಿತ್ರೆಗೂ ಇದೆ. ಕೇವಲ ಪಠ್ಯವನ್ನು ಮಾತ್ರ ಆಧರಿಸಿ ಚರ್ಚೆಯನ್ನು

ನಡೆಸಲು ಸಾಧ್ಯವಿರುವಂತೆಯೇ ಪಠ್ಯವನ್ನು ಸಂದರ್ಭದೊಳಗೆ ಇಟ್ಟು ನೋಡುವುದು ಸಾಧ್ಯವಿದೆ.

೨. ಚರಿತ್ರೆಯನ್ನು ಅಧ್ಯಯನ ಮಾಡದೆಯೂ ಸಾಹಿತ್ಯಿಕ ಚರ್ಚೆಯನ್ನು ನಡೆಸಬಹುದು; ಅಗತ್ಯವಿದ್ದರೆ ಅಗತ್ಯವಿದ್ದಷ್ಟು ಮಾತ್ರ ಚರಿತ್ರೆಯ ನೆರವನ್ನು ಪಡೆಯಬಹುದು.

ಈ ಮೇಲಿನ ದೃಷ್ಟಿಕೋನಗಳಲ್ಲಿ ಮೊದಲನೆಯದು ಚರಿತ್ರೆ ಮತ್ತು ಸಾಹಿತ್ಯಿಕ ಅಂತಃಸಂಬಂಧದ ಸಾಧ್ಯತೆಗಳನ್ನು ಹೇಳಿದರೆ, ಎರಡನೆಯದು ಚರಿತ್ರೆ ಮತ್ತು ಸಾಹಿತ್ಯದ ಸಂಬಂಧ ಅನಿವಾರ್ಯವಲ್ಲ ಎನ್ನುತ್ತದೆ. ಆದರೆ ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಚರಿತ್ರೆಯು ತನ್ನ ವಸ್ತುನಿಷ್ಠ ನಿರೂಪಣೆಗಾಗಿ ಹಲವು ವೇಳೆ ಸಾಹಿತ್ಯಿಕ ಪಠ್ಯವನ್ನು ಬಳಸಿಕೊಳ್ಳುತ್ತದೆ. ಆದರೆ ಈ ಪಠ್ಯ ಮೂಲತಃ ವ್ಯಕ್ತಿನಿಷ್ಠವಾದುದು. ಅಲ್ಲದೆ ಚರಿತ್ರೆಯ ವಸ್ತುನಿಷ್ಠ ಸತ್ಯವನ್ನು 'ಚಾರಿತ್ರಿಕ ಕಥನ'ವೊಂದರಲ್ಲಿ ಬಳಸಿಕೊಳ್ಳುವಾಗ ಅದನ್ನು ಹೇಗೆ? ಎಲ್ಲಿ? ಎಷ್ಟರಮಟ್ಟಿಗೆ ಬಳಸಿಕೊಳ್ಳಬೇಕು ಎಂದು ತೀರ್ಮಾನಿಸುವಲ್ಲಿ ವ್ಯಕ್ತಿನಿಷ್ಠತೆಯೇ ಪ್ರಧಾನವಾಗಿರುತ್ತದೆ.

"ಕವಿಯ ಚಾರಿತ್ರಿಕ ಪ್ರಜ್ಞೆಯ ಅಂಶಗಳು ಕಾವ್ಯದ ವಸ್ತು ಮತ್ತು ಅದು ವಿವರಿಸಲು ಪ್ರಯತ್ನಪಡುವ ಮಾನವ ಬದುಕಿನ ವೈಚಾರಿಕ ನೆಲೆಗಳು ಇವೆರಡರ ದ್ವಂದ್ವದಲ್ಲಿಯೇ ಹುಟ್ಟಿಕೊಳ್ಳುತ್ತವೆ. ಬದುಕನ್ನು ಕುರಿತು ಯಾವುದೇ ವೈಚಾರಿಕ ನೆಲೆಗಳು, ದೇಶ ಕಾಲಬದ್ಧವಾಗಿಯೇ ಇರುವುದರಿಂದ ಅರ್ಥಪೂರ್ಣವಾಗಿರಲು ಸಾಧ್ಯ. ಇಲ್ಲದೇ ಹೋದರೆ ಯಾವ ವಿಚಾರಗಳೂ ಮಾನವೀಯ ಸ್ಪರ್ಶಗಳನ್ನು ಪಡೆಯದೇ ಕೇವಲ ಸುಳ್ಳನ್ನು ಸೃಷ್ಟಿಸುತ್ತವೆ. ಶ್ರೇಷ್ಠ ಸಾಹಿತ್ಯ ರಚನೆಗಳು ವಿವರಿಸುವ 'ಚಾರಿತ್ರಿಕ ಪ್ರಜ್ಞೆ' ಮನುಷ್ಯನ ಜೀವನವನ್ನು ಗ್ರಹಿಸಲು ಮಾಡಿದ ಪ್ರಯತ್ನದಲ್ಲಿ ಕಂಡು ಬರುವುದೇ ಹೊರತು ಬೇರೆಲ್ಲಿಯೂ ಅಲ್ಲ" (ಬಸವರಾಜ ಕಲ್ಗುಡಿ; ೧೯೯೯; ಪು. ೩೪) ಎಂದು ಬಸವರಾಜ ಕಲ್ಗುಡಿಯವರು ಚಾರಿತ್ರಿಕ ಪ್ರಜ್ಞೆಯ ಕುರಿತು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಸಾಹಿತ್ಯ ಕೃತಿಯೊಂದು ಚರಿತ್ರೆಯಿಂದ ವಸ್ತು ವಿವರಗಳನ್ನು ಪಡೆದುಕೊಂಡಾಗ ಸಾಮಾನ್ಯವಾಗಿ ಮೂರು ಬಗೆಯ ದೃಷ್ಟಿಕೋನಗಳಿಂದ ಅದನ್ನು ನಿರ್ವಹಿಸುವುದು ಸಾಧ್ಯ.

೧. ಮಾನವೀಯ ದೃಷ್ಟಿಕೋನಕ್ಕೆ ಪ್ರಾಮುಖ್ಯ ನೀಡುವುದು.

೨. ಚಾರಿತ್ರಿಕ ಗತಿಶೀಲತೆಗೆ ಪ್ರಾಮುಖ್ಯತೆ ನೀಡುವುದು.

೩. ಭಿನ್ನ ವಿನ್ಯಾಸದಿಂದ ಹೊರಡುವ ತಾತ್ತ್ವಿಕ ದೃಷ್ಟಿಗೆ ಪ್ರಾಮುಖ್ಯ

(ನಾಗಭೂಷಣಸ್ವಾಮಿ ಓ.ಎಲ್.; ೧೯೯೮; ಪು. ೩೦೫)

ಚರಿತ್ರೆಯ ಪಾತ್ರಗಳನ್ನು ಆ ಕಾಲಮಾನದ ಸೀಮಿತ ಕಕ್ಷೆಯಿಂದ ಹೊರತಂದ ಅವುಗಳ ಸ್ವಭಾವ, ಕ್ರಿಯೆಗಳನ್ನು ಮಾನವೀಯ ದೃಷ್ಟಿಕೋನದ ಮಾನದಂಡಕ್ಕೆ ಒಳಪಡಿಸಿ ನೋಡುವುದು ಒಂದು ವಿಧ. ಗತಕಾಲದಲ್ಲಿ ನಡೆದ ಘಟನಾವಳಿಗಳು ಚರಿತ್ರೆಯ ಗತಿಶೀಲತೆಗೆ ಕಾರಣವಾದ ಬಗೆಗೆ ಪ್ರಾಮುಖ್ಯತೆ ನೀಡುವುದು ಮತ್ತೊಂದು ವಿಧವಾಗಿದೆ.

ಈ ನಾಡಿನಲ್ಲಿ ಆಳಿ ಗತಿಸಿ ಹೋದ ಪ್ರಭುಗಳ ಹಾಗೂ ಪ್ರಜೆಗಳ ಶೌರ್ಯ, ಸಾಹಸ, ತ್ಯಾಗ ಮತ್ತು ಸಾಹಿತ್ಯ ಸಂಸ್ಕೃತಿ, ಕಲೆಗಳಿಗೆ ಅವರಿಂದ ಸಂದ ಸೇವೆ ಅಪಾರವಾದದ್ದು. ಅಲ್ಲದೆ ಅವರ ಸ್ವಾಮಿನಿಷ್ಠೆ, ಧರ್ಮಾಭಿಮಾನ ಮೊದಲಾದ ರಾಜಕೀಯ ಏರಿಳಿತಗಳಿಂದ ಉಂಟಾಗುವ ಸಾಮಾಜಿಕ, ಆರ್ಥಿಕ, ಚಾರಿತ್ರಿಕ ಪರಿವರ್ತನೆಗಳು ಸಾಹಿತ್ಯ ಕೃತಿಗಳಿಗೆ ವಸ್ತುವಾಗಿ ನಿಲ್ಲುತ್ತವೆ. ಹೀಗಾಗಿ ಇತಿಹಾಸ ಒಂದು ಕಾಲದಲ್ಲಿ ನಡೆದುಹೋದ ಘಟನೆಗಳ ಯಥಾವತ್ ಚಿತ್ರಣವನ್ನು ಸಹ ಕಟ್ಟಿಕೊಡುತ್ತದೆ.

"ಚರಿತ್ರೆಯೂ ಒಂದು ಸಂಕಥನ. ಅದು ಮೇಲ್ನೋಟಕ್ಕೆ ಹೊರಜಗತ್ತಿಗೆ ಸಂಬಂಧಿಸಿದ ಸಂಗತಿ ಸತ್ಯಗಳನ್ನು ಮಂಡಿಸುವಂತೆ ಕಂಡರೂ ಮೂಲತಃ ಚರಿತ್ರೆಯೂ ಕೂಡ ಸಾಹಿತ್ಯದಂತೆ ಒಂದು ನಿರ್ದಿಷ್ಟ ಕಾಲಮಾನದ ಸಾಂಸ್ಕೃತಿಕ ರಚನೆಗಳಾಗಿವೆ"(ಅದೇ.; ಪು. ೩೧೮). ಎರಡೂ ಶಿಸ್ತುಗಳು ತನ್ನ ರಚನೆಯ ಕಾಲದ ಜನಾಂಗದ ಸಂಸ್ಕೃತಿಯ ವಿವರಗಳನ್ನು ಹಿಡಿದಿಟ್ಟಿರುತ್ತವೆ. ಹಾಗಾಗಿ ಈ ಎರಡೂ ಶಿಸ್ತುಗಳ ಪರಸ್ಪರ ಸಂಬಂಧ ಅಧ್ಯಯನದ ಮೂಲಕ ನಿರ್ದಿಷ್ಟ ಕಾಲಮಾನದಲ್ಲಿ ಪ್ರಧಾನವಾಗಿದ್ದ ತಾತ್ವಿಕತೆಯನ್ನು ಗ್ರಹಿಸಬಹುದು. "ಭಾರತದಂತಹ ದೇಶದಲ್ಲಿ ಚಾರಿತ್ರಿಕ ದಾಖಲೆಗಳು ಗಣನೀಯ ಪ್ರಮಾಣದಲ್ಲಿಲ್ಲ. ಚರಿತ್ರೆಯನ್ನು ಪುರಾಣವನ್ನಾಗಿಸುವ ಕ್ರಿಯೆ ಈ ಸಂಸ್ಕೃತಿಯಲ್ಲಿ ನಿರಂತರವಾಗಿ ನಡೆದು ಬಂದಿದೆ. ಇಂತಹ ಸಂದರ್ಭದಲ್ಲಿ ಪ್ರಾಚೀನ ಇತಿಹಾಸ ಕೃತಿಗಳಿಂದ ಅಂತಹ ವಸ್ತುನಿಷ್ಠತೆಯನ್ನು ನಿರೀಕ್ಷಿಸಲಾಗದು. ಹಾಗಾಗಿ ಅದಕ್ಕೆ ಪೂರಕ ಸಾಮಗ್ರಿಯಾಗಿ ಕೆಲಸ ಮಾಡುವುದಕ್ಕೆ ಸಾಹಿತ್ಯ ಕೃತಿಗಳನ್ನೇ ಆಶ್ರಯಿಸಬೇಕಾಗಿದೆ" (ಶೋಭಾರಾಣಿ ಎನ್.; ೨೦೦೭; ಪು. ೨೫) ಎಂದು ಶೋಭಾರಾಣಿ ಅವರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಇತಿಹಾಸವೆಂದರೆ ಕೇವಲ ಗತಕಾಲದ ಘಟನೆಗಳ ದಾಖಲೆಯಷ್ಟೇ ಅಲ್ಲ. "ಒಂದು ದೇಶದ ಜನಾಂಗದ ಆಸೆ ಅಭೀಪ್ಸೆಗಳ ಅನಾವರಣ ಕ್ರಿಯೆಯ ಸ್ಪಷ್ಟ ನಿರೂಪಣೆ, ಕಂಬನಿ ರಕ್ತಗಳ ಮಸಿಯಲ್ಲಿ ನಿಟ್ಟುರಿಸಿನ ಲೇಖನಿಯಿಂದ ಕಂಡರಣೆಗೊಂಡದನ್ನು ಪರಿಭಾವಿಸಬೇಕು. ಐತಿಹಾಸಿಕ ಕಾದಂಬರಿಗಳನ್ನು ಬರೆಯಲು ತೊಡಗುವ ವ್ಯಕ್ತಿಯು ತಾನು ಕ್ಲಿಷ್ಟವಾದ ಕಾರ್ಯವನ್ನು ಮಾಡಲು ಯತ್ನಿಸುತ್ತಿರುವುದನ್ನು ಸದಾ ಸ್ಮರಿಸಬೇಕು. ಇತಿಹಾಸದ ವ್ಯಕ್ತಿಗಳ, ಘಟನೆಗಳ ಸಹಜವಾದ ಚಿತ್ರಣ ಅತ್ಯಂತ ಕಷ್ಟಕರವಾದುದು. ವಿದ್ವಾಂಸರಿಂದ ರಚಿತವಾದ ಇತಿಹಾಸ ಗ್ರಂಥಗಳು ಮಾರ್ಗದರ್ಶನವನ್ನು ನೀಡುವಂತೆಯೇ ಎಚ್ಚರಿಕೆಯನ್ನು ನೀಡುತ್ತವೆ"(ಲಕ್ಷ್ಮಣ್ ತೆಲಗಾವಿ; ಸುವರ್ಣ ಜಾನಪದ; ಸಂಪುಟ-೨).

ಆಧುನಿಕ ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಇತಿಹಾಸವನ್ನು ಸಾಹಿತ್ಯದೊಳಕ್ಕೆ ಸಮೃದ್ಧವಾಗಿ ಬಳಸಿಕೊಳ್ಳಲಾಗುತ್ತಿದೆ. ಅಲ್ಲದೆ ಕನ್ನಡದಲ್ಲಿ ಕಾಲಕಾಲಕ್ಕೆ ಇತಿಹಾಸ ಆಧಾರಿತ ಸಾಹಿತ್ಯ ನಿರ್ಮಾಣವಾಗುತ್ತ ಸಾಕಷ್ಟು ಕೃತಿಗಳು ರಚನೆಗೊಂಡಿವೆ. ಐತಿಹಾಸಿಕ ಕೃತಿಗಳ ರಚನೆಯಲ್ಲಿ ಸ್ವಾತಂತ್ರ್ಯವನ್ನು ವಿಶ್ಲೇಷಣೆ ಮೂಲಕ ನಿರ್ಧಾರ ಮಾಡಬೇಕಾಗುತ್ತದೆ. ಇತಿಹಾಸದ ಉಲ್ಲಂಘನೆಯಾಗದಂತೆ ಆ ಶತಮಾನದ ಬದುಕಿನ ಆಶೋತ್ತರಗಳನ್ನು ಓದುಗರ ಕಣ್ಣಿಗೆ ಕಟ್ಟುವಂತೆ

ಚಿತ್ರಿಸುವುದು ಕೃತಿಕಾರನ ಬಹುದೊಡ್ಡ ಜವಾಬ್ದಾರಿಯಾಗುತ್ತದೆ. ಅಲ್ಲದೆ ಜನತೆಯಲ್ಲಿ ದೇಶಾಭಿಮಾನವನ್ನು ಉಕ್ಕಿಸಬೇಕಾದರೆ ಚಾರಿತ್ರಿಕ ಮಹಾಪುರುಷರ ರೋಚಕ ಸಾಹಸ ಕಥೆಗಳನ್ನು ಮನಮುಟ್ಟುವಂತೆ ಹೇಳಬೇಕು ಎಂಬ ತತ್ವವನ್ನು ಲೇಖಕರು ಮನಗಂಡಿದ್ದರು. ಆದ್ದರಿಂದ ಆಧುನಿಕ ಕನ್ನಡ ಸಾಹಿತ್ಯದ ಪ್ರಕಾರಗಳಾದ ಕಾವ್ಯ, ಕಥೆ, ನಾಟಕ, ಕಾದಂಬರಿ, ಮಹಾಕಾವ್ಯ ಮುಂತಾದ ಪ್ರಕಾರಗಳಲ್ಲಿ ಐತಿಹಾಸಿಕ ವಸ್ತುವನ್ನು ಬಳಸಿಕೊಳ್ಳಲಾಗಿದೆ.

ಆಧುನಿಕ ಸಾಹಿತ್ಯ ಸಂದರ್ಭದಲ್ಲಿ ಜೀವನ ಚರಿತ್ರೆ ಮತ್ತು ಆತ್ಮಚರಿತ್ರೆ ಎಂಬೆರಡು ಪ್ರಕಾರಗಳು ತಮ್ಮ ಹೆಸರಿನೊಂದಿಗೆ ಚರಿತ್ರೆ ಎಂಬ ಹೆಸರನ್ನು ಹೊಂದಿವೆ. ಹಾಗಾಗಿ ಆಧುನಿಕ ಸಂದರ್ಭದಲ್ಲಿ ಸಾಹಿತ್ಯಕ್ಕೂ ಇತಿಹಾಸಕ್ಕೂ ಇರುವ ಅಂತಃಸಂಬಂಧಗಳು ವಿಭಿನ್ನ ಆಯಾಮಗಳಿಂದ ಕೂಡಿದೆ. ಒಂದು ಕೃತಿಯಲ್ಲಿ ಚರಿತ್ರೆಯ ಅಂಶಗಳನ್ನು ಬಳಸಿಕೊಳ್ಳುವ ಲೇಖಕ ಎಷ್ಟರಮಟ್ಟಿಗೆ ತನ್ನ ಬೌದ್ಧಿಕತೆ, ವೈಚಾರಿಕತೆ ಮತ್ತು ಪ್ರತಿಭೆಯ ಛಾಪನ್ನು ಮೂಡಿಸಿದ್ದಾನೆ ಹಾಗೂ ಅದರಿಂದ ಎಂತಹ ಗ್ರಹಿಕೆಯನ್ನು ಕೃತಿಯಲ್ಲಿ ನೀಡುತ್ತಾನೆ ಎಂಬುದು ಮುಖ್ಯವೇ ಹೊರತು ಕೃತಿಯಲ್ಲಿ ಚಾರಿತ್ರಿಕ ಸಂಗತಿಗಳು ಎಷ್ಟರಮಟ್ಟಿಗೆ ಯಥಾವತ್ತಾಗಿ ದಾಖಲಾಗಿವೆ ಎಂಬುದು ಮುಖ್ಯವಲ್ಲ. ಆದುದರಿಂದ ನಾಟಕಗಳಲ್ಲಿ ಯಥಾವತ್ತಾದ ಚಾರಿತ್ರಿಕ ಸಂಗತಿಗಳ ಚಿತ್ರಣವನ್ನು ಅಪೇಕ್ಷಿಸುವುದಕ್ಕಿಂತ ನಾಟಕದಲ್ಲಿ ವ್ಯಕ್ತವಾಗಿರುವ ಲೇಖಕನ ಕಾಲದ ಯುಗಧರ್ಮವನ್ನು ಗ್ರಹಿಸುವುದು ಮುಖ್ಯವಾಗುತ್ತದೆ. ಸಂಸ, ಕುವೆಂಪು, ಮಾಸ್ತಿ, ಲಂಕೇಶ್, ಗಿರೀಶ್ ಕಾರ್ನಾಡ್, ಅನಕೃ, ಎಚ್.ಎಸ್. ಶಿವಪ್ರಕಾಶ್, ದೇಜಗೌ, ಲಿಂಗದೇವರು ಹಳೆಮನೆ ಮುಂತಾದವರು ಐತಿಹಾಸಿಕ ನಾಟಕಗಳನ್ನು ರಚಿಸಿದ್ದಾರೆ. ಕನ್ನಡ ಐತಿಹಾಸಿಕ ನಾಟಕಕಾರದ ಸಂಸರವರು ಸುಮಾರು ೨೩ ನಾಟಕಗಳನ್ನು ರಚಿಸಿದ್ದಾರೆ. ಅದರಲ್ಲಿ ದೊರೆತವುಗಳ ಸಂಖ್ಯೆ ಕಡಿಮೆ. ಬೆಟ್ಟದರಸು, ಸುಗುಣಗಂಭೀರ, ವಿಗಡ ವಿಕ್ರಮರಾಯ, ವಿಜಯನರಸಿಂಹ, ಮಂತ್ರಶಕ್ತಿ, ವಿರುದೆಂತೆಂಬರಗಂಡ ಮುಂತಾದವುಗಳು. ಮಾಸ್ತಿಯವರ 'ಯಶೋಧರಾ' ತಿರುಪಾಣಿ, ಕಾಕನಕೋಟೆ ಗಮನಾರ್ಹವಾದ ನಾಟಕಗಳಾಗಿವೆ. ಕಾಕನಕೋಟೆ ನಾಟಕದ ಮುಕ್ತಾಯದಲ್ಲಿ ರಣಧೀರ ಕಂಠೀರವನ ಪ್ರವೇಶದ ಬಗ್ಗೆ ಹಾಗೂ ಜಾನಪದ ಮತ್ತು ನಾಗರಿಕ ಸಂಸ್ಕೃತಿಗಳ ಮುಖಾಮುಖಿಯಲ್ಲಿ ಬುಡಕಟ್ಟು ಜನಾಂಗವೊಂದು ರಾಜಸತ್ತೆಯ ಮಡಿಲಿಗೆ ಬೀಳುವ ಕಥೆಯನ್ನು ಕಾಕನಕೋಟೆ ನಿರೂಪಿಸುತ್ತದೆ. ಗಿರೀಶ್ ಕಾರ್ನಾಡರು 'ತುಘಲಕ್', 'ತಲೆದಂಡ', 'ಟಿಪ್ಪೂಸುಲ್ತಾನ ಕಂಡ ಕನಸು' ಎಂಬ ಐತಿಹಾಸಿಕ ನಾಟಕಗಳನ್ನು ರಚಿಸಿದ್ದಾರೆ. ತುಘಲಕ್ ನಾಟಕವು ಆಧುನಿಕ ರಂಗಭೂಮಿಯ ಒಂದು ಚಾರಿತ್ರಿಕ ಘಟ್ಟವನ್ನು ಪ್ರತಿನಿಧಿಸುವ ಮಹತ್ವದ ಕೃತಿಯಾಗಿದೆ. ಆಧುನಿಕ ಮಾನವನ ಮನಸ್ಸಿನ ತುಡಿತ, ತೊಳಲಾಟಗಳನ್ನು ತುಘಲಕ್ ನಾಟಕ ಸಮರ್ಥವಾಗಿ ಚಿತ್ರಿಸಿದೆ. ಕೆ. ಮರುಳಸಿದ್ಧಪ್ಪನವರು ಹೇಳುವಂತೆ "ತುಘಲಕನ ಕಥೆ ಐತಿಹಾಸಿಕ ಸಂದರ್ಭವನ್ನು ಆಧುನಿಕ ನೆಲೆಯಲ್ಲಿ ಪರಿಶೋಧಿಸುವ ಈ ಕೃತಿ ಮಾನವ ಸ್ವಭಾವದ ಸಂಕೀರ್ಣತೆಯನ್ನು ನಾಟಕೀಕರಿಸಿರುವ ವಿಧಾನ ಅಸಾಧಾರಣವಾಗಿದೆ" (ಮರಳಸಿದ್ಧಪ್ಪ ಕೆ; ೨೦೦೨; ಪು. ೨೦೨). ಶರಣ ಚಳುವಳಿ ಮತ್ತು ರಾಜ ಬಿಜ್ಜಳನ ಕಥೆಯನ್ನು ಕಾರ್ನಾಡರು ತಲೆದಂಡ ನಾಟಕದಲ್ಲಿ ಕಟ್ಟಿಕೊಟ್ಟಿದ್ದಾರೆ. ಲಿಂಗದೇವರು ಹಳೆಮನೆಯವರ 'ಚಿಕ್ಕದೇವನಭೂಪ' ಮತ್ತು 'ಹೈದರ್' ಚಾರಿತ್ರಿಕ ವಸ್ತುವಿನ ಮೂಲಕವೇ ಸಮಕಾಲೀನ ರಾಜಕೀಯ ವಾಸ್ತವಗಳನ್ನು

ಶೋಧಿಸಲು ಪ್ರಯತ್ನಿಸಿವೆ. ಲಂಕೇಶ್ ಅವರ ಸಂಕ್ರಾಂತಿ; ಅನಕೃ ಅವರ ಜಗಜ್ಯೋತಿ ಬಸವೇಶ್ವರ ನಾಟಕಗಳು 'ಬಸವಣ್ಣನ ಜೀವನವನ್ನು ಕುರಿತು ರಚಿತವಾದ ನಾಟಕ"ಗಳಾಗಿವೆ. ಪುಂಡಲೀಕ ಧುತ್ತರಗಿ ಅವರ ಛತ್ರಪತಿ ಶಿವಾಜಿ; ಕೆಳದಿಯ ಚೆನ್ನಮ್ಮ; ಕಿತ್ತೂರು ಚೆನ್ನಮ್ಮ; ಸಿಂಧೂರ ಲಕ್ಷ್ಮಣ ಕಂದಗಲ್ ಹಣಮಂತರಾಯರ ಕಿತ್ತೂರು ಚೆನ್ನಮ್ಮಾ; ಅನ್ನಕ ಅವರು ಕಿತ್ತೂರುರಾಣಿ ಚೆನ್ನಮ್ಮ; ಮಾಗಡಿ ಕೆಂಪೇಗೌಡ; ಮಾರುತೇಶ್ ಮಾಂಡ್ರೆ ಅವರ ಬೆಳವಡಿ ಮಲ್ಲಮ್ಮ, ನರಗುಂದ ಬಂಡಾಯ; ಸಿದ್ಧಾರೂಢ ಮಹಾತ್ಮೆ; ಎಸ್.ಎಂ. ಬೀಡಗಿ ಅವರ ಸಂಗೊಳ್ಳಿ ರಾಯಣ್ಣ, ಅಮರೇಶ ಯತಗಲ್ ಅವರ ರಾಜಭಕ್ತಿ ಮತ್ತು ಇತರ ನಾಟಕಗಳು, ಎಚ್.ಎಸ್. ಶಿವಪ್ರಕಾಶ್‌ರ ಸುಲ್ತಾನ ಟಿಪ್ಪು ಮುಂತಾದವು ಐತಿಹಾಸಿಕ ನಾಟಕಗಳಾಗಿವೆ.

'ಐತಿಹಾಸಿಕ ಕಥಾವಳಿ' ಎಂಬ ಸಂಕಲನದಲ್ಲಿ ಪಂಜೆ ಮಂಗೇಶರಾಯರ ಐದು ಐತಿಹಾಸಿಕ ಕಥೆಗಳು ಪ್ರಕಟವಾಗಿವೆ. ಅವುಗಳೆಂದರೆ ಪ್ರಥಲಾ, ಶೈಲಿನಿ, ದುರ್ಗಾವತಿ, ವೀರಮತಿ, ಕೋಟಿಚೆನ್ನಯ, 'ಪ್ರಥಲಾ' ವಿಜಯನಗರ ರಾಜ್ಯದ ವೀರ ಮಹಿಳೆ. ದುಷ್ಟನಾದ ಒಬ್ಬ ಮಂತ್ರಿಯಿಂದ ತನ್ನ ಪ್ರಿಯತಮ ಘಾತಕ್ಕೆ ಈಡಾದಾಗ ಆ ಮಂತ್ರಿಯನ್ನು ಕೊಂದು ತಾನು ಜೀವ ತೆಗೆದುಕೊಳ್ಳುತ್ತಾಳೆ. 'ದುರ್ಗಾಮ' - ಈಕೆ ತನ್ನ ರಾಜ್ಯ ಕಾಪಾಡಿಕೊಳ್ಳುವ ವೀರಮಹಿಳೆಯಾಗಿ ಚಿತ್ರಣಗೊಂಡಿದ್ದಾಳೆ. ಕೆರೂರು ವಾಸುದೇವಾಚಾರ್ಯರ 'ಪ್ರೇಮ ವಿಜಯ' ಕಥಾಸಂಕಲನದಲ್ಲಿ ಕಾಲ್ಪನಿಕ ಮತ್ತು ಐತಿಹಾಸಿಕ ವಸ್ತುಗಳನ್ನೊಳಗೊಂಡ ಕಥೆಗಳಿವೆ. 'ಬೆಳಗಿದ ದೀಪಗಳು' ಒಂಬತ್ತು ಚಾರಿತ್ರಿಕ ಕಥೆಗಳ ಸಂಕಲನವಾಗಿದ್ದು, 'ನರಗುಂದದ ಸಾವಿತ್ರಿಬಾಯಿ' ಒಂದು ಹೃದಯಸ್ಪರ್ಶಿ ಕಥೆಯಾಗಿದೆ. ಆನಂದಕಂದರ 'ಮಾಲ್ಕಿಹಕ್ಕು' ಕಥೆಯು ಬ್ರಿಟಿಷರಿಗೆ ಸಹಾಯ ಮಾಡಿದ್ದಕ್ಕಾಗಿ ಅವರಿಂದ ಬಳುವಳಿಯಾಗಿ ಪಡೆದ ಭೂಮಿಯ ಮಾಲೀಕ ಮತ್ತು ಜೀತಗಾರನ ನಡುವಿನ ಕ್ರೌರ್ಯದ ಸಂಬಂಧವನ್ನು ಚಾರಿತ್ರಿಕವಾಗಿ ನಿರೂಪಿಸುತ್ತದೆ. ಕೊರಟಿ ಶ್ರೀನಿವಾಸರಾವ್ ಅವರ 'ಮೈಸೂರಿನ ರಾಜವೊಡೆಯರು ಮತ್ತು ಇತರ ಕಥೆಗಳು' ಕೃತಿಯಲ್ಲಿ ದೊರೆಯ ದೈವಭಕ್ತಿ; ಕುರುಡನಿಗೆ ಕಣ್ಣು ಬಂತು, ರಾಜಮುಡಿ, ಭ್ರಾತೃಪ್ರೇಮ, ಬೆಟ್ಟದ ಅರಿಶಿಣ, ಕೊನೆಯ ದಿನಗಳು, ಅಲಮೇಲು ರಂಗಮ್ಮ, ನವಕೋಟಿ ನಾರಾಯಣ, ಸಂಚಿಯ ಹೊನ್ನಮ್ಮ ಮುಂತಾದ ಕಥೆಗಳಿವೆ. ಮರಾಠಾ ಇತಿಹಾಸದ ಶಿವಾಜಿಯ ನೆಚ್ಚಿನ ಸೇನಾನಿ' ತಾನಾಜಿ ಸಿಂಹಗಡದ ಕೋಟೆಯನ್ನು ರಕ್ಷಿಸುತ್ತ, ಪ್ರಾಣಾರ್ಪಣೆ ಮಾಡಿದ ಕಥನ ಕವನವನ್ನು ಕುವೆಂಪು ಬರೆದಿದ್ದಾರೆ. ಎಸ್.ವಿ. ಪರಮೇಶ್ವರ ಭಟ್ಟರ 'ಜಹನಾರ; ಡಿ.ವಿ.ಜಿ. ಅವರ 'ತಾಜಮಹಲ್ ಚರಿತ್ರೆಯ ಇಬ್ಬರು ಚೆಲುವೆಯರ ಪ್ರೇಮದ ಕಥೆ'ಯನ್ನು ಹೇಳುತ್ತವೆ.

## ಆಧುನಿಕ ಮಹಾಕಾವ್ಯಗಳು

ಸೋಸಲೆ ಅಯ್ಯಾಶಾಸ್ತ್ರಿ ಅವರ 'ಮಹಿಶೂರ ಮಹಾರಾಜ ಚರಿತಂ' (೧೯೧೬), ಹೊಸಕೆರೆ ಚಿದಂಬರಯ್ಯನವರ 'ವಿದ್ಯಾರಣ್ಯ ಕಾವ್ಯಂ', ಕಾಶಿವಿಶ್ವನಾಥ ಶೆಟ್ಟಿ ಅವರ 'ಬುದ್ಧ ಚರಿತ ಮಹಾಮಧು' ಮುಂತಾದವು ಮಹಾಕಾವ್ಯಗಳಾಗಿವೆ.

ಭವ್ಯಮಾನವ:- ಅಕ್ಕಮಹಾದೇವಿಯ ಅನುಪಮಾ ಬಾಳುವೆಯ ಅಪೂರ್ವ ಸಾಧನೆಯನ್ನು ಆಧಾರವಾಗಿಸಿಕೊಂಡು ಕಲ್ಯಾಣ ಕಾಂಡ, ಶ್ರೀಶೈಲಕಾಂಡ, ಕತ್ತಲೆಕಾಂಡ, ಉದಯಕಾಂಡ, ಉಜ್ವಲಕಾಂಡ ಮತ್ತು ಭವ್ಯಕಾಂಡಗಳೆಂಬ ಆರು ಕಾಂಡಗಳಲ್ಲಿ ಆಕೆಯ ಬದುಕಿನ ಸಾಧನೆಯ ನಿರೂಪಣೆಯಿದೆ.

ಐತಿಹಾಸಿಕ ಕಾದಂಬರಿಯ ರಚನೆಯನ್ನು ಮುಖ್ಯವಾಗಿ ಎರಡು ನೆಲೆಯಿಂದ ಗುರುತಿಸಿಕೊಳ್ಳಬೇಕು. "ಸಾಮ್ರಾಜ್ಯಶಾಹಿ ಮತ್ತು ವಸಾಹತುಶಾಹಿಯ ಆಳ್ವಿಕೆಗೆ ಸಂಬಂಧಿಸಿದ ಇತಿಹಾಸದ ವಿವರಗಳನ್ನು ಆಧರಿಸಿ ಬರೆದ, ವರ್ಣನಾತ್ಮಕ ಶೈಲಿಯ ಐತಿಹಾಸಿಕ ಕಾದಂಬರಿಗಳು ಒಂದು ತೆರನಾದರೆ, ಇನ್ನೊಂದು ಇತಿಹಾಸವನ್ನು ವರ್ತಮಾನದ ನೆಲೆಯಿಂದ ಗ್ರಹಿಸುವ ರಚನಾತ್ಮಕ ಕಾದಂಬರಿಗಳಾಗಿವೆ"(ವಿಜಯಶ್ರೀ ಸಬರದ; ೧೯೯೯; ಪು. ೩೦೭). ಮೊದಲನೆ ವಿಭಾಗಕ್ಕೆ ಸಂಬಂಧಿಸಿದಂತೆ ಜಯತೀರ್ಥ ರಾಜಪುರೋಹಿತರ 'ಜೋಹರಾ', ಸಿದ್ಧಯ್ಯ ಪುರಾಣಿಕರ 'ತ್ರಿಭುವನಮಲ್ಲ' ಮುಂತಾದ ಕಾದಂಬರಿಗಳು ಉದಾಹರಣೆಯಾಗಿ ನಿಲ್ಲುತ್ತವೆ. ಆದರೆ ಈ ಭಾಗದಲ್ಲಿ ಎರಡನೆಯ ಗುಂಪಿನ ಕಾದಂಬರಿಗಳು ಲಭ್ಯವಾಗಿಲ್ಲ ಎಂದೇ ಹೇಳಬೇಕು.

ಇಂತಹ ಐತಿಹಾಸಿಕ ಕಾದಂಬರಿಗಳ ಹುಟ್ಟು, ಬೆಳವಣಿಗೆಯನ್ನು ಕುರಿತು ಮುಂದಿನ ಅಧ್ಯಾಯದಲ್ಲಿ ಸವಿವರವಾಗಿ ಚರ್ಚಿಸಲಾಗುತ್ತದೆ.

□□

## ಅಧ್ಯಾಯ : ಮೂರು

# ಕನ್ನಡ ಐತಿಹಾಸಿಕ ಕಾದಂಬರಿಗಳ ಹುಟ್ಟು ಮತ್ತು ಬೆಳವಣಿಗೆ

ಆಧುನಿಕ ಕನ್ನಡ ಸಾಹಿತ್ಯದ ಪ್ರಮುಖ ಪ್ರಕಾರ ಕಾದಂಬರಿ. ಇದು ಒಂದು ಶತಮಾನದ ಇತಿಹಾಸವನ್ನು ಹೊಂದಿದೆ. ಕನ್ನಡ ಕಾದಂಬರಿಗಳು, ಸಾಮಾಜಿಕ ಕಾದಂಬರಿಗಳು, ಪೌರಾಣಿಕ ಕಾದಂಬರಿಗಳು, ಪತ್ತೇಧಾರಿ ಕಾದಂಬರಿಗಳು, ಮನಃಶಾಸ್ತ್ರೀಯ ಕಾದಂಬರಿಗಳು ಎಂಬ ವಿವಿಧ ಪ್ರಕಾರಗಳ ವಸ್ತುಗಳನ್ನು ಆಧರಿಸಿ ರಚನೆಗೊಂಡಿದೆ. ಹಾಗೆಯೇ ಐತಿಹಾಸಿಕ ಕಾದಂಬರಿಯನ್ನು ಪ್ರತ್ಯೇಕ ವಿಭಾಗವನ್ನಾಗಿ ಗುರುತಿಸಲಾಗಿದೆ. ಐತಿಹಾಸಿಕ ವಸ್ತುಗಳನ್ನು ಆಧರಿಸಿ ವಿವಿಧ ಪ್ರಕಾರಗಳ ಸಾಹಿತ್ಯ ಕೃತಿಗಳು ರಚನೆಯಾಗಿವೆ. ಅವುಗಳನ್ನು ಕಥೆ, ಕಾವ್ಯ, ನಾಟಕ, ಕಾದಂಬರಿ ಹೀಗೆ ವಿಭಾಗಿಸಬಹುದಾಗಿದೆ. ಅವುಗಳಲ್ಲಿ ಕಾದಂಬರಿ ಪ್ರಕಾರವೂ ಅತ್ಯಂತ ಪ್ರಭಾವಶಾಲಿಯೂ ಆಗಿದೆ. ನಮ್ಮ ದೇಶದ ಸಾಂಸ್ಕೃತಿಕ ಸಂಪತ್ತನ್ನು ದಾಖಲಿಸುವ ಮಹತ್ವದ ಪಾತ್ರವನ್ನು ವಹಿಸಿದೆ. ಸಮಾಜದ ಒಳಹೊರಗುಗಳನ್ನು ತೋರಿಸುವ ಕನ್ನಡಿಯಂತಿದೆ ಕಾದಂಬರಿ. ಆದ್ದರಿಂದಲೇ ಸಾಹಿತ್ಯ ಕ್ಷೇತ್ರದಲ್ಲಿ ಕಾದಂಬರಿಗೆ ಅಗ್ರಸ್ಥಾನ ದೊರಕಿದೆ. ಇದು ತನ್ನದೇ ಆದ ಸಮಕಾಲೀನ ಬದುಕಿನ ಒಳನೋಟಗಳನ್ನು ಇತಿಹಾಸದ ಅಂಶಗಳನ್ನು ಪ್ರತಿಬಿಂಬಿಸುತ್ತದೆ. ಇತ್ತೀಚಿನ ಸಾಹಿತ್ಯ ಪ್ರಕಾರಗಳಲ್ಲಿ ಕಾದಂಬರಿ ತುಂಬಾ ವಿಶಾಲವಾಗಿ ಮತ್ತು ವಿಶಿಷ್ಟವಾಗಿ ಬೆಳೆದಿದೆ.

ಸಾಹಿತ್ಯದ ಎಲ್ಲ ಪ್ರಕಾರಗಳಿಗೂ ತನ್ನದೇ ಆದ ಚರಿತ್ರೆ ಇರುವಂತೆ ಕಾದಂಬರಿ ಸಾಹಿತ್ಯಕ್ಕೂ ಒಂದು ಚರಿತ್ರೆ ಇದೆ. ಕನ್ನಡದಲ್ಲಿ 'ಕಾದಂಬರಿ' ಎಂಬ ಪದ ಪ್ರಾಚೀನವಾದುದಾದರೂ ಕಾದಂಬರಿ ಸಾಹಿತ್ಯದ ಪ್ರಕಾರ ಇತ್ತೀಚಿನದು. ಉಳಿದ ಸಾಹಿತ್ಯ ಪ್ರಕಾರಗಳಂತೆ ಇದು ಕೂಡ ಇತರ ಭಾಷೆಗಳಿಂದ ಕನ್ನಡಕ್ಕೆ ಬಂದುದು. ಕಾದಂಬರಿ ಎಂಬುದು ಇಂಗ್ಲೆಂಡಿನ ಕೊಡುಗೆ. ಈ ಸಾಹಿತ್ಯ ಪ್ರಕಾರ ಇಂಗ್ಲೀಷಿನಲ್ಲಿ ಹುಟ್ಟಿ ಬೆಳೆದರೂ 'Novel' ಎಂಬುದು ಆಂಗ್ಲ ಪದವಲ್ಲ. ಇದರ ಮೂಲ ಇಟಾಲಿಯನ್ ಭಾಷೆಯ 'Novella' ಎಂಬುದು.

ಕಾದಂಬರಿಯನ್ನು ಇಂಗ್ಲೀಷ್ ಭಾಷೆಯಲ್ಲಿ 'ನಾವೆಲ್' ಎಂದು ಕರೆಯುತ್ತಾರೆ. ನಾವೆಲ್ ಎಂಬ ಪದ ಲ್ಯಾಟಿನ್ನಿನ 'ನೋವೆಸ್' ಎಂಬ ಮೂಲದಿಂದ ಬಂದಿದ್ದು 'ಹೊಸದು' ಎಂಬರ್ಥವನ್ನು ಹೊಂದಿದೆ. ಫ್ರೆಂಚ್ ಭಾಷೆಯಲ್ಲಿ 'ರೋಮಾ' ಎಂದು ಕರೆಯುತ್ತಾರೆ. ತೆಲುಗು ಭಾಷೆಯಲ್ಲಿ 'ನವಲಾ' ಎಂಬ ಹೆಸರು ವಾಡಿಕೆಯಲ್ಲಿದೆ. ತಮಿಳಿನಲ್ಲಿ 'ನಾವೆಲ್'

ಎಂದು ಕರೆದರೆ, ಹಿಂದಿ ಮತ್ತು ಬಂಗಾಳಿಯಲ್ಲಿ 'ಉಪನ್ಯಾಸ' ಎಂದು ಬಳಕೆಯಲ್ಲಿದೆ. ಗುಜರಾತಿಯಲ್ಲಿ 'ನವಲಕಥಾ' ಎಂದರೆ, ಮರಾಠಿ ಮತ್ತು ಕನ್ನಡದಲ್ಲಿ 'ಕಾದಂಬರಿ' ಎಂದು Novelಗೆ ಸಂವಾದಿಯಾಗಿ ಬಳಸುವ ಪದಗಳಾಗಿವೆ. ಕನ್ನಡದ ಜನಪ್ರಿಯ ಸಾಹಿತ್ಯ ಪ್ರಕಾರವಾಗಿರುವ ಈ ಕಾದಂಬರಿ ಸಾಹಿತ್ಯದ ಹೆಸರು ಮರಾಠಿ ಪ್ರಭಾವದಿಂದ ಬಂದುದು. ಮರಾಠಿಯಲ್ಲಿ 'ಕಾದಂಬರಿ' ಶಬ್ದಕ್ಕೆ 'ಕಲ್ಪಿತ ಕಥೆ' ಎಂಬರ್ಥವಿದೆ.

ಕನ್ನಡದಲ್ಲಿ ಮೊಟ್ಟಮೊದಲಿಗೆ ತಮ್ಮ ಕಲ್ಪಿತ ಕೃತಿಗೆ ಕಾದಂಬರಿಯೆಂದು ಕರೆದವರು ಲಕ್ಷ್ಮಣ ಭೀಮರಾವ್ ಗದಗಕರ್ ಅವರು. ೧೮೭೨ರಲ್ಲಿ ರಚಿತವಾದ ತಮ್ಮ 'ಸೂರ್ಯಕಾಂತ' ಕೃತಿ ಕನ್ನಡದ ಹೊಸ ಕಾದಂಬರಿ ಎಂದಿದ್ದಾರೆ (ಹಿರೇಮಠ ಬಿ. ಮತ್ತು ಕರಿಭರಮನಗೌಡ ಎಸ್.ಬಿ. (ಸಂ); ೧೯೮೮; ಪು. ೧೫೨;). 'ಕಾದಂಬರಿ' ಪದವನ್ನು ಮೊದಲು ಬಳಸಿದವರು ಗದಗಕರರವರಾದರೂ ರೂಢಿಗೆ ತಂದ ಶ್ರೇಯಸ್ಸು ಗಳಗನಾಥರಿಗೇ ಸಲ್ಲಬೇಕು. ಸೂರ್ಯಕಾಂತ ಕೃತಿಗೆ ಇವರು 'ಕನ್ನಡ ಹೊಸ ಕಾದಂಬರಿ' ಎಂದು ಕರೆದುಕೊಂಡಿದ್ದಾರೆ. ಅವರೇ ಪೀಠಿಕಾ ಭಾಗದಲ್ಲಿ "ಜನರಲ್ಲಿ ಓದುವ ಅಭಿರುಚಿ ಹುಟ್ಟದ ಹೊರತು ಯಾವ ಭಾಷೆಯೂ ಉತ್ತಮ ಸ್ಥಿತಿಯಲ್ಲಿ ಬರಲಾರದು. ಇಂಥ ಅಭಿರುಚಿಯನ್ನು ಹುಟ್ಟಿಸಬೇಕಾದರೆ ಕಾದಂಬರಿ, ಇತಿಹಾಸ ನಾಟಕ ಮೊದಲಾದ ಸಾಮಗ್ರಿಗಳು ಅವಶ್ಯವಾಗಿ ಬೇಕಾಗುತ್ತವೆ. ಈ ಕೊರತೆಯನ್ನು ನೀಗಿಸಲೆಂದೇ ಈ ಚಿಕ್ಕ ಕಾದಂಬರಿಯನ್ನು ಬರೆದಿದ್ದೇನೆ (ಬೆಳಗಲಿ ದು.ನಿಂ.; ೧೯೭೫; ಪು. ೭) ಎಂದು ಹೇಳಿದ್ದಾರೆ. ಕಾದಂಬರಿ ಎಂಬ ಶಬ್ದವು ಸಂಸ್ಕೃತದ ಬಾಣ ಕವಿಯಷ್ಟೇ ಪ್ರಾಚೀನವಾದದ್ದು. ಇದು ಭಾರತೀಯ ಸಾಹಿತ್ಯಕ್ಕೆ ಹೊಸದಲ್ಲ ಕೇವಲ ಒಂದು ಪಾತ್ರ ಅಷ್ಟೆ. "ಬಾಣನ ಕಾದಂಬರಿ ಗದ್ಯದಲ್ಲಿ ರೂಪಗೊಂಡಿರುವ ಸಂಕೀರ್ಣ ಕಥೆ. ಅದರಲ್ಲಿ ಕಾದಂಬರಿ, ಮಹಾಶ್ವೇತೆ, ಚಂದ್ರಾಪೀಡ, ಪುಂಡರೀಕ, ಕಪಿಂಜಲ, ಶೂದ್ರಕ ಮೊದಲಾದ ವ್ಯಕ್ತಿಗಳ ಜೀವನ ವೃತ್ತಾಂತ ನಿರೂಪಿತವಾಗಿದೆ. ಕೆಲವೇಳೆ ಕಥೆ ಭೂಲೋಕದಿಂದ ಗಂಧರ್ವ ಲೋಕಕ್ಕೂ, ಇಂದಿನ ಜೀವನದಿಂದ ಮುಂದೆ ಮೂರು ಜನ್ಮಗಳಿಗೂ ಹರಿದಾಡುತ್ತದೆ. ಇಂಥದ್ದೇ ಕಥೆಗಳನ್ನು ಕಾದಂಬರಿ ಎಂಬ ಸಾಮಾನ್ಯ ನಾಮದಿಂದ ಕರೆದಿರುವುದು ಉಚಿತವಾಗಿಯೇ ಇದೆ" (ದೊಡ್ಡಮನಿ ಜೆ.ಪಿ; ೧೯೯೬; ಪು. ೬).

ಕಾದಂಬರಿ ಸರಳವಾದ ವ್ಯಾಖ್ಯೆಗಳಿಗೆ ಸಿಲುಕದ ಸಾಹಿತ್ಯ ಪ್ರಕಾರ ಕೇಂಬ್ರಿಡ್ಜ್ ಇಂಗ್ಲೀಷ್ ನಿಘಂಟು "ಸಾಕಷ್ಟು ದೀರ್ಘವಾದ ಕಥಾನಕವೇ ಕಾದಂಬರಿ" ಎಂದರೆ ಎಂ. ಅಬೆಲ್‌ಕೇವಲ್ಲಿಯವರು ಕಾದಂಬರಿ ಎಂದರೆ, "ಒಂದಿಷ್ಟು ಉದ್ದವಿರುವ ಗದ್ಯಾತ್ಮಕ ಲಘು ಸಾಹಿತ್ಯವೆಂದಿದ್ದಾರೆ". ಹೆಗೆಲ್ ಎಂಬ ವಿದ್ವಾಂಸರು "ಮಧ್ಯಮ ವರ್ಗದ ಮಹಾಕಾವ್ಯವೇ ಕಾದಂಬರಿ" (ಬೆಳಗಲಿ ದು.ನಿಂ.; ೧೯೧೭; ಪು. ೩) ಎಂದು ಕರೆದಿದ್ದಾರೆ. ಇ.ಎಂ. ಪೋರ್ಸ್ಟರ್ ಅವರು "ಐವತ್ತು ಸಾವಿರ ಶಬ್ದಗಳಿಗಿಂತ ಕಡಿಮೆಯಿಲ್ಲದ ಯಾವುದೇ ಗದ್ಯಾತ್ಮಕ ಲಘು ಸಾಹಿತ್ಯವನ್ನು ತಾನು ಕಾದಂಬರಿ ಎಂದು ಕರೆಯುತ್ತೇನೆ" (ಶಾಸ್ತ್ರಿ ಪಿ.ಎ.; ೧೯೭೩; ಪು. ३೮) ಎಂದಿದ್ದಾರೆ.

ಕಾದಂಬರಿಯ ವ್ಯಾಖ್ಯೆ, ಲಕ್ಷಣವನ್ನು ಕುರಿತಂತೆ ಹಲವಾರು ಲೇಖಕರು ವಿಭಿನ್ನ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ವೇರಿಯಸ್ ಕ್ರಾಫಡ್ "ಅಂಗೈ ರಂಗಭೂಮಿ" ಎಂದು

ಕರೆದಿರುವುದು ತುಂಬಾ ಉಚಿತವೇ ಆಗಿದೆ. ವಿಲಿಯಂ ಹೆನ್ರಿ ಹಡ್ಸನ್ 'ವಿರಾಮಕಾಲದಲ್ಲಿ ಮನರಂಜನೆಯನ್ನು ವಾಸ್ತವಿಕ ವ್ಯವಹಾರಗಳ ಶ್ರಮದಿಂದ ಬಿಡುಗಡೆಯನ್ನು ಒದಗಿಸುವುದು' (ಹಿರೇಮಠ ಎ. ಮತ್ತು ಕರಿಭರಮನಗೌಡ ಎಸ್.ಬಿ. (ಸಂ); ೧೯೮೮; ಪು. ೧೫೨) ಎಂದು ಕರೆದಿದ್ದಾರೆ. ಯಾವುದೇ ಸಾಹಿತ್ಯ ಪ್ರಕಾರಕ್ಕೆ ತನ್ನದೇ ಆದ ತತ್ವಗಳು, ಸಿದ್ಧಾಂತಗಳು ಇದ್ದೇ ಇರುತ್ತವೆ. ಆದರೆ ವರ್ಜಿನಿಯಾ ಉಲ್ಫ್ "ಕಲೆಯ ಸಿದ್ಧಾಂತ, ಸೂತ್ರಗಳಿಂದ ಕಾದಂಬರಿಯನ್ನು ಅಳೆಯುವುದಾದರೆ ಅದು ಕಲಾಕ್ಷೇತ್ರದಿಂದ ಹೊರಗುಳಿಯಲು ಸಿದ್ಧವಿದೆ" (ದೊಡ್ಡಮನಿ ಜೆ.ಪಿ.; ೧೯೯೬; ಪು. ೮) ಎಂದು ಅಭಿಪ್ರಾಯ ಪಡುತ್ತಾರೆ.

**ಚಾರಿತ್ರಿಕ ಕಾದಂಬರಿಗಳು**

ಯೂರೋಪಿನ ಸಾಹಿತ್ಯ ವಲಯದಲ್ಲಿ ಕಾದಂಬರಿ ಪ್ರಕಾರ ಬೆಳೆದುಬಂದರೂ ಇತಿಹಾಸದ ವಸ್ತುವನ್ನು ಕೇಂದ್ರೀಕರಿಸಿಕೊಂಡು ಕಾದಂಬರಿಯನ್ನು ರಚನೆ ಮಾಡಿದ್ದು ಫ್ರಾನ್ಸಿನ ಮಹಾಕ್ರಾಂತಿಯ ಬಳಿಕ. ಐತಿಹಾಸಿಕ ಕಾದಂಬರಿಗಳನ್ನು ರಚಿಸುವ ಲೇಖಕನ ಜವಾಬ್ದಾರಿಗಳನ್ನು ವಿಲಿಯಂ ಹೆನ್ರಿಹಡ್ಸನ್ ಈ ರೀತಿ ಹೇಳುತ್ತಾರೆ. "ಚರಿತ್ರೆಕಾರನ ಮತ್ತು ಪ್ರಾಚೀನ ವಿಷಯ ತಜ್ಞನ ಶುಷ್ಕ ಸಂಗತಿಗಳ ಮೇಲೆ ಸೃಷ್ಟ್ಯಾತ್ಮಕ ಕಲ್ಪನೆಯನ್ನು ಹರಿಸುವುದು ಮತ್ತು ಅನೇಕ ಮೂಲಗಳಿಂದ ಸಂಗ್ರಹಿಸಲ್ಪಟ್ಟ ಸಾಮಗ್ರಿಗಳಿಂದ, ಕಲಾಕೃತಿಯ ಪೂರ್ಣತೆ ಐಕ್ಯತೆಗಳನ್ನುಳ್ಳ ಚಿತ್ರವೊಂದನ್ನು ಮೂಡಿಸುವುದು ಐತಿಹಾಸಿಕ ಕಾದಂಬರಿಕಾರನ ಕೆಲಸ" (ಕೃಷ್ಣಕುಮಾರ ಸಿ.ಪಿ.; ೧೯೭೪; ಪು. ೧೬೭). ಇಂತಹ ಕಾದಂಬರಿಕಾರನ ಕರ್ತವ್ಯಗಳೂ ಕೆಲವಿವೆ. ಅವು ತಾನು ಎತ್ತಿಕೊಂಡ ಸಂಗತಿಗಳು ಸತ್ಯಕ್ಕೆ ಬದ್ಧವಾಗಿರಬೇಕು. ಆ ಯುಗದ ಸಾಂಸ್ಕೃತಿಕ ಸಾಮಾಜಿಕ ಜೀವನವನ್ನು ಚಿತ್ರಿಸುವಾಗ ಆ ಯುಗಕ್ಕೆ ಪ್ರಾಮಾಣಿಕನಾಗಿರಬೇಕು. "ಗತಕಾಲಕ್ಕೆ ಮತ್ತೆ ಸ್ಥಾನ ಕಲ್ಪಿಸಲು ಪ್ರಯತ್ನಿಸುವ ಲೇಖಕ ಚರಿತ್ರೆಕಾರನ ಜವಾಬ್ದಾರಿಗಳನ್ನು ತಕ್ಕಮಟ್ಟಿಗೆ ಒಪ್ಪಿಕೊಳ್ಳಬೇಕು. ಆದ್ದರಿಂದ ಅವನು ಚರಿತ್ರೆಯ ಹಕ್ಕುಗಳನ್ನೂ, ಕಲೆಯ ಹಕ್ಕುಗಳನ್ನೂ ಏಕಕಾಲದಲ್ಲಿ ತೃಪ್ತಿಪಡಿಸಬೇಕಾಗುತ್ತದೆ (ಅದೇ; ಪು. ೧೬೮). ಈ ತತ್ವಗಳಿಗೆ ಐತಿಹಾಸಿಕ ಕಾದಂಬರಿಕಾರ ಯಾವಾಗಲೂ ಬದ್ಧನಾಗಿರ ಬೇಕಾದುದು ಅತ್ಯವಶ್ಯ.

"ಚಾರಿತ್ರಿಕ ಕಾದಂಬರಿ ಕೇವಲ ಚಾರಿತ್ರಿಕ ಕಾದಂಬರಿಯಾಗಿ ಮಾತ್ರ ಉಳಿಯಬಾರದು ಅದು ಕಾದಂಬರಿಯಾಗಬೇಕು. ಆಗ ಕಲಾತ್ಮಕ ಮೌಲ್ಯ ಪಡೆಯುತ್ತದೆ. ಆದ್ದರಿಂದ ಕಾದಂಬರಿಕಾರನ ಅಥವಾ ನಾಟಕಕಾರನ ಕಾರ್ಯಗತ ಕಾಲವನ್ನು ಪುನರ್‌ಸೃಷ್ಟಿಸುವುದಕ್ಕೆ ಮುಗಿಯುವುದಿಲ್ಲ. ವರ್ತಮಾನ ಕಾಲದೊಂದಿಗೆ ಸಂಬಂಧ ಸಾಧ್ಯತೆಯನ್ನು ಧ್ವನಿಸಬೇಕಾಗುತ್ತದೆ. ಧ್ವನಿಸುವುದು ಎಂದಾಗ ಸರಳೀಕರಣ ಅಥವಾ ಉಪದೇಶ ಅಥವಾ ಸಮಾನ ಹೋಲಿಕೆಯಿಂದಲ್ಲ. ಸಾಮಗ್ರಿಯನ್ನು ಬಳಸಿಕೊಂಡು ಪ್ರತಿಪಾದಿಸುವ ವಿನ್ಯಾಸದಲ್ಲಿಯೇ ಸೂಚ್ಯತೆ ಅಡಗಿರಬೇಕಾಗುತ್ತದೆ" (ಬರಗೂರು ರಾಮಚಂದ್ರಪ್ಪ; ೧೯೯೩; ಪು. ೧೨) ಎಂದು ಪ್ರೊ. ಎಂ. ಹೆಚ್. ಕೃಷ್ಣಯ್ಯನವರು ತಮ್ಮ ಅಭಿಪ್ರಾಯವನ್ನು ತಿಳಿಸಿದ್ದಾರೆ.

ಇತಿಹಾಸದಲ್ಲಿನ ಕೆಲವು ತುಣುಕುಗಳನ್ನು ತನಗೆ ಬೇಕಾದ ಹಾಗೆ ಬಳಸಿಕೊಳ್ಳುವ, ಬದಲಾಯಿಸಿಕೊಳ್ಳುವ ಸ್ವಾತಂತ್ರ್ಯ ಸೃಜನಶೀಲ ಲೇಖಕನಿಗೆ ಇದ್ದೇ ಇರುತ್ತದೆ. "ಆಧುನಿಕ

ಕನ್ನಡ ಸಾಹಿತ್ಯದ ಸಂದರ್ಭದಲ್ಲಿ ಇತಿಹಾಸವನ್ನು ಸಾಹಿತ್ಯದೊಳಕ್ಕೆ ಸಮೃದ್ಧವಾಗಿ ಬಳಸಿಕೊಳ್ಳಲಾಗುತ್ತಿದೆ. ಹೀಗೆ ಬಳಸಿಕೊಳ್ಳುವಾಗ ಲೇಖಕ ಇತಿಹಾಸಕ್ಕೆ ಬದ್ಧನಾಗಿರಬೇಕೇ? ಅಥವಾ ಇತಿಹಾಸ ವಸ್ತುವನ್ನು ನೆಪಕ್ಕೆ ಇಟ್ಟುಕೊಂಡು ತನ್ನದೇ ಆದ 'ದರ್ಶನ' ನೀಡಲು ಸ್ವತಂತ್ರವಾಗಿ ಹರಿದಾಡಬಹುದೇ? ಎಂಬ ಚರ್ಚೆಗೆ ಸಂಬಂಧಿಸಿದಂತೆ ಮುಖ್ಯವಾಗಿ ಎರಡು ಅಭಿಪ್ರಾಯಗಳನ್ನು ಹೇಳಲಾಗಿದೆ.

೧. ಲೇಖಕ ಇತಿಹಾಸಕ್ಕೆ ಬದ್ಧನಾಗಿರಬೇಕು. ಯಾವುದೇ ಕಾರಣಕ್ಕೂ ಇತಿಹಾಸವನ್ನು ತಿರುಚಬಾರದು. ತಿರುಚಿದರೆ ಇತಿಹಾಸಕ್ಕೆ ದ್ರೋಹ ಬಗೆದಂತಾಗುತ್ತದೆ.

೨. ಲೇಖಕ ಇತಿಹಾಸಕ್ಕೆ ಬದ್ಧನಾಗಬೇಕಾಗಿಲ್ಲ. "ಸಾಹಿತ್ಯ ಕೃತಿಯೊಂದನ್ನು ಸಾಹಿತ್ಯ ಕೃತಿಯನ್ನಾಗಿ ನೋಡಬೇಕೆ ಹೊರತು ಸಂಶೋಧನಾ ಕೃತಿಯಂತೆ ಅಲ್ಲ. ಇತಿಹಾಸವನ್ನು ಬದಲಿಸಿಕೊಳ್ಳುವ ಸ್ವಾತಂತ್ರ್ಯ ಸೃಜನಶೀಲ ಲೇಖಕನಿಗೆ ಇದೆ" (ಶರಭೇಂದ್ರಯ್ಯ ಬಿ.ಎಂ.; ೨೦೦೯; ಪು. ೪೪) ಎಂದು ಬಿ.ಎಂ. ಶರಭೇಂದ್ರಯ್ಯ ಅವರು ಹೇಳಿದ್ದಾರೆ.

ಐತಿಹಾಸಿಕ ಕಾದಂಬರಿ ಎಂದರೇನು? ಅವುಗಳ ಸ್ವರೂಪ ಎಂಥದ್ದು ಎಂಬುದನ್ನು ಬೆಟಗೇರಿ ಕೃಷ್ಣಶರ್ಮ ಹಾಗೂ ಬಿ. ಪುಟ್ಟಸ್ವಾಮಯವರ ಮಾತಿನಲ್ಲಿ ನೋಡೋಣ. ಕೃಷ್ಣಶರ್ಮರು ತಮ್ಮ ರಾಜಯೋಗಿ ಕಾದಂಬರಿಯ ಮೊದಲ ಮಾತಿನಲ್ಲಿ "ಐತಿಹಾಸಿಕ ಕಾದಂಬರಿಯೆಂದರೆ ಬರೀ ರಂಜಕತೆ, ಅದ್ಭುತ ರಮ್ಯತೆಗಳ ಕಂತೆ ಪುರಾಣಗಳೆನ್ನಿಸಿಕೊಳ್ಳಬಾರದು. ಆ ಘಟನೆಗಳು ಜರುಗಿದ ಕಾಲ, ದೇಶ, ಜೀವನ ಪರಿಸ್ಥಿತಿಗಳ ಸಹಜ ರೂಪಕವೇ ಐತಿಹಾಸಿಕ ಕಾದಂಬರಿಯೆನಿಸಿಕೊಳ್ಳುವುದು" (ರಾಘವೇಂದ್ರ ಪಾಟೀಲ (ಸಂ); ೧೯೯೪; ಪು. ೫೪). ಅಂದರೆ "ಲೇಖಕನು ಜೀವಿಸಿರುವುದಕ್ಕಿಂತ ಹಿಂದಿನ ಯಾವುದಾದರೊಂದು ಕಾಲದ ಘಟನೆಗಳನ್ನು, ವ್ಯಕ್ತಿಗಳನ್ನು ಆ ಕಾಲದ ನಂಬಿಕೆ, ನಡವಳಿಕೆ, ಸಂಪ್ರದಾಯಗಳಿಗೆ ಅನುಗುಣವಾಗಿ ಕಲ್ಪಿಸಿಕೊಂಡು ಪುನರ್ಘಟಿಸಿ ಕಥಾ ರೂಪದಲ್ಲಿ ಚಿತ್ರಿಸುವುದೇ ಐತಿಹಾಸಿಕ ಕಾದಂಬರಿ. ಇಂತಹ ಕೃತಿಗಳಲ್ಲಿ ಚಿತ್ರಿತವಾದ ಪಾತ್ರಗಳು ಐತಿಹಾಸಿಕ ವ್ಯಕ್ತಿಗಳಾಗಿರಬಹುದು ಇಲ್ಲವೇ ಐತಿಹಾಸಿಕ ಘಟನೆಗಳ ಅಂತರಂಗ ಬಹಿರಂಗ ಕಾರಣಗಳನ್ನು ಸ್ಪಷ್ಟಪಡಿಸಲು ಕಾದಂಬರಿಕಾರನು ಕಲ್ಪಿಸಿಕೊಂಡ ಅನೈತಿಹಾಸಿಕ ವ್ಯಕ್ತಿಗಳಾಗಿರಬಹುದು. ಗೊತ್ತಾದ ಕಾಲದ ವಾಸ್ತವ ಚಿತ್ರವನ್ನು ವಾಚಕರ ಮುಂದಿರಿಸಲು, ಕೃತಿ ಎಷ್ಟರಮಟ್ಟಿಗೆ ಸಮರ್ಥವಾಗಿದೆಯೆಂಬುದೇ ಕಾದಂಬರಿಯ ಸಫಲತೆಗೆ ಮುಖ್ಯ ಒರಗಲ್ಲು" (ಕೃಷ್ಣರಾಯ ಶಾ.ಮ.(ಸಂ); ೧೯೭೦; ಪು. ೫೯೭) ಎಂದು ಪುಟ್ಟಸ್ವಾಮಯ್ಯನವರು. ಐತಿಹಾಸಿಕ ಕಾದಂಬರಿಯ ವ್ಯಾಖ್ಯೆಯ ಜೊತೆಯಲ್ಲಿ ಆ ಕೃತಿಯು ವಾಸ್ತವ ಬದುಕಿಗೆ ಹೇಗೆ ಸ್ಪಂದಿಸುತ್ತದೆ ಎಂದು ಹೇಳಿದ್ದಾರೆ.

ಐತಿಹಾಸಿಕ ಕಾದಂಬರಿ ಬರೆಯುವುದು ಅಷ್ಟೊಂದು ಸುಲಭದ ಕೆಲಸವಲ್ಲ. ಗತಕಾಲದ ಇತಿಹಾಸವನ್ನು ಚಿತ್ರಿಸಬೇಕಾಗಿರುವುದರಿಂದ ಆ ಕಾಲದ ಜನಜೀವನ ಅವರ ಆಚಾರ-ವಿಚಾರ, ಮೌಲ್ಯಗಳು, ವೇಷಭೂಷಣಗಳ ಸಂಪೂರ್ಣ ಪರಿಚಯ ಅವರಿಗಿರಬೇಕಾಗುತ್ತದೆ. ಇದಕ್ಕಾಗಿ ಅವನಿಗೆ ಅಗಾಧವಾದ ಪಾಂಡಿತ್ಯ, ಕಲ್ಪನಾಶಕ್ತಿ, ಪ್ರತಿಭೆ, ವ್ಯಾಪಕವಾದ ಓದು ಇರಬೇಕಾಗುತ್ತದೆ.

“ಒಬ್ಬ ಕಾದಂಬರಿಕಾರ ಒಂದು ಐತಿಹಾಸಿಕ ಕಾದಂಬರಿ ಬರೆಯಬೇಕಾದರೆ ಅವನು ಅನೇಕ ಆಕರಗಳನ್ನು ಅವಲಂಬಿಸಬೇಕಾಗುತ್ತದೆ. ಆ ಕಾಲದ ಶಾಸನ, ತಾಮ್ರಪಟಗಳು, ಸಮಕಾಲೀನ ಸಾಹಿತ್ಯ ಕೃತಿಗಳು, ವಿದೇಶಿ ಬರಹಗಾರರ ಬರಹ, ಕಡತಗಳನ್ನು, ಮಿಗಿಲಾಗಿ ಜನಪದ ಆಕರಗಳನ್ನು ಸಂಶೋಧಿಸುವ ದೃಷ್ಟಿ, ಜನಜೀವನದ ಆಸೆ, ಆಕಾಂಕ್ಷೆ ಮತ್ತು ಸಂಸ್ಕೃತಿ ಭಾಷೆ, ವೇಷಭೂಷಣ, ಆಚಾರ-ವಿಚಾರ, ನಡೆ-ನುಡಿ. ಆ ಕಾಲದ ಮೌಲ್ಯಗಳ ಪರಿಮಾಣ, ಪರಿಚಯದ ಫಲದಿಂದ ಮಾತ್ರ ಶ್ರೇಷ್ಠ ಐತಿಹಾಸಿಕ ಕಾದಂಬರಿಗಳು ಹುಟ್ಟುವುದು ಸಾಧ್ಯ” (ಶ್ರೀಶೈಲ ಆರಾಧ್ಯ ಎಚ್. (ಸಂ); ೧೯೮೪; ಪು. ೧೨೫) ಎಂಬುದು ಪ್ರೊ. ಎಂ.ಎಸ್. ಪಾಟೀಲರ ಮಾತು ಸ್ಪಷ್ಟಪಡಿಸುತ್ತದೆ. ಅತಿಪ್ರಾಚೀನ ಕಾಲದ ಇತಿಹಾಸಕ್ಕೆ ಸಂಬಂಧಪಟ್ಟ ವಸ್ತುವನ್ನು ಕುರಿತು ಕಾದಂಬರಿ ರಚಿಸುವಲ್ಲಿ ಐತಿಹಾಸಿಕ ಸಾಮಗ್ರಿಯ ಕೊರತೆಯನ್ನು ಬಹಳಷ್ಟು ಕಾದಂಬರಿಕಾರರು ಅನುಭವಿಸಿದ್ದನ್ನು ಕಾಣುತ್ತೇವೆ. ಐತಿಹಾಸಿಕ ಕಾದಂಬರಿ ರಚನೆಗೆ ಸಾಕಷ್ಟು ಮಾಹಿತಿ ಸಿಗದೆ ಸಿಕ್ಕ ಅಲ್ಪ ಮಾಹಿತಿಯಲ್ಲಿಯೇ ಕಾದಂಬರಿಗಳನ್ನು ಯಾವ ರೀತಿ ರಚಿಸಲಾಗಿದೆ ಎಂಬುದನ್ನು ಅವರು ಬರೆದ ಮನ್ನುಡಿಯನ್ನು ಓದಿದಾಗ ತಿಳಿಯುತ್ತದೆ.

ಕಾದಂಬರಿಗೆ ಆಯ್ದುಕೊಂಡಿರುವ ವಸ್ತು ಕೆಲವೊಮ್ಮೆ ಅತ್ಯಂತ ಆಕರ್ಷಕವಿದ್ದು ಅದಕ್ಕೆ ಅವಶ್ಯಕವಿರುವ ಆಧಾರಗಳು ಸಾಕಷ್ಟು ಪ್ರಮಾಣದಲ್ಲಿ ಇಲ್ಲದಿರಬಹುದು. ಮತ್ತೆ ಕೆಲವೊಮ್ಮೆ ಆಧಾರಗಳು ಸಾಕಷ್ಟು ಪ್ರಮಾಣದಲ್ಲಿದ್ದರೂ ಅವುಗಳ ಪರಸ್ಪರ ಸಂಗತಿಯನ್ನು ಗುರುತಿಸಿ ಕೊಳ್ಳುವುದರಲ್ಲಿ, ಕೆಲವೆಡೆ ಅಸ್ಪಷ್ಟತೆ, ವಿರೋಧಾಭಾಸ ಅಥವಾ ವಿಸಂಗತಿಗಳು ಕಾಣಬಹುದು. ಅಂತಹ ಸಂದರ್ಭಗಳಲ್ಲೆಲ್ಲಾ ಅವನ ಕಲ್ಪನೆಗೆ ಹೆಚ್ಚು ಸ್ವಾತಂತ್ರ್ಯ ಇದ್ದಂತೆ ಭಾಸವಾಗಬಹುದು. ಪ್ರಖ್ಯಾತ ಐತಿಹಾಸಿಕ ಕಾದಂಬರಿಕಾರರಾದ ತರಾಸು ಅವರು “ನನಗೆ ಆಧಾರವಾಗಿ ದೊರೆತ ಮೂಲ ಸಾಮಗ್ರಿ ಬಹು ಅಲ್ಪ. ಅಚ್ಚಿನಲ್ಲಿ ಸುಮಾರು ಅರ್ಧ ಪುಟವಾಗುವಷ್ಟು ಮಾತ್ರ. ಎಂತಲೇ ಅಗತ್ಯವಾದೆಡೆಗಳಲ್ಲೆಲ್ಲಾ ಕಲ್ಪನೆಯನ್ನು ಧಾರಾಳವಾಗಿ ಬೆರೆಸಿದ್ದೇನೆ” (ರಾಜಶೇಖರಪ್ಪ ಬಿ.; ೨೦೦೧; ಪು. ೩) ಎನ್ನುತ್ತಾರೆ. ಜನತೆಯಲ್ಲಿ ದೇಶಾಭಿಮಾನವನ್ನು ಉಕ್ಕಿಸಬೇಕಾದರೆ ಚಾರಿತ್ರಿಕ ಮಹಾಪುರುಷರ ರೋಚಕ ಸಾಹಸಗಳನ್ನು ಮನಮುಟ್ಟುವಂತೆ ಹೇಳಬೇಕು ಎಂಬ ತತ್ವವನ್ನು ಅಂದಿನ ಕವಿಗಳು ಮನಗಂಡಿದ್ದರು. “ದೇಶಭಕ್ತಿ, ನಾಡುನುಡಿಯ ಬಗ್ಗೆ ಗೌರವ ನಾಡಿನ ಸ್ವಾತಂತ್ರ್ಯದ ಭಾವವನ್ನು ಜನರಲ್ಲಿ ತುಂಬಲು, ಜಾಗೃತಗೊಳಿಸಲು ಇತಿಹಾಸದ ವಸ್ತುವನ್ನು ಆಧರಿಸಿ ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರದ ಸಾಮಾಜಿಕ ಸಂದರ್ಭದಲ್ಲಿ ರಾಷ್ಟ್ರೀಯ ಮತ್ತು ಜೀವನ ಮೌಲ್ಯಗಳ ಕೊರತೆಯನ್ನು ಮನಗಂಡ ಲೇಖಕರು ಪುನಃ ಆ ಮೌಲ್ಯಗಳನ್ನು ನೆನಪಿಸುವುದಕ್ಕಾಗಿ, ಉಳಿಸುವುದಕ್ಕಾಗಿ, ಇತಿಹಾಸವನ್ನು ಆಧರಿಸಿ ಐತಿಹಾಸಿಕ ಕಾದಂಬರಿಗಳನ್ನು ಬರೆದಿದ್ದಾರೆ” (ಪಂಡಿತಾರಾಧ್ಯ (ಸಂ); ೨೦೦೧; ಪು. ೩೦೬).

ಐತಿಹಾಸಿಕ ಕಾದಂಬರಿಗಳು ಇಂದು ಖಂಡಿತವಾಗಿ ಅಪ್ರಸ್ತುತವಲ್ಲ, ಎಂದಿಗಿಂತ ಅವುಗಳ ಅವಶ್ಯಕತೆ ಇಂದು ಅಧಿಕವಾಗಿದೆ. ತಮ್ಮದೇ ಮೂಲದಿಂದ ದೂರ ಹೋಗುತ್ತಿರುವ ಜನತೆಗೆ ಇಂದು ಇಂತಹ ಕಾದಂಬರಿಗಳಿಂದ ಸಿಗುವ ಸ್ಫೂರ್ತಿಯ ಅವಶ್ಯಕತೆ ಬಹಳ ಇದೆ. ಗತಕ್ಕೂ,

ವರ್ತಮಾನಕ್ಕೂ ಸೇತುವೆಯಂತಿದ್ದು ಭವಿಷ್ಯವನ್ನು ರೂಪಿಸಲು ಸಹಾಯಕವಾಗುವ ಇಂತಹ ಕಾದಂಬರಿಗಳು ನಮಗಿಂದು ಬೇಕಾಗಿದೆ.

ಐತಿಹಾಸಿಕ ಕಾದಂಬರಿಗಳಿಗೆ ಒಂದು ಖಚಿತ ಸ್ವರೂಪವನ್ನು ದೊರಕಿಸಿಕೊಟ್ಟ ಕೀರ್ತಿ ಆಂಗ್ಲ ಸಾಹಿತ್ಯದ ಐತಿಹಾಸಿಕ ಕಾದಂಬರಿಯ ಜನಕನೆಂಬ ಹೆಸರನ್ನು ಪಡೆದ 'ಸರ್ ವಾಲ್ಟರ್ ಸ್ಕಾಟ್' ಅವರಿಗೆ ಸಲ್ಲುತ್ತದೆ. 'ವೇವರ್ಲಿ' ಎಂಬುದು ಆತನ ಮೊಟ್ಟಮೊದಲ ಐತಿಹಾಸಿಕ ಕಾದಂಬರಿ. ಇದು ರಮ್ಯ ಐತಿಹಾಸಿಕ ಕಾದಂಬರಿಯ ಸಂಪ್ರದಾಯಕ್ಕೆ ಭದ್ರ ಬುನಾದಿಯಾಯಿತು. ಐತಿಹಾಸಿಕ ಘಟನೆಗಳನ್ನು ಮಾನವೀಯತೆಯ ದೃಷ್ಟಿಯಿಂದ ನೋಡಿ ಅದನ್ನು ಅತ್ಯಂತ ಜೀವಂತವಾಗಿ ಮರುಸೃಷ್ಟಿಸಿದ ಕೀರ್ತಿ ವಾಲ್ಟರ್‌ಸ್ಕಾಟ್ ಇವರಿಗೆ ಸಲ್ಲುತ್ತದೆ. ಇವರ ಕಾದಂಬರಿಗಳಲ್ಲಿ ಪ್ರಮುಖವಾದವುಗಳೆಂದರೆ 'ಬಲ್ಪ್ ಮಾರ್‍ವಾಲಿಟಿ' ಇದು ೧೭ನೇ ಶತಮಾನದ ಉತ್ತರಕಾಲಕ್ಕೆ ಸಂಬಂಧಿಸಿದೆ. ರಾಬರಾಯ (೧೮೧೮) ಮನೋಹರವಾದ ಪ್ರೇಮ ಮತ್ತು ಸಾಹಸಗಳ ಕಾದಂಬರಿ ೧೮೧೯ರಲ್ಲಿ 'ಐವಾನ್‌ಹೋ' ಪ್ರಕಟವಾಯಿತು. 'ದಿ ಮೊನಾಸ್ಟರಿ' (೧೮೨೦), 'ಕೆನಿಲ್‌ವರ್ತ ದಿ ಪೈರೇಟ್' (೧೮೨೧), 'ದಿ ಫಾರ್ಚ್ಯೂನ್ ಆಫ್ ನೈಪಲ್' (೧೮೨೨), 'ಕ್ವೆಂಟಿನ್ ಡರ್ವಾರ್ಡ್' (೧೮೨೩) ಮೊದಲಾದ ಕೃತಿಗಳನ್ನು ಸ್ಕಾಟ್ ಬರೆದಿದ್ದಾನೆ" (ಕೃಷ್ಣಯ್ಯ ಎಂ.ಎಚ್.; ೧೯೭೧; ಪು. ३೦-३४).

ಸ್ಕಾಟನ ನಂತರ ಅತ್ಯಂತ ಪರಿಣಾಮಕಾರಿಯಾಗಿ ಐತಿಹಾಸಿಕ ಕಾದಂಬರಿ ರಚಿಸಿದವರಲ್ಲಿ 'ಚಾರ್ಲ್ಸ್ ಡಿಕೆನ್ಸ್' ಪ್ರಮುಖನಾಗಿದ್ದಾನೆ. ಐತಿಹಾಸಿಕ ಕಾದಂಬರಿಯ ವಿಕಾಸದಲ್ಲಿ ಇವನ ಕೃತಿಗಳು ಮೈಲಿಗಲ್ಲಾಗಿವೆ. ಇವನ ಬಾರ್ನ್‌ಬಿರಡ್ಜ್ (೧೮೧೪) ರಹಸ್ಯಮಯ ಅಪರಾಧದ ಕಥೆಯೊಂದಿಗೆ ಗಾರ್ಡನ್‌ಡೊಂಬಿಯ ಪ್ರೇಮಕಥೆ ಮೂಡಿದೆ. ಇವನ ಇನ್ನೊಂದು ಕೃತಿ 'ಎ ಟೇಲ್ ಆಫ್ ಟೂಸಿಟೀಸ್'(೮೫೯) ಫ್ರಾನ್ಸಿನ ಕ್ರಾಂತಿಯ ಐತಿಹಾಸಿಕ ಘಟನೆಯನ್ನು ತನ್ನ ಕೃತಿಗೆ ವಸ್ತುವನ್ನಾಗಿಸಿ ಈ ಕಾದಂಬರಿಯನ್ನು ಬರೆದಿದ್ದಾನೆ. ಚಾರ್ಲ್ಸ್ ಡಿಕೆನ್ಸ್ ಸಮಕಾಲೀನ ವ್ಯಕ್ತಿಯಾದ 'ಥ್ಯಾಕರೆ' ಐತಿಹಾಸಿಕ ಕಾದಂಬರಿಯ ರಚನೆಯಲ್ಲಿ ವೈಶಿಷ್ಟ್ಯವನ್ನು ತೋರಿಸಿದಂತಹ ಲೇಖಕನಾಗಿದ್ದಾನೆ. "ಪ್ರಥಮ ಬಾರಿಗೆ ಐತಿಹಾಸಿಕ ವಿಷಯಗಳನ್ನು, ವಿವರಗಳನ್ನು ಅತ್ಯಂತ ಎಚ್ಚರಿಕೆಯಿಂದ ಕ್ರಮಬದ್ಧವಾಗಿ ಜೋಡಿಸಿ ಐತಿಹಾಸಿಕ ಕಾದಂಬರಿ ರಚಿಸುವುದನ್ನು ರೂಢಿಗೆ ತಂದನು" (ಅದೇ; ಪು. ३೨). ೧೮೫೨ರಲ್ಲಿ 'ಎಸ್ಮಂಟ್' ಎಂಬ ಕೃತಿಯನ್ನು ರಚಿಸಿದ. ಇವನ ಕೃತಿಗಳಲ್ಲಿ ಶ್ರೇಷ್ಠವಾದುದು ಸ್ಟೂ ಅರ್ಡರಿಗೆ ನಿಷ್ಠರಾದ ಕ್ಯಾಥೋಲಿಕ್ ಸಂಸಾರವೊಂದರ ಕಥೆ. ಸಮಕಾಲೀನ ರಾಜಕೀಯ ಮತ್ತು ಮತೀಯ ಅಭಿಮಾನದ ಹಿನ್ನೆಲೆಯಲ್ಲಿ ಚಿತ್ರಿತವಾಗಿದೆ. ಚಾರ್ಲ್ಸ್ ಕಿಂಗಸ್ಲಿ ಮತ್ತು ಚಾರ್ಲ್ಸ್ ಪ್ರೀಚ್‌ಕಿಂಗಸ್ಲಿ ಇವರು ಸಹ ಐತಿಹಾಸಿಕ ಕಾದಂಬರಿಗೆ ಹೊಸ ರೂಪವನ್ನು ಕೊಟ್ಟವರು.

ಈ ರೀತಿ ಇಂಗ್ಲೀಷ್‌ನಲ್ಲಿ ಮೂಡಿಬಂದ ಐತಿಹಾಸಿಕ ಕಾದಂಬರಿಯು ಯೂರೋಪಿನ ಎಲ್ಲಾ ಭಾಷಾ ಸಾಹಿತ್ಯದ ಮೇಲೂ ಪ್ರಭಾವ ಬೀರಿತು. ಅಲೆಗ್ಸಾಂಡರ್ ಡೊಮಾ ಮತ್ತು ಸ್ಕಾಟ್‌ರಂತಹ ಕಾದಂಬರಿಕಾರರ ದಟ್ಟ ಪ್ರಭಾವ ಭಾರತೀಯ ಕಾದಂಬರಿ ಸಾಹಿತ್ಯದ ಮೇಲೂ

ಆಯಿತು. "ಬಂಗಾಲದಲ್ಲಿ ಬಂಕಿಮಚಂದ್ರ ಮತ್ತು ಮರಾಠಿಯಲ್ಲಿ ಹರಿನಾರಾಯಣ ಆಪ್ಟೆಯವರು ಐತಿಹಾಸಿಕ ಕಾದಂಬರಿಗಳನ್ನು ರಚಿಸಿ ತಮ್ಮ ಮನ್ವಂತರವನ್ನೇ ಆರಂಭಿಸಿದರಷ್ಟೇ ಅಲ್ಲ ಕನ್ನಡ ಕಾದಂಬರಿಗೂ ಪ್ರವರ್ತಕರಾದರು" (ಕೀರ್ತಿನಾಥ ಕುರ್ತಕೋಟಿ; ೧೯೮೩; ಪು. ೧೮೩).

ಕನ್ನಡದ ಮೇಲೆ ಆಂಗ್ಲ ಸಾಹಿತ್ಯದ ಪ್ರಭಾವ ಬೀಳುವ ಮೊದಲೇ ಕಾದಂಬರಿ ಎನ್ನಬಹುದಾದ ಮೂರು ಕೃತಿಗಳು ದೊರೆತಿವೆ. ಅವುಗಳೆಂದರೆ "ಯಾದವನ 'ಕಲಾವತಿ ಪರಿಣಯ' (೧೮೧೫) ಮುಮ್ಮಡಿ ಕೃಷ್ಣರಾಜನ "ಸೌಗಂಧಿಕಾ ಪರಿಣಯ" (೧೮೨೧) ಕೆಂಪುನಾರಾಯಣ 'ಮುದ್ರಾ ಮಂಜೂಷ(೧೮೨೩) ಸಂಸ್ಕೃತದ 'ಮುದ್ರಾರಾಕ್ಷಸ' ನಾಟಕವನ್ನು ಆಧರಿಸಿ ಬರೆದಂಥ ಕೆಂಪು ನಾರಾಯಣನ ಮುದ್ರಾಮಂಜೂಷದಲ್ಲಿಯ ಕಥನ ರೀತಿ ಕಾದಂಬರಿಗೆ ಹೆಚ್ಚು ಸಮೀಪವಾಗಿದೆ. ಕಾದಂಬರಿಯನ್ನು ಬರೆಯದಿದ್ದರೂ ಅದರ ಬರವಣಿಗೆಗೆ ಕನ್ನಡ ಗದ್ಯವನ್ನು ಹದಗೊಳಿಸಿದ ಶ್ರೇಯಸ್ಸು ಕೆಂಪುನಾರಾಯಣನಿಗೆ ಸಲ್ಲುತ್ತದೆ" (ಅದೇ; ಪು. ೧೮೩) ಎನ್ನುತ್ತಾರೆ ಕುರ್ತಕೋಟಿಯವರು. "ಕೆಂಪುನಾರಾಯಣನ ಮುದ್ರಾಮಂಜೂಷವನ್ನು ನೋಡಿದರೆ ಹೊಸಗನ್ನಡ ಗದ್ಯದ ನಸುಕು ಮೂಡಿತೆಂದು ನಿಚ್ಚಳವಾಗಿ ತೋರುತ್ತದೆ"(ಮುಗಳಿ ರಂ.ಶ್ರೀ; ೧೯೬೩; ಪು. ೪೦೬). ಎಂದು ರಂ.ಶ್ರೀ ಮುಗಳಿಯವರು ಹೇಳುತ್ತಾರೆ.

"ಮುದ್ರಾಮಂಜೂಷವು ನಿಜವಾಗಿ ಕನ್ನಡದ ಮೊದಲನೆಯ ಕಾದಂಬರಿ. ಇಂಗ್ಲೀಷ್‌ನ ಸಂಪರ್ಕವು ಕನ್ನಡಕ್ಕೆ ತಟ್ಟದಿದ್ದಾಗಲೇ ಹುಟ್ಟಿತು" (ಶಾಮರಾಯ ತ.ಸು.; ೨೦೦೬; ಪು. ೨೧೭). ಎಂದು ಗೋವಿಂದ ಪೈ, ಕೃಷ್ಣಮೂರ್ತಿ ಮತ್ತು ಎಲ್.ಎಸ್. ಶೇಷಗಿರಿರಾವ್ ಅವರು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಅಂದಿನಿಂದ ಇಂದಿನವರೆಗೆ ಕಾದಂಬರಿ ಪ್ರಕಾರದ ಬೆಳವಣಿಗೆಯನ್ನು ಮೂರು ಹಂತಗಳಲ್ಲಿ ಗುರುತಿಸಿದ್ದಾರೆ.

೧. **ಆರಂಭ ಕಾಲ:-** ೧೯ನೇ ಶತಮಾನದ ಉತ್ತರಾರ್ಧದಿಂದ ೨೦ನೇ ಶತಮಾನದ ಕಾಲು ಶತಕದವರೆಗೆ.

೨. **ನಿರ್ಮಾಣ ಶೀಲಯುಗ:-** ಸುಮಾರು ೧೯೨೫ರಿಂದ ಸ್ವಾತಂತ್ರ್ಯೋದಯವರೆಗೆ.

೩. **ಸ್ವಾತಂತ್ರ್ಯೋತ್ತರ ಯುಗ:-** ಸ್ವಾತಂತ್ರ್ಯೋದಯ ಕಾಲದಿಂದ ಪ್ರಸ್ತುತದವರೆಗೆ.

ಆರಂಭ ಕಾಲಾವಧಿಯಲ್ಲಿ ರಚಿತವಾದ ಭಾಷಾಂತರ ಮತ್ತು ಸ್ವತಂತ್ರ ಕಾದಂಬರಿಗಳ ಕ್ಷೇತ್ರ ವಿಶಾಲವಾಗಿದೆ. ಅದಕ್ಕಾಗಿ ಆರಂಭ ಕಾಲದಲ್ಲಿ ಕಾದಂಬರಿಗಳನ್ನು ಸ್ವತಂತ್ರ ಕಾದಂಬರಿಗಳು ಮತ್ತು ಭಾಷಾಂತರ ಕಾದಂಬರಿಗಳು ಎಂದು ವಿಂಗಡಿಸುವುದು ಹೆಚ್ಚು ಉಚಿತವೆನಿಸುತ್ತದೆ.

**ಭಾಷಾಂತರ ಕಾದಂಬರಿ ಕಾಲ**

ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ಸ್ವತಂತ್ರ ಕೃತಿಗಳಿಗಿಂತ ಅನುವಾದಗಳ ಮೂಲಕವೇ ಐತಿಹಾಸಿಕ ಕಾದಂಬರಿಗಳನ್ನು ಮೊದಲು ಬಳಕೆಗೆ ತಂದರು. ೧೯ನೇ ಶತಮಾನವನ್ನು ಅನುವಾದಗಳ ಅಥವಾ ರೂಪಾಂತರಗಳ ಯುಗವೆನ್ನಬಹುದು. ವೆಂಕಟಾಚಾರ್ಯರು, ಗಳಗನಾಥರು ಬಂಗಾಲಿ, ಮರಾಠಿ ಭಾಷೆಗಳಿಂದ ಕನ್ನಡಕ್ಕೆ ಅನುವಾದ ಮಾಡಿ ಮುಂದಿನ ಕಾದಂಬರಿ

ಯುಗದ ಹೆಬ್ಬಾಗಿಲನ್ನು ತೆರೆದರು. ಬಿ. ವೆಂಕಟಾಚಾರ್ಯರು ಬಂಕಿಮಚಂದ್ರ ಚಟ್ಟೋಪಾಧ್ಯಾಯ ಮುಂತಾದ ಪ್ರಸಿದ್ಧ ಬಂಗಾಳಿ ಸಾಹಿತಿಗಳ ಕಾದಂಬರಿಗಳನ್ನು ಅನುವಾದ ಮಾಡಿದರು. ಗಳಗನಾಥರು ಮರಾಠಿ ಸಾಹಿತಿಗಳಾದ ಹರಿನಾರಾಯಣ ಆಪ್ಟೆಯವರ ಕಾದಂಬರಿಗಳನ್ನು ಭಾಷಾಂತರಿಸಿದರು. ಇವರ ಐತಿಹಾಸಿಕ ಕಾದಂಬರಿಗಳು ಸಾಮಾನ್ಯ ಓದುಗನ ಆಸಕ್ತಿಗೆ ಹೊಸ ಆಯಾಮವನ್ನು ಒದಗಿಸಿದವು.

ಭಾಷಾಂತರದ ಮಹತ್ತ್ವವನ್ನು ಎ.ಆರ್. ಕೃಷ್ಣಶಾಸ್ತ್ರಿಗಳು ಈ ರೀತಿ ಹೇಳಿದ್ದಾರೆ. "ಒಳ್ಳೆಯ ಭಾಷಾಂತರಕ್ಕೆ ಮೂಲದಷ್ಟೇ ಬೆಲೆ ಇರುತ್ತದೆ. ಅದನ್ನು ಓದುವುದು ಸುಲಭ, ಬರೆಯುವುದು ಕಷ್ಟ. ಉದ್ಗ್ರಂಥಗಳನ್ನು ಮೂಲದಲ್ಲಿಯೇ ಎಲ್ಲರೂ ಓದುವುದು ಅಸಾಧ್ಯ. ಆದ್ದರಿಂದ ಅವುಗಳನ್ನು ಚೆನ್ನಾಗಿ ಭಾಷಾಂತರ ಮಾಡಿಕೊಡುವ ವಿದ್ವಾಂಸರ ಉಪಕಾರ ದೊಡ್ಡದು. ಭಾಷಾಂತರವು ತೃಪ್ತಿಕರವಾಗಿದ್ದಲ್ಲಿ ಮೂಲವನ್ನು ನಾವು ಓದಲಿಲ್ಲವಲ್ಲಾ ಎಂದು ಚಿಂತಿಸುವ ಕಾರಣವಿಲ್ಲ" (ಕೃಷ್ಣಶಾಸ್ತ್ರಿ ಎ.ಆರ್.; ಭಾಷಣಗಳು ಮತ್ತು ಲೇಖನಗಳು; ಪು. ೨೩) ಎನ್ನುತ್ತಾರೆ.

ಜನಸಾಮಾನ್ಯರ ಮನಸ್ಸನ್ನು ಭಾಷಾ ಸಾಹಿತ್ಯದ ಕಡೆ ಸೆಳೆಯಲು ಕಾದಂಬರಿಗಳ ಮೂಲಕವೇ ಸಾಧ್ಯವೆಂದು ಮನದಟ್ಟಾದ ಮೇಲೆ ಬಂಕಿಮಚಂದ್ರರ ಕಾದಂಬರಿಗಳನ್ನು ಕನ್ನಡಕ್ಕೆ ಅನುವಾದಿಸಿದರು. ಬಂಕಿಮರ ದುರ್ಗೇಶ ನಂದಿನಿಯನ್ನು ೧೮೮೫ರಲ್ಲಿ ವೆಂಕಟಾಚಾರ್ಯರು ಭಾಷಾಂತರಿಸಿದ ಮೊದಲ ಕಾದಂಬರಿ. ಇದು ಮೊಗಲರು ಪಠಾಣರನ್ನು ದಮನ ಮಾಡಿದ ಸಂಗತಿಯನ್ನು ಚಿತ್ರಿಸುತ್ತದೆ. ಬಂಕಿಮಚಂದ್ರರ ಕಾದಂಬರಿಗಳು ವೆಂಕಟಾಚಾರ್ಯರಿಂದ ಅನುವಾದಗೊಂಡು ಕನ್ನಡದಲ್ಲಿ ಹೆಚ್ಚು ಪ್ರಾಮುಖ್ಯತೆಯನ್ನು ಮತ್ತು ಪ್ರಚಾರವನ್ನು ಪಡೆದವು. ಅವುಗಳಲ್ಲಿ 'ಆನಂದಮಠ', 'ರಾಜಸಿಂಹ', 'ದೇವಿಚೌದುರಾಣಿ', 'ಸೀತಾರಾಮ', 'ವಿಷವೃಕ್ಷ', 'ಕೋಹಿನೂರ', 'ನವಾಬ', 'ನಂದಿನಿ' ಮೊದಲಾದವುಗಳು ತುಂಬ ಜನಪ್ರಿಯವಾಗಿವೆ. ಕನ್ನಡಕ್ಕೆ ಕೀರ್ತಿ ತಂದ ಬಿ. ವೆಂಕಟಾಚಾರ್ಯರು ವೈವಿಧ್ಯಮಯವಾದ ಕಾದಂಬರಿಗಳನ್ನು ಭಾಷಾಂತರಿಸಿದ್ದಾರೆ.

ಗಳಗನಾಥರು ಮರಾಠಿ ಭಾಷೆಯ ಒಟ್ಟು ೧೫ ಕಾದಂಬರಿಗಳನ್ನು ಅನುವಾದಿಸಿದರು. ಇವರ ಒಟ್ಟು ಕಾದಂಬರಿಗಳನ್ನು ಈ ಕೆಳಗಿನಂತೆ ವಿಭಜಿಸಬಹುದು.

೧. ಮರಾಠರ ಇತಿಹಾಸಕ್ಕೆ ಸಂಬಂಧಿಸಿದವು.

೨. ರಜಪೂತರ ಇತಿಹಾಸಕ್ಕೆ ಸಂಬಂಧಿಸಿದವು.

೩. ಕನ್ನಡಿಗರ ಇತಿಹಾಸಕ್ಕೆ ಸಂಬಂಧಿಸಿದವು.

೪. ಇತರ ಕಾದಂಬರಿಗಳು.

ಅಪ್ಟೆಯವರ 'ಗಡ ಆಲಾಪಣ ಸಿಂಹಗೇಲಾ' ಎಂಬ ಕಾದಂಬರಿಯನ್ನು ಗಳಗನಾಥರು 'ಕಮಲ ಕುಮಾರಿ'ಯಾಗಿ ರೂಪಾಂತರಿಸಿದರು. ಇದು ಔರಂಗಜೇಬನ ಕಾಲಕ್ಕೆ ಸೇರಿದ ಕಾದಂಬರಿ. ಬೀರಸಿಂಹನ ಕೊಲೆಯಾದ ನಂತರ ಅವನ ಪತ್ನಿ ಕಮಲಕುಮಾರಿಯನ್ನು ಸೆರೆಹಿಡಿದ ಉದಯಬಾನು, ಔರಂಗಜೇಬನ ಒಪ್ಪಿಗೆಯಿಂದ ಮದುವೆಯಾಗಲು ನಿಶ್ಚಯಿಸಿದಾಗ

ಅವಳನ್ನು ಶಿವಾಜಿ, ತಾನಾಜಿ, ರಾಯಾಜಿ, ಜಗತಿಂಹರು ಉದಯಬಾನುವಿನ ಸೆರೆಯಿಂದ ಬಿಡಿಸುತ್ತಾರೆ. ಶಿವಾಜಿ ಮಹಾರಾಜರಿಗಾಗಿ ಪ್ರಾಣವನ್ನು ಲೆಕ್ಕಿಸದೇ ಹೋರಾಡಿ ಸಿಂಹಗಡವನ್ನು ವಶಪಡಿಸಿಕೊಂಡ ತಾನಾಜಿ ವಾಚಕರ ಸ್ಮೃತಿಪಟಲದಿಂದ ಅಳಿಸಿ ಹೋಗದ ವ್ಯಕ್ತಿಯಾಗಿ ಚಿತ್ರಿತಗೊಂಡಿದ್ದಾನೆ. ಈ ಕಾದಂಬರಿಯ ಯಶಸ್ವಿಗೆ ಕಾದಂಬರಿಯ ಕಥೆಯೂ ಕಾರಣವಾಯಿತು.

ಅಪ್ಟೆಯವರ ಕಾದಂಬರಿಗಳಲ್ಲಿ ಗಳಗನಾಥರು ಅನುವಾದಿಸಿದ ಕೃತಿಗಳು 'ವೈಭವ', 'ಈಶ್ವರೀ ಸೂತ್ರ', 'ಕ್ಷಾತ್ರತೇಜ', 'ಕನ್ನಡಿಗರ ಕರ್ಮಕಥೆ', 'ಮರಾಠ ಅಭ್ಯುದಯ', 'ಶಿವ ಪ್ರಭುವಿನ ಪುಣ್ಯ', 'ಛತ್ರಪತಿ', 'ಗೃಹಕಲಹ' ಮೊದಲಾದವುಗಳು. ಗಳಗನಾಥರು ತಮ್ಮ ಈಶ್ವರಿ ಸೂತ್ರ ಕಾದಂಬರಿಯಲ್ಲಿ ಶಿವಾಜಿಯ ರಾಜ್ಯ ಸ್ಥಾಪನೆಗೆ ಆತನ ಸಾಮರ್ಥ್ಯಕ್ಕಿಂತ ಈಶ್ವರಿ ಕೃಪೆಯೇ ಪ್ರಮುಖ; ಈಶ್ವರಿ ಸೂತ್ರದಿಂದಲೇ ಈ ಜಗತ್ತಿನ ಸ್ಥಿತ್ಯಂತರ ಆಗುತ್ತದೆಂಬ ಮಾತು ಸುಳ್ಳಲ್ಲ ಎಂದು ಹೆಸರಿಗೆ ಹೊಂದುವಂತೆ ನಿರೂಪಣೆ ಮಾಡಿದ್ದಾರೆ.

ಕ್ಷಾತ್ರ ತೇಜಸ್ವಿಗಳಾದ ರಜಪೂತರು ವೀರರು, ಧೀರರಾಗಿದ್ದು ತಮ್ಮ ಧರ್ಮ-ದೇಶಗಳಿಗಾಗಿ ಮತ್ತು ಸ್ತ್ರೀಯರ ಪಾತಿವ್ರತ್ಯ ಸಂರಕ್ಷಣೆಗಾಗಿ ಎಂಥ ಬಲಿದಾನಕ್ಕೂ ಸಿದ್ಧರು. ಜೀವನದುದ್ಧಕ್ಕೂ ಹೋರಾಡಿದರೇ ಹೊರತು ಮುಸಲ್ಮಾನ ಅರಸರಿಗೆ ಎಂದು ತಲೆಬಾಗಲಿಲ್ಲ. 'ಕ್ಷಾತ್ರತೇಜ', 'ತಿಲೋತ್ತಮ ಅಥವಾ ಸರಸಪ್ರೇಮ', 'ಸತ್ವಸಾರ', 'ಧಾರ್ಮಿಕ ತೇಜ', 'ರಾಣಾ ರಾಜಸಿಂಹ', 'ಸಂಸಾರ ಸುಖ' ಮೊದಲಾದ ಕಾದಂಬರಿಗಳು ರಜಪೂತರ ಇತಿಹಾಸಕ್ಕೆ ಸಂಬಂಧಿಸಿದವು.

'ಕನ್ನಡಿಗರ ಕರ್ಮಕಥೆ' ಕನ್ನಡಿಗರ ಇತಿಹಾಸ, ವಿಜಯನಗರದ ಪತನವನ್ನು ಕುರಿತು ರಚಿತವಾದ ಕಾದಂಬರಿಯಾಗಿದೆ. 'ಮಾಧವ ಕರುಣಾವಿಲಾಸ', 'ಕುಮುದಿನಿ', ದುರ್ಗದ ಬಿಚ್ಚುಗತ್ತಿ ಇವು ಕನ್ನಡಿಗರ ಇತಿಹಾಸಕ್ಕೆ ಸಂಬಂಧಪಟ್ಟ ಕಾದಂಬರಿಗಳಾಗಿವೆ. ಬಿ. ವೆಂಕಟಾಚಾರ್ಯ ಮತ್ತು ಗಳಗನಾಥ ಇಬ್ಬರಿಗೂ ಕಾದಂಬರಿಯ ಮೂಲಕ ಜನಮನದಲ್ಲಿ ಎಚ್ಚರ ಮೂಡಿಸುವುದೇ ಅವರು ಆಯ್ದುಕೊಂಡ ಕೃತಿಗಳ ಗುರಿಯಾಗಿತ್ತು. ನೀತಿನ್ಯಾಯ, ಸದಾಚಾರ, ದೇಶಪ್ರೇಮ ಪರಾಕ್ರಮಗಳಿಗೆಂದೇ ಕಾದಂಬರಿಗಳನ್ನು ಅನುವಾದಿಸಿದವರು ಇವರು.

### ಸ್ವತಂತ್ರ ಚಾರಿತ್ರಿಕ ಕಾದಂಬರಿಗಳು

ಅನ್ಯ ಭಾಷೆಯ ಅನುವಾದಗಳು ಕನ್ನಡ ಕಾದಂಬರಿಯ ಮೊದಲ ಘಟ್ಟದಲ್ಲಿ ತಲೆದೋರಿದರೆ ಎರಡನೇ ಘಟ್ಟದಲ್ಲಿ ಸ್ವತಂತ್ರ ಐತಿಹಾಸಿಕ ಕಾದಂಬರಿಗಳು ಹುಟ್ಟಿಕೊಂಡವು. ೧೮೯೨ರಲ್ಲಿ ಪ್ರಕಟವಾದ ಲಕ್ಷ್ಮಣರಾವ್ ಗದಗಕ ಅವರ ಕಾಲ್ಪನಿಕ ಕಾದಂಬರಿಯಾದ 'ಸೂರ್ಯಕಾಂತ' ಕನ್ನಡದ ಮೊದಲ ಸ್ವತಂತ್ರ ಕಾದಂಬರಿ ಎಂಬ ಅಭಿಪ್ರಾಯವಿದೆ. ೧೮೯೮ರಲ್ಲಿ ರಚಿತವಾದ ಗಳಗನಾಥರ 'ಪ್ರಬುದ್ಧ ಪದ್ಮಯನೆ' ಪ್ರಥಮ ಮತ್ತು ಸ್ವತಂತ್ರ ಐತಿಹಾಸಿಕ ಕಾದಂಬರಿಯಾಗಿದೆ. ಕೃಷ್ಣಮೂರ್ತಿ ಕಿತ್ತೂರ ಅವರು "ಬಿ. ವೆಂಕಟಾಚಾರ್ಯರ ಮತ್ತು ಗಳಗನಾಥರ ಅನುವಾದಿತ ಗಳಿಂದಲೇ ನಿಜವಾದ ಕನ್ನಡ ಕಾದಂಬರಿ ಆರಂಭವಾಯಿತು. ಅದಕ್ಕಿಂತ ಮೊದಲು ಕಾದಂಬರಿಯ ಹೆಸರಿನಿಂದ ಬಂದವುಗಳು ಕೇವಲ ಕಾಲ್ಪನಿಕ ಅದ್ಭುತ ರಮ್ಯ, ಗದ್ಯ ಕಥೆಗಳಾಗಿದ್ದುವೆಂದರೆ ತಪ್ಪಾಗಲಾರದು. ೧೯೧೩ರಲ್ಲಿ ಪ್ರಕಟವಾದ ಗಳಗನಾಥರ ಕುಮುದಿನಿ ಕನ್ನಡದ ಪ್ರಥಮ

ಸ್ವತಂತ್ರ ಐತಿಹಾಸಿಕ ಕಾದಂಬರಿ ಎಂದು ಸ್ಪಷ್ಟಪಡಿಸುತ್ತಾರೆ. ಗುರುನಾಥ ಜೋಶಿಯವರೂ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ" (ಗುರುನಾಥ ಜೋಶಿ; ೧೯೫೫; ಪು. ೧೬).

ಕನ್ನಡದಲ್ಲಿ ಬಂದ ಬಹುಸಂಖ್ಯೆಯ ಐತಿಹಾಸಿಕ ಕಾದಂಬರಿಗಳ ಉದ್ದೇಶ ಭಾರತೀಯರ ಮತ್ತು ಕನ್ನಡಿಗರ ಗತವೈಭವವನ್ನು ಪರಿಚಯ ಮಾಡಿಕೊಡುವುದು. ನಮ್ಮ ನಾಡನ್ನು ಕಾಲಕಾಲಕ್ಕೆ ಆಳಿದ ಅರಸರ ಜೀವನವನ್ನೇ ಕೇಂದ್ರವಾಗಿಟ್ಟುಕೊಂಡು ಐತಿಹಾಸಿಕ ಕಾದಂಬರಿಗಳು ಸಾಕಷ್ಟು ರಚನೆಗೊಂಡಿವೆ. ಒಂದು ಸಾಮ್ರಾಜ್ಯದ ಉನ್ನತಿಗೆ ಕಾರಣರಾದ ಆದರ್ಶ ರಾಣಿಯರನ್ನು ಪ್ರಧಾನವಾಗಿಟ್ಟುಕೊಂಡು ಕೆಲವು ಕಾದಂಬರಿಗಳು ರಚನೆಗೊಂಡಿರುವುದು ಕಂಡುಬರುತ್ತದೆ. ಅಷ್ಟೇ ಅಲ್ಲದೇ ನಮ್ಮ ಸ್ವಾತಂತ್ರ್ಯ ಹೋರಾಟಗಾರರು ದೇಶಕ್ಕೆ ಸ್ವಾತಂತ್ರ್ಯ ಸಿಗುವ ಮುನ್ನ ಆದ ರಾಜಕೀಯ ಆಂದೋಲನವನ್ನು ಹಿನ್ನೆಲೆಯಾಗಿಟ್ಟುಕೊಂಡು ಬರೆದ ಐತಿಹಾಸಿಕ ಕಾದಂಬರಿಗಳು. ಇವುಗಳ ಜೊತೆಗೆ ಆಧ್ಯಾತ್ಮಿಕ ತೇಜಸ್ಸನ್ನು ಬೆಳಗಿದವರ ಕುರಿತು ಅನೇಕ ಕಾದಂಬರಿಗಳು ರಚನೆಗೊಂಡಿವೆ.

ದೇವುಡು ಅವರ 'ಮಯೂರ', ಕೆಬ್ಬಳ್ಳಿ ಪದ್ಮನಾಭ ವಿಶ್ವೇಶ್ವರ ಶಾಸ್ತ್ರೀಯವರ 'ಪ್ರಥಮ ಸಾಮ್ರಾಟ' ಹಾಗೂ ವೆಂಕಟಕೃಷ್ಣಯ್ಯ ರಾ.ಸೂ. ಇವರ ಲಾವಣ್ಯತಿಲೋತ್ತಮೆ ಕಾದಂಬರಿಗಳು ಕದಂಬ ಮನೆತನಕ್ಕೆ ಸಂಬಂಧಿಸಿದ ಐತಿಹಾಸಿಕ ಕಾದಂಬರಿಗಳಾಗಿವೆ. ದೇವುಡು ಅವರ 'ಮಯೂರ' ಸಾಕಷ್ಟು ಜನಪ್ರಿಯತೆಯನ್ನು ಗಳಿಸಿದೆ. ಕದಂಬ ಮನೆತನದ ಮಯೂರವರ್ಮನನ್ನು ನಾಯಕನನ್ನಾಗಿ ಮಾಡಿಕೊಂಡು ವೇದಾಧ್ಯಯನಕ್ಕಾಗಿ ಪಲ್ಲವ ರಾಜಧಾನಿಗೆ ಹೋದ ಮಯೂರವರ್ಮನು ಪಲ್ಲವರನ್ನು ಸೋಲಿಸಿ ಅರಸನಾದದ್ದು ಕಥಾವಸ್ತು. ಪಲ್ಲವ ಹಾಗೂ ಕದಂಬ ರಾಜ ವಂಶಗಳ ರಾಜಕೀಯದೊಂದಿಗೆ ಆ ಕಾಲದ ಜನಜೀವನದ ಸಜೀವ ವರ್ಣನೆ ಇಲ್ಲಿ ಕಂಡು ಬರುತ್ತದೆ. "ನಾಯಕ ಪ್ರತಿನಾಯಕರ ಕೌಶಲ್ಯಪೂರ್ಣವಾದ ತಂತ್ರಗಳೇ ಕತೆಯ ಜೀವಾಳ". ಒಟ್ಟಿನಲ್ಲಿ ದೇವುಡು ಅವರ 'ಮಯೂರ' ಅಪರಿಹಾರ್ಯವಾಗಿ ಹೆಚ್ಚು ಕಾಲ್ಪನಿಕವಾಗಿದ್ದರೂ ಅದ್ಭುತ ರಮ್ಯವಾಗಿದೆ" (ಮುಗಳಿ ರಂ.ಶ್ರೀ; ೧೯೬೩; ಪು. ೧೬) ಎಂದು ರಂ.ಶ್ರೀ ಮುಗಳಿ ಅವರು ಹೇಳಿದ್ದಾರೆ.

ಗಂಗರಾಜ ದುರ್ವಿನೀತ ಮಗನಾದ ಕಾಂತಾವಿನೀತ ಮುಷ್ಕರ ದೇವನನ್ನು ಕುರಿತು ಬಿ. ಪುಟ್ಟಸ್ವಾಮಯ್ಯನವರು 'ದ್ವಾಸುಪರ್ಣ', ಕಾದಂಬರಿಯನ್ನು ರಚಿಸಿದ್ದಾರೆ. ಈತನು "ಕ್ರಿ.ಶ. ೫೨೨-೫೪೨ರವರೆಗೆ ರಾಜ್ಯಭಾರ ಮಾಡಿದನು. ಈತನು ತನ್ನ ಆಳ್ವಿಕೆಯ ಮೊದಲ ಹತ್ತು ವರ್ಷ ಅತ್ಯಂತ ದಕ್ಷ ಆಡಳಿತಗಾರನಾಗಿ ಪ್ರಜಾಹಿತ ಕಾರ್ಯಗಳನ್ನು ಮಾಡುತ್ತ ಸಾಹಿತ್ಯ, ಸಂಗೀತ, ಕಲೆಗಳನ್ನು ಪೋಷಿಸುತ್ತ ಜನಾನುರಾಗವನ್ನು ಗಳಿಸಿದ್ದನು. ಮಾನವತಿಯ ಮೋಹಪಾಶಕ್ಕೆ ಸಿಲುಕಿದ ನಂತರ ತನ್ನ ರಾಜ್ಯದ ಆಡಳಿತ ಸೂತ್ರವನ್ನು ಮಾನವತಿಯ ಸಂಬಂಧಿಕರಿಗೆ ಒಪ್ಪಿಸಿ ಕೇವಲ ನಾಟ್ಯ, ಸಂಗೀತಗಳಲ್ಲಿ ಮುಳುಗಿದನು. ಮಾನವತಿಯ ಸಂಬಂಧಿಕರ ಆಳ್ವಿಕೆ ದಬ್ಬಾಳಿಕೆಯಾದಾಗ ಪ್ರಜೆಗಳು ರೊಚಿಗೆದ್ದು ಅವಳನ್ನು ಕೊಲೆಗೈಯಲು ಸಿದ್ಧರಾದರು. ಈ ವಿಷಯ ತಿಳಿದ ಮಾನವತಿ ಆತ್ಮಹತ್ಯೆ ಮಾಡಿಕೊಂಡಳು"(ಮೀನಾಕ್ಷಿ ಜಂಗಮನಿ; ೨೦೧೦; ಪು. ೪೦).

ಜಯಲಕ್ಷ್ಮೀದೇವಿ ಸಿ.ಎನ್. ಅವರು 'ಗಂಗರಸ ದುರ್ವಿನೀತ' ಕಾದಂಬರಿಯ ಪ್ರಸ್ತಾವನೆಯಲ್ಲಿ ಈ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. "ಕರ್ನಾಟಕ ರಾಜಮನೆತನಗಳ ಪೈಕಿ ತಲಕಾಡಿನ ಗಂಗರು ಅತ್ಯಂತ ದೀರ್ಘಕಾಲ ಆಳ್ವಿಕೆ ನಡೆಸಿದರು. ಕ್ರಿ.ಶ. ೩-೪ನೇ ಶತಮಾನದಿಂದ ೧೦-೧೧ನೇ ಶತಮಾನದವರೆಗೆ ಸುದೀರ್ಘವಾದ ಯಶಸ್ವೀ ಆಳ್ವಿಕೆ ಗಂಗರದು. ಗಂಗರ ವಿಷಯವಾಗಿ, ಗಂಗ ಪ್ರಭುಗಳಲ್ಲಿ ಅತ್ಯಂತ ಶ್ರೇಷ್ಠನಾದ ದುರ್ವಿನೀತನೆಂದು ಬಿರುದು ಪಡೆದ ಮಾಧವವರ್ಮ ಕೊಂಗಣಿವರ್ಮನ ವಿಷಯವಾಗಿ ಐತಿಹಾಸಿಕ ಕಾದಂಬರಿಯನ್ನು ರಚಿಸಲು ನನಗೆ ಪ್ರೇರಣೆ ದೊರೆತದ್ದು ನನ್ನ ಸುಯೋಗ. ಅವನದು ಬಹುಮುಖ ಪ್ರತಿಭೆ. ಶ್ರೇಷ್ಠ ರಾಜನಾಗಿ, ಶ್ರೇಷ್ಠ ವಿದ್ವಾಂಸನಾಗಿ, ಶ್ರೇಷ್ಠ ಕಲಾ ನಿಪುಣನಾಗಿ, ಎಲ್ಲಕ್ಕಿಂತಲೂ ಮಿಗಿಲಾಗಿ ಶ್ರೇಷ್ಠಯೋಧನಾಗಿ ಬಾಳಿದ ಅವನುದ ಶ್ರೀಮಂತವಾದ ಬಾಳು"(ಜಯಲಕ್ಷ್ಮಿದೇವಿ ಸಿ.ಎನ್.; ೧೯೮೦; ಪು. ಪ್ರಸ್ತಾವನೆ) ಎಂದಿದ್ದಾರೆ.

ನೃಪತುಂಗ, ಅತಿಶಯಧವಳ, ರಟ್ಟಮಾರ್ತಾಂಡ ಮುಂತಾದ ಬಿರುದಾಂಕಿತನಾದ ಅಮೋಘವರ್ಷನು ರಾಷ್ಟ್ರಕೂಟ ಸಾಮ್ರಾಜ್ಯದ ಪ್ರಮುಖ ಅರಸನಾಗಿದ್ದಾನೆ. ಸಾಹಿತ್ಯ ಮತ್ತು ಸಾಂಸ್ಕೃತಿಕ ಸಾಧನೆಗಳ ದೃಷ್ಟಿಯಿಂದ ಈತನ ಕಾಲವು ಅಮೋಘವಾದುದು. ಕಲಿಯೂ, ಸ್ವತಃ ಶ್ರೇಷ್ಠ ಕವಿಯಾಗಿದ್ದ ಈತನು ಸಾಹಿತ್ಯದ ಪೋಷಕನೂ ಆಗಿದ್ದಾನೆ. 'ಪ್ರಶ್ನೋತ್ತರ ರತ್ನಮಾಲಾ' ಎಂಬ ಸಂಸ್ಕೃತ ಕೃತಿಯನ್ನು ರಚಿಸಿದ್ದಾರೆ. ಮುಳಿಯ ತಿಮ್ಮಪ್ಪಯ್ಯನವರ 'ವೀರಭಂಕೆಯ' ರಾಷ್ಟ್ರಕೂಟ ಚಕ್ರವರ್ತಿ ಅಮೋಘವರ್ಷ ನೃಪತುಂಗನ ಸೇನಾನಿಯಾಗಿದ್ದ ಬಂಕೆಯನ ಸಾಹಸ ಕುರಿತ ಐತಿಹಾಸಿಕ ಕಾದಂಬರಿಯಾಗಿದೆ. ರಾಷ್ಟ್ರಕೂಟರಲ್ಲಿ ಪ್ರಸಿದ್ಧ ದೊರೆಯಾದ ನೃಪತುಂಗನ ಬಹುಮುಖ ವ್ಯಕ್ತಿತ್ವವನ್ನು ವಸ್ತುವನ್ನಾಗಿಸಿಕೊಂಡು ತ.ರಾ.ಸು. ಅವರು 'ನೃಪತುಂಗ' ಎಂಬ ಕಾದಂಬರಿಯನ್ನು ರಚಿಸಿದ್ದಾರೆ.

ತ.ರಾ.ಸು. ಅವರ 'ಶಿಲ್ಪಶ್ರೀ' ಚಾವುಂಡರಾಯನ ಜೀವನದ ಆಧಾರದ ಮೇಲೆ ರಚಿತವಾದ ಕಾದಂಬರಿ. ಕರ್ನಾಟಕ ಇತಿಹಾಸದಲ್ಲಿ ಚಾವುಂಡರಾಯನದೊಂದು ದೊಡ್ಡ ಹೆಸರು. ತನ್ನ ಕಲಿತನ, ಕಲಾಪ್ರೇಮ, ಸಾಹಿತ್ಯ ರಚನೆಯಿಂದ ಪ್ರಸಿದ್ಧನಾದದ್ದಲ್ಲದೆ, ಗಂಗರ ಮಂತ್ರಿ ಹಾಗೂ ಮಹಾದಂಡನಾಯಕನಾಗಿ ಖಡ್ಗಧಾರಿಯಾಗಿದ್ದನು. ಚಾವುಂಡರಾಯ "ತ್ರಿಷಷ್ಠಿಲಕ್ಷಣ ಮಹಾಪುರಾಣ" ಕೃತಿಯನ್ನು ರಚಿಸಿದ್ದಾನೆ. ಇದಕ್ಕಿಂತ ದೊಡ್ಡ ಸಾಧನೆ ಬಾಹುಬಲಿ ಸ್ವಾಮಿಯ ಮೂರ್ತಿ ಪ್ರತಿಷ್ಠಾಪಿಸಿ ಜಗದ್ವಿಖ್ಯಾತನಾಗುತ್ತಾನೆ. ಧರ್ಮದಲ್ಲಿ ಅಮೃತತ್ವವನ್ನು ಕಾಣಬೇಕೆಂದು  ಕಾದಂಬರಿಯ ಉದ್ದೇಶ. ಮಿರ್ಜಿ ಅಣ್ಣಾರಾಯರು 'ಚಾವುಂಡರಾಯ' (೧೯೭೭) ಕಾದಂಬರಿಯನ್ನು ರಚಿಸಿದ್ದಾರೆ. ಚಾವುಂಡರಾಯನ ಚರಿತ್ರೆ ಈ ಕಾದಂಬರಿಯ ವಸ್ತು. ಅವನ ಕಾವ್ಯಪ್ರತಿಭೆ, ಕಲ್ಪನಾವಿಲಾಸಗಳು, ಗುರುಭಕ್ತಿ, ಧರ್ಮಶ್ರದ್ಧೆ, ಬಾಹುಬಲಿ ನಿರ್ಮಾಣಕ್ಕೆ ಆತ ತೊಡಗಿ ಅದನ್ನು ಸಾಧ್ಯವಾಗಿಸಿಕೊಂಡ ರೀತಿ, ಈ ಎಲ್ಲದರ ವಿವರ ಈ ಕಾದಂಬರಿಯಲ್ಲಿ ಕಾಣಬಹುದು. ಎಂ. ರಾಮಮೂರ್ತಿಯವರಿಂದ 'ಇಬ್ಬರು ರಾಣಿಯರು' (೧೯೫೮) ಗಂಗ ರಾಜನ ಕುವರಿಯರು ನಗರಕಲೆ ಮತ್ತು ಕಲಿಮಲೆಯ ಪಾಳೆಯಗಾರರನ್ನು ವರಿಸಿದ ಕತೆ ಕಾದಂಬರಿಯಲ್ಲಿ ಮೂಡಿಬಂದಿದೆ. 'ಪುನರಾಗಮನ' (೧೯೫೮)

‘ಗಲಿಮ್ಮ’ ನಾಯಕ ಪಾಳೆಯದ ಮೂರನೆಯ ದೊರೆ ಇಮ್ಮಡಿ ನರಸಿಂಹನಾಯಕನ ಪಾಳಯಕ್ಕೆ ಸಂಬಂಧಪಟ್ಟ ಕತೆ. ದೊರೆಯ ಅನಾರೋಗ್ಯದ ನಿಮಿತ್ತ ದಳವಾಯಿ ರಾಜ್ಯವನ್ನು ಆಕ್ರಮಿಸಲು ಪ್ರಯತ್ನಿಸಿದಾಗ ರಾಣಿಯು ದಕ್ಷತೆಯಿಂದ ದಳವಾಯಿಯನ್ನು ಶಿಕ್ಷಿಸಿದ ಕತೆ” ಈ ಕಾದಂಬರಿಯ ವಸ್ತು.

ದಕ್ಷಿಣಾಪಥದಲ್ಲಿ ಪ್ರಥಮವಾಗಿ ಅತ್ಯಂತ ಪ್ರಬಲ ಹಾಗೂ ವಿಶಾಲ ಸಾಮ್ರಾಜ್ಯವನ್ನು ಕಟ್ಟಿ ಆಳ್ವಿಕೆ ನಡೆಸಿದ ಕೀರ್ತಿ ಚಾಲುಕ್ಯರದ್ದಾಗಿದೆ. ಈ ವಂಶಸ್ಥರ ಆಳ್ವಿಕೆಯ ಆಡಳಿತಾವಧಿಯನ್ನು ಬಾದಾಮಿ ಚಾಲುಕ್ಯರು, ಕಲ್ಯಾಣಿ ಚಾಲುಕ್ಯರು, ವೆಂಗಿಯ ಚಾಲುಕ್ಯರೆಂದು ಕರೆಯುವರು.

ಬಾದಾಮಿ ಚಾಲುಕ್ಯರಲ್ಲಿ ಅತ್ಯಂತ ಪರಾಕ್ರಮಿಯೂ ಧೀರನೂ, ಶೂರನೂ, ವೀರನೂ ಆದ ಇಮ್ಮಡಿ ಪುಲಕೇಶಿಯನ್ನು ಕುರಿತು ಕುರಡಿನಾರಾಯಣ ವೆಂಕಟೇಶರವರ ‘ಧರ್ಮಪಾಲ’, ‘ಸತ್ಯಮೇವ ಜಯತೆ’, ನಾಗೇಶ್‌ರವರ ‘ಈಶಸಂಕಲ್ಪ’, ಎನ್.ಎಸ್. ಕೃಷ್ಣಮೂರ್ತಿರವರ ‘ದಕ್ಷಿಣಾಪಥೇಶ್ವರ’ ಎಂಬ ಕಾದಂಬರಿಗಳು ಪ್ರಕಟವಾಗಿವೆ. ಎಚ್. ತಿಪ್ಪೇಸ್ವಾಮಿಯವರ ‘ಸತ್ಯಾಶ್ರಯ ಸಾಮ್ರಾಜ್ಯ’ ಕೊರಟಿ ಶ್ರೀನಿವಾಸ್‌ರಾವ್‌ರವರ ‘ಪರಮೇಶ್ವರ ಪುಲಕೇಶಿ’ ಕಾದಂಬರಿಗಳಲ್ಲಿ ಇಮ್ಮಡಿ ಪುಲಕೇಶಿ ಕರ್ನಾಟಕದ ರಾಜಕೀಯ ಚರಿತ್ರೆಯಲ್ಲಿ ಉಜ್ವಲವಾದ ಹೆಸರು ಗಳಿಸಿದ ಬಗ್ಗೆ ವಿವರಗಳಿವೆ. ತಿಪ್ಪೇರುದ್ರಸ್ವಾಮಿಯವರು ತಮಗೆ ಸಿಕ್ಕ ಅಲ್ಪ ಅಂಶಗಳ ಆಧಾರದಿಂದ ತಾವು ಈ ಕಾದಂಬರಿಯನ್ನು ರಚಿಸಿರುವುದಾಗಿ ಕಾದಂಬರಿಯ ಅರಿಕೆಯಲ್ಲಿ ಹೇಳಿದ್ದಾರೆ. “ಕರ್ನಾಟಕದ ಇತಿಹಾಸದಲ್ಲಿ ‘ಪರಮೇಶ್ವರ ಪುಲಿಕೇಶಿ’ ಎನ್ನುವ ಹೆಸರು ಉಜ್ವಲವಾದುದು; ಅದ್ವಿತೀಯವಾದುದು. ಹರ್ಷವರ್ಧನಂತಹ ಚಕ್ರವರ್ತಿಯನ್ನು ಸೋಲಿಸಿ, ಹಿಮ್ಮೆಟ್ಟಿಸಿ ಕರ್ನಾಟಕ ಸಾಮ್ರಾಜ್ಯದ ಕೀರ್ತಿಯನ್ನು ದಿಗಂತ ವ್ಯಾಪ್ತಿಯಾಗುವಂತೆ ಮಾಡಿದ ಕನ್ನಡ ಹುಲಿ ಪುಲಕೇಶಿ. ಆದರೂ ಇಂತಹ ವೀರನನ್ನು ಕುರಿತ ಐತಿಹಾಸಿಕ ವಿವರಗಳು ಹೆಚ್ಚಾಗಿ ಸಿಕ್ಕುವುದಿಲ್ಲ. ರವಿಕೀರ್ತಿಯ ಐಹೊಳೆಯ ಶಾಸನ ಮತ್ತು ಹ್ಯುಯೆನ್‌ತ್ಸಾಂಗನ ಬರವಣಿಗೆಗಳು - ಇವೇ ಆತನ ವ್ಯಕ್ತಿತ್ವವನ್ನು ನಿರ್ಧರಿಸುವುದಕ್ಕೆ ಇರುವ ಪ್ರಮುಖವಾದ ಆಧಾರಗಳೆನ್ನಬಹುದು. ಅಲ್ಲದೇ ಆ ಕಾಲದಲ್ಲಿ ರಚಿತವಾಗಿರುವ ಇತರ ಪ್ರಮುಖ ಶಾಸನಗಳನ್ನು ಜೊತೆಗೆ ಪಲ್ಲವರನ್ನು, ಹರ್ಷನನ್ನು ಮತ್ತು ಇತರ ರಾಜವಂಶಗಳನ್ನು ಕುರಿತು ಚಾರಿತ್ರಿಕ ಗ್ರಂಥಗಳ ಸಹಾಯದಿಂದ ಪುಲಿಕೇಶಿಯ ಸಾಮ್ರಾಜ್ಯದ ಕಲ್ಪನೆಯನ್ನು ಕಂಡುಕೊಳ್ಳಲು ಪ್ರಯತ್ನಿಸಿದ್ದೇನೆ (ತಿಪ್ಪೇರುದ್ರಸ್ವಾಮಿ ಎಚ್.; ೧೯೫೫; ಪು. ೧) ಎಂದು ಲೇಖಕರು ಹೇಳಿದ್ದಾರೆ.

ಕಲ್ಯಾಣ ಚಾಲುಕ್ಯರಲ್ಲಿ ಆರನೇ ವಿಕ್ರಮಾದಿತ್ಯನು ಪ್ರಸಿದ್ಧಿಯನ್ನು ಪಡೆದ ದೊರೆಯಾಗಿದ್ದಾನೆ. ಕುಲಕರ್ಣಿ ನಾಗೇಶ್‌ರವರ ‘ಚಾಲುಕ್ಯರ ವೈಭವ’, ಕಾವ್ಯಾನಂದರ - ‘ತ್ರಿಭುವನಮಲ್ಲ’, ಲಕ್ಷ್ಮಣಕೌಂಟೆಯವರ ‘ವಿಕ್ರಮಾದಿತ್ಯ’, ಶ್ರೀನಿವಾಸ ಕೊರಟಿಯವರ - ‘ಚಾಲುಕ್ಯ ವಿಕ್ರಮ’, ಇವು ಕಲ್ಯಾಣವನ್ನು ಆಳಿದ ಚಾಲುಕ್ಯ ಮನೆತನದ ಆರನೇ ವಿಕ್ರಮಾದಿತ್ಯನ ಕುರಿತಾದ ಕಾದಂಬರಿಗಳಾಗಿವೆ. ಬಸವಪೂರ್ವಯುಗದ ಕಲ್ಯಾಣ ನಗರದ ಪರಿಸ್ಥಿತಿಯನ್ನು ಬಿಚ್ಚಿಡುವ ಈ ಕಾದಂಬರಿ ವರ್ತಮಾನಕ್ಕೂ ಕನ್ನಡಿ ಹಿಡಿಯುತ್ತದೆ.

ಶ್ರೀನಿವಾಸ ಕೊರಟಿಯವರು 'ಚಾಲುಕ್ಯ ವಿಕ್ರಮ' ಕಾದಂಬರಿಯ ಮುನ್ನುಡಿಯಲ್ಲಿ ಕಾದಂಬರಿಯ ನಾಯಕನಾದ ವಿಕ್ರಮಾದಿತ್ಯನ ಗುಣಗಾನ ಮಾಡುತ್ತಾರೆ. "ಕನ್ನಡ ನಾಡಿನ ಇತಿಹಾಸಾಂಬರದಲ್ಲಿ ಜಾಜ್ವಲ್ಯಮಾನವಾಗಿ ಬೆಳಗಿ ತಮ್ಮ ಧೈರ್ಯ ಸಾಹಸ ಪರಾಕ್ರಮಗಳಿಂದ ತಮ್ಮ ನಾಡಿಗೂ ಕೀರ್ತಿ ತಂದ ಮಹಾಪುರುಷರಲ್ಲಿ ನಾಲ್ವರು ಕನ್ನಡಿಗರೆಲ್ಲರ ಹೃದಯ ಮಂದಿರದಲ್ಲಿ ಚಿರಸ್ಥಾಯಿಯಾಗಿ ನೆಲೆಸಿದ್ದಾರೆ. ಬಾದಾಮಿಯ ಚಾಲುಕ್ಯ ಪುಲಿಕೇಶಿ, ರಾಷ್ಟ್ರಕೂಟ ಅಮೋಘವರ್ಷ ನೃಪತುಂಗ, ಶ್ರೀಮಚ್ಚಾಲುಕ್ಯ ವಿಕ್ರಮಾದಿತ್ಯ ಮತ್ತು ವಿಜಯನಗರದ ಕೃಷ್ಣದೇವರಾಯ - ಈ ಮಹಾಪುರುಷರು ತಮ್ಮ ವೈಭವ, ವಿದ್ಯಾಪಕ್ಷಪಾತ, ನ್ಯಾಯನಿಷ್ಠೆಗಳಿಂದ ಪ್ರಜೆಗಳಿಗೆ ಸುಖ, ಶಾಂತಿ, ನೆಮ್ಮದಿಗಳನ್ನು ಕೊಟ್ಟು ಅಜರಾಮರವಾದ ಕೀರ್ತಿಗೆ ಪಾತ್ರರಾಗಿದ್ದಾರೆ. ಇವರು ನಾಮಾ ಮಾತ್ರದಿಂದ, ಕರ್ನಾಟಕದ ಗತವೈಭವ ನಮ್ಮ ಕಣ್ಣ ಮುಂದೆ ಬಂದು, ಮೈಯಲ್ಲಿ ವೀರಶ್ರೀಯ ಸಂಚಾರವಾಗುತ್ತದೆ. ಇಂಥವರಲ್ಲಿ ಒಬ್ಬನಾದ, ಕನ್ನಡಿಗರ ಆತ್ಮಶ್ರೀಯನ್ನು ದಶದಿಕ್ಕುಗಳಿಗೆ ಹರಡಿದ ಶಕ ಪುರುಷ ತ್ರಿಭುವನಮಲ್ಲ ಪೆರ್ಮಾಡಿ ವಿಕ್ರಮಾದಿತ್ಯನ ಪುಣ್ಯಚರಿತ್ರೆ ಇದಾಗಿದೆ"(ಶ್ರೀನಿವಾಸ ಕೊರಟಿ; ೨೦೦೫; ಪು. ೫). ಬಿ. ಪುಟ್ಟಸ್ವಾಮಿಯ್ಯನವರ 'ಚಾಲುಕ್ಯ ತೈಲಪ' ಚಾಲುಕ್ಯ ರಾಜವಂಶದ ಮೊದಲನೇ ಸ್ವತಂತ್ರ ರಾಜನಾದ ನೊರ್ಮಡಿ ತೈಲಪನಿಗೆ ಸಂಬಂಧಿಸಿದ ಕಾದಂಬರಿಯಾಗಿದೆ.

'ತ್ರಿಭುವನಮಲ್ಲ' ಕಾದಂಬರಿಯಲ್ಲಿ 'ವಿಕ್ರಮಾದಿತ್ಯನನ್ನು ಅತ್ಯಂತ ಯಶಸ್ವಿ ಮತ್ತು ಸಮರ್ಥ ಅರಸನೆಂದು' ಸಿದ್ಧಯ್ಯ ಪುರಾಣಿಕರು ಚಿತ್ರಿಸಿದ್ದಾರೆ. ಕಲ್ಯಾಣದಲ್ಲಿ ಅರಸನಾಗಿ ಹಾಗೂ ಮಾಂಡಲೇಶ್ವರನಾಗಿ ಆತನ ಆಡಳಿತದ ವಿವರಗಳನ್ನು ಲೇಖಕರು ತಮ್ಮ ಕೃತಿಗಳಲ್ಲಿ ವರ್ಣಿಸಿದ್ದಾರೆ. ಅಂದಿನ ಕಾಲದ ಅವಶೇಷಗಳು, ಸಾಹಿತ್ಯಿಕ ಕೃತಿಗಳ ಆಧಾರದ ಮೇಲೆ ವಿಕ್ರಮಾದಿತ್ಯ ಕಾದಂಬರಿಯನ್ನು ವಾಸ್ತವದ ಮೇಲೆ ಹೆಣೆಯಲಾಗಿದೆ. ವಿಕ್ರಮನ ಹೆಸರಿನಿಂದಲೇ 'ವಿಕ್ರಮಶಕೆ' ಆರಂಭಗೊಂಡಿದೆ. ಅಲ್ಲದೆ ಈತನ ಕೀರ್ತಿ ಕರ್ನಾಟಕದ ಹೊರತು ಬೇರೆ ಬೇರೆ ಪ್ರಾಂತ್ಯಗಳಲ್ಲಿಯೂ ಹರಡಿತು.

ಚಾಲುಕ್ಯರ ಅಧೀನದಲ್ಲಿ ದ್ವಾರಸಮುದ್ರದ ಹೊಯ್ಸಳರು ಕರ್ನಾಟಕದ ದಕ್ಷಿಣ ಭಾಗದಲ್ಲಿ ಪ್ರಬಲವಾದ ರಾಜ್ಯವನ್ನು ಸ್ಥಾಪಿಸಿದರು. ಇವರು ಸಾಹಿತ್ಯ ಸಂಗೀತ ನೃತ್ಯ ಹಾಗೂ ಶಿಲ್ಪಕಲೆಗೆ ಹೆಚ್ಚಿನ ಪ್ರಾಧಾನ್ಯತೆಯನ್ನು ಕೊಟ್ಟರು. ಇವರು ನಿರ್ಮಿಸಿದಂತಹ ನೂರಾರು ದೇವಾಲಯಗಳು ಕರ್ನಾಟಕದಲ್ಲಷ್ಟೇ ಅಲ್ಲ ಇಡೀ ಭಾರತದಲ್ಲೇ ಪ್ರಸಿದ್ಧಿಯನ್ನು ಹೊಂದುವ ಮೂಲಕ, ವಾಸ್ತುಶಿಲ್ಪದಲ್ಲಿ ಒಂದು ಹೊಸ ಅಧ್ಯಾಯವನ್ನೇ ಸೃಷ್ಟಿಸಿದರು. ಚಾಲುಕ್ಯರಲ್ಲಿ ಪ್ರಸಿದ್ಧನಾದ ವಿಷ್ಣುವರ್ಧನನನ್ನು ಕುರಿತು ತ.ರಾ.ಸು. ಅವರು 'ಸಿಡಿಲವೊಗ್ಗು' ಹಾಗೂ 'ಹೊಯ್ಸಳೇಶ್ವರ ವಿಷ್ಣುವರ್ಧನ' ಎಂಬೆರಡು ಕಾದಂಬರಿಗಳನ್ನು ರಚಿಸಿದ್ದಾರೆ. 'ಹೊಯ್ಸಳೇಶ್ವರ ವಿಷ್ಣುವರ್ಧನ' ಕಾದಂಬರಿಯ ಮುನ್ನುಡಿಯಲ್ಲಿ ಪ್ರಕಾಶಕರು ಕಾದಂಬರಿಯ ಬಗ್ಗೆ "ಹೊಯ್ಸಳ ಚಕ್ರವರ್ತಿ ವಿಷ್ಣುವರ್ಧನನು ಚದುರಿ ಹೋಗಿದ್ದ ಕರ್ನಾಟಕ ರಾಜ್ಯವನ್ನು ಒಟ್ಟುಗೂಡಿಸಲು ತಲಕಾಡನ್ನು ಗೆದ್ದು ಪಣತೊಟ್ಟು ಕೀರ್ತಿನಾರಾಯಣ ದೇಗುಲವನ್ನು ಕಟ್ಟಿಸಿ ಕನ್ನಡಿಗರಿಗೆ, ಧರ್ಮಕ್ಕೆ ಶರಣಾಗಿ ನಡೆದುಕೊಳ್ಳಿ, ಕೀರ್ತಿಕಾಮಿಗಳಾಗಿ

ಬಾಳಿ, ಕನ್ನಡ ತಾಯ್ ಬಾಳ್ಗೆ-ಸಿರಿಗನ್ನಡರಿಗೆಲ್ಲ' ಎಂದು ಆದೇಶವಿತ್ತಿದೆ ಈ ಐತಿಹಾಸಿಕ ಕಾದಂಬರಿಯ ಕಥಾವಸ್ತು" (ಮೀನಾಕ್ಷಿ ಜಂಗಮನಿ; ೨೦೧೦; ಪು. ೧೭೨).

ವಿಷ್ಣುವರ್ಧನನ ಪಟ್ಟದರಸಿಯಾಗಿದ್ದ "ಶಾಂತಲದೇವಿಯ ಕುರಿತು ಆರು ಕಾದಂಬರಿಗಳು ರಚನೆಗೊಂಡಿವೆ. ಕೆ.ವಿ. ಅಯ್ಯರರ 'ಶಾಂತಲಾ' ಪ್ರಸಿದ್ಧಿ ಪಡೆದ ಮಹ್ವಪೂರ್ಣ ಕೃತಿಯಾಗಿದೆ. "ಶಿಲ್ಪಿಯೊಬ್ಬ ತದೇಕಚಿತ್ತನಾಗಿ ತಾಳ್ಮೆಯಿಂದ ನಿರ್ಮಿಸಿದ ಶಿಲ್ಪವೊಂದರಂತೆ ಈ ಕಾದಂಬರಿಯ ನಿಲುವು ಕಂಗೊಳಿಸುತ್ತದೆ" ಎಂಬ ಅಭಿಪ್ರಾಯ ಅಕ್ಷರಶಃ ಸತ್ಯವಾಗಿದೆ. ಮ.ನ. ಮೂರ್ತಿರವರ 'ನಾಟ್ಯರಾಣಿ ಶಾಂತಲೆ', ಸಿ.ಕೆ. ನಾಗರಾಜರ 'ಪಟ್ಟ ಮಹಾದೇವಿಶಾನ್ತಲೆ; ಸಮೇತನಹಳ್ಳಿ ರಾಮರಾಯರ 'ಸವತಿ ಗಂಧವಾರಣೆ' ಮತ್ತು 'ನೃತ್ಯ ಸರಸ್ವತಿ' ಇವು ಶಾಂತಲದೇವಿಯನ್ನು ಕೇಂದ್ರವಾಗಿಸಿಕೊಂಡು ರಚಿತವಾದ ಕಾದಂಬರಿಗಳು. ಬಾಲ್ಯದಿಂದ ಮರಣದವರೆಗಿನ ಶಾಂತಲೆಯ ಜೀವನ ಚಿತ್ರಣ ಅಚ್ಚಳಿಯದ ಪರಿಣಾಮವನ್ನು ಓದುಗರ ಮನದ ಮೇಲೆ ಮೂಡಿಸುತ್ತದೆ. ಬಾಲ್ಯದಿಂದಲೂ ಸರಸ್ವತಿ ಆರಾಧಕಳಾದ ಶಾಂತಲಾ ಸಂಗೀತ, ನಾಟ್ಯ ಪ್ರವೀಣೆ. ಅವಳು ತನ್ನ ವಿನಯ, ತಾಳ್ಮೆ, ಜಾಣ್ಮೆ ಬಲದಿಂದಲೇ ವಿಷ್ಣುವರ್ಧನನ ಕೈಹಿಡಿಯುತ್ತಾಳೆ.

ಮ.ನ. ಮೂರ್ತಿಯವರು ತಮಗೆ ದೊರೆತಿರುವ ಐತಿಹಾಸಿಕ ವಸ್ತುವನ್ನು ಯಾವ ರೀತಿ ಉಪಯೋಗಿಸಿಕೊಂಡಿದ್ದಾರೆ ಮತ್ತು ದೊರೆತಿರುವ ವಸ್ತುವಿನ ಸಂಬಂಧದಲ್ಲಿ ಯಾವ ನಿರ್ಣಯಗಳಿಗೆ ಬಂದಿದ್ದಾರೆ ಎಂಬುದನ್ನು ಅವರೇ ಮುನ್ನುಡಿಯಲ್ಲಿ ಈ ರೀತಿ ಬರೆದಿದ್ದಾರೆ. "ಶಾಂತಲೆಯ ವಿಷಯವು ಕ್ರಿ.ಶ. ೧೧೧೬-೧೧೩೧ರವರೆಗೆ ದೊರೆಯುವ ಅನೇಕ ಶಾಸನಗಳಲ್ಲಿ ವರ್ಣಿತವಾಗಿದೆ. ಕನ್ನಡ ನಾಡಿನ ಯಾವೊಬ್ಬ ಮಹಾರಾಣಿಯ ವಿಷಯದಲ್ಲೂ ಇಷ್ಟು ಶಾಸನಗಳ ಉಲ್ಲೇಖವಿಲ್ಲವೆಂಬ ಒಂದು ಅಂಶದಿಂದ ಆಕೆಯು ಮಹಾವ್ಯಕ್ತಿಯೆಂದು ತಿಳಿಯಬಹುದು. ಶಾಸನಕಾರರು ಅವಳಿಗೆ ಕೊಟ್ಟಿರುವಷ್ಟು ವಿಶೇಷಗಳು ಯಾವ ಚಕ್ರವರ್ತಿಯ ಹೆಸರಿನೊಂದಿಗೂ ಬರುವುದಿಲ್ಲ. (ಮ.ನ. ಮೂರ್ತಿ; ೨೦೦೮; ಮುನ್ನುಡಿ).

ಹೊಯ್ಸಳ ಸಾಮ್ರಾಜ್ಯದ ಅಂತ್ಯದಲ್ಲಿ ಆಗಿಹೋದ ಬಲ್ಲಾಳ ಸೋದರಿ ಮಹಾಸತಿ ಹರಿಯಾಳ ದೇವಿಯೇ ತ.ಪು. ವೆಂಕಟರಾಮ್ ಅವರ 'ಹರಿಯಾಳದೇವಿ' ಕಾದಂಬರಿಯ ನಾಯಕಿ. "ಕರುನಾಡ ಸಾಮ್ರಾಜ್ಯ ರಂಗದಲ್ಲಿ ರಾರಾಜಿಸಿದ ದೋರಸಮುದ್ರದ ಅಂತ್ಯ ಪರದೆಯನ್ನೆಳೆದ ರೌದ್ರ ಐತಿಹಾಸಿಕ ಪ್ರಸಿದ್ಧನಾಗಿದ್ದ ವಿಷ್ಣುವರ್ಧನನ ಕಾಲದಲ್ಲಿ ಕಲೆಯ ತೊಟ್ಟಿಲಲ್ಲಿ ತೂಗಿ, ಕನ್ನಡಮ್ಮನ ಕಿರೀಟದಲ್ಲಿ ರತ್ನದೋಪಾದಿಯಲ್ಲಿ ಶೋಭಿಸಿದ ನಾಡುಬಲ್ಲಾಳನ ಕಾಲದಲ್ಲಿ ತನ್ನ ವೈಭವವನ್ನು ನೀಗಿಕೊಂಡು, ಪತಿಯನ್ನು ಕಳೆದುಕೊಂಡ ವಿಧವೆಯಂತಾಗಿ ತನ್ನ ಕೀರ್ತಿ ಪಾತಾಕೆಯನ್ನು ಕೆಳಗಿಳಿಸಿಕೊಂಡಿತು. ಮಲ್ಲಿಕಾಪುರ ದಂಡಯಾತ್ರೆಯ ಪರಿಣಾಮವಾಗಿ ಹಳೆಬೀಡಿನ ಕಲೆ ನಾಶವಾಗಿ ಹೋಯಿತು.



ಈ ನಾಶಕ್ಕೆ ಬಲ್ಲಾಳ ಸೋದರಿ ಮಹಾಸತಿ ಹರಿಯಾಳದೇವಿಯ ಶಾಪವೇ ಮೂಲಕಾರಣ ವೆಂದು ಈಗಲೂ ಜನ ಹೇಳುತ್ತಾರೆ. ಅಲ್ಲಲ್ಲಿ ಹಳ್ಳಿಗಳಲ್ಲಿ ಸುತ್ತಿ ಕೆಲವು ಘಟನೆಗಳ ವಿಷಯಗಳನ್ನು ಸಂಗ್ರಹಿಸಿದ್ದೇನೆ. ಅಲ್ಲಿಯ ಜನರು ಹಾಡುವ ಜನ ಜನಿತವಾಗಿರುವ 'ಲಕ್ಕಣ ಈರಣ್ಣ'ರ ಸುವ್ವಿ ಪದವೇ ಮೂಲ ಕಥಾವಸ್ತು. ಕೆಲವು ಪುರಾತನ ಗ್ರಂಥಗಳು ಮತ್ತು ಶಾಸನಗಳ

ಪರಿಶೋಧನೆಯಿಂದಲೂ ವಿಷಯ ಸಂಗ್ರಹಿಸಿದ್ದೇನೆ"... ಎಂದು ತ.ಪು. ವೆಂಕಟರಾಮ್ ಅವರು ತಮ್ಮ ಕಾದಂಬರಿಯ ಮುನ್ನುಡಿಯಲ್ಲಿ ಹೇಳಿರುವರು (ಮೀನಾಕ್ಷಿ ಜಂಗಮನಿ; ೨೦೧೦; ಪು. ೧೭೫)

ಭಾರತೀಸುತರ 'ವೈದ್ಯನ ಮಗಳು' ಕುಲಕರ್ಣಿ ಶಂಕರ ಅಣ್ಣಾಜಿ 'ಶಿಲ್ಪಗಳ ಸಾಮ್ರಾಟ' ಅಥವಾ 'ಜಕಣಾಚಾರ್ಯ' ಕಾದಂಬರಿಗಳು ಹೊಯ್ಸಳ ದೇವಾಲಯಗಳ ನಿರ್ಮಾಪಕನೆಂದು ಭಾವಿಸುವ ಪ್ರಖ್ಯಾತ ಜಕ್ಕಣನ ಜೀವನ ಚರಿತ್ರೆಯನ್ನು ವಸ್ತುವನ್ನಾಗಿಸಿಕೊಂಡಿದೆ.

ಭಾರತದ ಇತಿಹಾಸದಲ್ಲಿಯೇ ವಿಜಯನಗರ ರಾಜ್ಯ ಸ್ಥಾಪನೆ ಚಿರಸ್ಮರಣೀಯವಾದುದು. ಕ್ರಿ.ಶ. ೧೪ನೇ ಶತಮಾನದ ಪೂರ್ವದಲ್ಲಿಯೇ ವಿಜಯನಗರ ಸಾಮ್ರಾಜ್ಯವನ್ನು ಕಟ್ಟಿ ದಕ್ಷಿಣ ಭಾರತದಲ್ಲಿಯೇ ಅತ್ಯಂತ ಬಲಾಢ್ಯ ರಾಜ್ಯವನ್ನಾಗಿ, ಕನ್ನಡಿಗರೇ ಆದ ಹಕ್ಕಬುಕ್ಕರು ಸಾಮ್ರಾಜ್ಯವನ್ನು ನಿರ್ಮಿಸಿದರು. ಸ್ವಧರ್ಮ ರಕ್ಷಣೆ, ಪರಧರ್ಮ ಸಹಿಷ್ಣುತೆ ಹಾಗೂ ಉಜ್ವಲ ರಾಷ್ಟ್ರ ಪ್ರೇಮವನ್ನು ತಮ್ಮ ಆದರ್ಶವನ್ನಾಗಿಟ್ಟುಕೊಂಡಿದ್ದರು. ಕಲೆ, ಸಂಸ್ಕೃತಿ, ಸಂಗೀತ, ಪಾಂಡಿತ್ಯ, ಧರ್ಮಕ್ಕೆ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡಲಾಗಿತ್ತು. ಇಂತಹ ಉದಾತ್ತ ಮೌಲ್ಯಗಳನ್ನು ಹೊಂದಿದ ವಿಜಯನಗರ ಸಾಮ್ರಾಜ್ಯದ ಕೀರ್ತಿಯು ದೇಶ ಮತ್ತು ವಿದೇಶಗಳಲ್ಲಿ ಹರಡಿತು.

ವಿಜಯನಗರ ಸಾಮ್ರಾಜ್ಯವನ್ನು ಸುಮಾರು ೨೦೦ ವರ್ಷಗಳವರೆಗೆ ಸಂಗಮ, ಸಾಳ್ವ, ತುಳು ಮತ್ತು ಅರವೀಡು ವಂಶಸ್ಥರ ಹಲವಾರು ರಾಜರು ಆಳಿದರು. ಇವರಲ್ಲಿ ಅತ್ಯಂತ ಪರಾಕ್ರಮಿ, ಶೂರರು, ಸಮರ್ಥರು, ವೀರರೂ, ಸಾಹಸಿಗಳು ಕವಿ ಮತ್ತು ಕಲಿಗಳಾಗಿದ್ದ ಅರಸರನ್ನು ಕುರಿತು ಅನೇಕ ಕಾದಂಬರಿಗಳು ರಚನೆಗೊಂಡಿವೆ. ಅ.ನ. ಕೃಷ್ಣರಾಯರು ವಿಜಯನಗರ ಸಾಮ್ರಾಜ್ಯವನ್ನು ಕುರಿತು ಒಟ್ಟು ೧೦ ಕಾದಂಬರಿಗಳನ್ನು ರಚಿಸಿದ್ದಾರೆ. 'ತಪೋಬಲ', 'ಪುಣ್ಯಪ್ರಭಾವ', 'ಪ್ರೌಢ ಪ್ರತಾಪಿ', 'ತೇಜೋಭಂಗ', 'ಮೋಹನಮುರಾರಿ', 'ಯಶೋದುಂದುಭಿ', 'ಅಭಯ ಪ್ರಧಾನ', 'ಅಳಿಯ ರಾಮರಾಯ', 'ಪ್ರಳಯಾಂತರ'. ಶ್ರೀನಿವಾಸ ಕೊರಟಿಯವರ 'ಶಾಂತವಾದಿ', 'ಅಮಾತ್ಯರತ್ನ', ಹಾಗೂ 'ನಾಗಲಾದೇವಿ', ವೀರಕೇಸರಿಯವರ 'ಅಭ್ಯುದಯ' ಕೃತಿಗಳು ಪ್ರಮುಖವಾದವುಗಳು.

'ಯಶೋದುಂದುಭಿ' ವಿಜಯನಗರ ಸಾಮ್ರಾಜ್ಯದ ಸ್ವರ್ಣಯುಗವೆನಿಸಿದ ಕೃಷ್ಣದೇವರಾಯನ ಆಳ್ವಿಕೆಗೆ ಸಂಬಂಧಿಸಿದ ಕಾದಂಬರಿಯಾಗಿದೆ. "ಕೃಷ್ಣದೇವರಾಯನ ಕಾಲ (೧೫೦೯-೧೫೨೦) ವಿಜಯನಗರ ಸಾಮ್ರಾಜ್ಯೋತಿಹಾಸದ ಸ್ವರ್ಣಯುಗ ಪ್ರೌಢದೇವರಾಯನ ಕಾಲದಲ್ಲಿ ಒಂದು ಮಜಲು ಮುಟ್ಟಿದ ಈ ಸಾಮ್ರಾಜ್ಯ ಶ್ರೀ ಕೃಷ್ಣದೇವರಾಯನ ಕಾಲದಲ್ಲಿ ಅತ್ಯುಚ್ಚ್ರಾಯ ಸ್ಥಿತಿಗೇರಿತು. ಇವನ ಇಪ್ಪತ್ತೊಂದು ವರ್ಷಗಳ ಆಳ್ವಿಕೆ, ಆ ಕಾಲದಲ್ಲಿ ಅವನು ನಾಡಿನ ಸರ್ವತೋಮುಖ ಏಳಿಗೆಗಾಗಿ ಮಾಡಿದ ಮಹತ್ಕಾರ್ಯಗಳು ಚಿರಸ್ಮರಣೀಯವಾಗಿವೆ" (ಕೃಷ್ಣರಾಯ ಶಾ.ಮ.; ಚಿರಚೇತನ; ಪು. ೨೮೮). ಕೊರಟಿರವರ ರಾಜ್ಯದ್ರೋಹಿ ಕಾದಂಬರಿಯು 'ಕುಸುಮಾ' ಎಂಬ ನರ್ತಕಿಯ ಕಥೆಯನ್ನು ಹೊಂದಿದೆ. ಶ್ರೀರಂಗಪಟ್ಟಣದ ಕುಮಾರ ವೀರಯ್ಯನ ಆಸ್ಥಾನದಲ್ಲಿ ಆಕೆಯು ನರ್ತಕಿಯಾಗಿದ್ದಾಳೆ ಹಾಗೂ ತಿಮ್ಮರಸನ ಪುತ್ರ ಗೋವಿಂದರಾಜನ ಪ್ರೇಯಸಿಯಾಗಿದ್ದಳು.

ಅವಳ ಅಸಮಾನ ರೂಪವನ್ನು ಕುರಿತು ಅನೇಕರು ಅವಳನ್ನು ಬಯಸುತ್ತಿದ್ದರು. ಇವರುಗಳ ತೊಂದರೆಯಿಂದ ಪಾರಾಗಲು ಕೊನೆಗೆ ಗತ್ಯಂತರವಿಲ್ಲದೆ ಆಕೆಯು ಆತ್ಮಹತ್ಯೆ ಮಾಡಿಕೊಳ್ಳುವಳು. ಈ ನರ್ತಕಿಯ ಪಾತ್ರವನ್ನು ಪ್ರಶಂಸನೀಯ ಪಾತ್ರ ಸೃಷ್ಟಿಯೆಂದು ಹೇಳಬಹುದು(ಗುರುನಾಥ ಜೋಶಿ; ೧೯೫೫; ಪು. ೪೦). 'ಜಗನ್ಮೋಹಿನಿ'ಯಲ್ಲಿ ವಿಜಯನಗರದ ಕೃಷ್ಣದೇವರಾಯನ ಕಾಲದ ಕಥೆಯು ಅಡಕವಾಗಿದೆ. 'ನಾಗಲಾದೇವಿ' ಕೃಷ್ಣದೇವರಾಯನ ತಾಯಿಯ ಕಥೆ ಹಾಗೂ ಅವನ ಬಾಲ್ಯದ ದಿನಗಳ ಚಿತ್ರಣ ಒಳಗೊಂಡಿರುವ ಕೃತಿಯಾಗಿದೆ.

ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ ಸಂಬಂಧಿಸಿದಂತೆ ಕೆಲವು ಐತಿಹಾಸಿಕ ಕಾದಂಬರಿಗಳು ರಚನೆಗೊಂಡಿವೆ. ಗಳಗನಾಥರ 'ಮಾಧವನ ಕರುಣಾ ವಿಲಾಸ', ಕೊರಟಿ ಅವರ 'ದೇವಗಿರಿಯ ಪತನ ಭಾಗ-೨, ಅನಕೃರವರ 'ರಾಜ್ಯೋದಯ', ವೀರಕೇಸರಿಯವರ 'ಸ್ವರ್ಣವೃಷ್ಟಿ ಹಾಗೂ ಸಾಮ್ರಾಜ್ಯ ವೈಭವ ಪ್ರಮುಖವಾದವುಗಳು. ಸಂಗಮ ವಂಶದ ಪ್ರಖ್ಯಾತ ಅರಸ ಪ್ರೌಢದೇವರಾಯನಿಗೆ ಸಂಬಂಧಿಸಿದಂತೆ ಕೆಲವು ಐತಿಹಾಸಿಕ ಕಾದಂಬರಿಗಳು ರಚನೆಗೊಂಡಿವೆ. ಬೆಟಗೇರಿ ಕೃಷ್ಣಶರ್ಮರು ವಿಜಯನಗರ ಇತಿಹಾಸಕ್ಕೆ ಸಂಬಂಧಿಸಿದಂತೆ ಮೂರು ಕಾದಂಬರಿಗಳನ್ನು ಬರೆದಿದ್ದಾರೆ. 'ರಾಜಯೋಗಿ', 'ಅಶಾಂತಿ ಪರ್ವ', 'ಮಲ್ಲಿಕಾರ್ಜುನ'. ಕೌಜಲಗಿ ಬಂಡಾಚಾರ್ಯ ರಾಮಚಂದ್ರಾಚಾರ್ಯ ಅವರ 'ಪತಿವ್ರತೆಯ ಪ್ರಭಾವ', ದೇವುಡು ನರಸಿಂಹಶಾಸ್ತ್ರೀಯವರು ರಚಿಸಿದ 'ಚಿನ್ನಾ' ವಿಜಯನಗರ ಇತಿಹಾಸದಲ್ಲಿ ಬರತಕ್ಕಂತಹ ರಾಜರುಗಳ ಸೋಲು-ಗೆಲುವುಗಳಿಗೆ ಸಂಬಂಧಿಸಿದ ಐತಿಹಾಸಿಕ ಕಾದಂಬರಿಗಳಾಗಿವೆ. ವಿಜಯನಗರ ಸಾಮ್ರಾಜ್ಯದ ಅರಸರಲ್ಲಿ ಪ್ರಸಿದ್ಧನೂ, ಪರಾಕ್ರಮಿಯು ಆದ ಕೃಷ್ಣದೇವರಾಯನು ಇಡೀ ಭಾರತದ ಇತಿಹಾಸದಲ್ಲಿಯೇ ಅತ್ಯಂತ ಪ್ರಸಿದ್ಧ ಅರಸನಾಗಿದ್ದಾನೆ. ರಮಾರಮಣ ಎಂಬ ಬಿರುದಾಂಕಿತನಾದ ಕೃಷ್ಣದೇವರಾಯನನ್ನು ಕುರಿತು ಸೂರ್ಯನಾಥ ಕಾಮಥರು 'ಕನ್ನಡ ರಮಾರಮಣ ಕೃಷ್ಣದೇವರಾಯ' ಕಾದಂಬರಿಯನ್ನು ರಚಿಸಿದ್ದಾರೆ. ಮಧ್ಯಕಾಲೀನ ಕರ್ನಾಟಕದ ಐತಿಹಾಸಿಕ ವ್ಯಕ್ತಿಯಾದ ಕುಮಾರರಾಮನ ಕುರಿತು ಶ್ರೀನಿವಾಸ ಕೊರಟಿ ಅವರು 'ಕನ್ನಡಿಗರ ಕಾಳರಾತ್ರಿ' ಮತ್ತು 'ಕುಮಾರರಾಮ', ರುದ್ರಮೂರ್ತಿ ಶಾಸ್ತ್ರಿಗಳ 'ಕುಮಾರರಾಮ' ಕುಮಾರರಾಮನ ಕುರಿತು ರಚನೆಗೊಂಡ ಕಾದಂಬರಿಗಳಾಗಿವೆ.

ವಿಜಯನಗರ ಸಾಮ್ರಾಜ್ಯದ ಪತನಾನಂತರ ಧರ್ಮ, ಸಂಸ್ಕೃತಿಗಳನ್ನು ರಕ್ಷಿಸಿ, ಪೋಷಿಸಿ ಬೆಳೆಸಿದ ಅರಸು ಸಂತತಿಗಳಲ್ಲಿ ಮೈಸೂರಿನ ಒಡೆಯರು ಅಗ್ರಗಣ್ಯರು. ವಿಜಯನಗರ ಸಾಮ್ರಾಜ್ಯವು ಪೋಷಿಸಿ ಬೆಳೆಸಿದ್ದ ಧಾರ್ಮಿಕ, ಸಾಂಸ್ಕೃತಿಕ ಉದಾತ್ತ ಪರಂಪರೆಗಳನ್ನು ಮೈಸೂರಿನ ಒಡೆಯರು ಪುನರುಜ್ಜೀವನಗೊಳಿಸಿದರು. ನವರಾತ್ರಿ ಉತ್ಸವವನ್ನು ವಿಜಯನಗರದ ಅರಸರು ಅತ್ಯಂತ ಸಂಭ್ರಮದಿಂದ ಆಚರಿಸುತ್ತಿದ್ದರು. ಈ ಉತ್ಸವವನ್ನು ಮೈಸೂರು ಅರಸರು 'ದಸರಾ ಉತ್ಸವ'ವೆಂದು ಜಗತ್ಪ್ರಸಿದ್ಧಿ ಪಡೆಯುವಂತೆ ಮುಂದುವರೆಸಿಕೊಂಡು ಬಂದಿದ್ದರು. ದೊರೆಗಳ ಆಳ್ವಿಕೆಯ ಕಾಲ ಮುಗಿದುಹೋದರೂ ಕೂಡ ಪ್ರಜಾಪ್ರಭುತ್ವದ ಸಂದರ್ಭದಲ್ಲಿಯೂ 'ದಸರ ಹಬ್ಬ'ವನ್ನು ನಾಡಹಬ್ಬವನ್ನಾಗಿ ಆಚರಿಸಲಾಗುತ್ತದೆ.

ಬೆಂಗಳೂರು ನಗರದ ನಿರ್ಮಾಪಕನಾದ ಕೆಂಪೇಗೌಡನನ್ನು ಕುರಿತು ಅನಕೃ ಅವರು 'ಯಲಹಂಕ ಭೂಪಾಲ', ಮ.ನ. ಮೂರ್ತಿಯವರು 'ಬೆಂಗಳೂರು ಕೆಂಪೇಗೌಡ' ಎಂಬ

ಕಾದಂಬರಿಗಳನ್ನು ರಚಿಸಿದ್ದಾರೆ. ಅನಕೃ ಅವರು 'ಯಲಹಂಕ ಭೂಪಾಲ' ಕಾದಂಬರಿಯ ಮುನ್ನುಡಿಯಲ್ಲಿ ಮಾಗಡಿ ಕೆಂಪೇಗೌಡನ ಬಗ್ಗೆ ಇತಿಹಾಸಕಾರನ ಅವಜ್ಞೆಯನ್ನು ಕಂಡು ಮರುಗಿದ್ದಾರೆ. "ಬೆಂಗಳೂರು ನಗರ ಸ್ಥಾಪಕನೂ ಗವಿಪುರ ಶಿವಗಂಗೆ ದೇವಾಲಯಗಳ ನಿರ್ಮಾತೃವೂ ಆದ ಮಾಗಡಿ ಕೇಂಪೇಗೌಡ ದೊಡ್ಡ ಅರಸನಲ್ಲ. ಅವನು ವಿಜಯನಗರದ ಸಾಮಂತನಾಗಿದ್ದ ಪಾಳೆಯಗಾರ. ಆದರೆ ಆ ಪುಣ್ಯಪುರುಷನ ನಿಷ್ಕಳಂಕ ಜೀವನ, ಅಚಲ ಸ್ವಾಮಿಭಕ್ತಿ, ಅನುಪಮ ದೈವಭಕ್ತಿ ಲೋಕಕ್ಕೆ ಮಾದರಿಗಳಾಗಿವೆ. ಇಂತಹ ಮಾಗಡಿ ಕೆಂಪೇಗೌಡನನ್ನು ಇತಿಹಾಸಕಾರರು ಏಕೋ ಏನೋ ಉಪೇಕ್ಷಿಸುತ್ತಲೇ ಬಂದಿದ್ದಾರೆ. ಮೈಸೂರಿನ ಇತಿಹಾಸಕ್ಕೆ ಗಣನೀಯ ಸೇವೆ ಸಲ್ಲಿಸಿರುವ ಇತಿಹಾಸಕಾರರು ಕೆಂಪೇಗೌಡನ ಹೆಸರನ್ನು ಕೂಡ ಹೇಳಿಲ್ಲ. ಬೆಂಗಳೂರು ನಗರ ಸ್ಥಾಪನೆ, ಕೋಟೆ ಕಟ್ಟುವ ಕಾಲದಲ್ಲಿ ಕೆಂಪೇಗೌಡನ ಸೊಸೆ ಲಕ್ಷ್ಮಮ್ಮನ ಬಲಿದಾನ, ಕೆಂಪೇಗೌಡ ವಿಜಯನಗರಕ್ಕೆ ಹೋಗಿ ಸೆರೆಯಾದುದು ಇವಿಷ್ಟೇ ಇವನ ಬಗ್ಗೆ ನಮಗೆ ತಿಳಿದು ಬರುವ ಸಂಗತಿಗಳು (ಮೀನಾಕ್ಷಿ ಜಂಗಮನಿ; ೨೦೧೦; ಪು. ೩೫೩) ಎಂದಿದ್ದಾರೆ.

ಯದುವಂಶದ ಒಡೆಯರ ಪ್ರಾರಂಭದ ಕಾಲದಲ್ಲಿ ಆಳಿದ 'ಇಮ್ಮಡಿ ತಿಮ್ಮರಾಜನನ್ನು ಹಾಗೂ ಅವನ ಸೋದರರನ್ನು ಕುರಿತು ಸಮೇತನಹಳ್ಳಿ ರಾಮರಾಯರು 'ಯದುವೊಡೆಯ' ಮತ್ತು 'ಮೊನೆಗಾರ' ಎಂಬಂಥ ಕಾದಂಬರಿಗಳನ್ನು ರಚಿಸಿದ್ದಾರೆ. ಈ ವಂಶದ ಕೊನೆಯ ಅರಸನಾದ ಮುಮ್ಮಡಿ ಕೃಷ್ಣರಾಜ ಒಡೆಯರನ್ನು ಕುರಿತು 'ಶ್ರೀಶೈಲಂ' ಅವರು 'ಕಲ್ಲುಗಾಣ'ವೆಂಬ ಮತ್ತು ಮಾ.ನಾ. ಚೌಡಪ್ಪನವರು 'ಶ್ರೀಕೃಷ್ಣಭೂಪಾಲ'ನೆಂಬ ಕಾದಂಬರಿಗಳನ್ನು ರಚಿಸಿದ್ದಾರೆ.

ಮೈಸೂರು ಸಂಸ್ಥಾನದ ಇತಿಹಾಸದಲ್ಲಿ ಯದು ಸಂತತಿಯ ಪರಂಪರೆಯಲ್ಲಿ ಚಿಕ್ಕದೇವರಾಜ ಒಡೆಯರು ಅತ್ಯಂತ ವಿಖ್ಯಾತರು. ೩೨ ವರ್ಷಗಳ ದೀರ್ಘಕಾಲ ಮೈಸೂರು ಸಂಸ್ಥಾನವನ್ನು ಆಳಿದ ೧೪ನೆಯ ಚಿಕ್ಕದೇವರಾಜ ಒಡೆಯರು ಸಿಂಹಾಸನವನ್ನೇರಿದ ಮೊದಲ ಹತ್ತಾರು ವರ್ಷಗಳು ಸಾಲು ಸಾಲು ಸಮರಗಳಲ್ಲಿ ತೊಡಗಿ ಸಂಸ್ಥಾನವನ್ನು ವಿಸ್ತರಿಸಿದರು. ಅನಂತರ ಶಾಂತಿಯ ಕಾಲದಲ್ಲಿ ವಿದ್ವಾಂಸರಿಗೆ ಆಶ್ರಯ ನೀಡಿ ಕನ್ನಡ ಸಾಹಿತ್ಯ ಲೋಕವನ್ನು ವಿಸ್ತರಿಸಿದರು. ಚಿಕ್ಕದೇವರಾಜ ಒಡೆಯರ ಪಟ್ಟಮಹಿಷಿ - ದೇವಾಜಮ್ಮಣ್ಣಿಯ ಬಾಲ್ಯ ಗೆಳತಿ ಹೊನ್ನಮ್ಮ ಅರಸಿಯೊಡನೆ ಶ್ರೀರಂಗಪಟ್ಟಣದ ಅರಮನೆ ತಲುಪುತ್ತಾಳೆ. ಒಡೆಯರ ಆಶ್ರಯದಲ್ಲಿ ಬೆಳೆದ ಸಂಚಿ ಹೊನ್ನಮ್ಮಳು ಕವಿಯತ್ರಿಯಾಗಿ 'ಹದಿಬದೆಯ ಧರ್ಮ' ಎಂಬ ಸಾಹಿತ್ಯ ಕೃತಿಯನ್ನು ರಚಿಸುತ್ತಾಳೆ.

ಈಕೆಯ ಕುರಿತು ಮೈ.ಸು. ಶೇಷಗಿರಿರಾವ್ ಅವರು 'ಸಂಚಿಯ ಹೊನ್ನಮ್ಮ' ಎಂಬ ಐತಿಹಾಸಿಕ ಕಾದಂಬರಿಯನ್ನು ರಚಿಸಿದ್ದಾರೆ. ಯಳಂದೂರಿನ ದಲಿತ ಮಹಿಳೆ ಹೊನ್ನಮ್ಮ, ಸಂಚಿಯ ಹೊನ್ನಮ್ಮಳಾದುದು, ಕವಿಯತ್ರಿ ಹೊನ್ನಮ್ಮಳಾದುದು. ಗುರುವಿನಿಂದ ಶ್ಲಾಘಿತಳಾಗಿ, ಪ್ರಭುವಿನಿಂದ ಸನ್ಮಾಳಿತಳಾಗಿ ಸರಸ ಸಾಹಿತ್ಯದ ವರದೇವತೆಯಾದುದು ಈ ಕಾದಂಬರಿಯ ಮುಖ್ಯ ಘಟನಾವಳಿಗಳಾಗಿವೆ. ೧೭ನೇ ಶತಮಾನದಲ್ಲಿ ನಡೆದ ದಲಿತ ಮಹಿಳೆಯ ಉದ್ಧಾರವೇ ಇದರ ಕಥಾವಸ್ತು. ಆದ್ದರಿಂದ ಇದೊಂದು ಹೊಸ ಬಗೆಯ ಇತಿಹಾಸ ಕೃತಿ ಎಂದು ಮೈ.ಸು. ಶೇಷಗಿರಿರಾವ್ ಅವರು ತಮ್ಮ ಪ್ರಸ್ತಾವನೆಯಲ್ಲಿ ಈ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ತ.ರಾ.ಸು. ಅವರು ತಮ್ಮ 'ದುರ್ಗಾಸ್ತಮಾನ' ಕಾದಂಬರಿಯ ಮುನ್ನುಡಿಯಲ್ಲಿ "ಆ ಕಾಲ ವ್ಯಾಪಾರಕ್ಕೆಂದು ಬಂದ ಬ್ರಿಟಿಷರು, ಪೋರ್ಚುಗೀಸರು ಭಾರತೀಯ ರಾಜರುಗಳ ಒಳಜಗಳದ ಸುಸಂಧಿಯನ್ನು ಸಾಧಿಸಿ ತಮ್ಮ ರೊಟ್ಟಿ ಜಾರಿ ಎಲ್ಲಿ ಬೆಣ್ಣೆಗೆ ಬೀಳುತ್ತದೆ ಎಂದು ಕಾಯುತ್ತಿದ್ದ ಕಾಲ. ದಕ್ಷಿಣದಲ್ಲಿ ಪ್ರಬಲವಾದ ಮರಾಠರು, ಹೈದರಾಬಾದಿನ ನಿಜಾಮ, ಮೈಸೂರು ಸಂಸ್ಥಾನದ ಸರ್ವಾಧಿಕಾರಿ ಹೈದರಾಲಿ ಇವರ ನಿರಂತರ ಹೋರಾಟದ ಏಳುಬೀಳುಗಳನ್ನವಲಂಬಿಸಿ ತಮ್ಮ ಅಳಿವು ಉಳಿವುಗಳನ್ನು ಕರ್ನಾಟಕದ ಎಲ್ಲ ಪಾಳೆಯಗಾರರು ನಿರ್ಧರಿಸುತ್ತಿದ್ದ ಪರ್ವ ಕಾಲ (ತ.ರಾ.ಸು; ೧೯೮೮; ಮುನ್ನುಡಿ) ಎಂದಿದ್ದಾರೆ.

ಮದಕರಿನಾಯಕನನ್ನು ಕುರಿತು ಬಿ.ಎಲ್. ವೇಣು 'ಗಂಡುಗಲಿ ಮದಕರಿ ನಾಯಕ' ಮತ್ತು 'ಓಬವ್ವನನ್ನು ಕುರಿತು ವೀರವನಿತೆ ಒನಕೆ ಓಬವ್ವ' ಕಾದಂಬರಿಗಳನ್ನು ರಚಿಸಿದ್ದಾರೆ.

ಗಳಗನಾಥರು 'ದುರ್ಗದ ಬಿಚ್ಚುಗತ್ತಿ' ಎಂಬ ಸ್ವತಂತ್ರ ಐತಿಹಾಸಿಕ ಕಾದಂಬರಿಯನ್ನು ರಚಿಸಿದರು. "ಕರ್ನಾಟಕ ಇತಿಹಾಸ ಚಿತ್ರದುರ್ಗದ ಕೋಟೆಯ ನಾಯಕರ ಮನೆತನಕ್ಕೆ ಸಂಬಂಧಿಸಿದ ಕಾದಂಬರಿಯಾಗಿದೆ. ಚಿತ್ರದುರ್ಗದ ಬಾಧ್ಯಸ್ತನಾಗಿದ್ದ ಭರಮನಾಯಕನು ಮುರುಗೀಶ ಗುರುಗಳ ಅನುಗ್ರಹದಿಂದಲೂ, ನಿಷ್ಠೆರಾದವರ ಸಹಾಯದಿಂದಲೂ ಹೇಗೆ ಅಧಿಕಾರಕ್ಕೆ ಬಂದನೆಂಬುದನ್ನು ನಿರೂಪಿಸುವುದೇ ಗಳಗನಾಥರ ಈ ಕಾದಂಬರಿಯ ಉದ್ದೇಶವಾಗಿತ್ತು" (ಕೌಜಲಗಿ ಕೆ.ಎಸ್.; ೧೯೮೧; ಪು. ೧೩೧). ಎಂದು ಕೃಷ್ಣಮೂರ್ತಿ ಕಿತ್ತೂರ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ತ.ರಾ.ಸು. ಚಿತ್ರದುರ್ಗವನ್ನಾಳಿದ ಪಾಳೆಯಗಾರರ ಕುರಿತು ಕಾದಂಬರಿ ಮಾಲೆಯನ್ನೇ ರಚಿಸಿದವರು. 'ಕಂಬನಿಯ ಕುಯಿಲು', 'ರಾಜ್ಯದಾಹ', 'ರಕ್ತರಾತ್ರಿ', 'ತಿರುಗುಬಾಣ', 'ಹೊಸಹಗಲು', 'ವಿಜಯೋತ್ಸವ ಭಾಗ - ೧ - ೨'; 'ಕಸ್ತೂರಿ ಕಂಕಣ ಭಾಗ - ೧ - ೨'; ದುರ್ಗಾಸ್ತಮಾನ ಕಾದಂಬರಿಗಳು ಒಂದು ಸಮಯದಲ್ಲಿ ಅಪಾರ ಓದುಗರನ್ನು ಸೃಷ್ಟಿ ಮಾಡಿದ್ದನ್ನು ಸ್ಮರಿಸಲೇಬೇಕು.

ಕೆಳದಿ ವಂಶದ ಅರಸರಲ್ಲಿ 'ದೊಡ್ಡಸಂಕಣ್ಣನಾಯಕ' ಪ್ರಮುಖನಾಗಿದ್ದಾನೆ. ಈತನನ್ನು ಕುರಿತು 'ದೊಡ್ಡ ಸಂಕಣ್ಣನಾಯಕ' ಎಂಬ ಕಾದಂಬರಿಯನ್ನು ಕೆ.ಜಿ. ನಾಗರಾಜಪ್ಪನವರು ರಚಿಸಿದ್ದಾರೆ. ಶ್ರೀನಿವಾಸ ಕೊರಟಿರವರ 'ರಾಣಿಚೆನ್ನಮ್ಮಾಜಿ'; ಲಕ್ಷ್ಮಣ್ ಕೌಂಟೆ ಅವರ 'ಸಮರ್ಪಿತ', ಶಾಂತಾದೇವಿ ಮಾಳವಾಡರ 'ಶೂರರಾಣಿ ಚೆನ್ನಮ್ಮಾ', ಲಕ್ಕಪ್ಪ ಶಿರಹಟ್ಟಿ ಅವರ 'ವೀರರಾಣಿ ಮಹಾಮುತ್ಸದ್ಧಿ ಕೆಳದಿಯ ಚೆನ್ನಮ್ಮಾ', ನಾ. ಡಿಸೋಜ ಅವರ 'ಚೆನ್ನಿ ಚೆನ್ನಮ್ಮ ಚೆನ್ನಮ್ಮಾಜಿ', ಮಾಸ್ತಿಯವರ 'ಚನ್ನಬಸವನಾಯಕ', ಮೈ.ಸು. ಶೇಷಗಿರಿರಾವ್ ಅವರ 'ಸಂಸ್ಥಾನ ಲಕ್ಷ್ಮೀ' ಇವು ಕೆಳದಿ ಸಾಮ್ರಾಜ್ಯದ ಕುರಿತು ರಚಿತವಾದ ಕಾದಂಬರಿಗಳು.

ಶಿವಪ್ಪ ನಾಯಕನೂ ಪಟ್ಟಕ್ಕೆ ಬರುವ ಮೊದಲೇ ಅತ್ಯಂತ ದಕ್ಷ ಆಡಳಿತಗಾರನೂ, ಶೂರನೂ, ಆಡಳಿತದಲ್ಲಿ ಅಪಾರ ಅನುಭವವನ್ನು ಹೊಂದಿದವನಾಗಿದ್ದನು. ಪಾಳೆಯಗಾರರನ್ನು ಮತ್ತು ಬ್ರಿಟಿಷರೊಡನೆ ಹೋರಾಡಿ, ಕೆಳದಿ ರಾಜ್ಯವನ್ನು ವಿಸ್ತರಿಸಿದನು. ಈತನ ನಂತರ ಆಳ್ವಿಕೆಗೆ ಬಂದ ಸಮರ್ಥ ಅರಸರಲ್ಲಿ ಸೋಮಶೇಖರ ನಾಯಕನು ಒಬ್ಬನು. ಚಾರಿತ್ರಿಕ ಪ್ರಸಿದ್ಧಿ ಪಡೆದ ಬಿದನೂರು ಚೆನ್ನಮ್ಮಾಜಿಯು ಪತಿಯಾದ ಸೋಮಶೇಖರನ ಮರಣದ ನಂತರ

ಪಟ್ಟಕ್ಕೆ ಬಂದಳು. ರಾಜ್ಯದಲ್ಲಿದ್ದ ಅಂತಃಕಲಹವನ್ನು ನಿಗ್ರಹಿಸಿ ದಂಗೆಯೇಳಲು ಹವಣಿಸುತ್ತಿದ್ದ ಸೈನಿಕರನ್ನು ಸದೆಬಡಿದು ಕೆಳದಿ ರಾಜ್ಯವನ್ನು ಸುಭದ್ರಗೊಳಿಸಿದಳು.

ಬಿದನೂರಿನ ಇತಿಹಾಸದಲ್ಲಿಯೇ ಚಿರಸ್ಮರಣೀಯಳಾದ ಚೆನ್ನಮ್ಮಾಜಿಯ ಕುರಿತು ಶ್ರೀನಿವಾಸ ಕೊರಟಿಯವರು 'ರಾಣಿಚೆನ್ನಮ್ಮಾಜಿ' ಕಾದಂಬರಿಯ ಮುನ್ನುಡಿಯಲ್ಲಿ ಈ ರೀತಿ ಹೇಳಿದ್ದಾರೆ. "ಕನ್ನಡ ನಾಡಿನ ವೀರವನಿತೆಯರಲ್ಲಿ ಬಿದನೂರಿನ ರಾಣಿಚೆನ್ನಮ್ಮಾಜಿಯ ಕೀರ್ತಿ ಧ್ರುವತೇಜದಂತೆ ಬೆಳಗುತ್ತದೆ. ಬೆಳವಲದ ಮಲ್ಲಮ್ಮ, ಕಿತ್ತೂರರಾಣಿ ಚೆನ್ನಮ್ಮ ಇವರೂ ಇದೇ ಮಾಲೆಗೆ ಸೇರಿದವರಾದರೂ, ಬಿದನೂರಿನ ರಾಣಿ ಚೆನ್ನಮ್ಮಾಜಿಯ ಚರಿತ್ರೆ ಕನ್ನಡ ನಾಡಿನ ಇತಿಹಾಸದಲ್ಲಿ ಸುವರ್ಣ ಅಧ್ಯಾಯನವನ್ನು ನಿರ್ಮಿಸಿದೆ. ಭರತಖಂಡದ ಮತ್ಯಾವ ದೊರೆಯೂ ಸೋಲಿಸದೇ ಇದ್ದ ದಿಲ್ಲಿಯ ಬಾದಶಹ ಅಲಂಗೀರ ಔರಂಗಜೇಬನನ್ನು ಸೋಲಿಸಿ, ಅವನಿಂದ ಸನ್ಮಾನಿತಳಾದ ಪ್ರಥಮ ವನಿತೆ ಎಂದರೆ ರಾಣಿಚೆನ್ನಮ್ಮಾಜಿ. ಇದೊಂದೇ ಅವಳ ವೀರಶ್ರೀಯ ಕೀರ್ತಿ ಸ್ತಂಭ ಶಾಶ್ವತವಾಗಿ ನಿಲ್ಲಲು ಸಾಕು" (ಕೊರಟಿ ಶ್ರೀನಿವಾಸ; ೨೦೦೭; ಪು. ಮುನ್ನುಡಿ iii) ಎಂದು ಅಭಿಪ್ರಾಯಪಟ್ಟಿದ್ದಾರೆ.

ಕೆಳದಿ ಅರಸರಲ್ಲಿ ಬಂದ ಕೊನೆಯ ಅರಸು 'ಚನ್ನಬಸವನಾಯಕ'. ಈತನನ್ನು ಕುರಿತು ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು 'ಚೆನ್ನಬಸವನಾಯಕ' ಎಂಬ ಕಾದಂಬರಿಯನ್ನು ರಚಿಸಿದ್ದಾರೆ.

**ಸ್ವಾತಂತ್ರ್ಯ ಸಂಗ್ರಾಮ**

ಕನ್ನಡ ಅರಸರೇ ನಮ್ಮ ಕನ್ನಡ ನಾಡನ್ನು ದೀರ್ಘಕಾಲ ಆಳಿದರು. ಅನಂತರ ಬಂದ ಮುಸ್ಲಿಮರು ಮತ್ತು ಬ್ರಿಟಿಷರ ವಶಕ್ಕೆ ಕರ್ನಾಟಕ ರಾಜ್ಯವು ಒಳಪಟ್ಟಿತು. ಸಂಪತ್ಭರಿತವಾದ ಭಾರತ ದೇಶವನ್ನು ಮುಸ್ಲಿಮರು ಲೂಟಿ ಮಾಡಲು ಬಂದರೆ, ಬ್ರಿಟಿಷ್‌ರು ವ್ಯಾಪಾರಕ್ಕೆಂದು ಭಾರತವನ್ನು ಪ್ರವೇಶಿಸಿದರು. ಪೋರ್ಚುಗೀಸರು, ಡಚ್ಚರು, ಫ್ರೆಂಚರು ಹಾಗೂ ಬ್ರಿಟಿಷರು ನಮ್ಮ ದೇಶಕ್ಕೆ ಬಂದು ತಮ್ಮ ಪರಮಾಧಿಕಾರವನ್ನು ಸ್ಥಾಪಿಸಿದರು. ಆಡಳಿತದಲ್ಲಿ ಬ್ರಿಟಿಷರು ಹಸ್ತಕ್ಷೇಪ ಮಾಡಲು ಇಲ್ಲಿನ ರಾಜರ ಅನೈತಿಕತೆಯೇ ಕಾರಣವಾಯಿತು. ಬ್ರಿಟಿಷರು ಮೂಲತಃ ವ್ಯಾಪಾರ, ಉದ್ದೇಶವನ್ನು ಬಿಟ್ಟು ಕುಟಿಲನೀತಿಯಿಂದ ರಾಜರಾಜರಲ್ಲಿ ವೈಷಮ್ಯವನ್ನು ಹುಟ್ಟಿಸುತ್ತ ತಮಗೆ ಶರಣಾಗತರಾದ ರಾಜರ ಮೇಲೆ ಪ್ರಭುತ್ವವನ್ನು ಸ್ಥಾಪಿಸುತ್ತ ಇಡೀ ಭಾರತವನ್ನು ತಮ್ಮ ಅಧಿಕಾರದ ಕಪಿಮುಷ್ಠಿಯಲ್ಲಿ ಇಟ್ಟುಕೊಂಡರು. ಇವರ ದೌರ್ಜನ್ಯದ ಮತ್ತು ವಿರುದ್ಧ ಅನೇಕ ದೇಶಭಕ್ತರು ರೊಚ್ಚಿಗೆದ್ದು ಅವರ ವಿರುದ್ಧ ಹೋರಾಟ ಪ್ರಾರಂಭಿಸಿದರೆ, ಇನ್ನೂ ಕೆಲವರು ಆಮಿಷಕ್ಕೆ ಬಲಿಯಾಗಿ ಅವರ ಅಡಿಯಾಳುಗಳಾಗಿ ಬಾಳಿದರು. ಹೀಗೆ ಬ್ರಿಟಿಷರ ವಿರುದ್ಧ ಹೋರಾಟವನ್ನು ಪ್ರಾರಂಭಿಸಿದವರಲ್ಲಿ ಕಿತ್ತೂರ ಅರಸರು, ಹೈದರಾಲಿ, ಟಿಪ್ಪೂಸುಲ್ತಾನ ಹಲಗಲಿಬೇಡರು, ಸುರಪುರದ ವೆಂಕಟಪ್ಪ ನಾಯಕ, ನರಗುಂದ ಬಾಬಾ ಸಾಹೇಬಾ, ಅಬ್ಬ ಕರಾಣಿ ಮುಂತಾದವರು ಪ್ರಮುಖರಾಗಿದ್ದಾರೆ. ಇಂಥವರ ಜೀವನ ಚರಿತ್ರೆ ಕುರಿತು ಹಲವಾರು ಕಾದಂಬರಿಕಾರರು ಕಾದಂಬರಿಗಳನ್ನು ರಚಿಸಿದ್ದಾರೆ.

ನಮ್ಮ ದೇಶಕ್ಕೆ ಸ್ವಾತಂತ್ರ್ಯ ಸಿಗುವ ಮುನ್ನ ಆದ ರಾಜಕೀಯ ಆಂದೋಲನವನ್ನು ಹಿನ್ನೆಲೆಯಾಗಿಟ್ಟುಕೊಂಡು ಬರೆದ ಕೆಲವು ಐತಿಹಾಸಿಕ ಕಾದಂಬರಿಗಳಿವೆ. ಜೀವನ ಎಂ. ಅವರ 'ಹುತಾತ್ಮನ ಹೆಂಡತಿ; ಬಸವರಾಜು ಕಟ್ಟೀಮನಿಯವರ 'ಮಾಡಿ ಮಡಿದವರು', ಅ.ನ.ಕೃ. ಅವರ 'ಅಮರ ಆಗಸ್ಟ್', ನಿರಂಜನರ 'ಚಿರಸ್ಮರಣೆ', ಬಿ. ಪುಟ್ಟಸ್ವಾಮಯ್ಯನವರ ಕೃತಿಗಳಾದ 'ನಾಯಕಮಣಿ' ಮತ್ತು 'ರತ್ನಹಾರ', ತ.ರಾ.ಸು. ಅವರ 'ರಕ್ತತರ್ಪಣ'. ೧೯೪೨ರ ಸ್ವಾತಂತ್ರ್ಯ ಚಳುವಳಿಯು ನಾಡಿನ ಬೇರೆ ಬೇರೆ ಭಾಗಗಳಲ್ಲಿ ನಡೆಯಿತು. ಈ ಚರಿತ್ರಾವಸ್ತುವನ್ನು ಹಿನ್ನೆಲೆಯಾಗಿಟ್ಟುಕೊಂಡು ರಚಿಸಿದ ಐತಿಹಾಸಿಕ ಕಾದಂಬರಿಗಳಾಗಿವೆ.

ಬ್ರಿಟಿಷರ ವಿರುದ್ಧ ಭಾರತೀಯ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಕಿತ್ತೂರು ಸಂಸ್ಥಾನವು ವಹಿಸಿದ ಪಾತ್ರವು ಚಾರಿತ್ರಿಕವಾಗಿ ಮಹತ್ವದ್ದಾಗಿದೆ. ಈ ಸಂಸ್ಥಾನ ಚಿಕ್ಕದಾದರೂ ಅದು ಬ್ರಿಟಿಷ್ ಸಾಮ್ರಾಜ್ಯದ ವಿರುದ್ಧ ತೋರಿದ ಪ್ರತಿಭಟನೆ ದೊಡ್ಡದು. ಅನಕೃ ಅವರ 'ವೀರರಾಣಿ ಕಿತ್ತೂರಚೆನ್ನಮ್ಮಾ', ರಾಜೇಶ್ವರಿ ಕೆ.ವಿ. ಅವರ 'ವೀರರಾಣಿ ಕಿತ್ತೂರ ಚೆನ್ನಮ್ಮ', ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಬ್ರಿಟಿಷರ ವಿರುದ್ಧ ವೀರಾವೇಶದಿಂದ ಹೋರಾಡಿದ ಚನ್ನಮ್ಮಳ ಜೀವನವನ್ನು ಒಳಗೊಂಡ ಕಾದಂಬರಿಗಳಾಗಿವೆ. ಕಿತ್ತೂರು ಸಂಸ್ಥಾನದ ದೊರೆ ಮಲ್ಲಸರ್ಜನ ನಿಧನಾನಂತರ ಅವನ ಹಿರಿಯ ರಾಣಿಯ ಮಗ ಶಿವಲಿಂಗ ರುದ್ರಸರ್ಜ ಪಟ್ಟಕ್ಕೆ ಬಂದನು. ಇವನು ಕಿತ್ತೂರು ಸಂಸ್ಥಾನದಲ್ಲಿ ಬಹುಕಾಲ ಆಳ್ವಿಕೆ ನಡೆಸದೆ ಕ್ಷಯರೋಗಕ್ಕೆ ತುತ್ತಾಗಿ ೧೮೨೪ರಲ್ಲಿ ತೀರಿಹೋದನು.

ಶಿವಲಿಂಗ ರುದ್ರಸರ್ಜನಿಗೆ ಮಕ್ಕಳಿಲ್ಲದ ಕಾರಣ ಚೆನ್ನಮ್ಮ ದತ್ತು ಮಗುವನ್ನು ತೆಗೆದುಕೊಳ್ಳಲು ನಿರ್ಧರಿಸುತ್ತಾಳೆ. ಆ ದತ್ತುಪುತ್ರನ ಹೆಸರಿನಿಂದ ರಾಣಿ ಚೆನ್ನಮ್ಮಾ ರಾಜ್ಯಭಾರ ನಡೆಸಿದಳು. ದತ್ತಕ ಪ್ರಕರಣದ ನೆಪವನ್ನು ಒಡ್ಡಿ ಬ್ರಿಟಿಷ್ ಅಧಿಕಾರಿ ಥ್ಯಾಕರೆ, ದತ್ತು ಸ್ವೀಕಾರಕ್ಕೆ ಸಂಬಂಧಿಸಿದ ಸಂದೇಹಗಳು ಪರಿಹಾರವಾಗುವವರೆಗೆ ಕಿತ್ತೂರಿನ ಆಡಳಿತವನ್ನು ಬ್ರಿಟಿಷ್ ಸರಕಾರವೇ ನೋಡಿಕೊಳ್ಳಬೇಕೆಂದು ಕಂಪನಿ ಸರಕಾರಕ್ಕೆ ಶಿಫಾರಸ್ಸು ಮಾಡಿದನು. ಈ ವಿಚಾರ ಅಥವಾ ವಿಷಯವನ್ನು ತಿಳಿದ ರಾಣಿಚೆನ್ನಮ್ಮ ಹಾಗೂ ಆಕೆಯ ಪ್ರಜೆಗಳು ಬ್ರಿಟಿಷರ ವಿರುದ್ಧ ಪ್ರತಿಭಟಿಸಿದರು. ಬ್ರಿಟಿಷ್ ಅಧಿಕಾರ ಮತ್ತು ಕಿತ್ತೂರು ಸಂಸ್ಥಾನದ ವಿರುದ್ಧ ಎರಡು ಸಲ ಯುದ್ಧಗಳು ನಡೆದರು. ಎರಡರಲ್ಲೂ ಚೆನ್ನಮ್ಮ ಸೋತು, ಬ್ರಿಟಿಷ್‌ರಿಗೆ ಸೆರೆಯಾಗುತ್ತಾಳೆ. ಆದರೆ ಆಕೆ ತೋರಿದ ಧೈರ್ಯ, ಶೌರ್ಯ, ಸಾಹಸಗಳು ಮುಂದಿನ ಹೋರಾಟಗಾರರಿಗೆ ಸ್ಫೂರ್ತಿಯ ನೆಲೆಯಾದವು. ಬ್ರಿಟಿಷ್‌ರ ಬಂಧನದಲ್ಲಿದ್ದ ರಾಣಿಚೆನ್ನಮ್ಮ ತನ್ನ ಅನುಚರರನ್ನು ಅಲ್ಲಿಂದಲೇ ಸ್ವಾತಂತ್ರ್ಯ ಕ್ರಾಂತಿಗಾಗಿ ಹುರಿದುಂಬಿಸುತ್ತಾ ಕ್ರಿ.ಶ. ೧೮೨೯ರಲ್ಲಿ ಅಸುನೀಗಿದಳು.

“ವೀರರಾಣಿ ಕಿತ್ತೂರು ಚೆನ್ನಮ್ಮ' ಕಾದಂಬರಿಯನ್ನು ಬರೆದ ಅನಕೃ ಅವರು ತಮ್ಮ ಕೃತಿಯ ಮುನ್ನುಡಿಯಲ್ಲಿ ಬಸವರಾಜ ಕಟ್ಟೀಮನಿಯವರಂತೆ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಭಾರತದ ಇತಿಹಾಸದ ಪ್ರಾಚೀನತೆಯ ದೃಷ್ಟಿಯಿಂದ ರಾಣಿಚೆನ್ನಮ್ಮ ಈಚಿನವಳಾದರೂ ಅವಳ ಬಗ್ಗೆ ದೊರೆಯುವ ಐತಿಹಾಸಿಕ ಸಾಮಗ್ರಿ ತೀರ ಸ್ವಲ್ಪ. ಕಿತ್ತೂರ ಸಂಸ್ಥಾನ ಪತನವಾದ ಮೇಲೆ

ಬ್ರಿಟಿಷರು ರಾಜವಾಡೆಯನ್ನು ಲೂಟಿ ಮಾಡಿ ಅಲ್ಲಿದ್ದ ವಜ್ರ, ವೈಡೂರ್ಯಗಳನ್ನು, ನಗನಾಣ್ಯಗಳನ್ನು, ಆಭರಣಗಳನ್ನು ಇಂಗ್ಲೆಂಡಿಗೆ ಸಾಗಿಸಿದಂತೆ ರಾಣಿಗೆ ಸಂಬಂಧಿಸಿದ ವರದಿಗಳು, ಬಖೈರುಗಳು, ಪತ್ರಗಳು, ಸನ್ನದುಗಳನ್ನು ಇಂಗ್ಲೆಂಡಿಗೆ ಸಾಗಿಸಿದರು(ಅನಕೃ; ೧೯೭೧; ಮುನ್ನುಡಿ). ಇದರಿಂದಾಗಿ ಆ ಸಂಸ್ಥಾನದ ಬಗ್ಗೆ ನಮಗೆ ಮಾಹಿತಿ ದೊರೆಯುವುದು ಅತ್ಯಲ್ಪ ಮಾತ್ರ.

ಬಸವರಾಜ ಕಟ್ಟೀಮನಿಯವರು ತಮ್ಮ ಸಂಗೊಳ್ಳಿರಾಯ ನಾಯಕ ಕಾದಂಬರಿಯ ಮುನ್ನುಡಿಯಲ್ಲಿ ಈ ರೀತಿ ಹೇಳಿದ್ದಾರೆ. “ಸಂಗೊಳ್ಳಿ ರಾಯನಾಯಕನು ಸಂಸ್ಥಾನಿಕನಾಗಿರಲಿಲ್ಲ. ಶ್ರೀಮಂತನಾಗಿರಲಿಲ್ಲ. ಜನಸಾಮಾನ್ಯರ ಪ್ರತಿನಿಧಿಯಾಗಿದ್ದ. ಆ ಕಡುಗಲಿಯ ಸ್ವಾಭಿಮಾನ, ಸ್ವದೇಶಾಭಿಮಾನ, ಸ್ವಾತಂತ್ರ್ಯ ಪ್ರೇಮ, ಸೋಲನ್ನರಿಯದ ಅಪ್ರತಿಮ ಪೌರುಷ ಇತ್ಯಾದಿ ಸದ್ಗುಣಗಳಿಂದ ಮೆರೆದು ಇಂದಿಗೂ ಲಕ್ಷಾಂತರ ಜನರ ಆರಾಧ್ಯಮೂರ್ತಿಯಾಗಿ ಉಳಿದಿದ್ದಾನೆ. ಇಂಥ ಮಹಾವೀರನ ಜೀವನದ ಬಗೆಗೆ ಕಾದಂಬರಿ ಬರೆಯುವುದು ನನಗೊಂದು ಅಭಿಮಾನದ ವಿಷಯ. ಇಂದಿನ ಯುವ ಜನಾಂಗವು ರಾಯಣ್ಣನ ಜೀವನದ ಕಥೆಯಿಂದ ಸಾಕಷ್ಟು ಸ್ಫೂರ್ತಿ ಪಡೆಯಬಹುದು” (ಬಸವರಾಜ ಕಟ್ಟೀಮನಿ; ೧೯೬೬; ಪು. ಮುನ್ನುಡಿ) ಎಂದಿದ್ದಾರೆ.

ಇಕ್ಕೇರಿ ವಂಶದ ಅರಸರಲ್ಲಿ ದೊಡ್ಡ ವೀರರಾಜನು ತನ್ನ ಸ್ವಸಾಮರ್ಥ್ಯದಿಂದ ರಾಜ್ಯಭಾರ ಮಾಡಿದವನು. ದೊಡ್ಡ ವೀರರಾಜೇಂದ್ರನ ತಮ್ಮನಾದ ಲಿಂಗರಾಜ ಕೆಲವು ವರ್ಷಗಳ ಕಾಲ ಇಕ್ಕೇರಿಯನ್ನು ಆಳಿದನು. ನಂತರ ಆತನ ಮಗ ಚಿಕ್ಕವೀರ ರಾಜೇಂದ್ರ ಅಧಿಕಾರಕ್ಕೆ ಬರುತ್ತಾನೆ. ಈ ಚಿಕ್ಕವೀರರಾಜ, ಸುಖಲೋಲುಪತೆ, ಲಂಟಪತನದಿಂದ ರಾಜ್ಯಾಡಳಿತವನ್ನು ನಿರ್ಲಕ್ಷಿಸುತ್ತಾನೆ. ಇದರಿಂದ ಕೊಡಗು ಆಂಗ್ಲರ ಕೈವಶವಾಯಿತು. ‘ಚಿಕ್ಕವೀರರಾಜನ ಕೊನೆಯ ವರ್ಷದ ಆಳ್ವಿಕೆಯೇ ‘ಚಿಕ್ಕವೀರ ರಾಜೇಂದ್ರ’ ಕಾದಂಬರಿಯ ವಸ್ತು. ಆಂಗ್ಲರ ಕೈ ವಶವಾದ ಕೊಡಗನ್ನು ಸ್ವತಂತ್ರಗೊಳಿಸಬೇಕೆಂದು ಅನೇಕ ಕೊಡಗು ದೇಶದ ಅಭಿಮಾನಿಗಳು ಹೋರಾಡಿದರು. ಜನತೆಯನ್ನು ಹುರಿದುಂಬಿಸಿ ಹೋರಾಡಿದ ವೀರನಾಯಕರನ್ನು ಕುರಿತು ೪ ಕಾದಂಬರಿಗಳು ರಚಿಸಲ್ಪಟ್ಟಿವೆ. ಮಾಸ್ತಿಯವರ ‘ಚಿಕ್ಕವೀರ ರಾಜೇಂದ್ರ, ನಿರಂಜನರ ಸ್ವಾಮಿ ಅಪರಂಪಾರ ಭಾಗ-೧ ಮತ್ತು ಭಾಗ-೨ ಹಾಗೂ ಕಲ್ಯಾಣಸ್ವಾಮಿ ಪ್ರಮುಖವಾದವು. ನಾ. ಡಿಸೋಜರವರು ‘ಇಕ್ಕೇರಿಯಲ್ಲಿ ಕ್ರಾಂತಿ’ ಎಂಬ ಐತಿಹಾಸಿಕ ಕಾದಂಬರಿಯನ್ನು ರಚಿಸಿದ್ದಾರೆ.

ಹೈದರನನ್ನು ಕುರಿತು ಕಾದಂಬರಿ ರಚಿಸಿದ ವೀರಕೇಸರಿ ಸೀತಾರಾಮಯ್ಯ ಶಾಸ್ತ್ರಿಯವರು ತಮ್ಮ ‘ರಾಜ ಪಂಜರ’ ಕಾದಂಬರಿಯ ಮುನ್ನುಡಿಯಲ್ಲಿ “ಇದು ಹೈದರಾಲಿಖಾನನ ಮತ್ತೊಂದು ಐತಿಹಾಸಿಕ ಕಾದಂಬರಿ. ಹೈದರನು ಶ್ರೀರಂಗಪಟ್ಟಣಕ್ಕೆ ಸಾಮಾನ್ಯ ಸೈನಿಕನಾಗಿ ಬಂದು ಸೇರಿದ ಮೇಲೆ ಅಧಿಕಾರದ ಹಂತ ಹಂತಗಳನ್ನು ಏರುತ್ತ ಸರ್ವಾಧಿಕಾರಿಯಾಗುವ ಸಂಧಿಕಾಲದ ಕಥೆಯಿದು” (ಮೀನಾಕ್ಷಿ ಜಂಗಮನಿ; ೨೦೧೦; ಪು. ೫೪೨).

ಸೀತಾರಾಮಶಾಸ್ತ್ರಿಯವರು ಟಿಪ್ಪುಸುಲ್ತಾನನ್ನು ಕುರಿತು ‘ದೌಲತ್’ ಮತ್ತು ‘ಬ್ರಾಹ್ಮಣರ ಪಿತೂರಿ’ ಎಂಬೆರಡು ಕಾದಂಬರಿಗಳನ್ನು ರಚಿಸಿದ್ದಾರೆ.

‘ದೌಲತ್’ ಕಾದಂಬರಿಯ ಮುನ್ನುಡಿಯಲ್ಲಿ ಸೀತಾರಾಮಶಾಸ್ತ್ರಿಯವರು ಈ ರೀತಿಯಾಗಿ ಹೇಳಿದ್ದಾರೆ. “ಹೈದರಾಲಿಯ ಗತಿಸಿದ ನಂತರ ಟಿಪ್ಪುಸುಲ್ತಾನನ ೧೭ ವರ್ಷಗಳ ರಾಜಕೀಯ ಜೀವನವು ಈ ಕಾದಂಬರಿಯಲ್ಲಿ ಕಥಾವಸ್ತುವಾಗಿ ತೆರೆದುಕೊಳ್ಳಲ್ಪಟ್ಟಿದೆ. ಟಿಪ್ಪೂಸುಲ್ತಾನನ ಆಸ್ಥಾನದಲ್ಲಿದ್ದು ಆ ದರಬಾರಿನಲ್ಲಿ ಅತ್ಯಂತ ಗೌರವವನ್ನು ಪಡೆದಿದ್ದ ವಿದ್ವಾಂಸನೊಬ್ಬನು ಈ ಚರಿತ್ರೆಯನ್ನು ಬರೆದಿದ್ದಾನೆ. ಆಜ್ಞಾನುಸಾರ ಇಂಗ್ಲೆಂಡಿನಲ್ಲಿ ‘ರೈನ್ ಟಿಪ್ಪೂಸುಲ್ತಾನ್’ ಎಂಬ ಗ್ರಂಥವೊಂದು ಸುಮಾರು ೧೦೦ ವರ್ಷಗಳ ಹಿಂದೆ ಪ್ರಕಟಿಸಲ್ಪಟ್ಟಿದೆ. ಈ ‘ದೌಲತ್’ ಕಾದಂಬರಿಯ ಅನೇಕ ಘಟನೆಗಳು, ಸನ್ನಿವೇಶಗಳು, ವ್ಯಕ್ತಿಗಳು - ಇದನ್ನೆಲ್ಲ ಆ ಗ್ರಂಥದ ಮೇಲೆ ತೆಗೆದುಕೊಳ್ಳಲ್ಪಟ್ಟಿದೆ” (ಸೀತಾರಾಮಶಾಸ್ತ್ರಿ; ೧೯೯೦; ಪು. ಮುನ್ನುಡಿ-೩). ಆಧ್ಯಾತ್ಮಿಕ ರಂಗದಲ್ಲಿ ಬೆಳೆದ ದಿವ್ಯ ವ್ಯಕ್ತಿಗಳ ಚರಿತ್ರೆಯನ್ನು ಐತಿಹಾಸಿಕ ಕಾದಂಬರಿಗಳ ಮೂಲಕ ಎತ್ತಿ ತೋರಿಸುವ ಪ್ರಯತ್ನ ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ನಡೆದಿರುವುದು ಕಂಡು ಬರುತ್ತದೆ. ಆರ್. ಕಲ್ಯಾಣಮ್ಮ ಅವರ ‘ಭಕ್ತ ಮೀರಾ’ ಎಂಬ ಕೃತಿ ಶ್ರೀಕೃಷ್ಣ ಭಕ್ತೆ ಮೀರಾಳ ಜೀವನ ವೃತ್ತಾಂತಕ್ಕೆ ಸಂಬಂಧಿಸಿದ ಕೃತಿಯಾಗಿದೆ. ತ.ರಾ.ಸು. ಅವರ ಅಗ್ನಿರಥ - ಮುಕ್ತಿಪಥ ಅಲ್ಲಮನ ವ್ಯಕ್ತಿತ್ವವನ್ನು ಕುರಿತ ಐತಿಹಾಸಿಕ ಕಾದಂಬರಿಯಾಗಿದೆ.

ಬಿ. ಪುಟ್ಟಸ್ವಾಮಯ್ಯನವರು ತಮ್ಮ ಕಲ್ಯಾಣ ಕ್ರಾಂತಿ ಸಂಪುಟ ೧ ಮತ್ತು ೨ರಲ್ಲಿ ಬಸವಣ್ಣನಿಗಿಂತ ಬಿಜ್ಜಳನಿಗೆ ಹೆಚ್ಚು ಒತ್ತುಕೊಟ್ಟು ರಚಿಸಿದ್ದು ಕಂಡು ಬರುತ್ತದೆ. ಅವರೇ ಕಾದಂಬರಿಯ ಮುನ್ನುಡಿಯಲ್ಲಿ ಹೇಳುವಂತೆ “ಕನ್ನಡ ನಾಡು-ನುಡಿ ಸಂಸ್ಕೃತಿಗಳ ಇತಿಹಾಸದಲ್ಲಿ ಕಲ್ಯಾಣಿಯ ಚಾಲುಕ್ಯ ಅರಸರ ಕಾಲವು ನಾನಾ ದೃಷ್ಟಿಯಿಂದ ಪ್ರಾಮುಖ್ಯವೂ, ಪ್ರಭಾವಪೂರ್ಣವೂ ಆಗಿರುತ್ತದೆ. ವಂಶದ ಕೊನೆಯ ಪ್ರಭಾವಶಾಲಿ ಅರಸನಾಗಿದ್ದ ಪೆರ್ಮ ಜಗದೇಕಮಲ್ಲನ ಅನಂತರ ಚಾಲುಕ್ಯ ಸಿಂಹಾಸನವನ್ನೇರಿದ, ನೂರ್ಮಡಿ ತೈಲಪನು ವಿಲಾಸಪ್ರಿಯನೂ, ಆಲಸಿಯೂ, ರಾಜಕಾರಣದಲ್ಲಿ ಅನನುಭವಿಯೂ ಆಗಿದ್ದುದರಿಂದ ಆಡಳಿತ ಸೂತ್ರಗಳು ರಾಜ್ಯದ ಪ್ರಮುಖ ಸಾಮಂತನೂ ಮಹಾದಂಡ ನಾಯಕನೂ ಆಗಿದ್ದ ಕಲಚೂರ್ಯ ಬಿಜ್ಜಳನ ಅಧೀನವಾದವು. ಈ ರಾಜ್ಯಾಪಹಾರ ನಡೆದ ನಂತರ ೧೨ನೆಯ ಶತಮಾನದಲ್ಲಿ ಅಭೂತಪೂರ್ವವಾದ ಸಾಹಿತ್ಯ, ಧಾರ್ಮಿಕ ಕ್ರಾಂತಿಯ ಹೊಳಪನ್ನು ಚೆಲ್ಲಿ ಬಿಜ್ಜಳನ ರಾಜ್ಯ ಕಾಲವನ್ನು ಐತಿಹಾಸಿಕ ಪ್ರಾಮುಖ್ಯತೆಗೇರಿಸಿದ ಭಕ್ತಿಭಂಡಾರಿ ಬಸವಣ್ಣನವರ ಕಾಲ ಜೀವನಗಳನ್ನು ಚಿತ್ರಿಸುವುದು ಈ ಬೃಹತ್ ಕಾದಂಬರಿಯ ಉದ್ದೇಶವಾಗಿದೆ”(ಬಿ. ಪುಟ್ಟಸ್ವಾಮಯ್ಯ; ೨೦೦೪; ಪು. ಮುನ್ನುಡಿ) ಎನ್ನುತ್ತಾರೆ.

ಹನ್ನೆರಡನೆಯ ಶತಮಾನದ ಭಾರತ ವಿಶೇಷವಾಗಿ ಕರ್ನಾಟಕದ ಸಾಂಸ್ಕೃತಿಕ ಜೀವನಕ್ಕೆ ಹೊಸದಿಕ್ಕು ತೋರಿದ ಮಹಾನುಭಾವ ಬಸವಣ್ಣನ ಕುರಿತು ಅನೇಕ ಕಾದಂಬರಿಗಳು ರಚಿತಗೊಂಡಿವೆ. ‘ಉದಯರವಿ’, ‘ರಾಜ್ಯಪಾಲ’, ‘ಕಲ್ಯಾಣೇಶ್ವರ’, ‘ನಾಗಬಂಧ’, ‘ಮುಗಿಯದ ಕನಸು’, ‘ಕ್ರಾಂತಿ ಕಲ್ಯಾಣ’ ಎಂಬ ಆರು ಕೃತಿಗಳನ್ನು ಬಿ. ಪುಟ್ಟಸ್ವಾಮಯ್ಯನವರು ರಚಿಸಿದ್ದಾರೆ. ತಿಪ್ಪೇರುದ್ರಸ್ವಾಮಿಯವರು ‘ಕರ್ತಾರನ ಕಮ್ಮಟ’, ಜೆ.ಎಚ್. ಹನ್ನೆರಡುಮಠ ಅವರು ‘ಕೂಗಿತ್ತು ಕೂಡಲ ಸಂಗಮ’, ಶಾಂತಾದೇವಿ ಮಾಳವಾಡರು ‘ಬಸವ ಪ್ರಕಾಶ’ ಎಂಬ ಕೃತಿಯನ್ನು

ರಚಿಸಿದರು. ಕರ್ನಾಟಕದ ಚರಿತ್ರೆಯಲ್ಲಿ ಶಿವಶರಣರ ಸಾಮಾಜಿಕ, ಧಾರ್ಮಿಕ ಕ್ರಾಂತಿ ಒಂದು ವಿಶಿಷ್ಟ ಸಾಂಸ್ಕೃತಿಕ ಆಂದೋಲನದ ಮುಖಂಡತ್ವ ವಹಿಸಿದ ಭಕ್ತಿಭಂಡಾರಿ ಬಸವಣ್ಣನ ಅಪೂರ್ವ ಜೀವನ 'ಬಸವ ಪ್ರಕಾಶ' ಕೃತಿಯ ವಸ್ತು. ಜಿ.ಎಸ್. ಶಿವರುದ್ರಪ್ಪನವರು 'ಕರ್ಮಯೋಗಿ' ಕಾದಂಬರಿ ರಚಿಸಿದ್ದಾರೆ. ಮಹಾಶಿವಶರಣೆಯಾದ ಅಕ್ಕಮಹಾದೇವಿಯ ಜೀವನವನ್ನು ಕುರಿತು ತಿಪ್ಪೇರುದ್ರಸ್ವಾಮಿಯವರು 'ಕದಳಿಯ ಕರ್ಪೂರ', ಬಸವರಾಜ ಕಟ್ಟೀಮನಿಯವರು 'ಗಿರಿಯ ನವಿಲು', ಮಾತೆ ಮಹಾದೇವಿಯವರು 'ತರಂಗಿಣಿ' ಎಂಬ ಕಾದಂಬರಿಯನ್ನು ರಚಿಸಿದ್ದಾರೆ.

ಹೀಗೆ ಐತಿಹಾಸಿಕ ಕಾದಂಬರಿಗಳ ಹುಟ್ಟು, ವಿಕಾಸವನ್ನು ನಿರೂಪಿಸುವುದರ ಜೊತೆಗೆ ಕನ್ನಡ ಸಾಹಿತ್ಯದಲ್ಲಿ ವಿವಿಧ ಮನೆತನದ ಪ್ರಮುಖ ಅರಸರು, ಪ್ರಸಿದ್ಧ ವೀರಮಹಿಳೆಯರು, ಸ್ವಾತಂತ್ರ್ಯ ಹೋರಾಟಗಾರರು ಮತ್ತು ಶಿವಶರಣರನ್ನು ಕುರಿತು ವಿಪುಲ ಸಾಹಿತ್ಯ ರಚನೆಯಾಗಿರುವುದನ್ನು ಗುರುತಿಸಲಾಗಿದೆ.

□□

ಅಧ್ಯಾಯ : ನಾಲ್ಕು

# ಕನ್ನಡ ಐತಿಹಾಸಿಕ ಕಾದಂಬರಿಗಳಲ್ಲಿ ಮಹಿಳಾ ಪಾತ್ರಗಳ ಸೃಷ್ಟಿ - ಸ್ವರೂಪ ಮತ್ತು ಆಶಯಗಳು

---

**೪.೧. ಕೇಂದ್ರ ಪಾತ್ರಗಳು**

೪.೧.೧. ಅನುಭಾವಿ ಮಹಿಳೆಯರು

೪.೧.೨. ವೀರವನಿತೆಯರು

೪.೧.೩. ಕಲಾವಿದೆಯರು

೪.೧.೪. ದಾನಗುಣದ ಪಾತ್ರಗಳು

**೪.೨. ಪೋಷಕ ಪಾತ್ರಗಳು**

೪.೨.೧. ಗಣಿಕಾ ಸ್ತ್ರೀಯರು

೪.೨.೨. ನೇತ್ಯಾತ್ಮಕ ಪಾತ್ರಗಳು

# ಅಧ್ಯಾಯ : ನಾಲ್ಕು

# ಕನ್ನಡ ಐತಿಹಾಸಿಕ ಕಾದಂಬರಿಗಳಲ್ಲಿ ಮಹಿಳಾ ಪಾತ್ರಗಳ ಸೃಷ್ಟಿ - ಸ್ವರೂಪ ಮತ್ತು ಆಶಯಗಳು

**ಸಾ**ಹಿತ್ಯ ಜನಜೀವನದ ಪ್ರತಿಬಿಂಬ. ಬರಹಗಾರರು ತಾವು ಕಂಡುಂಡ ಬದುಕಿನ ಸತ್ಯಗಳನ್ನು ಬರಹದ ಮೂಲಕ ಅಭಿವ್ಯಕ್ತಗೊಳಿಸುತ್ತಾರೆ. ಜೀವನಾನುಭವ ಸಾಹಿತ್ಯದಲ್ಲಿ ಅಭಿವ್ಯಕ್ತಿ ಕೊಂಡಾಗ ಸಹಜವಾಗಿ ಬದುಕಿನ ವಿವಿಧ ಮುಖಗಳ ಪಾತ್ರಗಳು ಹುಟ್ಟಿಕೊಳ್ಳುತ್ತವೆ. ಕೃತಿಯಲ್ಲಿ ಕಾಣಿಸಿಕೊಳ್ಳುವ ಪಾತ್ರಗಳು ಸಂದರ್ಭ ಸ್ವಭಾವಕ್ಕೆ ಅನುಗುಣವಾಗಿ ಚಿತ್ರಿತವಾಗಿಯೇ? ಅವುಗಳ ಪೋಷಣೆಯಲ್ಲಿ ಲೇಖಕರು ತೋರಿದ ಕೌಶಲ್ಯವೇನು? ಎಂಬುದರ ಮೇಲೆ ಯಶಸ್ಸು ನಿಂತಿರುತ್ತದೆ. ಒಂದು ಕೃತಿಯಲ್ಲಿ ಪಾತ್ರವೊಂದು ಶ್ರೇಷ್ಠವಾಗಬೇಕಾದರೆ, ಪಾತ್ರದ ಗುಣಸ್ವಭಾವಗಳು ಓದುಗರ ಭಾವನೆಗಳಿಗೆ ಸ್ಪಂದಿಸುವಂತಿರಬೇಕು. ಅಂತಹ ಪಾತ್ರಗಳು ಓದುಗರ ಮೇಲೆ ಸಾಕಷ್ಟು ಪರಿಣಾಮ ಬೀರಿ, ಹೆಜ್ಜೆ ಹೆಜ್ಜೆಗೂ ಅವರನ್ನು ಚಿಂತಿಸುವಂತೆ ಮಾಡುತ್ತವೆ. ಕಾದಂಬರಿಕಾರರು ತಮ್ಮ ಕೃತಿಯಲ್ಲಿ ಚಿತ್ರಿಸಿದ ಪಾತ್ರಗಳೆಲ್ಲವೂ ಶ್ರೇಷ್ಠವಾಗಿರುತ್ತವೆಯೆಂದು ಹೇಳಲು ಅಸಾಧ್ಯ. ಕಾದಂಬರಿಕಾರನ ಪ್ರತಿಭೆ, ಶಕ್ತಿ ಮೇಲೆ ಪಾತ್ರದ ಶ್ರೇಷ್ಠತೆ ನಿಂತಿರುತ್ತದೆ.

ಚಾರಿತ್ರಿಕ ವ್ಯಕ್ತಿಯನ್ನು ಕುರಿತು ಕಾದಂಬರಿ ರಚಿಸುವಾಗ ಲೇಖಕರು ತುಂಬಾ ಎಚ್ಚರವಹಿಸಬೇಕಾಗುತ್ತದೆ. ಐತಿಹಾಸಿಕ ಮತ್ತು ಸಾಹಿತ್ಯಿಕ ಆಧಾರಗಳಿಲ್ಲದೆ ಮನಸ್ಸಿಗೆ ತೋಚಿದಂತೆ ಬರೆಯಬಾರದು. ಲೇಖಕರು ತಾವು ಪ್ರಮುಖವಾಗಿ ಹೇಳಬೇಕಾಗಿರುವುದನ್ನು ಗಮನದಲ್ಲಿಟ್ಟುಕೊಂಡು ಚಾರಿತ್ರಿಕ ವ್ಯಕ್ತಿತ್ವಕ್ಕೆ ಧಕ್ಕೆ ಬಾರದಂತೆ ಗಮನಿಸಬೇಕಾಗುತ್ತದೆ. ಚಾರಿತ್ರಿಕ ನಾಯಕ ಅಥವಾ ನಾಯಕಿಯ ಸಾಧಕ - ಬಾಧಕಗಳನ್ನು ವಸ್ತುನಿಷ್ಠವಾಗಿ ನೋಡಬೇಕು. ಚಾರಿತ್ರಿಕ ವ್ಯಕ್ತಿಯನ್ನು ಆಧರಿಸಿ ಕೃತಿಯನ್ನು ರಚಿಸುವಾಗ ಆ ವ್ಯಕ್ತಿಯ ಅಥವಾ ಅವರ ಕಾಲದ ಚರಿತ್ರೆಯನ್ನು ಸಮಕಾಲೀನ ಸಂದರ್ಭದಲ್ಲಿಟ್ಟು ನೋಡಬೇಕಾಗಿದೆ. ಹಾಗೆಯೇ ಚರಿತ್ರೆಯಲ್ಲಿ ದಾಖಲೆಯಾಗದೆ ಹೋದವರ ಚರಿತ್ರೆಯನ್ನು ಪುನರ್‌ಸೃಷ್ಟಿ ಮಾಡಬಹುದು. ಆದರೆ ಸುಳ್ಳಿನ ಸೌಧವನ್ನು ಕಟ್ಟದೆ, ಸತ್ಯಕ್ಕೆ ಹತ್ತಿರವಾದ ಊಹೆಯನ್ನಾದರೂ ದಾಖಲಿಸಬೇಕು. ಇದಕ್ಕೆ ಬಹುಮುಖ್ಯವಾಗಿ ಬೇಕಾಗಿರುವುದು ಸೃಜನಶೀಲ ಮನಸ್ಸು ಮತ್ತು ಗ್ರಹಿಕೆ. ಯಾವುದೇ ಒಂದು ಸೃಜನಶೀಲ ಕೃತಿಯನ್ನು ರಚಿಸುವುದು ತುಂಬ ಕಷ್ಟದ ಕೆಲಸ. ಶಾಸನಗಳ ಖಚಿತವಾದ ಆಧಾರವಾಗಲೀ ಅಥವಾ ಸಾಹಿತ್ಯಿಕ ಆಧಾರವಾಗಲಿ ಇಲ್ಲದಿರುವಾಗ ಅದು ಇನ್ನೂ ಕಷ್ಟದ ಕೆಲಸ. ಶಾಸನಗಳು

ಖಚಿತವಾದ ಮಾಹಿತಿಯನ್ನು ನೀಡಲಾರವು. ಏಕೆಂದರೆ ಸಾಹಿತ್ಯಿಕ ಕೃತಿಗಳಲ್ಲಿ ಲೇಖಕರು ತಾವು ಯಾವ ಚಾರಿತ್ರಿಕ ವ್ಯಕ್ತಿಯನ್ನು ಕುರಿತು ಬರೆಯಲು ಹೊರಟಿದ್ದಾರೋ ಆ ವ್ಯಕ್ತಿಯ ಮೇಲಿನ ಅತೀವ ಭಕ್ತಿ ಹಾಗೂ ಗೌರವಗಳಿಂದಾಗಿ ಉತ್ಪ್ರೇಕ್ಷವಾಗಿ ಬರೆಯಬಹುದು ಅಥವಾ ಯಾವುದೇ ಒಂದು ಸನ್ನಿವೇಶದ ಚಿತ್ರಣ ಸಂದರ್ಭದಲ್ಲಿ ಭಾವುಕತೆಗೆ ಒಳಗಾಗಬಹುದು. ಹೀಗಾದಾಗ ವಾಸ್ತವಿಕತೆಯನ್ನು ಮರೆಯುವ ಸಾಧ್ಯತೆಯೇ ಹೆಚ್ಚು.

ಚಾರಿತ್ರಿಕ ಕಾದಂಬರಿಗಳಲ್ಲಿ ಪಾತ್ರ ದರ್ಶನಕ್ಕೆ ವಿಶೇಷವಾದ ಪ್ರಾಧಾನ್ಯ ಒದಗುತ್ತದೆ. ಕಾದಂಬರಿಕಾರರೂ ಪಾತ್ರಗಳ ನಿರ್ಮಾಣದಲ್ಲಿಯೇ ಹೆಚ್ಚಿನ ಸ್ವಾತಂತ್ರ್ಯ ವಹಿಸುವ ಸಂಭವವುಂಟು. ಆದರೂ ಚರಿತ್ರೆಗೆ ಅನುಗುಣವಾಗಿ ನಡೆಯಬೇಕು, ಸನ್ನಿವೇಶಗಳನ್ನು ವಿವರಿಸುವಾಗ ಅನಿವಾರ್ಯವಾಗಿ ಕಲ್ಪಿತ ಪಾತ್ರಗಳು ಕಾದಂಬರಿಕಾರ ಕಲಾಕುಲುಮೆಯಲ್ಲಿ ಹುಟ್ಟಿಕೊಳ್ಳುತ್ತವೆ. ಏಕೆಂದರೆ ಪಾತ್ರಗಳ ಸ್ವಭಾವಗಳೇ ಕ್ರಿಯೆಗೆ ಮೂಲವಾಗಿರುವುವು. ಆದ್ದರಿಂದ ಚರಿತ್ರೆ ಹೀಗೆ ನಡೆಯಿತು ಎಂದು ತಿಳಿಸಿದರೆ, ಕಾದಂಬರಿ ಏಕೆ ನಡೆಯಿತು? ಹೇಗೆ ನಡೆಯಿತು? ಎನ್ನುವುದನ್ನು ಚಿತ್ರಿಸುತ್ತದೆ. ಚರಿತ್ರೆಯ ಅಸ್ಥಿಪಂಜರವನ್ನು ಕಾದಂಬರಿ ಒಂದು ಜೀವಂತ ವ್ಯಕ್ತಿಯನ್ನಾಗಿಸುತ್ತದೆ.

ಕಾದಂಬರಿಕಾರರು ಕಥೆಯನ್ನು ಹೇಳುತ್ತಾರೆ. ಪ್ರತಿ ಕಾದಂಬರಿಯಲ್ಲಿಯೂ ಕಥೆಯ ಎಳೆ ಇದ್ದೇ ಇರುತ್ತದೆ. ಕಥೆಯಲ್ಲಿ ಅಡಕವಾಗಿರುವ ಘಟನೆಗಳಿಗೆ ಪರಸ್ಪರ ಸಂಬಂಧವನ್ನು ಯಾವುದಾದರೂ ರೀತಿಯಲ್ಲಿ ಕಾದಂಬರಿಕಾರರು ಕಲ್ಪಿಸಬೇಕು. ಪ್ರತಿ ಕಾದಂಬರಿಕಾರರೂ ತಮ್ಮ ಕೃತಿಯಲ್ಲಿ ಒಂದು ಜಗತ್ತನ್ನು ಸೃಷ್ಟಿಸಲು ಹೊರಡುತ್ತಾರೆ. ಆ ಜಗತ್ತಿನ ಮೂಲಕ ಓದುಗರ ಮೇಲೆ ಯಾವ ಪರಿಣಾಮವನ್ನು ಉಂಟುಮಾಡಲು ಬಯಸುತ್ತಾರೋ ಅದಕ್ಕೆ ಪೂರಕವಾದ ವಿವರಗಳನ್ನು ಆರಿಸಿಕೊಳ್ಳುತ್ತಾರೆ. ಒಂದು ವರ್ಣನೆಯನ್ನೋ, ಘಟನೆಯನ್ನೋ ಅದರ ಸ್ವಾರಸ್ಯ, ಸೌಂದರ್ಯಗಳಿಗಾಗಿಯೇ ಅವರು ಸೇರಿಸಬಹುದು. ಒಮ್ಮೊಮ್ಮೆ ವಸ್ತುವಿನ ಬೆಳವಣಿಗೆಗೆ ಅತ್ಯಗತ್ಯವಲ್ಲದ ಪಾತ್ರಗಳನ್ನು ಸಹ ಸೃಷ್ಟಿಸಬಹುದು.

ಪಾತ್ರಗಳು ಕಾದಂಬರಿಯ ಬುನಾದಿ; ಪಾತ್ರಗಳಿಲ್ಲದೆ ಘಟನೆಗಳಿರುವುದಿಲ್ಲ. ಅಂತೆಯೇ ಅವು ಪ್ರಮುಖ ಸ್ಥಾನವನ್ನು ಪಡೆದಿವೆ. ಪಾತ್ರ ಮತ್ತು ಘಟನೆಗಳು ಕಥಾನಕದ ಎರಡು ಅಂಗಗಳಾಗಿವೆ. ಒಂದು ಜನಾಂಗದ ಅಥವಾ ಮನುಕುಲದ ಎಲ್ಲ ಕಾಲಗಳ ಅಥವಾ ವ್ಯಕ್ತಿಯ ಸಮಸ್ತ ಜೀವನವನ್ನು ಕಾದಂಬರಿ ಒಳಗೊಳ್ಳಬಲ್ಲದು. ಕೆಲವೊಮ್ಮೆ ಪಾತ್ರ ಪ್ರಾಧಾನ್ಯತೆಯಲ್ಲಿಯೇ ಕೃತಿಯ ಯಶಸ್ಸು ಅಡಗಿರುತ್ತದೆ. "ಕೃತಿಯಲ್ಲಿ ಪಾತ್ರಗಳ ಸತ್ತೆ ಏನೆಂಬ ಸಮಸ್ಯೆ ಇಂದಿಗೂ ಬಗೆಹರಿದಿಲ್ಲ. ಬಗೆಹರಿಯುವಂತೆಯೂ ಇಲ್ಲ. ಇವು ನಿಜ ಜೀವನದ ವ್ಯಕ್ತಿಗಳ ಅನುಕೃತಿ ಇಲ್ಲವೆ ಪ್ರತಿಬಿಂಬಗಳಾಗಿ ಕಾಣುತ್ತವೆ. ಆದರೆ ಪಾತ್ರಗಳಿಗೂ ಸ್ವತಂತ್ರವಾದ ನೈಜ ಅಸ್ತಿತ್ವ ಇರಬಹುದೆಂಬ ಇಟಲಿಯ ಪ್ರಸಿದ್ಧ ನಾಟಕಕಾರ ಪಿರ್‍ಯಾಂಡೆಲೋ ತನ್ನ ಒಂದು ನಾಟಕದಲ್ಲಿ ಪ್ರತಿಪಾದಿಸಿದ್ದಾನೆ" (ಕೀರ್ತಿನಾಥ ಕುರ್ತಕೋಟಿ; ೧೯೮೩; ಪು. ೧೫).

ಪಾತ್ರಗಳನ್ನು ಸಾಮಾನ್ಯವಾಗಿ ಸರಳ ಪಾತ್ರಗಳು ಮತ್ತು ಸಂಕೀರ್ಣ ಪಾತ್ರಗಳೆಂದು ವಿಂಗಡಿಸಬಹುದು. ಇವು ಲೇಖಕರ ಕಲ್ಪನಾದೃಷ್ಟಿಯಲ್ಲಿ ಮೈದಾಳುತ್ತವೆ. ಜೀವನಾನುಭವ,

ಸೂಕ್ಷ್ಮಪ್ರಜ್ಞೆ, ಸಹಜತೆ, ಮಣ್ಣಿನ ವಾಸನೆಯುಳ್ಳ ಪಾತ್ರಗಳು ಜೀವಂತಿಕೆಯನ್ನು ಪಡೆಯುತ್ತವೆ. ಕೃತಿ ಕೃತಿಕಾರರ ಹೆಸರುಗಳು ಮರೆತುಹೋದರೂ ಶ್ರೇಷ್ಠ ಪಾತ್ರಗಳು ವಾಚಕರ ಪ್ರಜ್ಞೆಯಲ್ಲಿ ಆಳವಾಗಿ ಬೇರೂರಿ ನಿಲ್ಲುತ್ತವೆ. ಅಂಥ ಪಾತ್ರಗಳು ಪೌರಾಣಿಕ, ಸಾಮಾಜಿಕ ಇಲ್ಲವೇ ಐತಿಹಾಸಿಕ ವ್ಯಕ್ತಿಗಳ ಪಾತ್ರಗಳಾಗಿರಲು ಸಾಧ್ಯವಿದೆ. ಪಾತ್ರಗಳು ತಮ್ಮ ವೈಶಿಷ್ಟ್ಯಗಳನ್ನು ಕಾಯ್ದುಕೊಳ್ಳಬೇಕಾಗುತ್ತದೆ. ಅವರ ಕ್ರಿಯೆಗಳು ಅವರ ಸ್ವಭಾವಜನ್ಯವಾಗಿರಬೇಕು. ಕಥಾನಕದ ಘಟನಾವಳಿಗಳಿಗೆ ತಕ್ಕಂತೆ ಪಾತ್ರಗಳು ಸಜೀವವೂ ಗಟ್ಟಿಯೂ ಆಗಿದ್ದು, ಓದುಗರ ಕಣ್ಮುಂದೆ ನಿಲ್ಲಬೇಕು. ತನ್ನದೇ ಆದ ವ್ಯಕ್ತಿತ್ವ, ವೈಶಿಷ್ಟ್ಯಗಳನ್ನು ಹೊಂದಿರಬೇಕು. ಇವು ಸಂಸ್ಕೃತಿ, ನಾಗರಿಕತೆ, ವೈಚಾರಿಕತೆ, ವೈಜ್ಞಾನಿಕತೆಗಳನ್ನು ಪ್ರತಿಬಿಂಬಿಸುತ್ತವೆ. ಪಾತ್ರಗಳ ನಡೆ-ನುಡಿಗಳಲ್ಲಿಯೇ ವ್ಯಕ್ತಿಗಳ ಗುಣ ಸ್ವಭಾವಗಳು ಅಡಗಿರುತ್ತವೆ. 'ಲೋಕೋ ಭಿನ್ನ ರುಚಿ' ಎಂಬಂತೆ ಪಾತ್ರಗಳಲ್ಲಿ ಸಾತ್ವಿಕ, ರಾಜಸ, ತಾಮಸ ಗುಣಗಳನ್ನು ಕಾಣುತ್ತೇವೆ.

ಕಾದಂಬರಿಯಲ್ಲಿ ನಾವು ಪ್ರಮುಖವಾಗಿ ನಾಯಕ ಪಾತ್ರ, ಪ್ರತಿನಾಯಕ ಪಾತ್ರ, ಸ್ತ್ರೀ ಪಾತ್ರ, ಪೋಷಕ ಪಾತ್ರಗಳನ್ನು ಸಾಮಾನ್ಯವಾಗಿ ಕಾಣುತ್ತೇವೆ. ಇವರು ಚಿತ್ರಿಸಿದ ಸ್ತ್ರೀಯರು ವಜ್ರದಂತೆ ಕಠಿಣರೂ ಹೌದು, ಹೂವಿನಂತೆ ಮೃದುವೂ ಹೌದು. ಒಂದೇ ರೀತಿಯ ಹೆಣ್ಣನ್ನು ಅವರು ಚಿತ್ರಿಸುವ ಪ್ರಯತ್ನ ಮಾಡಿಲ್ಲ. ಹೆಣ್ಣಿನ ಸಾಧ್ಯ ಸಾಧ್ಯತೆಗಳನ್ನೆಲ್ಲ ಚಿತ್ರಿಸುವ ಪ್ರಯತ್ನ ಮಾಡಿದ್ದಾರೆ. ಇಂಥ ಲೇಖಕರ ಸ್ತ್ರೀ ಪಾತ್ರಗಳು ಬದುಕಿನ ಒಂದೊಂದು ಸಂದೇಶ ಸಾರುವ ಭಿತ್ತಿ ಪತ್ರಗಳಾಗಿವೆ.

ಒಟ್ಟಿನಲ್ಲಿ ಪಾತ್ರಗಳು ತಮ್ಮ ವ್ಯಕ್ತಿತ್ವ, ವಯಸ್ಸು, ಅನುಭವಗಳಿಗೆ ತಕ್ಕಂತೆ ಬೆಳೆಯಬೇಕು. ಅವು ಕಥೆಯ ಅಗತ್ಯಕ್ಕನುಗುಣವಾಗಿ ಬೆಳವಣಿಗೆ ಹೊಂದಬೇಕು. ಪ್ರತಿ ಪಾತ್ರದ ದೃಷ್ಟಿ ಕಥೆಯ ಉದ್ದೇಶದ ಕಡೆಗೆ ಇರಬೇಕು. ಪಾತ್ರ ಚಿತ್ರಣಗಳು, ಜೀವಂತಿಕೆ, ಸ್ಫುಟತೆ, ವ್ಯಕ್ತಿತ್ವದ ಅರಿವು ಕಲ್ಪನೆಯ ಆಳ, ವೈಶಾಲ್ಯ, ಪ್ರತಿಭೆ, ವಾಸ್ತವತೆ ಮುಂತಾದವುಗಳನ್ನು ಒಳಗೊಂಡಿರಬೇಕು. ಬಾಳಿನ ಸೋಲು - ಗೆಲುವುಗಳನ್ನು ಪಾತ್ರಗಳ ಮೂಲಕ ಕಂಡುಕೊಳ್ಳುತ್ತೇವೆ.

ಪ್ರತಿಯೊಂದು ಕಾದಂಬರಿಯೂ ಒಂದು ಕಥೆಯನ್ನು ಹೇಳಬೇಕು. ಕಥೆಯ ಅಂಶಕ್ಕೆ ಸಿಕ್ಕುವ ಪ್ರಾಧಾನ್ಯ ಕಾದಂಬರಿಯಿಂದ ಕಾದಂಬರಿಗೆ ಬದಲಾಗಬಹುದು. ಕೃತಿ ನಮ್ಮ ಮನಸ್ಸಿನ ಮೇಲೆ ಮೂಡಿಸುವ ಪರಿಣಾಮದಲ್ಲಿ ಕಾದಂಬರಿಗಳಲ್ಲಿ ಬೇರೆ ಬೇರೆ ಪ್ರಮಾಣದಲ್ಲಿ ಕಥೆಗೆ ಪ್ರಾಮುಖ್ಯತೆ ದೊರೆಯಬಹುದಾದರೂ ಓದುವವರ ಆಸಕ್ತಿಯನ್ನು ಹಿಡಿದಿಡುವುದರಲ್ಲಿ ಕಥೆಯ ಪಾತ್ರ ಮುಖ್ಯವಾದುದು.

ಇತಿಹಾಸಕಾರರಿಗೆ ಇಲ್ಲದಿರುವ ಸೌಲಭ್ಯಗಳು ಕಾದಂಬರಿಕಾರರಿಗುಂಟು. ಕಾಲ್ಪನಿಕ ನೆಲೆಯಲ್ಲಿ ಕಾದಂಬರಿಕಾರರು ಕೃತಿ ನಿರ್ಮಾಣ ಕಾರ್ಯದಲ್ಲಿ ಸ್ವತಂತ್ರನಾಗಿರುತ್ತಾರೆ. ಅವರ ಸೃಜನಾತ್ಮಕತೆಯನ್ನು ನಿಯಂತ್ರಿಸುವ, ಕೃತಿಯನ್ನು ಸರ್ವಗ್ರಾಹ್ಯವನ್ನಾಗಿಸುವ ಶಕ್ತಿ ಜೀವನಾನುಭವ, ವಾಸ್ತವಿಕ ಕಲ್ಪನಾ ಶಕ್ತಿಗಳನ್ನು ಅವಲಂಬಿಸಿರುತ್ತದೆ. ಪ್ರತಿಯೊಬ್ಬ ಕಾದಂಬರಿಕಾರರ ಪಾತ್ರ ನಿರೂಪಣೆಯಲ್ಲಿ ನಾವು

ಅಪೇಕ್ಷಿಸುವ ಅಂಶವೆಂದರೆ ಸಾಧಾರಣ ಅನುಭವಕ್ಕೆ ಹತ್ತಿರವಾಗಲಿ ಅಥವಾ ಕಾಲ್ಪನಿಕವಾಗಿರಲಿ, ಪುರುಷ ಮತ್ತು ಸ್ತ್ರೀ ಪಾತ್ರಗಳು ಪುಟದುದ್ದಕ್ಕೂ ಜೀವಂತ ವ್ಯಕ್ತಿಗಳಂತೆ ನಡೆದಾಡಬೇಕು. ಪುಸ್ತಕವನ್ನು ಮುಚ್ಚಿಟ್ಟು ಅದರ ವಿವರಗಳನ್ನು ಪ್ರಾಯಶಃ ಮರೆತ ಮೇಲೂ ನಮ್ಮ ನೆನಪಿನಲ್ಲಿ ಜೀವಂತ ವ್ಯಕ್ತಿಗಳಂತೆ ಉಳಿಯಬೇಕು. ಕಾದಂಬರಿಕಾರರು ಸೃಷ್ಟಿಸುವ ಪಾತ್ರಗಳು ಸುತ್ತಲಿನ ಸಮಾಜದಿಂದಲೇ ಎತ್ತಿಕೊಂಡವುಗಳಾಗಿದ್ದರೂ ಅವು ಅವರ ವಿಶಿಷ್ಟ ಮನೋಭಾವದ ಪ್ರತೀಕಗಳೂ ಆಗಿರುತ್ತವೆ. ತಮ್ಮ ಸಮಕಾಲೀನ ಸಮಾಜದ ನಡುವೆ ಬಾಳುತ್ತಿರುವುದರಿಂದ ಅಂದಂದಿನ ಸಾಮಾಜಿಕ ಮೌಲ್ಯಗಳನ್ನು ತಮ್ಮ ಅನುಭವದಿಂದ ನೋಡಿ ವ್ಯಕ್ತಿತ್ವ ನಿರ್ಮಾಣ ಮಾಡಿ ಓದುಗರಿಗೆ ಕಾದಂಬರಿಕಾರರು ನೀಡುತ್ತಾರೆ.

ಕಾದಂಬರಿಗಳ ಚಾರಿತ್ರಿಕ ವಸ್ತು ಸೃಜನಶೀಲ ಲೇಖಕರಿಗೆ ಐತಿಹಾಸಿಕವಾಗಿ ನಿರೂಪಿತವಾದ ಸಿದ್ಧಿ ಸಾಧನೆಗಳ ಬಹಳಷ್ಟು ಮಿತಿಗಳನ್ನು ಒಡ್ಡುತ್ತದೆ. ಈ ಪರಿಧಿಯ ಒಳಗೇ ತನ್ನೆಲ್ಲ ಕಲ್ಪನೆ, ಚಾರಿತ್ರಿಕ ಆಧಾರ, ಕಲಾಸ್ವರೂಪಗಳನ್ನು ಬಳಸಿಕೊಂಡು ಅದರ ಪಕ್ವಫಲವನ್ನು ಹೊರಜಗತ್ತಿಗೆ ನೀಡುತ್ತಾರೆ. ಹಾಗಾಗಿ ಲೇಖಕರು ಇತಿಹಾಸದಲ್ಲಿ ಇರುವ ಪಾತ್ರಗಳೊಂದಿಗೆ ಸಂದರ್ಭಕ್ಕೆ ತಕ್ಕಂತೆ ಪಾತ್ರವನ್ನು ಸೃಷ್ಟಿಸಿಕೊಂಡು ಮರುಜೀವವನ್ನು ನೀಡುತ್ತಾರೆ. ಕಾದಂಬರಿಕಾರರು ಒಂದೊಂದು ಸನ್ನಿವೇಶವನ್ನು ತಮ್ಮ ಕೃತಿಗಳಲ್ಲಿ ಜೀವಂತವಾಗಿ ಚಿತ್ರಿಸುತ್ತಾರೆ. ಐತಿಹಾಸಿಕ ಕಾದಂಬರಿಗಳಲ್ಲಿನ ಘಟನೆಗಳು, ಕೊಂಡಿಯಂತೆ ಬರುವ ಸನ್ನಿವೇಶಗಳು ಅವರ ಪರಿಕಲ್ಪನೆಯ ದ್ಯೋತಕವಾಗಿವೆ.

ಇತಿಹಾಸದಲ್ಲಿ ಬರುವ ಪಾತ್ರಗಳು ಆಯಾಯ ಘಟನೆಗೆ ಮಾತ್ರ ಸೀಮಿತವಾಗಿರುತ್ತವೆ. ಅವುಗಳು ಸಮಾಜದೊಂದಿಗೆ ಹೊಂದಿದ ಬಾಂಧವ್ಯ, ಸುಖ-ದುಃಖಗಳು, ರಾಜಕೀಯ, ಧಾರ್ಮಿಕ, ಕೌಟುಂಬಿಕ ನೆಲೆಗಳಲ್ಲಿ ಅವುಗಳಿಗೆ ಜೀವವನ್ನು ತುಂಬುವಂತಹ ಕೆಲಸವನ್ನು ಲೇಖಕರು ಮಾಡುತ್ತಾರೆ. ಇತಿಹಾಸದಲ್ಲಿ ಕಂಡುಬರುವ ವಿಭಿನ್ನ ಗುಣ ಮತ್ತು ಸ್ವಭಾವಗಳನ್ನು ಹೊಂದಿರುವ ಮಹಿಳಾ ಪಾತ್ರಗಳು ತಮ್ಮ ಆದರ್ಶ ವ್ಯಕ್ತಿತ್ವದಿಂದಲೇ ಪ್ರಸಿದ್ಧಿಯನ್ನು ಪಡೆದವು. ಇತಿಹಾಸದ ಘಟನೆ ಸನ್ನಿವೇಶಗಳಿಗೆ ಅಪಚಾರವಾಗದಂತೆ ಕಥಾವಸ್ತುವನ್ನು ಕಲ್ಪಿಸಿಕೊಳ್ಳಬೇಕಾಗುತ್ತದೆ. ವ್ಯಕ್ತಿಚಿತ್ರಣ, ಪಾತ್ರ ಸೃಷ್ಟಿ, ಘಟನೆಗಳ ಅನುಕ್ರಮ, ಅವುಗಳಿಗೆ ಉತ್ತೇಜಕವಾದ ಕಾರಣಗಳು ಮುಂತಾದ ವಿವರಗಳನ್ನು ಇತಿಹಾಸಕಾರರನಂತೆಯೇ ವಾಸ್ತವಿಕವಾಗಿ ನಡೆದಿರಬಹುದಾದ ರೀತಿಯಲ್ಲಿ ಕಾದಂಬರಿಕಾರರು ನಿರೂಪಿಸುತ್ತಾರೆ.

ಬರಹಗಾರರು ಸಾಮಾನ್ಯವಾಗಿ ತಮ್ಮ ಕೃತಿಯಲ್ಲಿ ಕಥೆ ಹೇಳುವ ಗುರಿಯನ್ನು ಮಾತ್ರ ಇಟ್ಟುಕೊಳ್ಳುವುದಿಲ್ಲ. ಅದರೊಡನೆ ಬೇರೆ ಯಾವುದಾದರೂ ಉದ್ದೇಶವನ್ನು ಸಾಧಿಸಲು ಯತ್ನಿಸುತ್ತಾರೆ. ಉದಾಹರಣೆಗೆ 'ವೀರ ವನಿತೆ ಕಿತ್ತೂರ ಚೆನ್ನಮ್ಮ', 'ವೀರರಾಣಿ ಕಿತ್ತೂರ ಚೆನ್ನಮ್ಮ', 'ಅಭಯರಾಣಿ' ಕಾದಂಬರಿಗಳ ಉದ್ದೇಶ ಸ್ವಾತಂತ್ರ್ಯವನ್ನು ಬಯಸುವ ಹೆಣ್ಣು ಜೀವದ ಹೋರಾಟ ಅನುಭವಗಳನ್ನು ನಿರೂಪಿಸುತ್ತವೆ. ಅಕ್ಕಮಹಾದೇವಿ, ಶಾಂತಲೆ, ಕೆಳದಿ ಚೆನ್ನಮ್ಮ, ಒನಕೆ ಓಬವ್ವ, ಚೆನ್ನಸಾನಿ, ನೀಲಾಂಬಿಕೆ, ಗಂಗಾಂಬಿಕೆ ಮುಂತಾದವರು ಆಧ್ಯಾತ್ಮಿಕ, ಕಲೆ, ಹೋರಾಟ ಹೀಗೆ ಕಾದಂಬರಿಗಳು ಹಲವು ಮುಖಗಳನ್ನು ಚಿತ್ರಿಸುವುದಾಗಿರುತ್ತದೆ.

ತಮ್ಮ ನಾಡು - ನುಡಿಗಳಿಗಾಗಿ ಪ್ರಾಣವನ್ನು ಅರ್ಪಿಸಿಕೊಂಡ ಪುರುಷರ ಸಂಖ್ಯೆ ಇತಿಹಾಸದಲ್ಲಿ ಹೆಚ್ಚು ಕಾಣುತ್ತದೆ. ಸ್ತ್ರೀಯರ ಸಂಖ್ಯೆ ಆ ಪ್ರಮಾಣದಲ್ಲಿ ದೊರೆಯುವುದಿಲ್ಲ. ಆದರೆ ದೊರೆಯುವ ವೀರ ಮಹಿಳೆಯರು ಸಾಧಿಸಿದ ಸಾಧನೆ, ತೋರಿದ ಅಸಮಾನ ಶೌರ್ಯ, ನಾಡು - ನುಡಿ ಅಭಿಮಾನ, ಬಲಿದಾನ ಇವು ಸಾಮಾನ್ಯವಾದುದಲ್ಲ. ಧರ್ಮಕ್ಕೆ, ದತ್ತಿ - ದಾನಗಳನ್ನು ಕೊಡುವುದು ಮಾತ್ರವಲ್ಲದೆ ಸಮಯ ಬಂದಾಗ ವೀರ ಮಹಿಳೆಯರಿಗಾಗಿ ತಮ್ಮ ಪ್ರಾಣವನ್ನು ತೃಣಕ್ಕಿಂತಲೂ ಕಡಿಮೆಯೆಂದು ಭಾವಿಸಿ, ಅರ್ಪಿಸಿರುವುದನ್ನು ಕಾದಂಬರಿಕಾರರು ಜನತೆಗೆ ತಿಳಿಸುವ ಉದ್ದೇಶದಿಂದಲೇ ಅವರ ಜೀವನದ ಕುರಿತು ಕಾದಂಬರಿಗಳನ್ನು ರಚಿಸಿದ್ದಾರೆ.

**ಸೃಷ್ಟಿ**

ಇತಿಹಾಸದಲ್ಲಿರುವ ಪಾತ್ರಗಳಿಗೆ ಕಾದಂಬರಿಕಾರರು ತಮ್ಮದೇ ಆದ ಸೃಜನಶೀಲತೆಯಿಂದ ಆ ಪಾತ್ರಗಳಿಗೆ ಮರುಜೀವವನ್ನು ನೀಡುತ್ತಾರೆ. ಐತಿಹಾಸಿಕ ಕಾದಂಬರಿಗಳಲ್ಲಿ ಬರುವ ಪಾತ್ರಗಳು ಸಾಮಾಜಿಕ ಕಾದಂಬರಿಗಳಿಗಿಂತ ಭಿನ್ನವಾಗಿರುತ್ತವೆ. ಆದ್ದರಿಂದ ಲೇಖಕರು ಇತಿಹಾಸದಲ್ಲಿರುವ ಪಾತ್ರಗಳು, ಘಟನೆಗಳು ಸನ್ನಿವೇಶಗಳಿಗೆ ಚ್ಯುತಿ ಬಾರದ ರೀತಿಯಲ್ಲಿ ಅವುಗಳನ್ನು ಮರುಸೃಷ್ಟಿ ಮಾಡುತ್ತಾರೆ. ಸನ್ನಿವೇಶ ಸಂದರ್ಭಗಳಿಗೆ ತಕ್ಕಂತೆ, ತಮ್ಮ ಕಾಲ್ಪನಿಕತೆಯಲ್ಲಿ ಹೊಸ ಪಾತ್ರವನ್ನು ಸೃಷ್ಟಿಸುತ್ತಾರೆ. ಇದು ಲೇಖಕರಿಗಿರುವ ಸ್ವಾತಂತ್ರ್ಯವಾಗಿದೆ. ಇತಿಹಾಸದಲ್ಲಿ ಬರುವ ಪಾತ್ರ ಒಂದು ಘಟನೆಗೆ ಮಾತ್ರ ಸೀಮಿತವಾಗಿರುತ್ತದೆ. ಆದರೆ ಕಾದಂಬರಿಯಲ್ಲಿ ಅದೇ ಪಾತ್ರವನ್ನು ಅವರ ಜೀವನದ ಪ್ರತಿಯೊಂದು ಸನ್ನಿವೇಶವನ್ನು ಕಾದಂಬರಿಕಾರರು ಚಿತ್ರಿಸಲು ಪ್ರಯತ್ನಿಸುತ್ತಾರೆ. ಹಾಗಾಗಿ ಕಾದಂಬರಿಯಲ್ಲಿ ಪಾತ್ರ ವೃದ್ಧಿಗೆ ಹೆಚ್ಚಿನ ಅವಕಾಶವಿರುತ್ತದೆ. ಐತಿಹಾಸಿಕ ಕಾದಂಬರಿಗಳ ಬೆಳವಣಿಗೆ ಮೂಲಕ ಘಟನೆಗಳು, ಸನ್ನಿವೇಶಗಳು ನಿರ್ಮಾಣಗೊಂಡಿರುತ್ತವೆ. ಆದ್ದರಿಂದ ಪಾತ್ರ ಪರಿಪೋಷಣೆಗೆ, ಸೃಷ್ಟಿಗೆ ಹೆಚ್ಚಿನ ಪ್ರಾಧಾನ್ಯವಿರುತ್ತದೆ. ಆ ಮೂಲಕ ಪಾತ್ರಗಳೇ ಐತಿಹಾಸಿಕ ಕಾದಂಬರಿಗಳ ಜೀವಾಳವಾಗಿರುತ್ತವೆ.

**ಸ್ವರೂಪ**

ಐತಿಹಾಸಿಕ ಕಾದಂಬರಿಗಳಿಗೆ ಒಟ್ಟಾರೆ ಪಾತ್ರಗಳನ್ನು ಕಾದಂಬರಿಯ ವಿನ್ಯಾಸದಲ್ಲಿ, ಆಯಾಯ ಪಾತ್ರಗಳಿಗಿರುವ ಮಹತ್ವ ಹಾಗೂ ಪಾತ್ರಗಳ ಗುಣಸ್ವಭಾವಗಳಿಗೆ ಅನುಗುಣವಾಗಿ ವಿವಿಧ ಸ್ವರೂಪಗಳಲ್ಲಿ ವಿಂಗಡಿಸಿಕೊಳ್ಳಬಹುದಾಗಿದೆ. ಅದರಂತೆ ಒಟ್ಟಾರೆ ಪಾತ್ರಗಳನ್ನು ಕೇಂದ್ರ ಪಾತ್ರಗಳು, ಪೋಷಕ ಪಾತ್ರಗಳು, ಶಿವಶರಣೆಯರು, ವೀರವನಿತೆಯರು, ಕಲಾಪ್ರಿಯರು, ದಾನಗುಣದ ಪಾತ್ರಗಳು, ಗಣಿಕೆಯರು, ನೇತ್ಯಾತ್ಮಕ ಪಾತ್ರಗಳು ಎಂದು ಮುಂತಾಗಿ ಗುರುತಿಸಿಕೊಳ್ಳಬಹುದಾಗಿದೆ.

**ಆಶಯ**

ಕಾದಂಬರಿಕಾರರು ತಮ್ಮ ಹಾಗೂ ಕಾದಂಬರಿಯ ಒಟ್ಟಾರೆ ಆಶಯ ಉದ್ದೇಶಗಳನ್ನು ಆಯಾಯ ಪಾತ್ರಗಳ ಮೂಲಕ ಪ್ರಕಟಪಡಿಸುತ್ತಾರೆ. ನಾಡು - ನುಡಿಯ ಬಗೆಗಿನ ಅಭಿಮಾನ, ರಾಷ್ಟ್ರಕಲ್ಯಾಣ, ರಾಷ್ಟ್ರಪ್ರೇಮ, ನೈತಿಕತೆ, ಆಧ್ಯಾತ್ಮಿಕತೆ, ಆಡಳಿತ ನೀತಿ, ಕಲಾಪ್ರೇಮ, ಮನುಷ್ಯ ಸಂಬಂಧಗಳು ಮಾನವೀಯತೆ, ಆದರ್ಶ ಜೀವನ ಇತ್ಯಾದಿ ಮೌಲ್ಯ ಆಶಯಗಳನ್ನು ವಿವಿಧ ಪಾತ್ರಗಳ ಮೂಲಕ ಐತಿಹಾಸಿಕ ಕಾದಂಬರಿಗಳು ಕಟ್ಟಿಕೊಡುತ್ತವೆ.

ಐತಿಹಾಸಿಕ ಕಾದಂಬರಿಗಳಲ್ಲಿ ಚಿತ್ರಿತವಾದ, ಅತ್ತಿಮಬ್ಬೆ, ಅಕ್ಕಮಹಾದೇವಿ, ಗಂಗಾಂಬಿಕೆ, ನೀಲಾಂಬಿಕೆ, ನೀಲಲೋಚನೆ, ದಾನಮ್ಮ, ಅಬ್ಬಕ್ಕರಾಣಿ, ಕಿತ್ತೂರಚೆನ್ನಮ್ಮ, ಒನಕೆ ಓಬವ್ವ, ಕೆಳದಿ ಚೆನ್ನಮ್ಮ, ಶಾಂತಲೆ, ಚಿನ್ನಸಾನಿ, ಓಬವ್ವನಾಗತಿ, ಮಲ್ಲವ್ವನಾಗತಿ, ಗಿರಿಜೆ, ಪಾರ್ವತಿ, ರತ್ನಾಜಿ, ಮಾಚಿಕಬ್ಬೆಯ ಜೀವನ ಚರಿತ್ರೆಯೊಂದಿಗೆ ಲೇಖಕರು ತಮ್ಮ ಉದ್ದೇಶಗಳಿಗನುಸಾರವಾಗಿ, ಪಾತ್ರಗಳ ಸ್ವಭಾವವನ್ನು ಯಾವ ರೀತಿ ಬೆಳೆಸಿಕೊಂಡು ಬಂದಿರೆಂಬುದನ್ನು ಮತ್ತು ಆ ಕೃತಿಯ ಸ್ವರೂಪ ಆಶಯವೇನು ಎಂಬುದನ್ನು ಕಂಡುಕೊಳ್ಳಬಹುದಾಗಿದೆ.

ಈ ಹಿನ್ನೆಲೆಯಲ್ಲಿ ಕನ್ನಡ ಐತಿಹಾಸಿಕ ಕಾದಂಬರಿಗಳ ಸ್ತ್ರೀ ಪಾತ್ರವನ್ನು ಅವುಗಳ ಸ್ವರೂಪ, ಸ್ವಭಾವ, ಗುಣಲಕ್ಷಣಗಳನ್ನು ಆಧರಿಸಿ, ಕೆಲವು ವರ್ಗೀಕರಣಗಳ ಅಡಿಯಲ್ಲಿ ಗುರುತಿಸಬಹುದಾಗಿದೆ.

**೪.೧. ಕೇಂದ್ರ ಪಾತ್ರಗಳು**

೪.೧.೧. ಅನುಭಾವಿ ಮಹಿಳೆಯರು

೪.೧.೨. ವೀರವನಿತೆಯರು

೪.೧.೩. ಕಲಾವಿದೆಯರು

೪.೧.೪. ದಾನಗುಣದ ಪಾತ್ರಗಳು

**೪.೨. ಪೋಷಕ ಪಾತ್ರಗಳು**

೪.೨.೧. ಗಣಿಕಾ ಸ್ತ್ರೀಯರು

೪.೨.೨. ನೇತ್ಯಾತ್ಮಕ ಪಾತ್ರಗಳು

ಮಹಿಳೆಯ ಸೃಜನಶೀಲ ಶಕ್ತಿಗಳು ಹಲವಾರು ಕ್ಷೇತ್ರಗಳಲ್ಲಿ ಕ್ರಿಯಾಶೀಲವಾಗಿವೆ. ಧರ್ಮ-ಸಂಸ್ಕೃತಿ ಸಮಷ್ಟಿಯ ಉದ್ಧಾರಕ್ಕೆ ಸ್ಪಂದಿಸಿದ ರೀತಿಗಳು ಸ್ಫೂರ್ತಿದಾಯಕವಾಗಿವೆ. ಸ್ತ್ರೀ ಸಂಸ್ಕೃತಿಯ ಚರಿತ್ರೆ - ಪರಂಪರೆಯ ಹೆಜ್ಜೆ ಗುರುತುಗಳನ್ನು ಗುರುತಿಸುವಲ್ಲಿ ಮಾರ್ಗದರ್ಶಕವಾಗಿವೆ. ಮಹಿಳೆಯನ್ನು 'ಮಾಯೆ' ಎಂದು ಕರೆದ, ಆತ್ಮೋದ್ಧಾರಕ್ಕೆ ಅನರ್ಹಳು ಎನ್ನುವ ವ್ಯವಸ್ಥೆಯ ಆರೋಪಗಳನ್ನು ಸುಳ್ಳಾಗಿಸಿದವರು; ತಮಿಳುನಾಡಿನ ಆಂಡಾಳ್, ಕಾರಿಕಾಲಮ್ಮೆ ಆತ್ಮೋದ್ಧಾರಕ್ಕಾಗಿ ಕುಟುಂಬ-ಮನೆ ತೊರೆದು ಸಮಾಜದ ಪ್ರತಿಭಟನೆ, ಧಿಕ್ಕಾರಗಳನ್ನು ಸಹಿಸುತ್ತ ಸತ್ಯದ ಸಾಕ್ಷಾತ್ಕಾರಕ್ಕಾಗಿ ಸಾಧನೆಗೈಯ್ದ ಅಕ್ಕಮಹಾದೇವಿ - ಮೀರಾಬಾಯಿ - ಕಾಶ್ಮೀರದ ಲಲ್ಲೇಶ್ವರಿ, ಕಲ್ಯಾಣದ ಶಿವಶರಣೆಯರಾದ ನೀಲಲೋಚನೆ, ಮುಕ್ತಾಯಕ್ಕೆ ಗಂಗಾಂಬಿಕೆ, ನೀಲಾಂಬಿಕೆ ಸತ್ಯಕ್ಕ ದಾಸೋಹಿ ದಾನಮ್ಮ ಮುಂತಾದ ಅನುಭಾವಿಗಳು. ಒಳಗೆ ಸುಳಿಯುವ ಆತ್ಮಕ್ಕೆ ಅರಿವಿಗೆ ಗಂಡು ಹೆಣ್ಣು ಎನ್ನುವ ಭೇದವಿಲ್ಲವೆನ್ನುವುದನ್ನು ಸಾಬೀತುಪಡಿಸಿದ್ದಾರೆ. ಇಂಥ ಸ್ವಾನುಭವಿ ಮಹಿಳೆಯರ ಅನುಭಾವ ಪೂರ್ಣ ಚಿಂತನೆಗಳಿಂದ, ವಿಚಾರಗಳಿಂದ ಕೂಡಿದ ಅವರ ಸಾಹಿತ್ಯ ಮತ್ತು ಸಂದೇಶಗಳು ಇಂದಿಗೂ ಪ್ರಸ್ತುತವಾಗಿವೆ.

ಕನ್ನಡ ಸಾಹಿತ್ಯ, ಧರ್ಮ ಸಂಸ್ಕೃತಿಯ ಸಂವರ್ಧನೆಗಾಗಿ ಅಮೂಲ್ಯ ಕೊಡುಗೆ ನೀಡಿದವಳು ದಾನಚಿಂತಾಮಣಿ ಅತ್ತಿಮಬ್ಬೆ ರನ್ನಕವಿಗೆ ಆಶ್ರಯದಾತೆಯಾಗಿ 'ಅಜಿತನಾಥಪುರಾಣ' ರಚನೆಗೆ ಪ್ರೇರಣೆ ನೀಡಿದ ಸಾಹಿತ್ಯ ಪ್ರೇಮಿ. ಪೊನ್ನನ 'ಶಾಂತಿ ಪುರಾಣ'ದ ಸಾವಿರ ಪ್ರತಿಗಳನ್ನು ಬರೆಯಿಸಿ ಸಾಹಿತ್ಯ ಮತ್ತು ಧರ್ಮ ಪ್ರಸಾರಕ್ಕೆ ಪೋಷಣೆ ನೀಡಿದ ಅಪರೂಪದ ಮಹಿಳೆಯಾಗಿದ್ದಾಳೆ.

ಧೈರ್ಯ ಸಾಹಸ ಗುಣಗಳು ಗಂಡಿನ ಗುತ್ತಿಗೆ ಎನ್ನುವ ಸಾಂಪ್ರದಾಯಿಕ ತಿಳಿವಳಿಕೆಯನ್ನು ಹುಸಿಗೊಳಿಸಿದವರು ಕಿತ್ತೂರ ಚೆನ್ನಮ್ಮ, ಝಾನ್ಸಿರಾಣಿ ಲಕ್ಷ್ಮೀಬಾಯಿ, ದೌರ್ಜನ್ಯವನ್ನು ಪ್ರತಿಭಟಿಸಿ ಸ್ವಾತಂತ್ರ್ಯ ಹೋರಾಟದ ಮೊದಲ ಕಿಡಿಗಳಾಗಿ ಸಿಡಿದ ಈ ಮಹಿಳೆಯರ ವ್ಯಕ್ತಿತ್ವಗಳು ಇಂದಿಗೂ ಸ್ಫೂರ್ತಿದಾಯಕವಾಗಿವೆ. ಇದೇ ಸಾಲಿನಲ್ಲಿ ನೆನೆಯಬಹುದಾದ ಕೆಳದಿ ಚೆನ್ನಮ್ಮ, ರಾಣಿ ಅಬ್ಬಕ್ಕದೇವಿ, ಚಾಂದಬೀಬಿ, ರಜೀಯಾ ಸುಲ್ತಾನ, ಒನಕೆ ಓಬವ್ವ ಮುಂತಾದ ವನಿತೆಯರ ಶೌರ್ಯ, ದಿಟ್ಟತನ ಇಂದಿಗೂ ಪ್ರಸ್ತುತವಾಗಿದೆ. ಕಲೆಯೇ ತನ್ನ ಉಸಿರೆಂದುಕೊಂಡಿದ್ದ ಶಾಂತಲೆ, ವೃತ್ತಿಯಲ್ಲಿ ವೇಶ್ಯೆಯಾದರೂ ಕಲೆಯಲ್ಲಿ ನಿಪುಣೆಯಾದ 'ಚಿನ್ನಸಾನಿ' ಪತಿಗೆ ತಕ್ಕಂತೆ ಎಲ್ಲ ತ್ಯಾಗಕ್ಕೂ ಸಿದ್ಧರಾದ, ಗುಂಡಮಬ್ಬೆ, ಮಾಚಿಕಬ್ಬೆ, ರುದ್ರಮ್ಮರಾಣಿ ಇನ್ನೂ ಮುಂತಾದ ಆದರ್ಶ ಪತ್ನಿಯರು ಮತ್ತು ಪತಿವ್ರತೆಯರು ಕಂಡುಬರುತ್ತಾರೆ. ರಸವಂತಿ, ಕಮಲಾಂಬಿಕೆ, ಮಾಚಿಕಬ್ಬೆ, ಪಾರ್ವತಿ, ಶಿರಸಮ್ಮ, ವೀರಮ್ಮ, ಶಾಂತವ್ವ ಹೆಗ್ಗಡಿತಿ, ಮಲ್ಲಿಗೆ, ಗೌರಮ್ಮ, ಭಗವತಿ, ಓಬವ್ವನಾಗತಿ, ಗೌರವ್ವನಾಗತಿ, ಗಿರಿಜೆ, ಮಲ್ಲವ್ವನಾಗತಿ, ಗಣಿಕಾ ಸ್ತ್ರೀಯರಾದ ಬಕುಳ, ಮಾನವತಿ, ಕಾಮೇಶ್ವರಿ ಮುಂತಾದ ಸ್ತ್ರೀಪಾತ್ರಗಳು ತಮ್ಮ ತಾಯ್ನಾಡಿನ ಸೇವೆ, ಕಲಾಪ್ರೀತಿ, ಹೋರಾಟ ಮುಂತಾದ ಗುಣಗಳಿಗೆ ಅನುಗುಣವಾಗಿ ಅವರು ನಾಡಿಗೆ ಸಲ್ಲಿಸಿದ ಸೇವೆ ಸ್ಮರಣೀಯವಾದುದು. ಈ ಎಲ್ಲ ಮಹಿಳೆಯರು ನಡೆದು ಬಂದುದ್ದನ್ನು ತಿಳಿಸುವ ಮುಖ್ಯ ಆಕರಗಳೆಂದರೆ ಪ್ರಾಚೀನ ಕಾವ್ಯಗಳು ಮತ್ತು ಶಾಸನಗಳು ಇವುಗಳ ಆಧಾರದಿಂದ ಕಾದಂಬರಿಕಾರರು ತಮ್ಮ ಕಲ್ಪನೆಯನ್ನು ಬೆರೆಸಿ, ಆದರ್ಶ ಮಹಿಳೆಯರ ಕುರಿತು ಐತಿಹಾಸಿಕ ಕಾದಂಬರಿಗಳನ್ನು ರಚಿಸಿದ್ದಾರೆ.

**ಕೇಂದ್ರ ಪಾತ್ರಗಳು**

ಆಧ್ಯಾತ್ಮಿಕ ಸ್ತರದ ದಿವ್ಯ ವ್ಯಕ್ತಿಗಳ ಚರಿತ್ರೆಯನ್ನು ಐತಿಹಾಸಿಕ ಆವರಣದಲ್ಲಿ ಬಿಂಬಿಸಿ ತೋರಿಸುವ ಕಾದಂಬರಿಗಳ ಪರಂಪರೆ ಕನ್ನಡದಲ್ಲುಂಟು. ಬಸವರಾಜ ಕಟ್ಟೀಮನಿ ಅವರ 'ಗಿರಿಯ ನವಿಲು' ಕಾದಂಬರಿ ಈ ಪರಂಪರೆಯಲ್ಲಿ ಗುರುತಿಸಬಹುದಾದ ಒಂದು ವಿಶಿಷ್ಟ ಕೃತಿ. "ಹನ್ನೆರಡನೆಯ ಶತಮಾನದ ಕರ್ನಾಟಕದಲ್ಲಿ ಒಂದು ವಿಶಿಷ್ಟ ಮತ್ತು ಅಪೂರ್ವವಾದ ಕ್ರಾಂತಿ ಮಾಡಿದ ವಚನಕಾರರಲ್ಲಿ ಹಾಗೂ ವಚನಕಾರ್ತಿಯರಲ್ಲಿ ಅತ್ಯಂತ ಪ್ರಮುಖವಾಗಿ ಗಮನಿಸಬಹುದಾದ ವ್ಯಕ್ತಿತ್ವ ಹೊಂದಿರುವ ಅಕ್ಕಮಹಾದೇವಿಯ ಜೀವನ ಮತ್ತು ವ್ಯಕ್ತಿತ್ವಗಳನ್ನು ಹೊಸ ದೃಷ್ಟಿಕೋನದಿಂದ ಗಿರಿಯ ನವಿಲು ಕಾದಂಬರಿ ನೋಡುತ್ತದೆ" (ಬಸವರಾಜ ಕಟ್ಟೀಮನಿ; ೧೯೫೬; ಪು. ೨೮೦) ಎಂದು ಬಸವರಾಜ ಕಟ್ಟೀಮನಿ ಅವರು ಹೇಳಿದ್ದಾರೆ.

ಲೌಕಿಕ ಸೀಮೆಯನ್ನು ಮೀರಿದ ಅಲೌಕಿಕ ಬದುಕು, ಬಂಡೆದ್ದ ಹೆಣ್ಣಿನ ಸಂಕೇತ ಅಕ್ಕಮಹಾದೇವಿ. "ಕವಿಗಳೂ, ಪುರಾಣಕಾರರೂ ಮತೀಯ ಕಾರಣಗಳಿಂದಾಗಿ ಅಕ್ಕನ ವ್ಯಕ್ತಿತ್ವಕ್ಕೆ

ಅವಾಸ್ತವವೆನಿಸುವ ಅಲೌಕಿಕ ಬಣ್ಣ ಬಳದಿರುವುದು, ನಿಜಕ್ಕೂ ಅಸಹಜವೂ - ಅಸ್ವಾಭಾವಿಕವೂ ಹೌದು. ಆ ಬಣ್ಣವನ್ನು ತೆಗೆದು ಹಾಕಿ ಅಕ್ಕನ ಜೀವನವನ್ನು ವಿಶುದ್ಧವಾದ ವೈಜ್ಞಾನಿಕ ದೃಷ್ಟಿಯಿಂದ ನೋಡಿ ಆಕೆಯ ಸಹಜ ಸ್ವರೂಪವನ್ನು ಚಿತ್ರಿಸಲು ಪ್ರಯತ್ನಿಸಿದ್ದಾಗಿದೆ" (ಅದೇ; ಮುನ್ನುಡಿ) ಎಂದು ಬಸವರಾಜ ಕಟ್ಟೀಮನಿ ಅವರೇ ಸ್ವತಃ ಹೇಳಿಕೊಂಡಿದ್ದಾರೆ.

'ಗಿರಿಯ ನವಿಲು' ಕಾದಂಬರಿಯಲ್ಲಿ ಸಾಂಪ್ರದಾಯಿಕವಾಗಿ ಬಂದಿರುವ ಕತೆಯಂತೆ ಆಕೆ ದಿಗಂಬರೆಯಾಗಿ ಕಲ್ಯಾಣಕ್ಕೆ ನಡೆದು ಬಂದಂತೆ ಚಿತ್ರಿಸಿದ್ದಾರೆ. ವೀರಾಗಿಣಿಗೇಕೆ ವಸ್ತ್ರ?, ನಿನಗೇಕೆ ಲಜ್ಜೆ, ಅತ್ಯಂತ ಭಕ್ತಿ ನೀನು? ಎಂದು ಅವಳನ್ನು ಬೆತ್ತಲೆ ಮಾಡುತ್ತಾರೆ. ತನ್ನ ತನುವಿನ ಮೇಲೆ ಕೇಶರಾಶಿಯನ್ನು ಹರಡಿಕೊಂಡು ಮಹಾದೇವಿ ಚಂದಿಮದೇವನೊಂದಿಗೆ ಕಲ್ಯಾಣಕ್ಕೆ ಬರುವುದು. ಆ ಪೂರ್ತಿ ಘಟನೆ ತುಂಬ ಗಂಭೀರವೂ, ಕುತೂಹಲಕಾರಿಯೂ ಆಗಿದೆ. ಇದು ಅಷ್ಟೇ ನಾಟಕೀಯವಾಗಿಯೂ ಕಾಣಿಸುತ್ತದೆ. ಆದರೆ ಪಶ್ಚಾತ್ತಾಪಪಟ್ಟ ಕೌಶಿಕ ಅವಳನ್ನು ಹುಡುಕಿಕೊಂಡು ಶ್ರೀಶೈಲಕ್ಕೆ ಬರುವುದು, ತಪ್ಪಾಯಿತೆಂದು ಕ್ಷಮೆ ಕೇಳುವುದು ಅತಿ ರಂಜನೆಯಾಗಿದೆ. ಮಹಾದೇವಿಯೂ ಎಲ್ಲರಂತೆ ಒಬ್ಬ ಮನುಷ್ಯಳಾಗಿದ್ದಳು. ಅವಳಲ್ಲಿಯೂ ಮಾನವ ಸಹಜವಾದ ಬಯಕೆಗಳಿದ್ದವು. ಇದು ವಾಸ್ತವ. ಈ ಹಿನ್ನೆಲೆಯಲ್ಲಿಯೇ ಅವರು ಮಹಾದೇವಿಯ ಬದುಕನ್ನು ಚಿತ್ರಿಸಿದ್ದಾರೆ.

ಅಕ್ಕಮಹಾದೇವಿಯನ್ನು ಕುರಿತ ಎರಡನೆಯ ಕಾದಂಬರಿ ತಿಪ್ಪೇರುದ್ರಸ್ವಾಮಿ ಅವರ 'ಕದಳಿಯ ಕರ್ಪೂರ' ಈ ಕಾದಂಬರಿಯಲ್ಲಿ ಅಕ್ಕನ ಜೀವನ ಚರಿತ್ರೆಯೊಂದಿಗೆ ಅವಳು ಆಧ್ಯಾತ್ಮಿಕ ಸಾಧನೆಗಾಗಿ ನಡೆಸಿದ ಹೋರಾಟದ ಜೈವಿಕ ಸಂಗತಿಯನ್ನೇ ಲೇಖಕರು ಸ್ವಾರಸ್ಯಗೆಡದಂತೆ ಬಣ್ಣಿಸಿದ್ದಾರೆ. "ಅಕ್ಕನ ಉಜ್ವಲವಾದ ವ್ಯಕ್ತಿತ್ವವನ್ನು ಚಿತ್ರಿಸುವ ಪ್ರಯತ್ನ ಕದಳಿಯರ ಕರ್ಪೂರ' ಕಾದಂಬರಿಯದ್ದಾಗಿದೆ. ಅಕ್ಕನು ಹುಟ್ಟಿ ಬೆಳೆದ ಹಿನ್ನೆಲೆ, ಕೌಶಿಕನ ಪ್ರಸಂಗ, ಅವಳ ದಿಗಂಬರತೆಯ ಮೀಮಾಂಸೆ ಇವೇ ಮೊದಲಾದ ಸನ್ನಿವೇಶಗಳಲ್ಲಿ ನೂತನ ದೃಷ್ಟಿಕೋನವನ್ನು ಕಾಣಬಹುದಾಗಿದೆ. ಅಕ್ಕಮಹಾದೇವಿ ಕನ್ನಡ ನಾಡಿಗೆ ಮಾತ್ರವಲ್ಲ, ಇಡೀ ಜಗತ್ತಿನ ಮಹಿಳಾ ಸಾಧಕರಲ್ಲಿಯೇ ಅಗ್ರಗಣ್ಯಗಳಾದ ಅಪೂರ್ವ ವ್ಯಕ್ತಿ. ಹೆಣ್ಣುತನದ ಪರಿಪೂರ್ಣ ಸ್ವರೂಪವನ್ನು ಉಜ್ವಲವಾಗಿ ಬೆಳಗಿ ತೋರಿದ ಮಹಾಶಕ್ತಿ, ಈ ಜಗತ್ತೆಂಬ ಕದಳಿಯಲ್ಲಿ ಅದೊಂದು ಕರ್ಪೂರದ ಪರಂಜ್ಯೋತಿ. ಅದಕ್ಕೆ ಸಂಕೇತವೋ ಎಂಬಂತೆ ಅವಳ ಜೀವನದ ಘಟನೆಗಳು ಬೆಳೆಯುತ್ತವೆ. ಅವಳ ವೈರಾಗ್ಯದ ಪ್ರಭೆ ಹೊಳೆಯುತ್ತದೆ. ಕೊನೆಯಲ್ಲಿ ಆಕೆ ಉರಿಯುಂಡ ಕರ್ಪೂರದಂತೆ ತನ್ನ ಭೌತ ದೇಹವನ್ನು ಮೀರಿ ಬಯಲಾಗುವುದು ಕೂಡ ಶ್ರೀಶೈಲದ ಕದಳಿವನದಲ್ಲಿ.

ಅಕ್ಕಮಹಾದೇವಿಯನ್ನು ಕುರಿತು ಬರೆದ ಮೂರನೆಯ ಚಾರಿತ್ರಿಕ ಕಾದಂಬರಿ ಮಾತೆ ಮಹಾದೇವಿ ಅವರ 'ತರಂಗಿಣಿ'. ಈ ಕಾದಂಬರಿಯು ಅಕ್ಕನ ಲೌಕಿಕ ಬದುಕಿನ ಕಥೆಯನ್ನು ಬಿಚ್ಚಿಕೊಡುತ್ತದೆ. ಅಕ್ಕನನ್ನು ಆಧ್ಯಾತ್ಮಿಕ ರಂಗದಲ್ಲಿ ಚಿತ್ರಿಸುತ್ತ ಅವಳನ್ನು ಕಾದಂಬರಿಯ ಮುಖ್ಯ ಪಾತ್ರವಾಗಿಸಿಕೊಂಡು ಮುಂದೆ ಸಾಗುತ್ತದೆ. ಲೇಖಕರು ಅಕ್ಕಮಹಾದೇವಿಯನ್ನು ಕೆಲವು ಕಡೆ ಕ್ರಾಂತಿಕಾರಿಯಂತೆ ಚಿತ್ರಿಸಿದ ಕಾರಣ ಉಗ್ರ ಹೋರಾಟದ ಮಾತುಗಳನ್ನಾಡುವುದರಿಂದ

ಮಹಾದೇವಿಯ ಪಾತ್ರ ತೀರ ಅಸಹಜವಾಗಿದೆ. ಅಕ್ಕಮಹಾದೇವಿಯನ್ನು ಒಬ್ಬ ಪ್ರಗತಿಶೀಲ ಹೋರಾಟಗಾರಳನ್ನಾಗಿ ಮಾಡಹೊರಟ ಮಾತೆ ಮಹಾದೇವಿ ಅವರು ಅಸಹಜತೆಯ ದೋಷಕ್ಕೆ ಕಾರಣರಾಗಿದ್ದಾರೆ. ಪಾರ್ವತಿಯ ಪ್ರತಿರೂಪವೇ ಮಹಾದೇವಿ. ಈ ಜಗತ್ತಿನ ಜೈವಿಕ ವಸ್ತುಗಳ ಚಲನೆಯ ಹಿಂದೆ ಯಾವುದೋ ಒಂದು ದಿವ್ಯಶಕ್ತಿ ಇದೆ ಎಂಬ ಕಲ್ಪನೆಯನ್ನು ಅವಲಂಬಿಸಿ ತೀರ ವಾಸ್ತವವೂ ಅಲ್ಲದೇ ಅತೀ ಅಲೌಕಿಕವೂ ಅಲ್ಲದೇ ಮಹಾದೇವಿಯ ಜನನದ ಹಿನ್ನೆಲೆಯಲ್ಲಿ 'ತರಂಗಿಣಿ' ಕಾದಂಬರಿಯಲ್ಲಿ ಲೇಖಕರು ಕಲ್ಪಿಸಿದ್ದಾರೆ. ಪ್ರಸ್ತುತ ಕಾದಂಬರಿಯಲ್ಲಿ ಅಕ್ಕಮಹಾದೇವಿಗೆ ಸ್ತ್ರೀವಾದಿ ನೆಲೆ, ದೈವಿಕ ನೆಲೆಗಳನ್ನು ನೀಡುವ ಪ್ರಯತ್ನವನ್ನು ಮಾಡಲಾಗಿದೆ. ವಿಷಯ ನಿರೂಪಣೆ ದೃಷ್ಟಿಯಿಂದ ನಿರ್ಣಾಯಕ ಘಟ್ಟಗಳಲ್ಲಿ ಅಕ್ಕಮಹಾದೇವಿ ತೆಗೆದುಕೊಳ್ಳುವ ನಿರ್ಣಯಗಳಿಗೆ ಸಂಬಂಧಿಸಿದಂತೆ, ಗಿರಿಯ ನವಿಲು ಮತ್ತು ಕದಳಿಯ ಕರ್ಪೂರ ಕಾದಂಬರಿಗಳಿಂದ ತರಂಗಿಣಿ ಕಾದಂಬರಿ ಭಿನ್ನವಾಗಿದೆ.

'ಗಿರಿಯ ನವಿಲು', 'ಕದಳಿಯ ಕರ್ಪೂರ', 'ತರಂಗಿಣಿ' ಕಾದಂಬರಿಗಳಲ್ಲಿ ಅಕ್ಕಮಹಾದೇವಿ ಕೇಂದ್ರಪಾತ್ರವಾಗಿದರೆ, ಬಿ. ಪುಟ್ಟಸ್ವಾಮಯ್ಯನವರ ಕ್ರಾಂತಿ ಕಲ್ಯಾಣದಲ್ಲಿ ಪೋಷಕ ಪಾತ್ರವಾಗಿ ಕಂಡು ಬರುತ್ತಾಳೆ. ಈ ಕಾದಂಬರಿಯಲ್ಲಿ ಅಕ್ಕಮಹಾದೇವಿಯ ಜೀವನ, ವ್ಯಕ್ತಿತ್ವ, ಆಕೆಯ ದಿಗಂಬರತ್ವ ಹಾಗೂ ಕಿನ್ನರ ಬೊಮ್ಮಯ್ಯ ಮಾಡುವ ಪರೀಕ್ಷೆಯ ಪ್ರಸಂಗಗಳು ನಿರೂಪಿತವಾಗಿವೆ. ನಾಗಲಾಂಬಿಕೆ, ಗಂಗಾಂಬಿಕೆ, ನೀಲಾಂಬಿಕೆ, ನೀಲಲೋಚನೆ, ಕಾಮೇಶ್ವರಿ ಕಮಲಾಂಬಿಕೆ, ರಸಮತಿ, ಶಿವಕಾಮಿನಿ, ಯಶೋಮತಿ, ರುದ್ರಾಂಬಿಕೆ ಕಾತ್ಯಾಯಿನಿ, ಶಂಕರಿ ಮುಂತಾದ ಪಾತ್ರಗಳು ಆಯಾಯ ಗುಣಗಳಿಗೆ ತಕ್ಕಂತೆ ಸೃಷ್ಟಿಯಾಗಿವೆ.

ಶರಣರ ಮಾರ್ಗದಲ್ಲಿ ಶರಣ ಧರ್ಮದಂತೆ ಪರಹಿತಕ್ಕಾಗಿ ಬದುಕಿದ ಮಹಾಸಾಧ್ವಿ, ದಾನಮ್ಮ, ಶಾಂತಾದೇವಿ ಮಾಳವಾಡ ಅವರು ಆಧ್ಯಾತ್ಮಿಕ ನೆಲೆಯಲ್ಲಿ ಈ ಕಾದಂಬರಿಯನ್ನು ರಚಿಸಿದ್ದಾರೆ. ದಾನಮ್ಮನ ಬಾಲ್ಯದಲ್ಲಿನ ದಾನಗುಣಗಳು, ಯೋಗ ಸಾಧನೆಯ ಮಾರ್ಗ, ಅಸಹಾಯಕರಿಗೆ, ರೋಗಿಗಳಿಗೆ ಆಕೆ ಮಾಡುವ ಸಹಾಯ, ಆರೈಕೆ, ಆಕೆಯಲ್ಲಿದ್ದ ದಾನ ಗುಣವನ್ನು ಎತ್ತಿತೋರಿಸುತ್ತದೆ. ಬಾಲ್ಯದಿಂದ ಮರಣದವರೆಗಿನ ದಾನಮ್ಮನ ಜೀವನವನ್ನು ತಮಗೆ ದೊರೆತ ಶಾಸನಗಳು, ಕಾವ್ಯಗಳನ್ನು ಆಧಾರವಾಗಿಟ್ಟುಕೊಂಡು ಕಲ್ಪನೆಯೊಡನೆ ಬಹು ಸುಂದರವಾಗಿ ರಚಿಸಿದ್ದಾರೆ. ಶಿರಸಮ್ಮ, ಅನಂತರಾಯ, ಸಂಗಮನಾಥ, ಬಸವಣ್ಣ ಮುಂತಾದ ಪಾತ್ರಗಳ ಚಿತ್ರಣವು ಅತ್ಯಲ್ಪವಾದರೂ ಸ್ಫುಟವಾಗಿ ಮೂಡಿಬಂದಿದೆ.

ಕನ್ನಡ ನಾಡಿನಲ್ಲಿ ಪೌರುಷ ಜೀವನಕ್ಕೆ ಕೊರತೆಯಿಲ್ಲ. ಸಿಂಹ ಶಾರ್ದೂಲಗಳಂತೆ ವೈರಿ ನಿರ್ನಾಮಕ್ಕೆ ಟೊಂಕಕಟ್ಟಿ ನಿಲ್ಲಬಲ್ಲ ಮಹಿಳೆಯರಲ್ಲಿ ಕಿತ್ತೂರ ಚೆನ್ನಮ್ಮಳು ಒಬ್ಬಳು. ಅನಕೃ ಬರೆದ 'ವೀರರಾಣಿ ಚೆನ್ನಮ್ಮಾ' ಕಾದಂಬರಿಯಲ್ಲಿ ಕಿತ್ತೂರಿನ ಜನತೆ ರಾಣಿಯ ನೇತೃತ್ವದಲ್ಲಿ ಬ್ರಿಟಿಷರ ವಿರುದ್ಧ ಹೋರಾಡಿದ ಕಥೆಯಿದೆ. ಜಾತಿ ಮಾತಾತೀತವಾದ ಕೇವಲ ರಾಷ್ಟ್ರ ಕಲ್ಯಾಣವನ್ನು ಮಾತ್ರ ಗುರಿಯಾಗಿಟ್ಟುಕೊಂಡಿದ್ದ ಕಿತ್ತೂರಿನ ಸ್ವಾತಂತ್ರ್ಯ ಸಮರದ ಭಾವಾವೇಶ ತ್ಯಾಗ ಮನೋಭಾವಗಳನ್ನು ಇಲ್ಲಿ ಚಿತ್ರಿಸಲಾಗಿದೆ. ಕೈ ಸೆರೆ ಸಿಕ್ಕಿದ ರಾಣಿಯನ್ನು ಬೈಲ ಹೊಂಗಲದಲ್ಲಿ ಸೆರೆ ಇಟ್ಟರೆಂದು ಅಲ್ಲೇ ಅವಳು ಅಸುನೀಗಿದಳೆಂದೂ ಕಾದಂಬರಿಕಾರರು

ನಿರ್ಧರಿಸಿದ್ದಾರೆ. ಕಿತ್ತೂರು ಚೆನ್ನಮ್ಮ ಕೇಂದ್ರಪಾತ್ರವಾದರೂ, ಐತಿಹಾಸಿಕ ವ್ಯಕ್ತಿಗಳೊಂದಿಗೆ ಕಾಲ್ಪನಿಕ ಪಾತ್ರಗಳನ್ನು ಸಹ ಸೃಷ್ಟಿಸಿದ್ದಾರೆ.

ಚೆನ್ನಮ್ಮ ರಾಣಿಯ ಉಜ್ವಲ ಜೀವನವನ್ನು ಆಧರಿಸಿ ಬರೆದ ಕೆ.ವಿ. ರಾಜೇಶ್ವರಿಯವರು 'ವೀರವನಿತೆ ಕಿತ್ತೂರ ಚೆನ್ನಮ್ಮ' ಕಾದಂಬರಿಯಲ್ಲಿ ಚೆನ್ನಮ್ಮಳು ಬಾಲ್ಯದಲ್ಲಿಯೇ ಯಾವ ರೀತಿ ಸಕಲ ವಿದ್ಯೆಗಳಲ್ಲಿ ಪಾರಂಗತಳಾಗಿದ್ದಳು ಎನ್ನುವುದನ್ನು ಬಹು ಸುಂದರವಾಗಿ ವರ್ಣಿಸಿದ್ದಾರೆ. ಮುಂದೆ, ಕಿತ್ತೂರಿನ ರಾಣಿಯಾಗಿ ಬ್ರಿಟಿಷ್‌ರೊಂದಿಗೆ ಹೋರಾಡಿ ಮಡಿದ, ಈಕೆಯ ಅಮರ ಜೀವನವನ್ನು ಓದುಗರಿಗೆ ಸವಿಸ್ತಾರವಾಗಿ ಪಡಿಮೂಡಿಸಿದ್ದಾರೆ.

ಆಂಗ್ಲರನ್ನು ಭಾರತದಿಂದ ಹೊರಹಾಕಲು ತಮ್ಮ ಜೀವನವನ್ನೇ ಮುಡುಪಾಗಿಟ್ಟ ದೇಶಭಕ್ತರಂತೆ, ಅಬ್ಬಕ್ಕ ರಾಣಿಯು ತನ್ನ ತಾಯಿ ನೆಲದ ರಕ್ಷಣೆಗಾಗಿ ಹೋರಾಡಿದ ವೀರ ಮಹಿಳೆಯಾಗಿದ್ದಾಳೆ. ರಾ.ಮೋ. ವಿಶ್ವಾಮಿತ್ರ ಅವರ 'ಅಭಯರಾಣಿ' ಕಾದಂಬರಿಯು ಕನ್ನಡ ನಾಡಿನ ಪ್ರಖ್ಯಾತ ರಾಣಿ ಅಬ್ಬಕ್ಕದೇವಿಯು ದಿಟ್ಟತನದಿಂದ ಪೋರ್ಚುಗೀಸರನ್ನೆದುರಿಸಿ ವಿಜೇತಳಾದುದನ್ನು ಯಥಾವತ್ತಾಗಿ ಚಿತ್ರಿಸಿದ್ದಾರೆ.

ಬಿ.ಎಲ್. ವೇಣು ಅವರ 'ವೀರವನಿತೆ ಒನಕೆ ಓಬವ್ವ' ಕಾದಂಬರಿಯು ಓಬವ್ವಳ ಅನೇಕ ಪ್ರಸಂಗಗಳನ್ನು ಎತ್ತಿಕೊಂಡು ರಚಿಸಿದ ಕಾದಂಬರಿಯಾಗಿದೆ. ಚರಿತ್ರೆಯಲ್ಲಿ ದಿಟ್ಟತನದಿಂದ ಶತ್ರುಗಳ ಮೇಲೆ ಹೋರಾಡಿದ ಮಹಿಳೆಯರಾದ ಕಿತ್ತೂರ ಚೆನ್ನಮ್ಮ, ಕೆಳದಿಯ ರಾಣಿ ಚೆನ್ನಮ್ಮಾ, ಅಬ್ಬಕ್ಕ ರಾಣಿ, ದುರ್ಗದ ಓಬವ್ವನಾಗತಿ ಇತ್ಯಾದಿ ಮಹಿಳೆಯರು ಕಣ್ಣಮುಂದೆ ಹಾದು ಹೋಗುತ್ತಾರೆ. ಇವರೆಲ್ಲರೂ ದೇಶದ ಉಳುವಿಗಾಗಿ ಕೆಚ್ಚಿನಿಂದ ಹೋರಾಡಿದ್ದು ನಿಜ. ಆದರೆ ಓಬವ್ವ ಸಾಮಾನ್ಯ ಚಲವಾದಿಗ ಹೆಣ್ಣುಮಗಳು; ಯಾವುದೇ ಯುದ್ಧ ತಂತ್ರ ಅರಿತವಳಲ್ಲ. ತನ್ನ ದೇಶದ ದೊರೆಯ ಉಳುವಿಗಾಗಿ ಕೈಗೆ ಸಿಕ್ಕಿದ ಒನಕೆ ಹಿಡಿದು ಬಡಿದಾಡಿದ ಧೀಮಂತೆ ಓಬವ್ವಳ ಶೌರ್ಯ ಸಾಹಸದ ಕಥಾ ವಸ್ತುವೇ ಈ ಕಾದಂಬರಿಯಲ್ಲಿದೆ.

ಓಬವ್ವ ದುರ್ಗದ ಬಗ್ಗೆ ಅಧಮ್ಯವಾದ ನಿಷ್ಠೆಯುಳ್ಳವಳು, ಹೈದರನ ಸೈನಿಕರು ಕಳ್ಳಕಂಡಿಯ ಮೂಲಕ ದುರ್ಗದ ಕೋಟೆಯನ್ನು ಪ್ರವೇಶಿಸಿದಾಗ ಏಕಾಂಗಿಯಾಗಿ ಹೋರಾಡಿ, ಶತ್ರು ಸೈನಿಕರನ್ನು ಸಂಹರಿಸಿ ಸಾವನ್ನಪ್ಪುತ್ತಾಳೆ. ಓಬವ್ವ ತೋರಿದ ಸಾಹಸವೇ ಆಕೆಯ ಹೆಸರು ಶಾಶ್ವತಾಗಿ ನಿಲ್ಲುವಂತೆ ಮಾಡಿದೆ.

ಶಾಂತದೇವಿ ಮಾಳವಾಡ ಅವರ 'ಶೂರರಾಣಿ ಕೆಳದಿಯ ಚೆನ್ನಮ್ಮಾ' ಕಾದಂಬರಿಯು ಚೆನ್ನಮ್ಮಾನ ಜೀವನ ಚರಿತ್ರೆಯನ್ನು ಕುರಿತ ಬೃಹತ್ ಕಾದಂಬರಿ. ಶಾಂತಾದೇವಿ ಮಾಳವಾಡ ಅವರು ನಾಡಿನ ಇತಿಹಾಸದ ಮೇಲೆ ಹೊಸ ಬೆಳಕನ್ನು ಚೆಲ್ಲುವ ಕಲಾತ್ಮಕವಾದ ಕೃತಿಯನ್ನು ರಚಿಸಿ ಕನ್ನಡ ಕಾದಂಬರಿ ಸಾಹಿತ್ಯಕ್ಕೆ ಕೊಡುಗೆ ನೀಡಿದ್ದಾರೆ. ಕೆಳದಿ ಚೆನ್ನಮ್ಮನ ಬಾಲ್ಯಜೀವನದಿಂದ ಪ್ರಾರಂಭವಾಗುವ ಕಾದಂಬರಿ ಓದುಗರ ಕುತೂಹಲವನ್ನು ಕೆರಳಿಸುತ್ತದೆ. ಭಾರತದ ಇತಿಹಾಸದಲ್ಲಿ ಮೊಗಲರನ್ನು ಎದುರು ಹಾಕಿಕೊಂಡು ಸಂಧಾನದ ಮೂಲಕ ಅವರನ್ನು ಗೆದ್ದ ಹೋರಾಟಗಾರ್ತಿ ಕೆಳದಿ ಚೆನ್ನಮ್ಮಾ. ಉತ್ತಮ ಆಡಳಿತಗಾರಳು, ರಾಜಸಿಂಹಾಸನವು ಹೂವಿನ ಹಾಸಿಗೆಯಲ್ಲ

ಎಂಬುದನ್ನು ಅರಿತು, ಬದುಕಿನ ಲೌಕಿಕ-ಅಲೌಕಿಕ ಚಿಂತನೆಯ ಸಾರವನ್ನು ತನ್ನ ಜೀವನದಲ್ಲಿ ಅಳವಡಿಸಿಕೊಂಡ ಆದರ್ಶ ಮಹಿಳೆಯ ಸಾಹಸಮಯ ಜೀವನವನ್ನು ಚಿತ್ರಿಸುವ ಕಾದಂಬರಿ ಇದಾಗಿದೆ. ಈ ಕೃತಿಯಲ್ಲಿ ಚೆನ್ನಮ್ಮಾನ ಜನನದ ಬಗ್ಗೆ ಹಾಗೂ ಅವಳು ಸೋಮಶೇಖರ ನಾಯಕನನ್ನು ಮದುವೆಯಾದ ಸನ್ನಿವೇಶಗಳು ತುಂಬಾ ವಿವರವಾಗಿ ಮೂಡಿಬಂದಿವೆ. ಮದುವೆಯಾದರೂ ಮಕ್ಕಳಾಗದೆ ಇದ್ದಾಗ ಮಕ್ಕಳಿಗಾಗಿ ಪರಿತಪಿಸುವ ಪ್ರಸಂಗ, ಗಂಡನನ್ನು ಸಂಚಿನಿಂದ ಕೊಲೆ ಮಾಡಿದ ಸನ್ನಿವೇಶಗಳು ಓದುಗರ ಮನ ಮಿಡಿಯುವಂತೆ ಚಿತ್ರಿತವಾಗಿವೆ. ಸಮಾಜದಲ್ಲಿ ಹೆಣ್ಣು ಎಂದರೆ ಅಲಕ್ಷ್ಯ ದೃಷ್ಟಿಯಿಂದ ನೋಡುವ ಜನರನ್ನು ಧಿಕ್ಕರಿಸಿ ಹೆಣ್ಣಿನ ಹಿರಿಮೆ, ಗೌರವಗಳನ್ನು ಈ ಕೃತಿಯಲ್ಲಿ ಲೇಖಕರು ಎತ್ತಿತೋರಿಸಿದ್ದಾರೆ.

ಕೆಳದಿ ಚೆನ್ನಮ್ಮಾಜಿಯ ಜೀವನ ಚರಿತ್ರೆಯನ್ನು ಚಿತ್ರಿಸುವ 'ವೀರರಾಣಿ ಮಹಾಮುತ್ಸದ್ಧಿ ಕೆಳದಿಯ ಚೆನ್ನಮ್ಮಾ' ಶ್ರೀ ಲಕ್ಕಪ್ಪ ಶಿರಹಟ್ಟಿ ಅವರ ಐತಿಹಾಸಿಕ ಕಾದಂಬರಿ. ಕೆಳದಿ ಚೆನ್ನಮ್ಮನದೇ ಇಲ್ಲಿ ಕೇಂದ್ರ ಪಾತ್ರವಾಗಿದೆ. ನಮ್ಮ ನಾಡಿನ ಜನರನ್ನು, ನಾಡಿಗಾಗಿ ತ್ಯಾಗ ಮಾಡಿದವರನ್ನು ನಾವು ಮರೆಯುತ್ತಿದ್ದೇವೆ. ಆದರೆ ನಮ್ಮ ನಾಡಿನ ಅಭಿವೃದ್ಧಿಗೆ, ಜನರ ಕಲ್ಯಾಣಕ್ಕೆ ಹೋರಾಡಿದ ಪುಣ್ಯಜೀವಿಗಳ ನೆನಪಿನಿಂದ ನಾವಿಂದು ಸ್ಫೂರ್ತಿ ಪಡೆಯಬೇಕಾಗಿದೆ.

ವಿಜಯನಗರದ ಪತನದ ನಂತರ ಆ ಸಾಮ್ರಾಜ್ಯದ ಪರಂಪರೆಯನ್ನು ಉಳಿಸಿಕೊಂಡು ಬಂದ ಕೆಳದಿ ಅರಸು ಮನೆತನದ ಶೌರ್ಯ, ಸಾಹಸಗಳ ಪ್ರತೀಕವಾಗಿ ಈ ಕಾದಂಬರಿಯು ಮಹತ್ವವನ್ನು ಪಡೆದುಕೊಳ್ಳುತ್ತದೆ. ಕೆಳದಿಯ ಶಿವಪ್ಪ ನಾಯಕನ ಶಿಸ್ತಿನ ರಾಜ್ಯಭಾರ ಕರ್ನಾಟಕದ ಇತಿಹಾಸದಲ್ಲಿ ಹಿರಿಯ ಸ್ಥಾನ ಪಡೆದಿದೆ. ಆ ಶಿವಪ್ಪನಾಯಕನ ಕಿರಿಯ ಸೊಸೆ 'ಚೆನ್ನಮ್ಮಾಜಿ'. ಇವಳು ಸ್ವಾಭಿಮಾನದ ಮೂರ್ತಿ, ದಕ್ಷ ಆಡಳಿತಗಾರ್ತಿ, ವೀರಯೋಧಳು, ಧರ್ಮ ಸಂಸ್ಕೃತಿಯ ಸಂವರ್ಧಕಳು, ವೀರ ಕನ್ನಡತಿ; ಇಂತಹ ಚೆನ್ನಮ್ಮಾನ ಜೀವನ ಚಿತ್ರಣವನ್ನು ಲಕ್ಕಪ್ಪನವರು ಸೊಗಸಾಗಿ ಕಟ್ಟಿಕೊಟ್ಟಿದ್ದಾರೆ.

ಅಖಂಡ ೭೫೦ ವರ್ಷಗಳವರೆಗೆ ವಿಜೃಂಭಣೆಯಿಂದ ಬೆಳಗಿದ ಕೆಳದಿ ಸ್ವತಂತ್ರ ರಾಜ್ಯ. ಪ್ರಬಲ ವಿರೋಧ ಶಕ್ತಿ ಅಡ್ಡಗಟ್ಟಿ ನಿಂತರೂ, ಕಪಟಕಾರ ಸ್ಥಾನಕ್ಕೆ ಬಲಿಯಾಗಿ ಪತಿಯು ಕೊಲ್ಲಲ್ಪಟ್ಟರೂ ಸಹ ಕಂಗೆಡದ ವೀರಯೋಧಳಾಗಿ ಕೈಯಲ್ಲಿ ಕತ್ತಿ ಹಿಡಿದು ಹೋರಾಡಿ ತನ್ನ ರಾಜ್ಯವನ್ನು ರಕ್ಷಿಸಿಕೊಂಡು ಕೆಳದಿಯ ಜನರನ್ನು ತನ್ನ ಮಕ್ಕಳಂತೆ ಕಾಪಾಡಿದಳು. ಹೀಗೆ ಕೆಳದಿಯ ಚೆನ್ನಮ್ಮನಿಗೆ ಸರಿಹೋಗುವ ರಾಣಿಯರು ಸಿಗುವುದು ದುರ್ಲಭ. ನಮ್ಮ ನಾಡಿನ ರಾಜಕೀಯ ಚರಿತ್ರೆಯಲ್ಲಿ ಕೆಳದಿಯ ಇತಿಹಾಸ ಸುವರ್ಣ ಅಕ್ಷರಗಳಿಂದ ಬರೆಯಲ್ಪಡಲು ಇವಳ ಧೈರ್ಯ, ಸಾಹಸ ಕಾರಣವಿರಬಹುದು. ಅರಸನಿಲ್ಲದ ರಾಜ್ಯವನ್ನು ಕೆಳದಿ ಚೆನ್ನಮ್ಮ ರಣಚಂಡಿಯಾಗಿ ನಿಂತು ರಕ್ಷಿಸಿ, ಪೋಷಿಸಿದಳು. ಮರಾಠರ ರಾಜಾರಾಮನಿಗೆ ಆಶ್ರಯ ನೀಡಿ ಮಾತೆ ಎನಿಸಿಕೊಂಡಳು. ರೋಮಾಂಚಕಾರಿಯಾದ ಆಕೆಯ ಸಾಹಸ ಸಾಧನೆ ಈ ಕಾದಂಬರಿಯಲ್ಲಿದೆ.

ಈ ಕೃತಿಯಲ್ಲಿ ಇತಿಹಾಸವಿದೆ, ಸಂಸ್ಕೃತಿಯಿದೆ. ಕನ್ನಡ ಮಹಿಳೆಯ ವೀರಶ್ರೀ ಇದೆ, ವಿನಯಾಶ್ರೀಯಿದೆ, ರಸವತ್ತಾದ ನಿರೂಪಣೆ, ಸರಳ ಭಾಷೆಯಲ್ಲಿ ಈ ಕಾದಂಬರಿ ಮೂಡಿಬಂದಿದೆ.

ನಾ. ಡಿಸೋಜ ಅವರ ‘ಚೆನ್ನಿ ಚೆನ್ನಮ್ಮ ಚೆನ್ನಮ್ಮಾಜಿ’. ಕೃತಿಯು ಕೆಳದಿ ಚೆನ್ನಮ್ಮಳ ಜೀವನವನ್ನು ಆಧರಿಸಿದ ಮೂರನೇ ಕಾದಂಬರಿಯಾಗಿದೆ. ಇದು ಚೆನ್ನಮ್ಮನ ವ್ಯಕ್ತಿತ್ವ ಸಾಧನೆಯ ಬಗ್ಗೆ ತಿಳಿಸಿಕೊಂಡುವ ಕಾದಂಬರಿಯಾಗಿದೆ. ಚೆನ್ನಮ್ಮ ತನ್ನ ಅಪೂರ್ವ ಧೈರ್ಯ, ಪ್ರತಿಭೆ, ರಾಜಕೀಯ ವಿಚಕ್ಷಣತೆಯಿಂದಾಗಿ ಜನಪ್ರಿಯ ಮಹಾರಾಣಿಯಾದಳು. ವೀರಮಹಿಳೆ, ಆದರ್ಶಪತ್ನಿ, ವಿಚಾರವಾದಿ, ತತ್ವಜ್ಞಾನಿ, ಆಧ್ಯಾತ್ಮ ಸಾಧಕಿಯೂ ಹೌದು. ಲೌಕಿಕ ಪಾರಮಾರ್ಥಗಳೆರಡನ್ನೂ ಸಮತೋಲನಗೊಳಿಸಿ ತುಂಬು ಜೀವನವನ್ನು ನಡೆಸಿದಳು. ಈ ಕಾದಂಬರಿ ಚೆನ್ನಮ್ಮಳ ಮದುವೆಯ ಸನ್ನಿವೇಶದಿಂದ ಪ್ರಾರಂಭವಾಗುವುದು. ಚೆನ್ನಮ್ಮಳ ರಾಜ್ಯಾಡಳಿತದ ವಿಸ್ತಾರವಾದ ಕಥೆಯಿಂದ ದತ್ತುಪುತ್ರನಾದ ಬಸವಪ್ಪ ನಾಯಕನವರೆಗಿನ ಕತೆಯನ್ನು ಈ ಕಾದಂಬರಿ ಬಿಚ್ಚಿ ಕೊಡುತ್ತದೆ. ಚೆನ್ನಮ್ಮ ಧೈರ್ಯ, ಪ್ರಜಾಪ್ರೇಮ, ಸರ್ವಧರ್ಮ ಸಹಿಷ್ಣುತೆಗಳು ಕಂಡುಬರುತ್ತವೆ.

ಸಾಹಿತ್ಯ, ಸಂಗೀತ, ನೃತ್ಯ, ಶಿಲ್ಪಕಲೆಗಳಿಗೆ ಹೊಯ್ಸಳರ ಕಾಲದಲ್ಲಿ ದೊರೆತಷ್ಟು ಪ್ರೋತ್ಸಾಹ ಮತ್ತೆ ಯಾರ ಕಾಲದಲ್ಲಿಯೂ ದೊರಕಲಿಲ್ಲ. ವಿಷ್ಣುವರ್ಧನನ ಪಟ್ಟದ ರಾಣಿಯಾದ ಶಾಂತಲೆಯ ಬಾಳನ್ನು ಕಾದಂಬರಿಕಾರರು ಬೇರೆ ಬೇರೆ ರೀತಿಯಲ್ಲಿ ಪಡಿಮೂಡಿಸಿದ್ದಾರೆ.

ಶಾಂತಲೆಯನ್ನು ಕುರಿತ ರಚನೆಯಾದ ಸಿ.ಕೆ. ನಾಗರಾಜರಾವ್ ಅವರ ‘ಪಟ್ಟಮಹಾದೇವಿ ಶಾನ್ತಲದೇವಿ’ ೨೧೪೭ ಪುಟಗಳ ಬೃಹತ್ ಕಾದಂಬರಿ. ಹೊಯ್ಸಳ ದೊರೆ ವಿನಯಾದಿತ್ಯ ಮತ್ತು ಆತನ ಪುತ್ರ ಎರೆಯಂಗ ಪ್ರಭು, ಆತನ ಮಗ ಒಂದನೇ ಬಲ್ಲಾಳ, ಸಹೋದರ ಹಾಗೂ ಅದ್ವಿತೀಯ ಪರಾಕ್ರಮಿ ಬಿಟ್ಟಿದೇವ ಇವರ ಚರಿತ್ರೆ ಈ ಕಾದಂಬರಿಯಲ್ಲಿದ್ದರೂ, ಶಾಂತಲೆಯ ಭವ್ಯ ಮನಮೋಹಕ ವ್ಯಕ್ತಿತ್ವ ಚಿತ್ರಣವೇ ಈ ಕೃತಿಯ ಮುಖ್ಯ ಉದ್ದೇಶವಾಗಿದೆ. ವೀರಾಗ್ರಹಿಣಿಯಾದ ಶಾಂತಲದೇವಿ ತಾನು ಬದುಕಿದ್ದಾಗಲೇ ತನ್ನ ವಿದ್ವತ್, ಜ್ಞಾನ, ಸಂಯಮದ, ಮನೋಭೂಮಿಕೆ, ಸಮದರ್ಶಿತ್ವಗಳಿಂದ ಭವ್ಯ ಮನಮೋಹಕ ವ್ಯಕ್ತಿತ್ವ ಹೊಂದಿದ್ದಳು. ಶಾಸನಗಳಲ್ಲಿ ಉಲ್ಲೇಖ ಗೊಂಡಿರುವ ಅನೇಕ ಬಿರುದುಗಳು ಶಾಂತಲೆಯ ವ್ಯಕ್ತಿತ್ವದ ಕುರುಹಾಗಿ ನಮ್ಮ ಎದುರಿಗೆ ಇವೆ.

‘ಪಟ್ಟಮಹಾದೇವಿ ಶಾಂತಲಾದೇವಿ’ ಕಾದಂಬರಿ ಗಾತ್ರದಲ್ಲೂ, ಸತ್ವದಲ್ಲೂ ಕನ್ನಡ ಕಾದಂಬರಿ ಕ್ಷೇತ್ರದ ಒಂದು ಅದ್ಭುತ ಸಾಹಸದಂತಿದೆ. ಒಬ್ಬ ಸ್ತ್ರೀಯನ್ನು ಕುರಿತು ಬರೆದ ಕಾದಂಬರಿಗಳಲ್ಲಿಯೇ ಇದು ದೊಡ್ಡ ಕಾದಂಬರಿ. ಶಾಂತಲೆಯ ವ್ಯಕ್ತಿತ್ವ ಚಿತ್ರಿಸುವುದೇ ಈ ಕೃತಿಯ ಮುಖ್ಯ ಉದ್ದೇಶ. ಶಾಂತಲೆಯ ನಲ್ವತ್ತು ವರ್ಷಗಳ ಸುಂದರ ಸುಸಂಸ್ಕೃತ ಬದುಕಿನ ಚಿತ್ರಣ ಈ ಕಾದಂಬರಿಯಲ್ಲೂ ಮೂಡಿಬಂದಿದೆ. ‘ಪಟ್ಟಮಹಾದೇವಿ ಶಾಂತಲಾದೇವಿ’ ಕಾದಂಬರಿಯ ಬರವಣಿಗೆ ಕುರಿತು ಎಲ್.ಎಲ್. ಶೇಷಗಿರಿರಾವ್ ಅವರು ಹೀಗೆ ಅಭಿಪ್ರಾಯಪಡುತ್ತಾರೆ. “ಒಬ್ಬ ವಿಶಿಷ್ಟ ವ್ಯಕ್ತಿತ್ವದ ಮಹಾಪಾತ್ರ ನಮ್ಮ ಕಣ್ಣೆದುರಿಗೆ ಕ್ರಮ ಕ್ರಮವಾಗಿ ರೂಪ ತಾಳಿ ಪರ್ವತ ಎತ್ತರಕ್ಕೆ ನಿಲ್ಲುವ ಪ್ರಕ್ರಿಯೆಗಳನ್ನು ತೋರಿಸುತ್ತಾರೆ” (ಶೇಷಗಿರಿರಾವ್ ಎಲ್.ಎಸ್.; ೧೯೫೭; ಪು. ೧೬೨). ಈ ಮಾತು ಅಕ್ಷರಶಃ ಸತ್ಯವಾಗಿದೆ. ಈ ಕಾದಂಬರಿಯಲ್ಲಿ ಸಹಜ ಗಾಂಭೀರ್ಯವಿದೆ. ರಾಜಯೋಗ್ಯ ವಾದ ರೀತಿಯ ನಡಾವಳಿಗಳು, ಪಾತ್ರಗಳ ಔನ್ನತ್ಯದ ಸ್ಪಷ್ಟ ಕಲ್ಪನೆ ನೀಡುವ ತಂತ್ರದ ಬಳಕೆ ಈ ಕಾದಂಬರಿಯ ವೈಶಿಷ್ಟ್ಯವಾಗಿದೆ.

ಸಿ.ಕೆ. ನಾಗರಾಜರಾವ್ ಅವರು ಹೊಯ್ಸಳರ ಕಾಲಕ್ಕೆ ಸಂಬಂಧಪಟ್ಟ ಶಾಸನಗಳು, ಐತಿಹ್ಯಗಳು, ದಂತಕಥೆಗಳು, ಕಡತಗಳು, ಶಿಲ್ಪಕ್ಕೆ ಸಂಬಂಧಿಸಿದ ಸಂಗತಿಗಳು ಇವೆಲ್ಲಾ ಆಕರಗಳ ಆಳವಾದ ಅಧ್ಯಯನದಿಂದ ಕಾದಂಬರಿಯನ್ನು ರಚಿಸಿದ್ದಾರೆ. ಹೀಗಾಗಿ ಈ ಕೃತಿಯಲ್ಲಿ ಇನ್ನೂರು ಶಾಸನೋಕ್ತ ಐತಿಹಾಸಿಕ ಪಾತ್ರಗಳು, ನೂರಾಇಪ್ಪತ್ತು ಕಲ್ಪಿತ ಪಾತ್ರಗಳು ಕಂಡು ಬರುತ್ತವೆ. 'ಪಟ್ಟಮಹಾದೇವಿ ಶಾಂತಲದೇವಿ' ಕಾದಂಬರಿಯಲ್ಲಿ ಶಾಂತಲೆಯ ಪಾತ್ರವನ್ನು ಪ್ರಮುಖವಾಗಿರಿಸಿ ಕೊಂಡ ಕಾರಣ ಅವಳ ಪತಿ ಬಿಟ್ಟಿದೇವನನ್ನು ಒಳಗೊಂಡಂತೆ ಉಳಿದ ಪಾತ್ರಗಳು ಗೌಣವಾಗಿ ಬಿಡುತ್ತವೆ. ಆದರೆ ಶಾಂತಲೆಯ ಪಾತ್ರ ವಾಚಕರ ಮನಸ್ಸಿನಲ್ಲಿ ಅಚ್ಚೊತ್ತಿ ನಿಲ್ಲುತ್ತದೆ. ನಲವತ್ತು ವರ್ಷಗಳ ಶಾಂತಲೆಯ ಸುಂದರ ಬದುಕಿನ ಚಿತ್ರಣವನ್ನು ಕಾದಂಬರಿಯಲ್ಲಿ ಕಾಣುತ್ತೇವೆ. ಬಾಲ್ಯದಿಂದ ಪ್ರಾರಂಭಗೊಂಡ ಕಾದಂಬರಿ ಅವಳ ಸಾವಿನೊಂದಿಗೆ ಮುಕ್ತಾಯವಾಗುತ್ತದೆ.

ಕೆ.ವಿ. ಅಯ್ಯರ್ ಅವರ 'ಶಾಂತಲಾ' ಕಾದಂಬರಿಯು ಶಾಂತಲದೇವಿಯನ್ನು ಕುರಿತ ಕನ್ನಡದಲ್ಲಿಯೇ ಅಪೂರ್ವವಾದ ಐತಿಹಾಸಿಕ ಕಾದಂಬರಿ. ಈ ಕಾದಂಬರಿಯನ್ನು ಕುರಿತು ವಿಮರ್ಶಿಸುತ್ತಾ ಕುರ್ತಕೋಟಿ ಅವರು "ಶಿಲ್ಪಿಯೊಬ್ಬ ತದೇಕಚಿತ್ತನಾಗಿ ತಾಳ್ಮೆಯಿಂದ ನಿರ್ಮಿಸಿದ ಶಿಲ್ಪವೊಂದರಂತೆ ಕಾದಂಬರಿಯ ನಿಲುವು ಕಂಗೊಳಿಸುತ್ತದೆ" (ಕುರ್ತಕೋಟಿ ಕೆ.ಡಿ.; ೧೯೮೩; ಪು. ೨೨೭) ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. 'ಶಾಂತಲಾ' ಕಾದಂಬರಿ ಐತಿಹಾಸಿಕ ನಿರೂಪಣೆಯಾಗಿದೆ. ಅಭಿಜಾತತೆಯ ಮಾರ್ಗದಲ್ಲಿ ಈ ಕಾದಂಬರಿ ರಚನೆಗೊಂಡಿದೆ. ಆ ಕಾಲದ ವೀರಜೀವನವೂ ದೈವ ಭಕ್ತಿಯೂ, ಸಕಲ ಸಮಯ ಸಮಾನ ಗೌರವವೂ, ಕಲಾಪ್ರೇಮದೊಂದಿಗೆ ಬಾಲ್ಯದಿಂದ ಮರಣದವರೆಗಿನ ಕಥನಾಯಕಿಯಾದ ಶಾಂತಲೆಯ ಜೀವನದ ಪ್ರತಿಯೊಂದು ಘಟನೆಯ ಚಿತ್ರಣ ಅಚ್ಚಳಿಯದ ಪರಿಣಾಮವನ್ನು ಓದುಗರ ಮನಸ್ಸಿನ ಮೇಲೆ ಮೂಡಿಸುತ್ತದೆ.

ಬಾಲ್ಯದಿಂದಲೂ ಸರಸ್ವತಿಯ ಆರಾಧಕಳಾದ ಶಾಂತಲೆ ಸಂಗೀತ, ನೃತ್ಯ, ಕಲಾಪ್ರವೀಣೆ, ಅವಳು ತನ್ನ ವಿನಯ, ಜಾಣ್ಮೆ, ಕಲಾ ಪ್ರೌಢಿಮೆಯ ಬಲದಿಂದಲೇ ವಿಷ್ಣುವರ್ಧನನ ಕೈಹಿಡಿಯುತ್ತಾಳೆ. ಒಡಹುಟ್ಟಿದ ಸೋದರಿಯಂತೆ ಬೆಳೆದ ಬಾಲ್ಯ ಸ್ನೇಹಿತೆ ಲಕ್ಷ್ಮಿಯನ್ನು ತನ್ನ ಜೊತೆಗೆ ಅದೇ ಹಸೆಮಣೆಯ ಮೇಲೆ ವಿವಾಹವಾಗಲು ಪ್ರೇರೇಪಿಸುತ್ತಾಳೆ.

ವಿಷ್ಣುವರ್ಧನನ ಸಂಸಾರದ ಏಳು-ಬೀಳಿನ ಬದುಕಿನ ಮೇಲೆ ಪರಿಣಾಮ ಬೀರಿದ ರಾಜಮಾತೆ, ರಾಜಪತ್ನಿಯರ ಗೃಹಜೀವನದ ಸಂಕಟ ಸಮಸ್ಯೆಗಳೂ, ಸುಖ-ದುಃಖಗಳೂ ಆಶೆ-ನಿರಾಶೆಗಳೂ 'ಶಾಂತಲಾ' ಕಾದಂಬರಿಯಲ್ಲಿ ಚಿತ್ರಿತವಾಗಿವೆ. ಇಲ್ಲಿ ಆದರ್ಶದ ತೀವ್ರತೆಯೇ ಹೆಚ್ಚಾಗಿ ಇತಿಹಾಸದ ಸಂಗತಿಗಳು ಹಿಂದುಳಿದಂತೆ ಭಾಸವಾಗುತ್ತದೆ. ಕಥೆಯು ಅದ್ಭುತವಾಗಿದ್ದು ಕಾಲ್ಪನಿಕವಾಗಿದೆ. ವಾಸ್ತವಿಕತೆಯನ್ನು ಅರ್ಧದವರೆಗೆ ಅನುಸರಿಸುತ್ತಾರೆ. ಅಂದರೆ ಶಾಂತಲೆಯ ಮರಣಾನಂತರ ದೊರೆ ವಿಷ್ಣುವರ್ಧನನ್ನು ಹುಚ್ಚನನ್ನಾಗಿಸಿ ಅಲೆಯುವ ಕಲ್ಪನೆ ರಾಜ ಗಾಂಭೀರ್ಯಕ್ಕೆ ಚ್ಯುತಿಯನ್ನುಂಟುಮಾಡುತ್ತದೆ ಮತ್ತು ದೊರೆಯೊಬ್ಬನನ್ನು ಸಾಮಾನ್ಯ ಪ್ರಜೆಗಳ ಭಾವನೆಗಳ ನೆಲೆಗೆ ಇಳಿಸುವಂತೆ ಚಿತ್ರಿಸಲಾಗಿದೆ. ಕಾದಂಬರಿಯ ಕುರಿತು ಕುರ್ತಕೋಟಿ ಅವರು ತಮ್ಮ

ಅಭಿಪ್ರಾಯವನ್ನು ಹೀಗೆ ವ್ಯಕ್ತಪಡಿಸುತ್ತಾರೆ. "ಬದುಕಿನ ಘನತೆ ಅಳಿಗಾಲಗಳ ಹಿಂದೆ ಅದೃಷ್ಟ ಶಕ್ತಿಯೊಂದರ ಕೈವಾಡವಿರಬೇಕೆಂದು ಅಯ್ಯರ್ ಅವರು ದೃಢವಾಗಿ ನಂಬಿರುವುದರಿಂದ ಅವರ ಬರವಣಿಗೆ ಆಸಕ್ತಿಯನ್ನು ಹುಡುಕಿಕೊಂಡು ಹೋಗುತ್ತದೆ" (ಅದೇ; ಪು. ೧೪೩). ರಂ.ಶ್ರೀ ಮುಗಳಿ ಅವರು "ಕಾದಂಬರಿಯ ಪ್ರಾರಂಭದಲ್ಲಿ ಐತಿಹಾಸಿಕ ಚೌಕಟ್ಟಿನಲ್ಲಿಯೇ ಪಾತ್ರಗಳನ್ನು, ಘಟನೆಗಳನ್ನು ಹೇಳುತ್ತಾ ಹೋಗುವ ಲೇಖಕರು ಕಾದಂಬರಿಯ ಕೊನೆಯ ಭಾಗದಲ್ಲಿ ವಾಸ್ತವಿಕೆ ಸತ್ಯವಲ್ಲದ ಕೇವಲ ಕಲ್ಪನೆಗಳ ಮೂಲಕ ಕಥೆಯನ್ನು ಹೇಳುತ್ತಾರೆ. ಶಾಂತಲಾ ಕಾದಂಬರಿಯ ಕೊನೆಯ ಭಾಗದಲ್ಲಿ ಶಾಂತಲೆಯ ಆದರ್ಶೀಕರಣ ಮಾತ್ರ ಮಿತಿಯನ್ನು ದಾಟಿದೆ ಎಂದು ನಮ್ಮ ತೋರಿಕೆ" (ರಂ.ಶ್ರೀ ಮುಗಳಿ; ಕನ್ನಡ ಸಾಹಿತ್ಯದ ಇತಿಹಾಸ; ಪು. ೩೬೦).

'ಶಾಂತಲಾ' ಕಾದಂಬರಿಯಲ್ಲಿ ಶಾಂತಲೆಯ ವ್ಯಕ್ತಿತ್ವ ಚಿತ್ರಣ ಭವ್ಯವಾಗಿ ಮೂಡಿಬಂದಿದೆ. ಶಾಂತಲೆಯ ನಂತರ ಲಕ್ಷ್ಮಿದೇವಿಯು ವಿಷ್ಣುವರ್ಧನನ ಪಟ್ಟದ ರಾಣಿ ಎಂದು ಚಿತ್ರಿಸಿದ್ದಾರೆ. ಆದರೆ ಶಾಸನಗಳನ್ನು ಗಮನಿಸಿದಾಗ ಲಕ್ಷ್ಮಿದೇವಿ ಪಟ್ಟ ಮಹಾದೇವಿ ಆಗಿರಲಿಲ್ಲ. ಈ ಕಾದಂಬರಿಯಲ್ಲಿ ಮಾನವೀಯ ಸಂವೇದನೆಗಳಷ್ಟೇ ಪ್ರಸ್ತುತವಾಗಿದ್ದರಿಂದ ಭಾವ ಪ್ರಧಾನವಾದ ಐತಿಹಾಸಿಕ ಪಾತ್ರಗಳುಳ್ಳ ಕೃತಿ ಎಂಬ ಅರ್ಥದಲ್ಲಿ ಚಾರಿತ್ರಿಕ ಕಾದಂಬರಿ ಎಂದು ಗುರುತಿಸಬಹುದು.

ಶಾಂತಲೆಯನ್ನು ಕುರಿತ ಮೂರನೆಯ ಕಾದಂಬರಿ ಮ.ನ. ಮೂರ್ತಿ ಅವರ 'ನಾಟ್ಯರಾಣಿ ಶಾಂತಲಾ' ಕಾದಂಬರಿ ವಸ್ತು, ಶೈಲಿ, ನಿರೂಪಣೆಗಳಲ್ಲಿ ವಿಭಿನ್ನವಾದುದು. ಈ ಬೃಹತ್ ಕಾದಂಬರಿಯಲ್ಲಿ ಶಾಂತಲೆ ರಾಜವಂಶಕ್ಕೆ ಸೇರಿದವಳಲ್ಲವೆಂದು, ನೃತ್ಯ ಕಲಾವಿದರ ಹೆಣ್ಣು ಎಂದು ಕಲ್ಪಿಸಿದ್ದಾರೆ.

ಮೊದಲ ಬಾರಿಗೆ ಶಿವಗಂಗೆಯ ಹೊನ್ನಮ್ಮ ದೇವಾಲಯದಲ್ಲಿ ಶಾಂತಲೆಯ ನೃತ್ಯ ಸೇವೆ ಕಂಡು ಮೆಚ್ಚಿದ ವಿಷ್ಣುವರ್ಧನ ಅವಳನ್ನು ತನ್ನ ಬಾಳಸಂಗಾತಿಯನ್ನಾಗಿ ಮಾಡಿಕೊಳ್ಳಲು ಇಚ್ಛಿಸಿದನು. ನರ್ತಕಿಯರು ಕೀಳು ಕುಲದಲ್ಲಿ ಹುಟ್ಟಿದ ಅವಳನ್ನು ಸೊಸೆಯಾಗಿ ಸ್ವೀಕರಿಸಲು ರಾಜಮಾತೆ ಏಚಲದೇವಿ ಮೊದಲು ನಿರಾಕರಿಸಿದರೂ, ಅವಳ ಕುಲವೊಂದನ್ನು ಬಿಟ್ಟು ಉಳಿದೆಲ್ಲ ವಿಷಯದಲ್ಲಿ ರಾಜಮನೆತನಕ್ಕೆ ಯೋಗ್ಯವಾದ ಹೆಣ್ಣೆಂಬ ಕಾರಣದಿಂದ ವಿಷ್ಣುವರ್ಧನನನ್ನು ಶಾಂತಲೆಯೊಂದಿಗೆ ಮದುವೆಯಾಗಲು ಒಪ್ಪಿಗೆ ನೀಡುತ್ತಾಳೆ. ಶಾಂತಲೆ ವಿಷ್ಣುವರ್ಧನನ ಕೈ ಹಿಡಿದು ಪಟ್ಟದರಸಿಯಾದಳು. ಅವನ ಉಳಿದ ಪತ್ನಿಯರು ರಾಜಮನೆತನದ ಕನ್ಯೆಯರಾದ ತಮಗೆ ಪಟ್ಟದರಸಿಯರ ಸ್ಥಾನ ದೊರೆಯದ ಕಾರಣ ಅಸಮಾಧಾನಪಟ್ಟರು. ಅವಳ ಸವತಿಯಲ್ಲಿ ಒಬ್ಬಳಾದ ಕಂಚಿಯ ಪಲ್ಲವ ರಾಜಕುಮಾರಿ ಬಮ್ಮಲೆ ವಿಷ್ಣುವರ್ಧನನ ಮನಸ್ಸಿನಲ್ಲಿ ಹುಳಿಹಿಂಡಲು ಬಯಸುತ್ತಾಳೆ. ಶಾಂತಲೆ ಅಸಾಮಾನ್ಯ ಪ್ರತಿಭೆ ಹೊಂದಿದ್ದರೂ ಕೂಡ ಅವಳ ಜನ್ಮದೋಷವನ್ನು ದೊಡ್ಡದಾಗಿ ಹೇಳುತ್ತಾಳೆ.

ಶಾಂತಲೆ ತನ್ನ ಪರಿಪೂರ್ಣ ವ್ಯಕ್ತಿತ್ವದಿಂದಾಗಿ ಎಲ್ಲರ ಗೌರವಾದರಗಳಿಗೆ ಪಾತ್ರಗಳಾಗಿದ್ದರೂ ಬಮ್ಮಲೆ ಶಾಂತಲೆಯನ್ನು ಒಳಗೊಳಗೆ ಹಾಗೂ ಕೆಲವೊಮ್ಮೆ ಬಹಿರಂಗವಾಗಿ ವಿರೋಧಿಸಿ

ಮತ್ಸರ ವ್ಯಕ್ತಪಡಿಸುತ್ತಾಳೆ. ವಿಷ್ಣುವರ್ಧನನಿಗೆ ಅರಿವಿಲ್ಲದಂತೆ ಅವನನ್ನು ಶಾಂತಲೆಯಿಂದ ಬೇರ್ಪಡುವಂತೆ ಮಾಡುತ್ತಾಳೆ. ಶಾಂತಲೆ ಪತಿಯ ಅದಮ್ಯ ಪ್ರೀತಿ ಗೌರವಗಳಿಂದ ವಂಚಿತಳಾಗಿ ಮತ್ಸರಿಸುತ್ತಿದ್ದ ಬಮ್ಮಲೆಯ ಹಾಗೂ ಆಕೆಯ ಎಲ್ಲ ಕಾರಸ್ಥಾನಗಳಲ್ಲೂ ನೆರವಾಗುತ್ತಿದ ದಾಸಿ ಚಿತ್ತಬ್ಬೆಯ  ವರ್ತನೆಯಿಂದ ಒಳಗೊಳಗೇ ಸಂಕಟಪಡುತ್ತಾಳೆ. ಶಾಂತಲೆಯ ಹಿತಚಿಂತಕರೆಲ್ಲಾ ಸತ್ತು ಸ್ವರ್ಗ ಸೇರುತ್ತಾರೆ. ಮುಂದೆ ಅವಳು ರಾಜಮಾತೆಯಾಗುತ್ತಾಳೆಂಬ ಕಾರಣದಿಂದ ಶಾಂತಲೆಯ ಮಗ ಬಲ್ಲಾಳ ರಾಜಕುಮಾರ ಕುದುರೆಯ ಮೇಲಿಂದ ಬಿದ್ದು ದುರ್ಮರಣಕ್ಕೀಡಾಗು ವಂತೆ ಯೋಜನೆ ಹಾಕುತ್ತಾಳೆ. ಇದ್ದೊಬ್ಬ ಮಗನ ಸಾವಿನ ಆಘಾತದಿಂದ ಹೊರಬರಲಾರದೆ ಶಾಂತಲೆ ತನ್ನ ತವರೂರಾದ ಶಿವಗಂಗೆಗೆ ಹೋಗುತ್ತಾಳೆ. ಅಲ್ಲಿ ಹೋಗಿ ವಿಷ್ಣುವರ್ಧನನು ಮೊದಲ ಬಾರಿಗೆ ನೃತ್ಯ ನೋಡಿ ಕಾಣಿಕೆಯಾಗಿ ಕೊಟ್ಟ ಮುತ್ತಿನಹಾರ ಕೈಯಲ್ಲಿ ಹಿಡಿದು ಪ್ರಾಣ  ಬಿಡುತ್ತಾಳೆ.

ಈ ಕಾದಂಬರಿಯಲ್ಲಿ ಶಾಂತಲೆಯ ಹುಟ್ಟಿಗೆ ಸಂಬಂಧಿಸಿದಂತೆ ಐತಿಹಾಸಿಕವಲ್ಲದ ನೂತನ ದೃಷ್ಟಿಯಿದೆ. ಆದರೆ ಶಾಸನಗಳಲ್ಲಿ ಶಾಂತಲೆ ಹೆಗ್ಗಡೆ ಮನೆತನದವಳೆಂದು ಉಲ್ಲೇಖಗಳಿವೆ. ಈ ಕಾದಂಬರಿಯಲ್ಲಿ ಮಾತ್ರ ಶಾಂತಲೆ ನರ್ತಕಿಯರ ವಂಶದವಳೆಂದು ಚಿತ್ರಿಸಿದ್ದಾರೆ. 'ನಾಟ್ಯ ರಾಣಿ ಶಾಂತಲಾ' ಕಾದಂಬರಿಯು ೫೮೩ ಪುಟಗಳಲ್ಲಿ ೬೦ ಅಧ್ಯಾಯಗಳನ್ನು ಒಳಗೊಂಡಿದೆ. ಹೊಯ್ಸಳ ರಾಜಮನೆತನದ ಒಂದು ತಲೆಮಾರಿನ ಕತೆಯನ್ನು ಕಾದಂಬರಿ ಬಿಚ್ಚಿ ತೋರಿಸುತ್ತದೆ.

ಶಾಂತಲೆಯನ್ನು ಕುರಿತು ನಾಲ್ಕನೆಯ ಕಾದಂಬರಿ ಸಮೇತನಹಳ್ಳಿ ರಾಮರಾಯರ 'ಸವತಿ ಗಂಧವಾರಣಿ' ಕಾದಂಬರಿಯಲ್ಲಿ ಶಾಂತಲೆಗೆ 'ಸವತಿಗಂಧವಾರಣಿ' ಎಂಬ ಬಿರುದು ಪ್ರಚಲಿತವಿದ್ದು, ಅವಳು ಅದೇ ಹೆಸರಿನಲ್ಲಿ ಶಾಂತೇಶ್ವರ ಬಸದಿಯನ್ನು ಶ್ರವಣಬೆಳಗೊಳದ ಚಿಕ್ಕ ಬೆಟ್ಟದಲ್ಲಿ ಕಟ್ಟಿಸಿದಳು ಎಂಬ ಉಲ್ಲೇಖವಿದೆ. ವಿಷ್ಣುವರ್ಧನನಿಗೆ ಶಾಂತಲಾದೇವಿ ಅಲ್ಲದೆ ಬೊಮ್ಮಲದೇವಿ, ಲಕ್ಷ್ಮಿದೇವಿ, ರಾಜಲದೇವಿ ಎಂಬ ಇನ್ನೂ ಅನೇಕ ಜನ ರಾಣಿಯರಿದ್ದರೆಂದು ಶಾಸನಗಳಿಂದ ತಿಳಿದು ಬರುತ್ತದೆ. ವೀರನರಸಿಂಹನು ಲಕ್ಷ್ಮಿದೇವಿಯ ಮಗ. ಅಪುತ್ರವತಿಯಾದ ಶಾಂತಲೆ ಪುತ್ರವತಿಯಾದ ಲಕ್ಷ್ಮಿದೇವಿಯನ್ನು ಪಟ್ಟ ಮಹಾರಾಣಿಯಾಗಿ ಮಾಡಲು ಹೊರಟು ತಾನು ಶಿವಗಂಗೆಯ ಕೊಳದಲ್ಲಿ ಆತ್ಮಹತ್ಯೆ ಮಾಡಿಕೊಂಡಂತೆ ಲೇಖಕರು ಚಿತ್ರಿಸಿದ್ದಾರೆ. "ಶಾಂತಲೆಯ ತ್ಯಾಗ ಅವಳ ಕಲಾ ಭಿನ್ನತೆಗಳನ್ನು ಚೆನ್ನಾಗಿ ಚಿತ್ರಿಸಲಾಗಿದ್ದರೂ, ಶೈಲಿ ಪಡಸಾಗಿ ಕಥೆಯ ಓಟ ಕುಂಟುತ್ತದೆ. ಶಾಸನಸ್ಥ ಶೈಲಿ ಎಷ್ಟರಮಟ್ಟಿಗೆ ಸಮಕಾಲೀನ ಕಾದಂಬರಿಯ ಒಡಲಲ್ಲಿ ಸಮಾವೇಶಗೊಳ್ಳಬಹುದು ಎಂಬುವುದಕ್ಕೆ ಈ ಕಾದಂಬರಿಯು ಒಂದು ನಿದರ್ಶನ" (ಕೊರಟಿ ಶ್ರೀನಿವಾಸರಾವ್; ಪು. ೧೩೮) ಎಂದು ಶ್ರೀನಿವಾಸರಾವ್ ಕೊರಟಿ ಅವರು ಅಭಿಪ್ರಾಯ ಪಡುತ್ತಾರೆ.

ಕೇಂದ್ರ ಪಾತ್ರ 'ಶಾಂತಲೆ'ಯೊಂದಿಗೆ ತಾಯಿ ಮಾಚಿಕಬ್ಬೆ, ಗೆಳತಿ ಲಕ್ಷ್ಮಿ, ಬಮ್ಮಲದೇವಿ, ರಾಜಲಾದೇವಿ ಪಾತ್ರಗಳನ್ನು ಲೇಖಕರು ತಮ್ಮದೇ ಆದ ಕಲ್ಪನೆಯನ್ನು ಬೆರೆಸಿ, ಅವುಗಳ ಗುಣಗಳು ಚಿತ್ತದಲ್ಲಿ ನೆಲೆಯೂರುವಂತೆ ಚಿತ್ರಿಸಲಾಗಿದೆ.

ವಿಜಯನಗರ ಸಾಮ್ರಾಜ್ಯದ ಇತಿಹಾಸವನ್ನು ಹಿನ್ನೆಲೆಯಾಗುಳ್ಳ ಕಾಲ್ಪನಿಕ ಕಾದಂಬರಿಯನ್ನಾಗಿ ದೇವುಡು ನರಸಿಂಹಶಾಸ್ತ್ರಿಯವರು 'ಚಿನ್ನಾ' ಕಾದಂಬರಿಯನ್ನು ರಚಿಸಿದ್ದಾರೆ. ವಿಜಯನಗರ ಕಾಲದಲ್ಲಿ ಸಂಗೀತ, ಸಾಹಿತ್ಯ, ನೃತ್ಯ ಕಲೆಗಳಿಗೆ ಅಂದಿನ ರಾಜಮಹಾರಾಜರು ನೀಡಿದ ಪ್ರೋತ್ಸಾಹ ಚಿರಸ್ಮರಣೀಯವಾಗಿದೆ. ಅಳಿಯ ರಾಮರಾಯನ ಆಳ್ವಿಕೆಯಲ್ಲಿ ಗೋಲ್ಕೊಂಡ ಮತ್ತು ವಿಜಯನಗರ ರಾಜ್ಯಗಳ ನಡುವೆ ಸ್ನೇಹ ಸೌಹಾರ್ದತೆಯನ್ನು ಬೆಳೆಸಲು ಚಿನ್ನಸಾನಿಯ ನೃತ್ಯ ಪ್ರದರ್ಶನವನ್ನು ಬಳಸಿಕೊಳ್ಳಲಾಗಿದೆ. ವೇಶ್ಯೆಯಾದ ಚಿನ್ನಸಾನಿಯ ನೃತ್ಯ ಪ್ರದರ್ಶನ ಎಲ್ಲರ ಮನಸೂರೆಗೊಳ್ಳುತ್ತದೆ. ಕಲಾಭಿರುಚಿ ಮತ್ತು ಶಾಂತಿ ಪ್ರಿಯತೆಯನ್ನು ಹೊಂದಿದ ಗೋಲ್ಕೊಂಡಾದ ಸುಲ್ತಾನ ತನ್ನ ದರ್ಬಾರಿನಲ್ಲಿ ಚಿನ್ನಸಾನಿಯ ನೃತ್ಯ ಪ್ರದರ್ಶನವನ್ನು ನಡೆಸಿಕೊಳ್ಳಬೇಕೆಂಬ ಆಸೆಯನ್ನು ಹೊಂದಿದನು.

ಸುಲ್ತಾನನ ಆಸೆಯನ್ನು ನೆರವೇರಿಸಲು ವೀರಪ್ಪಶೆಟ್ಟಿ ನಡೆಸುವ ರಾಜಕೀಯ ಕುತಂತ್ರಗಳನ್ನು ಲೇಖಕರು ಓದುಗರ ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾರೆ. ಶಾಂತಿ ಸ್ಥಾಪನೆಗಾಗಿ ಕಲೆ ಉಪಯೋಗವಾಗುವ ಸನ್ನಿವೇಶ ದೇವುಡು ಅವರ ಈ ಕಾದಂಬರಿಯ ಮುಖ್ಯ ಸ್ವಾರಸ್ಯವಾಗಿದೆ.

ಅತ್ತಿಮಬ್ಬೆಯ ಜೀವನ ಚರಿತ್ರೆಯನ್ನು ಕುರಿತು ಜಿ. ಬ್ರಹ್ಮಪ್ಪ ಅವರು 'ದಾನಚಿಂತಾಮಣಿ' ಕಾದಂಬರಿಯನ್ನು ರಚಿಸಿದ್ದಾರೆ. ಈ ಕಾದಂಬರಿಯೂ ಕ್ರಿ.ಶ. ಹತ್ತನೆಯ ಶತಮಾನದ ಚಾರಿತ್ರಿಕ ಕನ್ಯಾರತ್ನ ದಾನಚಿಂತಾಮಣಿ ಅತ್ತಿಮಬ್ಬೆಯನ್ನು ಕುರಿತಾಗಿದೆ. ಹತ್ತನೆಯ ಶತಮಾನವು ಜೈನ ಧರ್ಮದ ಸುವರ್ಣಯುಗ. ಅಂದಿನ ರಾಜರೂ, ಮಂತ್ರಿ ಮಾನ್ಯರೂ, ಸೇನಾಧಿಪತಿಗಳೂ ಜೈನ ಧರ್ಮದ ಪ್ರಸಾರಕ್ಕೆ ತಮ್ಮ ಬಾಳಿನ ಬಹು ಭಾಗವನ್ನು ಮೀಸಲಾಗಿಟ್ಟಿದ್ದರು. ಇವರೆಲ್ಲರೂ ಜೈನ ಧರ್ಮಕ್ಕಾಗಿ ಹಲವು ಧಾರ್ಮಿಕ ಕಾರ್ಯಗಳನ್ನು ಮಾಡಿ ಧರ್ಮಾನುರಾಗಿಗಳೂ, ಸಮ್ಯಕ್ತ್ವ ಚೂಡಾಮಣಿಗಳೂ ಆಗಿದ್ದರು. ಇವರೆಲ್ಲರೂ ಒಟ್ಟಾಗಿ ಮಾಡಿದ ಧಾರ್ಮಿಕ ಕಾರ್ಯವನ್ನು ಅಂದಿನ ಅತ್ತಿಮಬ್ಬೆ ಒಬ್ಬಳೇ ಮಾಡಿ 'ದಾನ ಚಿಂತಾಮಣಿ' ಎಂಬ ಹೆಸರನ್ನು ಪಡೆದುಕೊಂಡಳು. ಇವಳ ಧಾರ್ಮಿಕ ಕಾರ್ಯಕ್ಕೆ ರನ್ನಕವಿ ಕಿರೀಟ ತೊಡಿಸಿರುವನು.

ಅತ್ತಿಮಬ್ಬೆ ರನ್ನ ಕವಿ ತೀರ್ಥಂಕರಿಸಿ ನಿರ್ವಾಣೋತ್ಸವದ ನೆನಪಿಗಾಗಿ ೧೫೦೦ ಜಿನಾಲಯ ಕಟ್ಟಿಸಿದಳು. ತನ್ನ ಕಣ್ಣಿಗೆ ಬಿದ್ದ ಜೈನ ಕಾವ್ಯವನ್ನು ಸಹಸ್ರ ಪ್ರತಿ ಮಾಡಿಸಿ ದಾನ ಮಾಡಿದಳು. ೧೫೦೦ ಬಂಗಾರದ ಜನಬಿಂಬಗಳನ್ನು ಮಾಡಿಸಿ ಜಿನಭಕ್ತರಿಗೆ ದಾನ ಮಾಡಿದಳು. ರನ್ನ ಕವಿಯನ್ನು ಸಾಕಿ ಸಲುಹಿ ಕವಿಚಕ್ರವರ್ತಿಯಾಗುವಂತೆ ನೋಡಿಕೊಂಡಳು. ರನ್ನ ಈಕೆಯ ಭವ್ಯತಮ ಚರಿತವನ್ನೂ ಇತಿಹಾಸವನ್ನು ಅಜಿತಪುರಾಣಕ್ಕೆ ಮುನ್ನುಡಿಯಾಗಿ ಬೆಸೆದನು. ಈ ಕಾದಂಬರಿಯಲ್ಲಿ ಲೇಖಕರು ಅತ್ತಿಮಬ್ಬೆಯ ಧಾರ್ಮಿಕ ಕಾರ್ಯವನ್ನು ಕುರಿತು ಬಹು ಸೊಗಸಾಗಿ ಚಿತ್ರಿಸಿದ್ದಾರೆ.

ಇವು ಪಾತ್ರ ಚಿತ್ರಣದ ಸ್ವರೂಪವನ್ನು ಆಧರಿಸಿದ ವರ್ಗೀಕರಣಗಳಾದರೆ ಇನ್ನೂ ಮುಂದೆ ಪಾತ್ರಗಳ ಸ್ವಭಾವ, ಗುಣ ಲಕ್ಷಣಗಳನ್ನು ಆಧರಿಸಿದ ವರ್ಗೀಕರಣಗಳನ್ನು ಗಮನಿಸಬಹುದಾಗಿದೆ.

### ೪.೧.೧. ಅನುಭಾವಿ ಮಹಿಳೆಯರು

ಸ್ತ್ರೀಯೊಬ್ಬಳು ಅಸಾಮಾನ್ಯವಾದ ಆತ್ಮಸ್ಥೈರ್ಯದಿಂದ ಅಲೌಕಿಕವಾದ ಆಧ್ಯಾತ್ಮ ಸಾಧನೆಗೈಯ್ದ ಉದಾಹರಣೆಗಳು ತೀರ ವಿರಳ. ಪ್ರಪಂಚದ ಇತಿಹಾಸವನ್ನು ಅವಲೋಕಿಸಿದರೆ ಬೆರಳೆಣಿಕೆಯ ಸಂಖ್ಯೆಯಲ್ಲಿ ಮಹಿಳಾ ಅನುಭಾವಿಗಳ ಉಲ್ಲೇಖ ಕಂಡು ಬರುತ್ತದೆ. ಜಾಗತಿಕ ಇತಿಹಾಸದಲ್ಲಿಯೇ ದುರ್ಲಭವಾದ ಇಂಥ ವಿರಳ ವ್ಯಕ್ತಿತ್ವಗಳಲ್ಲಿ ಕಾರಿಕಾಲಮ್ಮ, ಆಂಡಾಳ್, ಅಕ್ಕಮಹಾದೇವಿ, ಮೀರಾಬಾಯಿ ಪ್ರಮುಖರಾಗಿದ್ದಾರೆ. ಶ್ರೇಷ್ಠ ಆಧ್ಯಾತ್ಮ ಸಾಧಕಿಯರಾಗಿ ಭಾರತೀಯ ಸಂಸ್ಕೃತಿಯ ಸತ್ವಕ್ಕೆ ನಿದರ್ಶನರಾಗಿದ್ದಾರೆ.

ಪಾಶ್ಚಾತ್ಯ ದೇಶಗಳಲ್ಲಿಯೂ ಇಂತಹ ಅನೇಕ ಸಾಧಕಿಯರು ಆಗಿಹೋಗಿದ್ದಾರೆ. "ಮಹಿಳೆಯ ಅಂತಃಶಕ್ತಿ ಪ್ರತಿಕೂಲ ವಾತಾವರಣ, ಸಾಂಪ್ರದಾಯಿಕ ವಿಷಮತೆಗಳ ಮಧ್ಯದಲ್ಲಿಯೂ ಮಿಂಚಿದೆ. ಸೀಯನ್ನಾದ ಸೇಂಟ್ ಕ್ಯಾಥರಿನ್, ಅವಿಲ್ಲಾದ ಸೇಂಟ್ ತೆರೇಸಾ, ಜಿನೋವಾದ ಸೇಂಟ್ ಕ್ಯಾಥರಿನ್, ನಾರ್ವಿಚ್ಚಿನ್ ಸಾಧಕಿ ಜ್ಯೂಲಿಯನ್, ಅರಬಸ್ತಾನದ ಸೂಫಿ ಸಂತ ಮಹಿಳೆ ರಾಬಿಯಾ ಮುಂತಾದ ಅನುಭಾವಿ ಮಹಿಳೆಯರು ತಾವು ನಂಬಿ ಸ್ವೀಕರಿಸಿದ ಧರ್ಮತತ್ವಗಳ ಹಿನ್ನೆಲೆಯಲ್ಲಿ ವಿಶ್ವವ್ಯಾಪಕವಾದ ಚಿರಂತನ ಸತ್ಯವನ್ನು ಸಾಕ್ಷಾತ್ಕರಿಸಿಕೊಂಡು ಸ್ವಾನುಭಾವಿಗಳಾಗಿದ್ದಾರೆ" (ಮನುಚಕ್ರವರ್ತಿ ಎನ್ (ಸಂ); ೧೯೯೩; ಪು. ಪೀಠಿಕೆ). ಪ್ರತಿಭಾನ್ವಿತ ಕವಿಯಾತ್ರಿಯಾಗಿ, ಪಾರಮಾರ್ಥ ಸಾಧಕಿಯಾಗಿ, ವಿರಾಗಿಣಿಯಾಗಿ ಬದುಕಿದ ಅಕ್ಕಮಹಾದೇವಿಯ ಸಾಧನೆ ಪ್ರಪಂಚದ ಮಹಿಳಾ ಅನುಭಾವಿಗಳಲ್ಲಿಯೇ ವಿಶಿಷ್ಟವಾದುದು ಮತ್ತು ಅನುಪಮವಾದುದು. ವೈರಾಗ್ಯ ತೀವ್ರತೆ, ಜ್ಞಾನದ ಪ್ರಖರತೆ, ಭಕ್ತಿಯತ್ಮಯತೆ, ಅಭಿವ್ಯಕ್ತಿಯ ಶ್ರೀಮಂತಿಕೆ, ಮಧುರಭಕ್ತಿ, ಸಾಧನೆಗಳಿಂದ ಮಹಾದೇವಿ ಕರ್ನಾಟಕ ಇತಿಹಾಸದಲ್ಲಿ ಮಹಾದೇವಿಯಕ್ಕ ಆಗಿರುವಳು.

ಅಕ್ಕಮಹಾದೇವಿಯ ಜೀವನ ಚರಿತ್ರೆಯನ್ನು ಕುರಿತು ಕನ್ನಡದಲ್ಲಿ ಇಪ್ಪತ್ತನೆಯ ಶತಮಾನದ ಅಂತ್ಯದವರೆಗೂ ವಿವಿಧ ಬರಹಗಾರರು ಮಹಾದೇವಿಯಕ್ಕನ ಉದಾತ್ತ ಜೀವನವನ್ನು ತಮ್ಮ ಕೃತಿಗಳ ಪುಟ ಪುಟದಲ್ಲೂ ಚಿತ್ರಿಸಿದ್ದಾರೆ. ಅನುಭಾವಿ ಶಿವಶರಣೆಯರಲ್ಲಿ ಗುರುತಿಸಬಹುದಾದ ಮತ್ತೊಂದು ಹೆಸರು ಗುಡ್ಡಾಪುರದ ದಾನಮ್ಮ. ಹನ್ನೆರಡನೆಯ ಶತಮಾನದಲ್ಲಿ ಜೀವಿಸಿದ್ದ ಈಕೆಯ ಜೀವನ ವ್ಯಕ್ತಿತ್ವವನ್ನು ಶಾಂತಾದೇವಿ ಮಾಳವಾಡ ಅವರು 'ದಾನದಾಸೋಹಿ ದಾನಮ್ಮ' ಕಾದಂಬರಿಯಲ್ಲಿ ಕೇಂದ್ರಪಾತ್ರವಾಗಿರಿಸಿಕೊಂಡು ಆಧ್ಯಾತ್ಮಿಕ ನೆಲೆಯಲ್ಲಿ ಕಾದಂಬರಿಯನ್ನು ರಚಿಸಿದ್ದಾರೆ.

### ಅಕ್ಕಮಹಾದೇವಿ

ಈಗಾಗಲೇ ಪ್ರಸ್ತಾಪಿಸಿದಂತೆ ಬಸವರಾಜ ಕಟ್ಟೀಮನಿ ಅವರ 'ಗಿರಿಯ ನವಿಲು' ತಿಪ್ಪೇರುದ್ರಸ್ವಾಮಿ ಅವರ 'ಕದಳಿಯ ಕರ್ಪೂರ', ಮಾತೆ ಮಹಾದೇವಿ ಅವರ 'ತರಂಗಿಣಿ' ಈ ಮೂರು ಕಾದಂಬರಿಗಳ ಕೇಂದ್ರಪಾತ್ರ ಅಕ್ಕಮಹಾದೇವಿ. ಬಸವರಾಜ ಕಟ್ಟೀಮನಿ ಅವರ ಪಕ್ವ ಪರಿಣತ ಬುದ್ಧಿಯ ಬರವಣಿಗೆ 'ಗಿರಿಯ ನವಿಲು' ಕಾದಂಬರಿಯಲ್ಲಿ ಬಹುಮುಖ್ಯವಾಗಿದೆ. ಆಧ್ಯಾತ್ಮಿಕ ಸ್ತರದ ದಿವ್ಯವ್ಯಕ್ತಿಗಳ ಚರಿತ್ರೆಯನ್ನು ಐತಿಹಾಸಿಕ ಆವರಣದಲ್ಲಿ ಬಿಂಬಿಸಿ ತೋರಿಸುವ

ಕಾದಂಬರಿಗಳ ಪರಂಪರೆ ಕನ್ನಡದಲ್ಲೂ ಉಂಟು. ಬಸವರಾಜ ಕಟ್ಟೀಮನಿ ಅವರ 'ಗಿರಿಯ ನವಿಲು' ಕಾದಂಬರಿ ಈ ಪರಂಪರೆಯಲ್ಲಿ ಗುರುತಿಸಬಹುದಾದ ಒಂದು ವಿಶಿಷ್ಟ ಕೃತಿ. "ಅಕ್ಕಮಹಾದೇವಿ ಹೀಗೆಯೇ ಇದ್ದಳೆಂದು ಖಚಿತವಾಗಿ ಹೇಳುವುದು ಯಾರಿಂದಲೂ ಸಾಧ್ಯವಿಲ್ಲ" (ಬಸವರಾಜ ಕಟ್ಟೀಮನಿ; ೧೯೫೬; ಪು. ಮುನ್ನುಡಿ) ಎಂದು ಲೇಖಕರೇ ಅಭಿಪ್ರಾಯಪಡುತ್ತಾರೆ. ಆದರೆ ಅಕ್ಕಮಹಾದೇವಿಯ ಸಂಪೂರ್ಣ ಚರಿತ್ರೆ ಲಭ್ಯವಿಲ್ಲ. ಕಾವ್ಯಗಳಲ್ಲಿ, ಪುರಾಣಗಳಲ್ಲಿ ದೊರೆತ ಕೆಲವಿವರಗಳು ಅಭಿಪ್ರಾಯಭೇದಕ್ಕೆ ಕಾರಣವಾಗಿವೆ. ಆದುದರಿಂದ ಕಟ್ಟೀಮನಿಯವರು, ತಿಪ್ಪೇರುದ್ರಸ್ವಾಮಿಯವರು, ಮಾತೆಮಹಾದೇವಿ ಅವರು ತಮ್ಮ ಕಲ್ಪನೆ ಹಾಗೂ ಮನೋಧರ್ಮ, ಉದ್ದೇಶಗಳಿಗನುಗುಣವಾಗಿ ಅಕ್ಕನ ವ್ಯಕ್ತಿತ್ವವನ್ನು ಚಿತ್ರಿಸಿದ್ದಾರೆ. ಈ ಕಾರಣದಿಂದಾಗಿ ಅಕ್ಕಮಹಾದೇವಿಯ ವ್ಯಕ್ತಿತ್ವ ಚಿತ್ರಣ ಹೆಚ್ಚು ಕಡಿಮೆ ಆಗುವ ಸಂಭವವುಂಟು.

ಇವು ಚಾರಿತ್ರಿಕ ಕಾದಂಬರಿಗಳಾದುದರಿಂದ ಚರಿತ್ರೆಗೆ ಆಯಾ ಲೇಖಕರು ಎಷ್ಟೊಂದು ಪ್ರಾಮಾಣಿಕರಾಗಿದ್ದಾರೆಂಬುದನ್ನು ಪರಾಮರ್ಶಿಸುವುದು ಅವಶ್ಯ. ಆದರೂ ಉಳಿದ ಕಾದಂಬರಿಗಳಿಗೆ ಹೋಲಿಸಿದಾಗ ಪ್ರಗತಿಶೀಲ ಲೇಖಕರಾದ ಕಟ್ಟೀಮನಿಯವರು ತಮ್ಮ ಕಾದಂಬರಿಯಲ್ಲಿ ಅಕ್ಕಮಹಾದೇವಿಯನ್ನು ಸಂಪೂರ್ಣ ಭಿನ್ನ ಎನ್ನುವಂತೆ ಚಿತ್ರಿಸಿದ್ದಾರೆ.

ಲೇಖಕರೇ 'ಗಿರಿಯ ನವಿಲು' ಕಾದಂಬರಿಯಲ್ಲಿ "ಸ್ವಯಂ ಅಕ್ಕನ ವಚನಗಳಿಂದ ಆಕೆಯ ಗುಣಶೀಲ ಸ್ವಭಾವ ಚಾರಿತ್ರ್ಯಾದಿಗಳ ಕಲ್ಪನೆ ಬರುವಂತಿದೆ (ಕಟ್ಟೀಮನಿ; ೧೯೫೬; ಪು. ಮುನ್ನುಡಿ) ಎಂದು ಅಭಿಪ್ರಾಯಪಡುತ್ತಾರೆ.

"ಹಿಂದಿನವರೇ ಆಗಲಿ, ಇಂದಿನವರೇ ಆಗಲಿ, ಮಾನವ ಸ್ವಭಾವ ಯಾವಾಗಲೂ ಒಂದೇ ಬಗೆಯದು. ಕಾರಣಗಳಿಲ್ಲದೇನೇ ವೈರಾಗ್ಯ ಯಾರಿಗೂ ಬರುವುದಿಲ್ಲವೆಂಬುದು ಖಚಿತ" (ಎಚ್. ತಿಪ್ಪೇರುದ್ರಸ್ವಾಮಿ ಕದಳಿ; ೧೯೮೧; ಪು. ೩೮) ಎನ್ನುವ ಬಸವರಾಜ ಕಟ್ಟೀಮನಿಯವರು ಅಕ್ಕಮಹಾದೇವಿಯ ವೈರಾಗ್ಯಕ್ಕೆ ಕಾರಣಗಳನ್ನು ವಾಸ್ತವತೆಯ ಹಿನ್ನೆಲೆಯಲ್ಲಿಯೇ ಕಂಡುಕೊಳ್ಳಲು ಪ್ರಯತ್ನಿಸಿದ್ದಾರೆ. ಅವರು ಅಕ್ಕಮಹಾದೇವಿಯ ವೈರಾಗ್ಯಕ್ಕೆ ಬಹುಮಟ್ಟಿಗೆ ಈ ಸಮಾಜದ ವ್ಯವಸ್ಥೆಯೂ ಕಾರಣವೆಂಬುದನ್ನು ಸ್ಪಷ್ಟಪಡಿಸಿದ್ದಾರೆ. ಗಂಡ - ಹೆಂಡಿರ ಆಟದ ಸನ್ನಿವೇಶದಲ್ಲಿ ಪ್ರಾಯ ವಯಸ್ಕಳಾದಾಗ ಯುವಕರು ಆಕೆಯನ್ನು ಅನಿಮಿಷ ನೋಟದಿಂದ ನೋಡುವ ಸನ್ನಿವೇಶಗಳಲ್ಲಿ ಅವರ ಆಶಯ ಕಾಣಬರುತ್ತದೆ. ನೈಜತೆಯ ದೃಷ್ಟಿಯಿಂದ ಈ ತಂತ್ರ ಉಪಯುಕ್ತವೂ ಎನಿಸುತ್ತದೆ. ಆದರೆ ಅಕ್ಕಮಹಾದೇವಿಯ ವ್ಯಕ್ತಿತ್ವದ ದೃಷ್ಟಿಯಿಂದಲ್ಲ.

'ಗಿರಿಯ ನವಿಲು' ಕಾದಂಬರಿಯಲ್ಲಿ ಅಕ್ಕನ ಜನನ ವೃತ್ತಾಂತದಲ್ಲಿ 'ಹೂವು ಬಿತ್ತು' ಎಂಬ ಸನ್ನಿವೇಶದ ಪ್ರಸ್ತಾಪ ಬರುತ್ತದೆ. ಸುಮತಿ ಗರ್ಭಿಣಿಯಾದಾಗ ಅವಳ ಅಂಗಾಂಗಳ ವರ್ಣನೆಯಾಗಲೀ ಅವಳ ಬಯಕೆಗಳ ವಿಷಯವನ್ನು ಕುರಿತು ಯಾವುದೇ ರೀತಿಯ ಪ್ರಸ್ತಾವಿಲ್ಲದೆ, ಜನನದ ಸನ್ನಿವೇಶದ ವಿಷಯವು ಬಹು ತೀವ್ರವಾಗಿ ಮುಂದೆ ಸಾಗಿಸುತ್ತದೆ.

ನಿರ್ಮಲ ಶೆಟ್ಟಿ ಮಕ್ಕಳಾಗದ ಚಿಂತೆಯಲ್ಲಿ ಅಂಗಡಿಯಲ್ಲಿ ನಿಮಿತ್ತ ಮಾತ್ರಕ್ಕೆ ಕುಳಿತಿರುತ್ತಾನೆ. ಆಗ ಶ್ರೀಶೈಲದಿಂದ ಜಂಗಮನೋರ್ವನು ಜಾಗಿಲ ಮುಂದೆ ಒಂದು ನಿಲ್ಲುವ ಸನ್ನಿವೇಶ

ಬರುತ್ತದೆ. ಇದು ಲೌಕಿಕ ನೆಲೆಯ ನಿರೂಪಣೆಯಾಗಿದೆ. ನಿರ್ಮಲನು ಜಂಗಮ ಬಂದುದನ್ನು ಗಮನಿಸದೇ ಇದ್ದಾಗ ಜಂಗಮ ಕೋಪಿಸಿಕೊಂಡು ಹೋಗತೊಡಗುತ್ತಾನೆ. ಅದನ್ನರಿತ ದಂಪತಿಗಳಿಬ್ಬರೂ ಜಂಗಮನನ್ನು ಸರಿಯಾಗಿ ಉಪಚರಿಸಿ, ಆತನ ಮನಸ್ಸನ್ನು ಗೆಲ್ಲುತ್ತಾರೆ. ತೃಪ್ತನಾದ ಜಂಗಮ ಚಿಂತೆಗೆ ಕಾರಣ ಕೇಳುತ್ತಾನೆ. ಮಕ್ಕಳ ಕೊರಗಿನಿಂದ ಪರಿತಪಿಸುವ ಆ ದಂಪತಿಗೆ ಶ್ರೀಶೈಲದಿಂದ ತಂದ ಪವಿತ್ರ ಭಸ್ಮವನ್ನು ಕೊಡುತ್ತಾನೆ. ಪ್ರತಿರಾತ್ರಿ ಭಕ್ತಿಯಿಂದ ಭಸ್ಮ ಸೇವಿಸಿ, ಮಲಗುತ್ತಾಳೆ. ಅಂದೇ ಬೆಳಗು ಮುಂಜಾವದಲ್ಲಿ ಕನಸೊಂದನ್ನು ಕಾಣುತ್ತಾಳೆ.

ಲೇಖಕರು ಕನಸಿನ ರೂಪದ ಈ ಸನ್ನಿವೇಶವನ್ನು ಬಳಸಿಕೊಂಡಿದ್ದಾರೆ. ಸುಮತಿ ದೇವಿಗೆ ಕನಸಿನಲ್ಲಿ ಪಾರ್ವತಿಯು ರುದ್ರಕನ್ನಿಕೆಗೆ ಶಾಪ ಕೊಡುವುದನ್ನು ಹೇಳುತ್ತಾರೆ. ಗುಪ್ತ ಗಣನಾಥನ ಕಾಲು ರುದ್ರಕನ್ನಿಕೆಗೆ ತಾಗಿದಾಗ ಅವಳು ಕೋಪಿಸಿಕೊಂಡು 'ಭವಿ' ಎಂದು ನುಡಿಯುತ್ತಾಳೆ. ಇದಕ್ಕೆ ಪಾಶ್ಚಾತ್ತಾಪವೆನ್ನುವಂತೆ ಪಾರ್ವತಿಯು ಭೂಲೋಕದಲ್ಲಿ ಹುಟ್ಟಿ, ಭಕ್ತರಿಗೆ ಶರಣಾಗತಳಾಗಿ ಆಮೇಲೆ ಬಾ ಎಂದು ಹೇಳುತ್ತಾಳೆ. ಅತೃಪ್ತ ಬಯಕೆಗಳು ಕನಸಿನಲ್ಲಿ ಕಾಣಬಹುದು ಎಂಬ ಸತ್ಯಕ್ಕೆ ಲೇಖಕರ ಕಲ್ಪನೆ ಸಮೀಪವಾಗಿದೆ. ಸಾಕ್ಷಾತ್ ಮಲ್ಲಿಕಾರ್ಜುನನೇ ಜಂಗಮನ ರೂಪದಲ್ಲಿ ಬಂದು ತಮ್ಮನ್ನುದ್ಧರಿಸಿದ ಎಂದು ಸುಮತಿ ತಿಳಿದುಕೊಂಡರೆ, ಅದು ನಿಮ್ಮ ಭಾವನೆಯಾಗಿರ ಬಹುದು' ಎನ್ನುವ ಜಂಗಮನ ಮಾತುಗಳಲ್ಲಿ ಲೇಖಕರ ವೈಜ್ಞಾನಿಕ ಮನೋದೃಷ್ಟಿ ಕಂಡು ಬರುತ್ತದೆ.

ಇಲ್ಲಿ ಪರಂಪರೆ ಮತ್ತು ವೈಚಾರಿಕತೆ ಇಬ್ಬಗೆಯಾಗುವುದು ಕಂಡುಬರುತ್ತದೆ. ಅಕ್ಕಮಹಾದೇವಿಯ ಜನನದ ವಿಷಯವಾಗಿ ಈ ಭಸ್ಮ ಯಾವುದೇ ದೇವರ ಪ್ರಸಾದವಾಗಿರದೆ, ಅದು ಶ್ರೀಶೈಲ ಪರ್ವತದಲ್ಲಿ ದೊರೆಯುವ ಕೆಲವು ಗಿಡಮೂಲಿಕೆಯಿಂದ ಸಿದ್ಧಪಡಿಸಿದ ಸಂತಾನ ಉತ್ಪತ್ತಿಯ ಔಷಧಿಯಾಗಿದ್ದು ಅದನ್ನು ಸೇವಿಸಿದ್ದರಿಂದಲೇ ಮಹಾದೇವಿಯ ಜನನವಾಯಿತೆನ್ನುವಲ್ಲಿ ಲೇಖಕರು ಈ ಘಟನೆಯನ್ನು ವಾಸ್ತವಿಕ ನೆಲೆಗಟ್ಟಿನಲ್ಲಿ ಕಂಡಿದ್ದಾರೆ. ಪಾರ್ವತಿಯ ಆಶೀರ್ವಾದದಿಂದ ಹುಟ್ಟಿದ ಮಗುವಿಗೆ ದಂಪತಿಗಳು 'ಮಹಾದೇವಿ' ಎಂದು ಹೆಸರಿಡುತ್ತಾರೆ. ನಾಲ್ಕು ವರ್ಷದ ಬಾಲಕಿಯಾದ ಅಕ್ಕನಿಗೆ ವಿದ್ಯೆ ಕೊಡಲು ಗುರುಲಿಂಗರು ನಿರಾಕರಿಸಿದರೆ, ಆಗ ನಿರ್ಮಲನು ಅಕ್ಕನಿಗೆ ಗುರುವಾಗಿ ಬರೆಯುವುದನ್ನು ಕಲಿಸಲು ಪ್ರಾರಂಭಿಸಿದನು. ಕಾದಂಬರಿಯ ಹೇಳಿಕೆ ಈಗಿನ ಮಗುವಿನ ವಿದ್ಯಾಭ್ಯಾಸದ ಕ್ರಮವಾಗಿದೆ.

ನಮ್ಮ ಧರ್ಮದ ಪ್ರಕಾರ ಚೆನ್ನಮಲ್ಲಿಕಾರ್ಜುನ ನನಗೂ, ನಿಮ್ಮಮ್ಮನಿಗೂ ಹಾಗೂ ಎಲ್ಲರಿಗೂ ಪತಿ, ನಾವೆಲ್ಲರೂ ಆತನ ಸತಿಯರಿದ್ದಂತೆ ಎಂದು ಲಿಂಗದೀಕ್ಷೆಯ ಸಂದರ್ಭದಲ್ಲಿ ನಿರ್ಮಲನು ಮಗಳಿಗೆ ಹೇಳುತ್ತಾನೆ. ಈ ಮಾತು ಹಂತ ಹಂತವಾಗಿ ಅಕ್ಕಮಹಾದೇವಿಯ ಮನಸ್ಸಿನಲ್ಲಿ ಬೆಳೆಯುತ್ತ ಸಾಗುತ್ತದೆ. ತಂದೆ-ತಾಯಿ ಹೇಳುವ ಕಥೆಗಳು ಅವಳ ಮೇಲೆ ಪ್ರಭಾವ ಬೀರುತ್ತವೆ. ಅಲ್ಲಮನ ವೈರಾಗ್ಯಕ್ಕೆ ಪೂರ್ಣ ಮನಸೋತು ತಾನೂ ಅದೇ ಮಾರ್ಗದಲ್ಲಿ ನಡೆಯಲು ನಿರ್ಧರಿಸುತ್ತಾಳೆ. ಅಲೌಕಿಕದ ಕಡೆಗೆ ಆಸಕ್ತಿ ಉಂಟಾಗುತ್ತದೆ. ಅಲ್ಲದೆ ಹೆಂಡಂದಿರನ್ನು ಕ್ರೂರ ರೀತಿಯಿಂದ ನಡೆಸಿಕೊಳ್ಳುವ ಗಂಡಂದಿರನ್ನು ಕಂಡು ಅಕ್ಕನ ಮನರೋಹಿಸಿ ಹೋಗಿ

ಲೌಕಿಕ ಜೀವನದ ಬಗ್ಗೆ ಜಿಗುಪ್ಸೆ ಹೊಂದುತ್ತಾಳೆ. ತನ್ನ ಸೌಂದರ್ಯ ಸಾಧನೆಗೇ ಹಂಬಲಿಸುವ ಯುವಕರು, ಸೇನಾನಿಗಳು, ಪೂಜಾರಿಗಳನ್ನು ಕಂಡು ಪುರುಷ ಜಾತಿಯ ಬಗ್ಗೆ ದ್ವೇಷ ಪಡುತ್ತಾಳೆ. ಆಗ ಚೆನ್ನಮಲ್ಲಿಕಾರ್ಜುನನೇ ತನಗೆ ನಿಜವಾದ ಗಂಡನೆಂಬಭಾವ ಗಟ್ಟಿಗೊಳ್ಳುತ್ತದೆ. ಕಾದಂಬರಿಯಲ್ಲಿ ಅವಳನ್ನು ವೈರಾಗ್ಯ ನಿಧಿಯನ್ನಾಗಿ ಮಾಡುವ ಸಲುವಾಗಿ ಯಾವ ಶಕ್ತಿಗಳೂ ಪ್ರಯತ್ನಿಸಿಲ್ಲ. ಸ್ವತಃ ವೈರಾಗ್ಯ ನಿಧಿಯಾಗಿ ರೂಪುಗೊಳ್ಳುವ ವಿವರಣೆಗಳಿವೆ. ಇದರಿಂದಾಗಿ ಅಕ್ಕಮಹಾದೇವಿಯ ಘನತೆ, ಗೌರವಗಳು ಇನ್ನೂ ಹೆಚ್ಚಾಗುತ್ತವೆ.

ಅಕ್ಕಮಹಾದೇವಿಯು ವಿಶ್ವನಾಥ ಕಮಲಾಂಬಿಕೆಯರೊಂದಿಗೆ ಗಂಡ-ಹೆಂಡಿರ ಆಟ ಆಡುತ್ತಾಳೆ. ತಾನು ಗಂಡನಿಗಿಂತ ಕಡಿಮೆಯಿಲ್ಲ. ಅವನ ಸರಿಸಮಾನಳು ಎಂದು ವಾದಿಸುತ್ತಾಳೆ. ಅತ್ತೆ ಕಮಲಾಂಬಿಕೆ ಸಮಾಜದ ಪ್ರತಿನಿಧಿ ಎಂಬಂತೆ ಹೆಂಡತಿಯ ನಡವಳಿಕೆಗಳ ಬಗ್ಗೆ ಕಟ್ಟಪ್ಪಣೆಗಳನ್ನು ಹಾಕುತ್ತಾಳೆ. ಆಗ ಮಹಾದೇವಿಯು ತನಗೆ ಈ ಸಂಸಾರ ಬೇಡ ಎಂದು ಗಂಡನನ್ನು ತ್ಯಜಿಸಿ ಹೋಗುತ್ತಾಳೆ. ಈ ಘಟನೆ, ಅಕ್ಕಮಹಾದೇವಿಯ ಭವಿಷ್ಯದ ವ್ಯಾಖ್ಯಾನದಂತಿವೆ. ಅಲ್ಲದೆ ಸ್ತ್ರೀವಾದಿ ನೆಲೆಯಲ್ಲಿ ಆಧುನೀಕರಣದ ಸಂಸ್ಕೃತಿಯನ್ನು ಚಿತ್ರಿಸಿದ್ದು ಕಂಡುಬರುತ್ತದೆ.

ಸಂಸಾರಿಕ ಜೀವನದಲ್ಲಿ ಜಿಗುಪ್ಸೆ ಹೊಂದಿದ ಅಕ್ಕಮಹಾದೇವಿಯು ಸಮಾಜದ ಅನ್ಯಾಯ ಹಾಗೂ ಸ್ತ್ರೀ ಶೋಷಣೆ ವಿರುದ್ಧ ನಿಂತು ಹೋರಾಡುವ, ಸಮಾಜ ಸುಧಾರಣೆ ಮಾಡುವ ವ್ಯಕ್ತಿಯಾಗಿ ಕಾಣುತ್ತಾಳೆ. ಲೌಕಿಕ ಜೀವನದ ಬಗ್ಗೆ ಜಿಗುಪ್ಸೆ ಹೊಂದಿ, ಅನ್ಯಾಯದಿಂದ ಬಾಳುವ ಪುರುಷರ ಬಗ್ಗೆ ಕ್ರೋಧ ವ್ಯಕ್ತಪಡಿಸಿ, ತಾನು ವೈವಾಹಿಕ ಜೀವನದಿಂದ ದೂರವಾಗಿ ಉಳಿಯಲು ನಿರ್ಧರಿಸುತ್ತಾಳೆ. ಈ ರೀತಿಯ ನಿರ್ಧಾರದಿಂದಾಗಿ ಸಾಮಾಜಿಕ ನಿಂದನೆಗಳಿಗೆ ಒಳಗಾಗುವ ಸನ್ನಿವೇಶವಾಗಲಿ, ಚೆನ್ನಮಲ್ಲಿಕಾರ್ಜುನನ ವಿರಹದಲ್ಲಿ ಬಳಲುವ ಚಿತ್ರಣಗಳಾಗಲೀ ಕಂಡು ಬರುವುದಿಲ್ಲ. ಬದಲಾಗಿ ಪ್ರಗತಿಪರ ವಿಚಾರಗಳನ್ನು ಹೊಂದಿದ ಮತ್ತು ದೇವರ ಸಾಕ್ಷಾತ್ಕಾರವನ್ನು ಮಾಡಿಕೊಂಡ ವಿರಾಗಿಣಿ ಅಕ್ಕಮಹಾದೇವಿಯಾಗಿ ಕಾದಂಬರಿಯಲ್ಲಿ ಕಾಣಿಸುತ್ತಾಳೆ.

ಕೌಶಿಕನು ಅಕ್ಕಮಹಾದೇವಿಯ ಸೌಂದರ್ಯಕ್ಕೆ ಮರುಳಾಗಿ ಮದುವೆಯಾಗಲು ಹೇಳುತ್ತಾನೆ. ಮಹಾದೇವಿ ಒಪ್ಪದಿದ್ದಾಗ, ತಂದೆ ತಾಯಿಯರನ್ನು, ಶಿವಭಕ್ತರನ್ನು ಶಿಕ್ಷಿಸುವುದಾಗಿ ಹೇಳಿದಾಗ, ಆಕೆಯು ಅವರೆಲ್ಲರನ್ನು ಉಳಿಸುವ ಸಲುವಾಗಿ ಮತ್ತು ತನ್ನ ಲೌಕಿಕ ಬಂಧನದಿಂದ ಬಿಡುಗಡೆ ಹೊಂದುವ ಸಲುವಾಗಿ ರಾಜನೊಂದಿಗೆ ಕೆಲವು ಷರತ್ತುಗಳನ್ನು ಹಾಕಿ ಮದುವೆಗೆ ಒಪ್ಪಿಕೊಳ್ಳುತ್ತಾಳೆ. ಕಾದಂಬರಿಕಾರರು ಮಹಾದೇವಿಗೆ ಒತ್ತಾಯದ ಸಂಸಾರ ಮಾಡಿಸಿ, ಸಂಪ್ರದಾಯದ ಚೌಕಟ್ಟನ್ನು ನಿರ್ಮಿಸಿದ್ದಾರೆ. ಮೂರು ಕರಾರುಗಳನ್ನು ಒಪ್ಪಿದ ಕೌಶಿಕ ಲಿಖಿತ ಪತ್ರ ಬರೆದುಕೊಡುತ್ತಾನೆ. ಉಳಿದೆರಡು ಕಾದಂಬರಿಗಳಲ್ಲಿ ಲಿಖಿತ ಪತ್ರದ ಹಾಗೂ ಮದುವೆಯ ಸನ್ನಿವೇಶ ಬರುವುದಿಲ್ಲ. ಕೌಶಿಕನೊಂದಿಗೆ ಮದುವೆಯಾಗದೆ ಹಾಗೆಯೇ ಅರಮನೆಗೆ ಹೋಗುತ್ತಾಳೆ. ಬಸವರಾಜ ಕಟ್ಟೀಮನಿಯವರು ಇಂದಿನ ಸಂಪ್ರದಾಯದಂತೆ ಮಹಾದೇವಿಯನ್ನು ಧಾರೆ ಎರೆದು ಕೊಡುವಂತೆ ಚಿತ್ರಿಸಿದ್ದಾರೆ. ಇದು ಇವರು ಮಾಡಿಕೊಂಡಿರುವ ಬದಲಾವಣೆಯಾಗಿದೆ. ಅಕ್ಕಮಹಾದೇವಿ ಸಕಲ ರಾಜ ವೈಭವವನ್ನು ಅನುಭವಿಸುತ್ತಾಳೆ. ಭಂಡಾರದ ಬೀಗದ ಕೈ ಅವಳ ಹತ್ತಿರವೇ ಇರುತ್ತದೆ. ಅಲ್ಲದೆ ಒಲ್ಲದ ಸಂಸಾರವನ್ನು ಕೆಲವು ಕಾಲದವರೆಗೆ ಮಾಡುತ್ತಾಳೆ.

'ತರಂಗಿಣಿ' ಕಾದಂಬರಿಯಲ್ಲಿ

೧. ಐದು ವಾರಗಳ ವ್ರತ ಕೈಗೊಂಡಿರುವುದಾಗಿ ಈ ವ್ರತ ಮುಗಿಯುವವರೆಗೆ ತಾನು ಯಾರನ್ನು ಮುಟ್ಟಿಸಿಕೊಳ್ಳುವುದಿಲ್ಲ.

೨. ವ್ರತದ ಆಚರಣೆಯ ಅವಧಿಯಲ್ಲಿ ತನ್ನ ಆಚರಣೆಗೆ ಅಡ್ಡಿ ಬರಬಾರದು.

೩. ಐದು ವಾರ ವ್ರತ ಮುಗಿದ ನಂತರ ಮದುವೆಯ ಮಾತು, ಮದುವೆಯಾಗಬೇಕಾದರೆ ರಾಜನು ನಮ್ಮ ಧರ್ಮದ ಲಿಂಗದೀಕ್ಷೆ ಪಡೆಯಬೇಕು.

ಕೌಶಿಕ ಮೂರು ಕರಾರುಗಳಲ್ಲಿ ಎರಡನ್ನು ಮೀರಿ ಬಿಡುತ್ತಾನೆ. ಅರಮನೆಯ ಭಂಡಾರವನ್ನೆಲ್ಲ ಮಹಾದೇವಿ ಜಂಗಮರಿಗಾಗಿ ಖಾಲಿ ಮಾಡುತ್ತಿದ್ದಾಳೆಂದು ಮುರಾರಿಯೂ ಮತ್ತು ಕೌಶಿಕನ ಪಟ್ಟದ ರಾಣಿ ಯಶೋಮತಿಯೂ ಕೌಶಿಕನಿಗೆ ಹೇಳುತ್ತಾರೆ. ಈ ಪ್ರಸಂಗ ಬಸವ ಬಿಜ್ಜಳರ ಪ್ರಸಂಗಕ್ಕೆ ಸಂವಾದಿಯಾಗಿ ಘಟಿಸಿದಂತೆ ಹೆಣೆಯಲ್ಪಟ್ಟಿದೆ. ಒಂದು ನಿಟ್ಟಿನಲ್ಲಿ ಕಟ್ಟೀಮನಿ ಅವರು ವಸಂತಕ, ಯಶೋಮತಿ ಇಂಥ ಪಾತ್ರಗಳನ್ನು ಕೌಶಿಕನಿಗೆ ಮುಖಾಮುಖಿಯಾಗಿಸಿ ತಮ್ಮ ಮನೋಧರ್ಮವನ್ನು ಸೂಚಿಸಿದರೆ, ಇನ್ನೊಂದು ನಿಟ್ಟಿನಲ್ಲಿ ಕಾಮದ ಮಧ್ಯೆ ಕಳೆದು ಹೋಗಿರುವ ಕೌಶಿಕನ ಮಾನವೀಯ ಗುಣಗಳನ್ನು ಶೋಧಿಸಹೊರಡುತ್ತಾರೆ.

ಕೌಶಿಕನು ಮಹಾದೇವಿಗೋಸ್ಕರ ಚೆನ್ನಮಲ್ಲಿಕಾರ್ಜುನನ ದೇವಸ್ಥಾನವನ್ನು ಕಟ್ಟಿಸುತ್ತಾನೆ. ಹೇಗಾದರೂ ಮಾಡಿ ಅವಳನ್ನು ಒಲಿಸಿಕೊಳ್ಳಲು ಪ್ರಯತ್ನ ಮಾಡುತ್ತಾನೆ. ಕೊನೆಗೆ ಅವಳ ಬಗ್ಗೆ ಹಲವು ರೀತಿಯ ಸಂಶಯಕ್ಕೆ ಒಳಗಾಗುತ್ತಾನೆ. ಇದಕ್ಕೆ ಪೂರಕವಾಗಿ ಆಕೆ ಪೂಜಿಸುತ್ತಿದ್ದ ಚೆನ್ನಮಲ್ಲಿಕಾರ್ಜುನ ಒಬ್ಬ ನಿಜವಾದ ವ್ಯಕ್ತಿಯೆಂದೂ, ಅವನಿಗೂ ಇವಳಿಗೂ ಸಂಬಂಧವಿದೆಯೆಂದು ಕಲ್ಪಿಸಿಕೊಳ್ಳುತ್ತಾನೆ ಎಂಬುದರ ಮೂಲಕ ಮಾನವನ ಮಾನಸಿಕ ದೌರ್ಬಲ್ಯವನ್ನು ಚಿತ್ರಿಸಿದ್ದಾರೆ.

ಗುರುಸೇವೆ ಮಾಡುವ ಕರಾರು ಹಾಕಿದ ಮಹಾದೇವಿ ಕೌಶಿಕನಿಂದ ಬಿಡಿಸಿಕೊಂಡು ಬರಲು ಪ್ರಯತ್ನಿಸುತ್ತಾಳೆ. ಆತ ಬಿಡುತ್ತಿಲ್ಲ. ಕೊಸರಿಕೊಂಡು ಬರುತ್ತಾಳೆ. ಅವಳ ಸೀರೆಯ ಸೆರಗು ಅವನ ಕೈಯಲ್ಲಿದೆ. ಹಾಗೇ ಮುಂದುವರಿಯುತ್ತಾಳೆ. ಉಟ್ಟ ಅರ್ಧ ಸೀರೆ ಕಳಚಿದರೂ ಅದರ ಪರಿವೆ ಇಲ್ಲದೆ ಓಡಿ ಬಂದು ಗುರುವಿನ ಪಾದಕ್ಕೆರಗುತ್ತಾಳೆ. ನಿನ್ನಂಥವಳಿಗೆ ಸೀರೆಯಾದರೂ ಏಕೆ? ಎಂದು ಕೌಶಿಕ ಸೀರೆಯನ್ನು ಸೆಳೆದು ಅವಳನ್ನು ಬೆತ್ತಲೆ ಮಾಡಿ ಬಿಡುತ್ತಾನೆ. ತನ್ನ ತನುವಿನ ಮೇಲೆ ಕೇಶರಾಶಿಯನ್ನು ಹರಡಿಕೊಂಡು ಮಹಾದೇವಿ ಚಂದಿಮದೇವನೊಂದಿಗೆ ಕಲ್ಯಾಣದತ್ತ ಹೊರಡುತ್ತಾಳೆ. ಈ ಘಟನೆ ತುಂಬಾ ಗಂಭೀರವೂ, ಕುತೂಹಲಕಾರಿಯೂ, ಅಷ್ಟೇ ನಾಟಕೀಯವಾಗಿಯೂ ಕಂಡುಬರುತ್ತದೆ.

ಅಕ್ಕ ದಿಗಂಬರೆಯಾಗಿ ಅರಮನೆಯನ್ನು ಬಿಟ್ಟು ಹೊರಗೆ ಬಂದಾಗ ಕೌಶಿಕ ಉಡುತಡಿ ಯಲ್ಲಿರುವ ಶಿವಭಕ್ತರೆಲ್ಲರೂ ಹೊತ್ತು ಮುಳುಗುವುದರಲ್ಲಿಯೇ ಊರು ಬಿಟ್ಟು ಹೊರಡಬೇಕು ಎಂದು ಡಂಗುರ ಸಾರುತ್ತಾನೆ. ತನ್ನ ಸಲುವಾಗಿ ಶಿವಭಕ್ತರ ಕುಟುಂಬಗಳು ಉಡುತಡಿ ಬಿಟ್ಟು ಹೋಗುವುದಕ್ಕಾಗಿ ಅಕ್ಕಮಹಾದೇವಿ ಮರಗುವ ದೃಶ್ಯ ಬಹಳ ಮನೋಜ್ಞವಾಗಿ ಮೂಡಿಬಂದಿದೆ.

ಅಕ್ಕಮಹಾದೇವಿಯು ಚಂದಿಮದೇವನೊಂದಿಗೆ ಕಲ್ಯಾಣಕ್ಕೆ ಹೋಗುವ ದಾರಿಯಲ್ಲಿ ಅನೇಕ ಕಾಮುಕರ ಕಣ್ಣು ಅಕ್ಕನ ಮೇಲೆ ಬಿದ್ದರೂ ಆಕೆಯ ಸನಿಹಕ್ಕೆ ಯಾರೊಬ್ಬರು ಬರುವುದಿಲ್ಲ. ಇಬ್ಬರೂ ಕಲ್ಯಾಣವನ್ನು ಪ್ರವೇಶಿಸಿದಾಗ, ಅಲ್ಲಮಪ್ರಭುವಿನ ಅಪ್ಪಣೆ ಪಡೆದು ಬಂದ ಕಿನ್ನರಿ ಬ್ರಹ್ಮಯ್ಯ ಅಕ್ಕನಿಗೆ ಸಾಷ್ಟಾಂಗ ನಮಸ್ಕಾರ ಹಾಕುತ್ತಾನೆ. ಚಂದಿಮದೇವ ಕಿನ್ನರಿ ಬ್ರಹ್ಮಯ್ಯನನ್ನು ಪರಿಚಯ ಮಾಡಿಕೊಡುತ್ತಾನೆ. ಆಗ, ಅಕ್ಕ ಅವನಿಗೆ ಸಹೋದರ ಎನ್ನುತ್ತಾಳೆ. ಕಿನ್ನರಿ ಅಕ್ಕನನ್ನು ಪರೀಕ್ಷಿಸುವ ಸನ್ನಿವೇಶ ಬರುವುದಿಲ್ಲ. ಇದು ಲೇಖಕರು ಮಾಡಿಕೊಂಡ ಬದಲಾವಣೆ ಯಾಗಿದೆ. ಅಕ್ಕ ಮಹಾಮನೆಗೆ ಬಂದಾಗ ಗಂಗಾಂಬಿಕೆ, ನೀಲಾಂಬಿಕೆಯರು ಆರತಿ ಮಾಡಿ ಒಳಗೆ ಮನೆಗೆ ಕರೆದೊಯ್ದು ಎಣ್ಣೆ ಸ್ನಾನ ಮಾಡಿಸಿ ಉಪಚರಿಸುತ್ತಾರೆ. ಶರಣೆಯರ ಪರಿಚಯವೂ ಅಲ್ಲಿಯೇ ಆಗುತ್ತದೆ.

ಅಲ್ಲಮಪ್ರಭು, ಅಕ್ಕಮಹಾದೇವಿಯ ವ್ಯಕ್ತಿತ್ವವನ್ನು ಎಲ್ಲ ಶರಣರಿಗೆ ತಿಳಿಸುವ ಸಲುವಾಗಿ ಪ್ರಶ್ನೆಗಳನ್ನು ಕೇಳುತ್ತಾನೆ. ಅಲ್ಲಮನ ನಂತರ ಬಸವಣ್ಣನು ಸಹ ಅಕ್ಕನಿಗೆ ಎರಡು ಪ್ರಶ್ನೆಗಳನ್ನು ಹೇಳುತ್ತಾನೆ. ಅಕ್ಕ ಅದಕ್ಕೆ ಸಮರ್ಪಕವಾದ ಉತ್ತರ ನೀಡಿ ಅವರೆಲ್ಲರ ಮನಸ್ಸನ್ನು ಗೆಲ್ಲುತ್ತಾಳೆ. ಬಸವಣ್ಣನು ಪ್ರಶ್ನೆ ಕೇಳುವುದು ಕಾದಂಬರಿಯಲ್ಲಿ ಹೊಸದಾದ ವಿಷಯ ನಿರೂಪಣೆ ಎನ್ನಿಸುತ್ತದೆ.

ಕಲ್ಯಾಣದಲ್ಲಿ ಅಕ್ಕಮಹಾದೇವಿ ಒಂದು ವರ್ಷ ಶರಣರ ಸಾಂಗತ್ಯದಲ್ಲಿದ್ದು ಕದಳಿಗೆ ಪ್ರಯಾಣ ಬೆಳೆಸುತ್ತಾಳೆ. ಕೌಶಿಕನುಸಹ ಕದಳಿಯಲ್ಲಿದ್ದ ಅಕ್ಕನ ಹತ್ತಿರ ಬರುತ್ತಾನೆ. ಆಧ್ಯಾತ್ಮದ ತುತ್ತ ತುದಿಗೇರಿ ನಿಂತ ಅವಳನ್ನು ಕೌಶಿಕ ತನ್ನ ಅರ್ಧಾಂಗಿಣಿ ಎಂದೇ ಭಾವಿಸುತ್ತಾನೆ. ವೇಷ ಧರಿಸಿ ಶಿವಭಕ್ತನಾಗಿ ಬಂದಿರುತ್ತಾನೆ. ಈ ಮುನ್ನ ಕೊಟ್ಟ ಮಾತಿನಂತೆ ನಡೆಯಬೇಕೆಂದು ಕೇಳಿಕೊಳ್ಳುತ್ತಾನೆ. ಶ್ರೀಶೈಲದ ಕೆಲವು ಸನ್ಯಾಸಿಗಳಿಗೆ ಲಂಚವನ್ನು ಕೊಟ್ಟು ಅಕ್ಕನ ಮನಸ್ಸನ್ನು ಬದಲಾಯಿಸಲು ಪ್ರಯತ್ನಿಸುತ್ತಾನೆ. ಅಕ್ಕ ಕೌಶಿಕನ ಕಾಟಕ್ಕೆ ಬೇಸತ್ತು ಕದಳಿಯ ವನಕ್ಕೆ ಹೋಗುತ್ತಾಳೆ. ಅಲ್ಲಿಯೂ ಅವನ ಉಪಟಳ ತಪ್ಪುವುದಿಲ್ಲ. ಸಮಾಜದಲ್ಲಿ ಇಂಥ ಕಾಮುಕರ ಉಪಟಳ ಹೇಗೆ ಹೆಣ್ಣನ್ನು ಶೋಷಣೆಗೆ ಒಳಪಡಿಸುತ್ತವೆ ಎನ್ನುವುದನ್ನು ಲೇಖಕರು ಕೌಶಿಕನ ಪಾತ್ರದ ಮೂಲಕ ತಿಳಿಸಿದ್ದಾರೆ.

ಅಕ್ಕ ಪ್ರಶಸ್ತವಾದ ಸ್ಥಳದಲ್ಲಿ ಕೆಲವು ದಿನ ಯೋಗ ಸಾಧನೆಯಲ್ಲಿ ತೊಡಗುತ್ತಾಳೆ. ಆಹಾರ, ನೀರನ್ನು ತ್ಯಜಿಸಿ ಧ್ಯಾನದಲ್ಲಿ ನಿರತಳಾಗುತ್ತಾಳೆ. ಯೋಗಿಣಿಯರು ಅಕ್ಕನ ಯೋಗ ಸಮಾಧಿಯ ಅವಸ್ಥೆ ಅರಿತು ಭಕ್ತಿಯಿಂದ ಸಾಷ್ಟಾಂಗವೆರಗುತ್ತಾರೆ. ಆಧ್ಯಾತ್ಮಿಕ ರಂಗದ ದಿವ್ಯ ಚೇತನಳಾದ ಅಕ್ಕನ ಜೀವನದ ಸನ್ನಿವೇಶಗಳು ಇಂದಿಗೂ ವಿಶ್ವಕ್ಕೆ ಮಾದರಿಯಾಗುವ ರೀತಿಯಲ್ಲಿ ಚಿತ್ರಿತವಾಗಿವೆ.

ಅಕ್ಕಮಹಾದೇವಿಯನ್ನು ಕೇಂದ್ರಪಾತ್ರವನ್ನಾಗಿರಿಸಿಕೊಂಡು ರಚನೆಯಾದ ಎರಡನೇ ಕಾದಂಬರಿ ಯೆಂದರೆ ತಿಪ್ಪೇರುದ್ರಸ್ವಾಮಿ ಅವರ 'ಕದಳಿಯ ಕರ್ಪೂರ', ಶಿವಶರಣರ ಸ್ಫೂರ್ತಿಯ ಚಿಲುಮೆಯಾಗಿ ಉದಿಸಿ ಬಂದ ಹಿರಿಯ ಚೇತನ ಅಕ್ಕಮಹಾದೇವಿಯನ್ನು ಕುರಿತು ಅವಳ ಜನನ, ಮದುವೆ, ಕೌಶಿಕ, ತಂದೆ-ತಾಯಿ, ಭಕ್ತಿ, ವೈರಾಗ್ಯ, ಕದಳಿಯಲ್ಲಿ ಐಕ್ಯಳಾದ ಸನ್ನಿವೇಶಗಳುಳ್ಳ

ಅವಳ ಜೀವನ ಚರಿತ್ರೆಯನ್ನು ಸುಂದರವಾಗಿ ಚಿತ್ರಿಸುವ ಉದ್ದೇಶವನ್ನು ಲೇಖಕರು ಹೊಂದಿದ್ದಾರೆ. ಕದಳಿಯ ಕರ್ಪೂರ ಕಾದಂಬರಿಯಲ್ಲಿ ಮಹಾದೇವಿಯ ಪಾತ್ರ ಪ್ರಾರಂಭವಾಗುವುದೇ ಮಹಾದೇವಿಯ ಹತ್ತು ವರುಷದ ಬಾಲ್ಯದೊಂದಿಗೆ.

ಓಂಕಾರ ಮತ್ತು ಲಿಂಗಮ್ಮ ದಂಪತಿಗಳು ಗುರುಲಿಂಗ ಜಂಗಮ ಸೇವೆಗೆ ತಮ್ಮನ್ನು ತಾವು ಮುಡಿಪಿಟ್ಟ ಸದ್ಭಕ್ತರು, ಇಬ್ಬರೂ ಪ್ರತಿ ದಿನದಂತೆ ಮಠಕ್ಕೆ ಹೋಗಿರುತ್ತಾರೆ. ಅಲ್ಲಿ ಗುರುಗಳು ಅವರ ಚಿಂತೆಯನ್ನು ಕೇಳಿ ನೀವು ನಿಮ್ಮ ಭಕ್ತಿಯನ್ನು ನಿಷ್ಠೆಯಿಂದ ಮುಂದುವರೆಸಿದರೆ ನಿಮ್ಮ ಮನೆಗೆ ಮನುಕುಲವನ್ನು ಬೆಳಗುವ ಮಗುವಾದೀತು ಎಂದು ಆಶೀರ್ವದಿಸುತ್ತಾರೆ. ಆಗ ಲಿಂಗಮ್ಮ ನಿಮ್ಮ ಮಾತೇ ವರವಾಗಲಿ ಎಂದು ಆಶಿಸುತ್ತಾಳೆ. ಇವರು ಹೇಳುವ ಮಾತು ಲೌಕಿಕಕ್ಕೆ ತೀರ ಸಮೀಪವಾಗಿದೆ ಎನ್ನಿಸುತ್ತದೆ. ಸುಪ್ತ ಬಯಕೆ ಕನಸಾಗಿ ಬರುತ್ತದೆ ಎನ್ನುವುದಕ್ಕೆ ಅಂದೇ ರಾತ್ರಿ, ಲಿಂಗಮ್ಮ ಕನಸೊಂದನ್ನು ಕಾಣುತ್ತಾಳೆ. ಲೇಖಕರು ಆ ಕನಸಿನ ವರ್ಣನೆಯನ್ನು ಬಹು ಸೊಗಸಾಗಿ ವರ್ಣಿಸಿದ್ದಾರೆ.

ಕಾದಂಬರಿಕಾರರ ದೃಷ್ಟಿಯಲ್ಲಿ ಅಕ್ಕಮಹಾದೇವಿ ಪಾರ್ವತಿ ಶಕ್ತಿಯ ಒಂದು ಪ್ರತಿರೂಪ. ಈ ಜಗತ್ತಿನ ಚರಾಚರವಾದ ವಸ್ತುಗಳ ಚಾಲನೆಯ ಹಿಂದೆ ಯಾವುದೇ ಒಂದು ದಿವ್ಯಶಕ್ತಿ ಇವೆ ಎಂಬ ಕಲ್ಪನೆಯನ್ನು ಅವಲಂಬಿಸಿ ತೀರಾ ವಾಸ್ತವೂ ಅಲ್ಲದೆ ಅತೀ ಲೌಕಿಕವೂ ಅಲ್ಲದ ರೀತಿಯಲ್ಲಿ ಮಹಾದೇವಿಯಕ್ಕನ ಜನನದ ಹಿನ್ನೆಲೆಯನ್ನು ಬಹುಜನರು ಒಪ್ಪುವಂತೆ ಕಲ್ಪಿಸಿಕೊಂಡು ಕಾದಂಬರಿಯನ್ನು ರಚಿಸಿದ್ದಾರೆ.

ಓಂಕಾರನ ಅಪೇಕ್ಷೆಯ ಮೇರೆಗೆ ಮಗು ಹುಟ್ಟಿದ ದಿನವೇ ಮರುಳಸಿದ್ಧರು ಮಗುವಿಗೆ 'ಮಹಾದೇವಿ' ಎಂದು ಹೆಸರನ್ನು ಇರುತ್ತಾರೆ. ಇಷ್ಟಲಿಂಗವನ್ನು ಕಟ್ಟಿ ಮಂತ್ರೋಚ್ಚಾರ ಮಾಡಿದಂತೆಯೂ, ಗುರುಲಿಂಗರು ಶ್ರೀಶೈಲಕ್ಕೆ ಹೋದಾಗ ಅಕ್ಕನಿಗೆ ಜ್ಞಾನದೀಕ್ಷೆ ಮಾಡುವಂತೆ ಮರುಳಸಿದ್ಧರು ಹೇಳಿದಂತೆ, ಅಕ್ಕಮಹಾದೇವಿಗೆ ಪಂಚಾಕ್ಷರಿ ಮಂತ್ರದ ರಹಸ್ಯವನ್ನು ತಿಳಿಸಿ, 'ಶರಣಸತಿ ಲಿಂಗಪತಿ' ಎಂದು ಧರ್ಮೋಪದೇಶ' ಮಾಡಿದ ವಿವರಣೆಗಳಿವೆ.

ಅಕ್ಕಮಹಾದೇವಿಯು ಬಾಲ್ಯದಲ್ಲಿ ದಿಟ್ಟ ಸ್ವಭಾವವನ್ನು ಹೊಂದಿದ್ದಳು. ಗುರುಭಕ್ತಿ, ಲಿಂಗಭಕ್ತಿ, ಲಿಂಗಪೂಜೆ, ಜ್ಞಾನದಾಹಕ್ಕೆ ಪೂರ್ಣ ಶ್ರಮವಹಿಸಿ, ಆಕೆಗೆ ಒಂದು ಉನ್ನತ ವ್ಯಕ್ತಿತ್ವ ನಿರ್ಮಾಣ ಮಾಡಿದವರು ತಂದೆ ಓಂಕಾರ ಮತ್ತು ಗುರುಲಿಂಗದೇವರು. ಗುರುಗಳು ಬಸವಣ್ಣ, ಅಲ್ಲಮಪ್ರಭುದೇವರು, ದೇವರದಾಸಿಮಯ್ಯ ಮುಂತಾದ ಶರಣರ ವಚನಗಳನ್ನು ಅಧ್ಯಯನ ಮಾಡಿಸುತ್ತಿದ್ದರು. ಮಹಾದೇವಿಯು ಗುರು-ಲಿಂಗ-ಜಂಗಮ ಭಕ್ತಿಯನ್ನು ಹಂತ ಹಂತವಾಗಿ ಪಡೆಯುತ್ತಾಳೆ. ಗುರುಲಿಂಗರು ಶ್ರೀಶೈಲ ಯಾತ್ರೆಯ ಅನುಭವಗಳನ್ನು ಹೇಳುತ್ತಿದ್ದಂತೆ, 'ಕದಳಿವನ' ಎಂಬ ಶಬ್ದ ಆ ಎಳೆಯ ಮನದಲ್ಲಿ ಅಚ್ಚಳಿಯದೇ ಉಳಿಯುತ್ತದೆ. ಕಲ್ಯಾಣದ ಪ್ರಸ್ತಾಪ ಬಂದಾಗ ಬಸವಣ್ಣನನ್ನು ನೋಡಬೇಕೆಂಬ ಹಂಬಲ ಅವಳಲ್ಲಿ ಉಂಟಾಗುತ್ತದೆ. ಬಾಲ್ಯದಲ್ಲಿ ಆಕೆ ಹೊಂದಿದ ಜ್ಞಾನದ ಬಸವಣ್ಣನ್ನು ನೋಡಬೇಕೆಂಬ ಹಂಬಲ, ಕದಳಿವನದ ವಿವರಣೆಗಳನ್ನು ಲೇಖಕರು ಕಲ್ಪನೆಯನ್ನು ಬೆರೆಸಿ, ಅಕ್ಕಮಹಾದೇವಿಯ ಬಾಲ್ಯವನ್ನು ಚಿತ್ರಿಸಿದ್ದಾರೆ.

ಎಲ್ಲ ತಂದೆ - ತಾಯಿಗಳು ಆಸೆ ಪಡುವಂತೆ ಓಂಕಾರ ಮತ್ತು ಲಿಂಗಮ್ಮರು ಅಕ್ಕಮಹಾದೇವಿಗೆ ಮದುವೆ ಮಾಡುವ ಕಾರ್ಯಕ್ಕೆ ಮುಂದಾಗುತ್ತಾರೆ. ಬನವಾಸಿಯಲ್ಲಿ ಗುಣಾಢ್ಯನು ರೂಪವಂತವೂ, ಭಕ್ತನೂ, ಕುಲೀನ ಮನೆತನದವನೂ ಆದ ವರನು ಇರುವುದಾಗಿ ಮತ್ತು ಆಷಾಢಮಾಸ ಮುಗಿಯುತ್ತಲೇ ನಿನ್ನನ್ನು ನೋಡಲು ಅವರು ಬರುತ್ತಾರೆಂದು ಲಿಂಗಮ್ಮ ಮಗಳಿಗೆ ಹೇಳುತ್ತಾಳೆ. ಆದರೆ ಅಕ್ಕಮಹಾದೇವಿಯು ತನಗಾಗಲೇ ಮದುವೆಯಾಗಿದೆ. ಚೆನ್ನಮಲ್ಲಿಕಾರ್ಜುನನ್ನೇ ತನ್ನ ಗಂಡ; ತಾನೇ ಅವಳ ಚೆನ್ನ ಸತಿ, ಅವನಿಗೆ ಮನಸ್ಸನ್ನೊಪ್ಪಿಸಿ ಈ ದೇಹಕ್ಕಾಗಿ ಇನ್ನೊಬ್ಬನನ್ನು ಮದುವೆಯಾಗಲಾರೆ ಎಂದು ತಂದೆ-ತಾಯಿಗಳಿಗೆ ದಿಟ್ಟತನದಿಂದ ಹೇಳುತ್ತಾಳೆ. ಯೌವನಾವಸ್ಥೆಯಲ್ಲಿದ್ದ ಅಕ್ಕಮ್ಮ ಸಹಜವಾಗಿ, ಚೆನ್ನಮಲ್ಲಿಕಾರ್ಜುನ ವಿರಹದಲ್ಲಿ ಬಳಲುವ ಚಿತ್ರಣವಿದೆ. ವಿರಹವೇದನೆಯಲ್ಲಿದ್ದ ಅಕ್ಕಮಹಾದೇವಿಗೆ ಇಷ್ಟಲಿಂಗದಿಂದ ಮಿಂಚು ಹೊಳೆದು ಕಣ್ಣಿನಲ್ಲಿ ಅಡಗಿದಂತಾಗುತ್ತದೆ. ತನ್ನ ಚೈತ್ಯನದ ಬೆಳಕೆಲ್ಲ ಸಿಡಿದು ಹೋಗಿ ಆ ಲಿಂಗದಲ್ಲಿ ಅಡಗಿದಂತಾಗುತ್ತದೆ. ಮಲ್ಲಿಕಾರ್ಜುನ ಅದರಿಂದ ಎದ್ದು ತನ್ನನ್ನು ಕೈಗಳಿಂದ ಬಾಚಿ ಅಪ್ಪಿಕೊಂಡಂತೆ ಆಗುತ್ತದೆ ಎಂಬ ಸನ್ನಿವೇಶವು ಕಾದಂಬರಿಯಲ್ಲಿ ಯೌವನಾವಸ್ಥೆಯ ಮಹಾದೇವಿಯ ವ್ಯಕ್ತಿತ್ವ ಚಿತ್ರಣ, ನಮ್ಮ ಕಣ್ಣಮುಂದೆ ನಿಂತಂತಾಗುತ್ತದೆ.

ಅಕ್ಕಮಹಾದೇವಿಯ ಮದುವೆಯ ವಿಷಯದಲ್ಲಿ ಲೇಖಕರು ಊಹೆ - ಕಲ್ಪನೆಗಳ ಮೂಲಕ ಅಕ್ಕನ ಮದುವೆಯ ವಿಷಯದ ಪ್ರಸ್ತಾಪ ಮಾಡಿದ್ದಾರೆ. ಅಕ್ಕನ ಅಂತರಂಗದಲ್ಲಿ ಚೆನ್ನಮಲ್ಲಿಕಾರ್ಜುನನ ನಿಷ್ಠೆ-ಏಕತೆಗಳು ಬೆಳೆಯುತ್ತಿದ್ದಂತೆ, ಬಹಿರಂಗದಲ್ಲಿಯೂ ಅವಳ ಸಾತ್ವಿಕ ಸೌಂದರ್ಯ ವಿಕಸಿಸಿ, ಅರಳುತ್ತ ನಡೆಯುತ್ತದೆ. ಅದರ ಪರಿವೆಯೇ ಇಲ್ಲದ ಮಹಾದೇವಿ ಮಲ್ಲಿನಾಥನಲ್ಲೇ ಮಗ್ನಳಾಗಿರುತ್ತಾಳೆ. ಹೀಗಿರುವಾಗಲೇ ಮದುವೆಯ ಅನಿರೀಕ್ಷಿತ ಘಟನೆ ನಡೆದು, ಸಾಧನೆಯ ಮಾರ್ಗದಲ್ಲಿದ್ದ ಅಕ್ಕನನ್ನು ಸಿದ್ಧಿಯ ಮಾರ್ಗದ ಕಡೆಗೆ ಹೋಗಲು ಸಹಾಯಕವಾಗುತ್ತದೆ.

ವನಕೇಳಿಗೆಂದು ತೆರಳಿದ ಉಡುತಡಿಯ ದೊರೆ ಕೌಶಿಕನು ಮರಳಿ ಪಟ್ಟಣಕ್ಕೆ ಬರುತ್ತಿರುತ್ತಾನೆ. ರಾಜನ ಸ್ವಾಗತಕ್ಕಾಗಿ ಪಟ್ಟಣವನ್ನೆಲ್ಲ ಸಿಂಗಾರಿಸಿರುತ್ತಾರೆ. ಅಕ್ಕನ ಸಖಿಯರೆಲ್ಲ ಶೃಂಗಾರ ಮಾಡಿಕೊಂಡು ರಾಜನನ್ನು ನೋಡಲು ನಿಂತಿರುತ್ತಾರೆ. ಗೆಳತಿಯರು ಒತ್ತಾಯಪೂರ್ವಕವಾಗಿ ಎಳೆದುತಂದು, ಅಕ್ಕನನ್ನು ನಿಲ್ಲಿಸಿರುತ್ತಾರೆ. ಮಹಾದೇವಿ ಸಹಜ ಭಾವದಿಂದ ರಾಜನನ್ನು ನೋಡುತ್ತಿರುತ್ತಾಳೆ. ಅದೇ ಸಮಯಕ್ಕೆ ಕೌಶಿಕನು ಯೌವನದ ಸಹಜ ಪ್ರವೃತ್ತಿಯಿಂದ ಮಹಾದೇವಿಯ ಅಪ್ರತಿಮ ಸೌಂದರ್ಯ ರಾಶಿಗೆ ಮರುಳಾಗಿ, ಸುರಲೋಕದಿಂದ ಇಳಿದು ಬಂದ ಅಪ್ಸರೆಯಂತೆ ಕಾಶಿಕನಿಗೆ ಭಾಸವಾಗುತ್ತಾಳೆ. ಅವಿವಾಹಿತನಾದ ಕೌಶಿಕನ ಮನದಲ್ಲಿ ಮಹಾದೇವಿಯ ಮೇಲಣ ಅವನ ಆಸೆ ಅವನೆದೆಯಲ್ಲಿ ಬಲವಾಗಿ ನಾಟಿ ಬೆಳೆಯುತ್ತದೆ.

ವಸಂತಕನು ಸರ್ವಾಧಿಕಾರ ಪಡೆದು ಮಹಾದೇವಿಯನ್ನು ಕೌಶಿಕನೊಂದಿಗೆ ಮದುವೆ ಮಾಡಲು ಅಕ್ಕನ ತಂದೆ ತಾಯಿಯ ಬಳಿ ಬರುತ್ತಾನೆ. ಮದುವೆ ಆಗಬೇಕಾದರೆ ಪರಸ್ಪರ ಪ್ರೀತಿ - ಪ್ರೇಮಗಳಿರಬೇಕು. ಅರಸರ ಬಗ್ಗೆ ತನಗೆ ಅಂಥ ಪ್ರೇಮ ಇಲ್ಲ. ಆದುದರಿಂದ ಮದುವೆ ಆಗಲಾರೆ ಎಂದು ಮಹಾದೇವಿ ಹೇಳುತ್ತಾಳೆ. ಮಹಾದೇವಿ ಗುರುಗಳ ಹತ್ತಿರ

ಕಂಡೊಡನೆ ತನ್ನ ತಪ್ಪಿನ ಅರಿವಾಗಿ ಕ್ಷಮೆ ಕೇಳುತ್ತಾನೆ. ಅಕ್ಕಮಹಾದೇವಿ ಐಕ್ಯಳಾಗುವವರೆಗೂ ಒಂದಲ್ಲ ಒಂದು ರೀತಿಯಲ್ಲಿ ಕಾಮುಕರ ಸಮಸ್ಯೆಯನ್ನು ಎದುರಿಸಿದ್ದುದನ್ನು ಕಾದಂಬರಿಯುದ್ದಕ್ಕೂ ಕಾಣಬಹುದು. ಪ್ರಸ್ತುತ ಇಂದಿನ ಮಹಿಳೆಯರಿಗೂ ಈ ಪರಿಸ್ಥಿತಿ ಅನ್ವಯವಾಗುತ್ತದೆ. ಇಂತಹ ಪರಿಸ್ಥಿತಿಯನ್ನು ಕಾದಂಬರಿಕಾರರು ಅಕ್ಕನ ಪಾತ್ರದ ಮೂಲಕ ಚಿತ್ರಿಸಿದ್ದಾರೆ.

ಶಿವಶರಣರ ಒಡನಾಟದಲ್ಲಿ ಮಹಾದೇವಿಯಕ್ಕ ಕೆಲವು ಕಾಲ ಕಳೆಯುತ್ತಾಳೆ. ಅನುಭವ ಮಂಟಪದಲ್ಲಿ ಶಿವಶರಣರು ನಡೆಸುತ್ತಿದ್ದ ಅನುಭವ ಗೋಷ್ಠಿಗಳಲ್ಲಿ ಪಾಲ್ಗೊಂಡು, ಪರಿಪಕ್ವಗೊಂಡು, ಶಿರಣರ ಕರುಣೆಯ ಕೂಸಾಗಿ ಅಂಗ-ಲಿಂಗ ಸಂಬಂಧದ ನಿಜವನರಿತು ಪರಮಸುಖಿಯಾಗುತ್ತಾಳೆ. ಸಾಧನೆಯ ಹಂತದಲ್ಲಿದ್ದ ಮಹಾದೇವಿಗೆ, ಸಿದ್ಧಿ ಕೈಗೂಡಿದ್ದು ಶರಣರ ಸಂಘದಿಂದ ಅದನ್ನು ಸ್ವತಃ ಅಕ್ಕ ತನ್ನ ವಚನಗಳಲ್ಲಿ ಸ್ಪಷ್ಟವಾಗಿ ಹೇಳಿಕೊಂಡಿದ್ದಾಳೆ. ಅನುಭವ ಮಂಟಪದಲ್ಲಿ ನಡೆದ ಅಕ್ಕಮಹಾದೇವಿ ಮತ್ತು ಅಲ್ಲಮನ ಸಂಭಾಷಣೆ ಗುರುಲಿಂಗ ದೇವರ ಮತ್ತು ಅಕ್ಕಮ್ಮ ಸಂವಾದ, ಇತರ ಶರಣರ ಜೊತೆಗಿನ ವಾದ-ಪ್ರತಿವಾದಗಳು ಕಾದಂಬರಿಯಲ್ಲಿ ಮನೋಜ್ಞವಾಗಿ ಮೂಡಿಬಂದಿದೆ.

ಸಮಯ ಹೋದಂತೆಲ್ಲ ಇಹಲೋಕದ ಸಂಗ ಸಾಕೆನಿಸಿ, ದೇಹ ತ್ಯಾಗ ಮಾಡಿ ಚೆನ್ನಮಲ್ಲಿಕಾರ್ಜುನನಲ್ಲಿ ಒಂದಾಗಬೇಕೆಂಬ ಹಂಬಲ ಅಕ್ಕನಲ್ಲಿ ಹೆಚ್ಚಾಗುತ್ತವೆ. ಅಂಗ ಭಂಗ ಮನಭಂಗವಳಿದು, ತನ್ನ ನೆಚ್ಚಿನ ಚೆನ್ನನನ್ನು ಕೂಡುವ ಕೂಟದ ಸುಖವ ನೆನೆದು ಪುಳಕಗೊಳ್ಳುವ ಮಹಾದೇವಿಗೆ ಇತ್ತ ಕಲ್ಯಾಣದಲ್ಲಿಯೇ ಉಳಿಯುವುದಕ್ಕೂ ಮನಸ್ಸಿಲ್ಲ. ಅತ್ತ ಚೆನ್ನ ನನ್ನರುಹಿದ ಮಹಾಂತರನ್ನಾಗಲಿ ಇರಲು ಸಾಧ್ಯವಿಲ್ಲ. ಇಂಥ ಬಗೆಯ ಮನಸ್ಥಿತಿಯಲ್ಲಿ ಸಿಕ್ಕು ಹೆಣಗಾಣುವ ಚಿತ್ರ ಕಣ್ಣಿಗೆ ಕಟ್ಟುವಂತೆ ಮೂಡಿಬಂದಿದೆ.

ಕಾವಿ ಸೀರೆಯನ್ನು ಉಟ್ಟು ಶರಣರನ್ನು ಅಗಲಿ ಶ್ರೀಶೈಲಕ್ಕೆ ಹೋಗುವ ದೃಶ್ಯ ಕಾದಂಬರಿಯಲ್ಲಿ ಹೃದಯಸ್ಪರ್ಶಿಯಾಗಿ ಮೂಡಿಬಂದಿದೆ. ಶ್ರೀಶೈಲಕ್ಕೆ ಪ್ರಯಾಣ ಬೆಳೆಸಿ ಕದಳಿ ವನದಲ್ಲಿಯೇ ಐಕ್ಯವಾಗುತ್ತಾಳೆ. ಅಲ್ಲಿಯೇ ಕರ್ಪೂರದಂತೆ ಶರಣುಹೋಗುತ್ತಾಳೆ.

ತಿಪ್ಪೇರುದ್ರಸ್ವಾಮಿ ಅವರು ಅಕ್ಕಮಹಾದೇವಿಯನ್ನು ನೋಡುವ ದೃಷ್ಟಿಯೇ ಬೇರೆ. ಇಲ್ಲಿಯ ಮಹಾದೇವಿ. ಸಾಮಾನ್ಯ ಹುಡುಗಿಯರಂತೆ ಆಟ ಆಡುವುದಿಲ್ಲ, ಮಾತನಾಡುವುದಿಲ್ಲ. ಅವಳು ಯಾವುದೂ ಒಂದು ಘನವಾದ ಕೆಲಸವನ್ನು ಸಾಧಿಸುವವಳಿದ್ದೇನೆ ಎಂಬ ತಿಳುವಳಿಕೆ ಇತ್ತೇನೋ ಎನ್ನುವ ರೀತಿಯಲ್ಲಿ ಆಕೆಯ ಜೀವನದ ಘಟನೆಗಳನ್ನು ಚಿತ್ರಿಸುತ್ತಾರೆ. ಕೌಶಿಕನ ಕಾಮದೃಷ್ಟಿಗೆ ಬಿದ್ದ ಮಹಾದೇವಿ. ಆತನಿಗೆ ಷರತ್ತನ್ನು ವಿಧಿಸುತ್ತಾಳೆ. ಕೌಶಿಕ ಅದನ್ನು ಮುರಿದಾಗ ಅದರಿಂದ ಹೊರಬಂದು, ಮಹಾದೇವಿ ಜೀವನದಲ್ಲಿ ಸಾಧಿಸಬೇಕಾದ ಸಾಧನೆಯ ಕಡೆಗೆ ನಡೆಯುವಾಗ ಬರುವ ತೊಂದರೆಗಳನ್ನು ಹೇಗೆ ನಿವಾರಿಸಿಕೊಂಡು ಆಧ್ಯಾತ್ಮಿಕ ಜೀವನದಲ್ಲಿ ಪ್ರಗತಿಯನ್ನು ಹೊಂದಿದಳು ಎಂಬುದನ್ನು ಕಾದಂಬರಿಕಾರರು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ.

ತಿಪ್ಪೇರುದ್ರಸ್ವಾಮಿ ಅವರು ಕದಳಿಯ ಕರ್ಪೂರ ಕಾದಂಬರಿಯಲ್ಲಿ ಅಕ್ಕನ ಜೀವನವನ್ನು ವೈಚಾರಿಕ ನೆಲೆಯಲ್ಲಿ ಚಿತ್ರಿಸಿದ್ದಾರೆ. ಅಕ್ಕನ ಚರಿತ್ರೆಗೆ ಜೀವ ತುಂಬುವಲ್ಲಿ ಲೇಖಕರು

ಸಿದ್ಧಹಸ್ತರಾಗಿದ್ದಾರೆ. ಆಕೆಯ ಜೀವನಕ್ಕೆ ಕುಂದು ಬಾರದಂತೆ ಎಚ್ಚರಿಕೆಯಿಂದ ಅಕ್ಕನ ವ್ಯಕ್ತಿ ಚಿತ್ರಣವನ್ನು ಸೃಷ್ಟಿಸಿದ್ದಾರೆ. ಮಹಾದೇವಿ ಅಕ್ಕ ತನಗಾಗಿ ಅಲ್ಲಿದ್ದರೂ, ಸಮಾಜದ ಭಕ್ತಾದಿಗಳ, ತಂದೆ ತಾಯಿಗಳನ್ನು ರಕ್ಷಿಸಲು ಕೌಶಿಕನ ಒತ್ತಾಯಕ್ಕಾಗಿ ಅರಮನೆಗೆ ಹೋಗುವ ಸನ್ನಿವೇಶ ಕಾದಂಬರಿಯಲ್ಲಿ ಎದ್ದು ಕಾಣುತ್ತದೆ. ಹಲವು ಕಷ್ಟಗಳ ಮಧ್ಯದಲ್ಲಿಯೂ ತನ್ನ ಗುರಿಯನ್ನು ಮುಟ್ಟಬೇಕು ಎನ್ನುವ ಅಕ್ಕನ ತವಕವನ್ನು ಕಾದಂಬರಿಕಾರರು ಬಹಳ ಮಾರ್ಮಿಕವಾಗಿ ಚಿತ್ರಿಸಿ, ಆಕೆಯ ವ್ಯಕ್ತಿತ್ವದ ಔನ್ನತ್ಯವನ್ನು ಹೆಚ್ಚಿಸಿದ್ದಾರೆ.

ಕದಳಿಯ ಕರ್ಪೂರ ಐತಿಹಾಸಿಕ ಕಾದಂಬರಿಯೂ ಹೌದು. ಆಧ್ಯಾತ್ಮಿಕ ಕಾದಂಬರಿಯೂ ಹೌದು. ಕೇವಲ ವೀರಶೈವ ಧರ್ಮದ ಪ್ರಚಾರಕ್ಕೆ ಈ ಕಾದಂಬರಿಯನ್ನು ಲೇಖಕರು ಬಳಸಿಕೊಂಡಿಲ್ಲ. ಮಾನವ ಧರ್ಮದ ಪ್ರಸಾರತೆ ಇದೆ. ಪರಮತ ಸಹಿಷ್ಣುತೆ ಇವರ ಕಾದಂಬರಿಯಲ್ಲೂ, ವ್ಯಕ್ತಿತ್ವದಲ್ಲೂ ಗೋಚರಿಸುತ್ತದೆ. ಇದಕ್ಕೆ ಉದಾಹರಣೆಯಾಗಿ ಕೌಶಿಕ ಮಹಾರಾಜನ ಪಾತ್ರದ ಉದಾತ್ತೀಕರಣ ಉಳಿದ ಕಾದಂಬರಿಗಳಲ್ಲಿ ಆತ ಜೈನ ಧರ್ಮದವನು. ಅದಕ್ಕೆ ಮಗಳನ್ನು ಕೊಡುವುದಿಲ್ಲವೆಂದು ಅಕ್ಕನ ತಂದೆ ತಾಯಿಗಳು ಹೇಳಿದರೆ, ಕದಳಿಯ ಕರ್ಪೂರ ಕಾದಂಬರಿಯಲ್ಲಿ ನಿಷ್ಠಾವಂತ ಶಿವಭಕ್ತರಾದ ಕಾರಣ ಮಗಳನ್ನು ಕೊಡುವುದಿಲ್ಲವೆಂದು ಓಂಕಾರಶೆಟ್ಟಿ ಲಿಂಗಮ್ಮ ಹೇಳುತ್ತಾರೆ. ಮದುವೆ ಎಂದರೆ ಪರಸ್ಪರ ಪ್ರೀತಿಯಿಂದ ಆಗುವುದು ಎಂದು ಹೇಳುವುದರ ಮೂಲಕ ಮತಗಳ ಮೇಲಾಟಕ್ಕೆ ತೆರೆ ಎಳೆಯುತ್ತಾರೆ.

ಮಹಾದೇವಿ ಕನ್ನಡ ನಾಡಿಗೆ ಮಾತ್ರವಲ್ಲ ಇಡೀ ಜಗತ್ತಿನ ಮಹಿಳಾ ಸುಧಾರಕರಲ್ಲಿಯೇ ಅಗ್ರಗಣ್ಯಳಾದ ಅಪೂರ್ವ ವ್ಯಕ್ತಿ. ಹೆಣ್ಣುತನದ ಪರಿಪೂರ್ಣ ಸ್ವರೂಪವನ್ನು ಉಜ್ವಲವಾಗಿ ಬೆಳಗಿ ತೋರಿದ ಮಹಾಶಕ್ತಿಯಾಗಿರುವುದರಿಂದ ಇಂದಿಗೂ ಆದರ್ಶಮಯವಾಗಿದ್ದಾಳೆ. ಅಕ್ಕನ ಜೀವನ ಚರಿತ್ರೆಯೊಂದಿಗೆ ಅವಳು ಆಧ್ಯಾತ್ಮಿಕ ಸಾಧನೆಗಾಗಿ ನಡೆಸಿದ ಹೋರಾಟದ ಜೈವಿಕ ಸಂಗತಿಯನ್ನೇ ಲೇಖಕರು ಇಲ್ಲಿ ಸ್ವಾರಸ್ಯಗೆಡದಂತೆ ಬಣ್ಣಿಸಿದ್ದಾರೆ.

ಒಟ್ಟಿನಲ್ಲಿ ಅಕ್ಕಮಹಾದೇವಿ ತನ್ನ ದೇಹದ ಮೇಲಿನ ವ್ಯಾಮೋಹ, ತಂದೆ - ತಾಯಿಗಳ ವ್ಯಾಮೋಹ, ಗುರುಗಳ ವ್ಯಾಮೋಹ ಹೀಗೆ ಎಲ್ಲವನ್ನು ಹಂತ ಹಂತವಾಗಿ ತೊರೆದು ಆಧ್ಯಾತ್ಮದಲ್ಲಿ ಹೇಗೆ ಸಾಧನೆಯನ್ನು ಸಾಧಿಸಿದಳು ಎಂಬ ಚಿತ್ರಣವನ್ನು, ಪ್ರಸುತ್ತ ಎಲ್ಲರಿಗೂ ಆದರ್ಶವಾಗುವ ರೀತಿಯಲ್ಲಿ ಆಕೆಯ ಪಾತ್ರವನ್ನು ಚಿತ್ರಿಸಿದ್ದಾರೆ.

ಮಾತೆ ಮಹಾದೇವಿ ಅವರು 'ತರಂಗಿಣಿ' ಕಾದಂಬರಿಯನ್ನು ಬೃಹತ್ ಗಾತ್ರದಲ್ಲಿ ರಚಿಸಿದ್ದಾರೆ. ಪ್ರಕೃತಿ ವರ್ಣನೆ, ಅಕ್ಕನ ಬಾಲ್ಯ, ಯೌವ್ವನ, ವಿವಾಹ, ವೈರಾಗ್ಯ ಮತ್ತು ಐಕ್ಯವನ್ನು ತಿಳಿಸುವ ವಿವರಗಳು ಕಾದಂಬರಿಯಲ್ಲಿ ಸುಮಾರು ೮೫೩ ಪುಟಗಳಲ್ಲಿ ಸವಿಸ್ತಾರವಾಗಿ ಮೂಡಿಬಂದಿದೆ. ಮಹಾದೇವಿಯ ಜೀವನದ ಪ್ರತಿಯೊಂದು ಘಟನೆಗಳನ್ನು ತಿಳಿಸುವ ಉದ್ದೇಶವನ್ನು ಹೊಂದಿದ್ದಾರೆ. ಬದುಕನ್ನು ಪಲ್ಲಟಿಸಿಕೊಂಡು ಅಸಾಮಾನ್ಯ ಯೋಗಿಕ ಗುರಿಯನ್ನು ಅನುಭಾವಿ, ತತ್ವಜ್ಞಾನಿ ಯೋಗಿತ ಗುರಿಯನ್ನು ಮುಟ್ಟಿದ ಶಿವಯೋಗಿಣಿಯಾದ ಅಕ್ಕಮಹಾದೇವಿಯನ್ನು ಅನುಭಾವಿ, ತತ್ವಜ್ಞಾನಿ ಯೋಗಿಣಿ ಕ್ರಾಂತಿಕಾರಣಿ ಎಂದು ಲೇಖಕರು ಚಿತ್ರಿಸಿದ್ದಾರೆ. "ಅಕ್ಕನ

ವಚನಗಳ ಆಧಾರದ ಮೇಲೆಯೇ ಕಥಾಭವನ ನಿರ್ಮಾಣವಾಗಿದೆ. ವಚನದ ಆಧಾರವಿಲ್ಲದೆ ಯಾವುದೇ ಘಟನೆಯನ್ನು ರೂಪಿಸಲು ಯತ್ನಿಸಿಲ್ಲ" (ಮಾತೆ ಮಹಾದೇವಿ; ೧೯೭೫; ಪು. ಮುನ್ನುಡಿ) ಎಂದು ಮಾತೆ ಮಹಾದೇವಿ ಅವರೇ ತಿಳಿಸಿದ್ದಾರೆ.

ಕಾದಂಬರಿಯು ಬಹುಕಾಲದಿಂದ ಮಕ್ಕಳಿಲ್ಲದೆ ಪರಿತಪಿಸುವ ದಂಪತಿಗಳ ಚಿತ್ರಣದೊಂದಿಗೆ ಪ್ರಾರಂಭವಾಗುತ್ತದೆ. ಓಂಕಾರ ಮತ್ತು ಲಿಂಗಮ್ಮ ದಂಪತಿಗಳು ಮಕ್ಕಳಿಗಾಗಿ ಪರಿತಪಿಸುತ್ತಾ, ಕಂಡ ಕಂಡ ದೇವರಲ್ಲಿ ಹರಕೆಯನ್ನು ಹೊರುತ್ತಾರೆ. ಬಹುಕಾಲದವರೆಗೆ ಮಕ್ಕಳಿಲ್ಲದ ದಂಪತಿಗಳ ನೋವನ್ನು ಅರಿತಿದ್ದ ಗುರುಗಳು ಅವರಿಗಾಗಿ ಒಂದು ದೈವಸಂಕಲ್ಪ ಮಾಡುತ್ತಾರೆ. ಒಂದು ವ್ರತದ ನಿಯಮವನ್ನು ಹೇಳುತ್ತಾರೆ. ಮರುದಿನ ಸೂರ್ಯೋದಯಕ್ಕೆ ಮುಂಚೆ ದಂಪತಿಗಳು ಮಠಕ್ಕೆ ಬರುತ್ತಾರೆ. ಇಲ್ಲಿ ಇಷ್ಟಲಿಂಗದ ಮಹಿಮೆಯಿಂದ ಒಂದು ಬೆಳಕು ಹುಟ್ಟಿ, ಅದು ಕಲ್ಲುಸಕ್ಕರೆಯಲ್ಲಿ ಲೀನವಾಗುತ್ತದೆ. ಅದನ್ನು ಲಿಂಗಮ್ಮ ಸೇವಿಸುತ್ತಾಳೆ. ಆ ರಾತ್ರಿ ವಿಚಿತ್ರ ಕನಸ್ಸೊಂದು ಬೀಳುತ್ತದೆ. ಆ ಕನಸಿನಲ್ಲಿ ಶಿವನು ಮಗುವನ್ನು ಕರುಣಿಸಿದ ಹಾಗೆ ಮತ್ತೆ ಆ ಮಗುವನ್ನು ತನಗೆ ಬೇಕೆಂದು ಕೇಳಿದಾಗ ಆ ಮಗುವನ್ನೇ ಲಿಂಗಮ್ಮ ಶಿವನಿಗೆ ಅರ್ಪಿಸಿದ ರೀತಿಯಲ್ಲಿ ಕನಸು ಬೀಳುತ್ತದೆ. ಇದನ್ನು ಗುರುಗಳಿಗೆ ವಿವರಿಸಿದಾಗ ಅವರು ಕಾರಣಿಕ ಕನ್ಯೆಯೊಬ್ಬಳ ಜನನವಾಗುತ್ತದೆಂದು ತಿಳಿಸುತ್ತಾರೆ.

ಲಿಂಗಮ್ಮ ಗರ್ಭವತಿಯಾದಾಗ ಅವಳ ದೇಹ ಮತ್ತು ಕ್ರಿಯೆಗಳಲ್ಲಿ ಕಂಡುಬರುವ ಬದಲಾವಣೆಗಳ ಪ್ರಸ್ತಾಪ ಇದೆ. ಲಿಂಗಮ್ಮ ೮ ತಿಂಗಳು ಗರ್ಭಿಣಿ ಇದ್ದಾಗ ಗರ್ಭಸ್ಥ ಶಿಶುವಿಗೆ ಮಂತ್ರೋಪದೇಶವಾಗುತ್ತದೆ. ನಂತರ ಬಸವಣ್ಣನವರು ಗುರುಲಿಂಗ ಕೈಯಲ್ಲಿ ಅಕ್ಕನಿಗೆಂದೇ ಕೊಟ್ಟು ಕಳುಹಿಸಿದ ಲಿಂಗವನ್ನು ಲಿಂಗಮ್ಮನ ಕೊರಳ ಶಿವದಾರಕ್ಕೆ ತೊಡಿಸುವ ಪ್ರಸಂಗದ ವರ್ಣನೆಯನ್ನು ಕಾದಂಬರಿಕಾರರು ಮಾಡಿದ್ದಾರೆ.

ಬಹುಶಃ ಕಾದಂಬರಿಕಾರರ ಉದ್ದೇಶ ಬೆಳೆಯುವ ಸಸಿ ಮೊಳಕೆಯಲ್ಲಿ ಎಂಬಂತೆ ಮುಂದೆ ಎಂತಹ ವ್ಯಕ್ತಿತ್ವ ರೂಪುಗೊಳ್ಳುವುದು ಎಂಬ ಸೂಚನೆಯನ್ನು ಕೊಟ್ಟಂತಿದೆ. ಲಿಂಗಮ್ಮ ಪಾತ್ರದಲ್ಲಿ ವೈರುಧ್ಯವನ್ನು ಸೃಷ್ಟಿಸಿದ್ದಾರೆ. ಮೊದಲು ಆಧ್ಯಾತ್ಮದ ಒಲವು ತೋರಿದರು. ಮಗಳು ಹುಟ್ಟಿದ ಬಳಿಕ ಲೌಕಿಕ ಬದುಕಿನ ಚೌಕಟ್ಟಿನಲ್ಲಿಯೇ ಆಕೆಯ ಆಲೋಚನೆಗಳು ಇರುತ್ತದೆ. ಓಂಕಾರ ಶೆಟ್ಟಿಗೆ ಮೊದಲೇ ಆಧ್ಯಾತ್ಮದತ್ತ ಒಲವಿತ್ತು ಎಂಬುದಕ್ಕೆ ಸಾಕಷ್ಟು ನಿದರ್ಶನಗಳನ್ನು ಕಾದಂಬರಿಕಾರರು ಕೊಟ್ಟಿದ್ದಾರೆ. ಆದ್ದರಿಂದ ತಾನು ಸಾಧಿಸಲಾರದ್ದನ್ನು ತನ್ನ ಮಗಳ ಮೂಲಕ ಸಾಧಿಸುವ ಅಭಿಲಾಷೆಯನ್ನು ಹೊಂದಿರುವ ವ್ಯಕ್ತಿಯಾಗಿದ್ದಾನೆ. ಬಹುಶಃ ಇವಳಿಗೆ ವೈರಾಗ್ಯ ಆಧ್ಯಾತ್ಮದತ್ತ ಮನಸ್ಸು ತಂದೆಯ ರಕ್ತದಿಂದಲೇ ಹರಿದು ಬಂದಿರಬೇಕೆಂದನ್ನು ತೋರಿಸಲು ಈ ಹಿನ್ನೆಲೆಯಲ್ಲಿ ಪಾತ್ರ ಸೃಷ್ಟಿಸಿರಬಹುದು.

ಮಾತೆ ಮಹಾದೇವಿ ಅವರು ರಾಚಕವಿಯನ್ನು ಅನುಸರಿಸಿ ಅಕ್ಕನ ತಂದೆ ಓಂಕಾರ, ತಾಯಿ ಲಿಂಗಮ್ಮ ಎಂದು ಹೇಳಿದ್ದಾರೆ. ದಂಪತಿಗಳು ಸಕಲ ಸಂಪತ್ತನ್ನು ಪಡೆದುಕೊಂಡ ಸಾತ್ವಿಕ ಜೀವಿಗಳು; ಗುರುಲಿಂಗ ಜಂಗಮ ಸೇವೆಗೆ ತಮ್ಮನ್ನು ತಾವು ಮುಡಿಪಿಟ್ಟ ಸದ್ಭಕ್ತರು.

ಇಂಥ ದಂಪತಿಗಳ ಮಗಳಾಗಿ ಜನಿಸುತ್ತಾಳೆ. ಮಗು ಜನಿಸಿದ ಹನ್ನೊಂದನೆಯ ದಿನಕ್ಕೆ ಶಾಸ್ತ್ರೋಕ್ತವಾಗಿ ಮತ್ತು ಸಂಪ್ರದಾಯಬದ್ಧವಾಗಿ ಮಹಾದೇವನ ಮೀಸಲು ಸತಿಯಾದುದರಿಂದ 'ಮಹಾದೇವಿ' ಎಂದು ನಾಮಕರಣ ಮಾಡುತ್ತಾರೆ. ಕಾದಂಬರಿಯಲ್ಲಿ ನಾಮಕರಣದ ಸನ್ನಿವೇಶವನ್ನು ಇಂದಿನ ಪರಿಸರದ ವಾಸ್ತವಿಕ ನೆಲೆಯಲ್ಲಿ ನಡೆಯುವಂತೆ ಚಿತ್ರಿಸಿದ್ದಾರೆ.

ಮಹಾದೇವಿಯ ಜನನವಾದಾಗ ಅವಳಿಗಾಗಿ ಕಳುಹಿಸಿದ ವಿಭೂತಿಯನ್ನು ಹಚ್ಚಿ ಇಲ್ಲಿಯವರೆಗೆ ಲಿಂಗಮ್ಮನ ಶಿವದಾರಕ್ಕೆ ಕಟ್ಟಿದ ನಾಗೋಸವನ್ನು ಮಗುವಿನ ಕೊರಳಿಗೆ ಕಟ್ಟಿಸಿದರು. ನಂತರ ಮಹಾದೇವಿ ಕನ್ಯೆಯಾದಾಗ ಧರ್ಮದ ಆಚರಣೆಗಳನ್ನನುಸರಿಸಿ ಗುರುಲಿಂಗರು "ಮಗು ನಿನಗೆ ಲಿಂಗಧಾರಣೆ ಆಗಿದೆ. ಈಗ ಅಗುವುದು ಲಿಂಗದೀಕ್ಷೆ. ಅದು ಮದುವೆಗೆ ಮುನ್ನ ನಡೆಯುವ ನಿಶ್ಚಯ ಕಾರ್ಯವಿದ್ದಂತೆ, ಇದು ಲಗ್ನ ಕಾರ್ಯದಂತೆ, ಅಲ್ಲಿ ತಾಯಿ, ತಂದೆಯು ಮಗುವನ್ನು ಶಿವಪಥದಲ್ಲಿ ನಡೆಸುತ್ತೇನೆಂದು ಪ್ರತಿಜ್ಞೆ ಕೈಗೊಳ್ಳುತ್ತಾರೆ. ಇಲ್ಲಿ ನೀನೇ ಸ್ವತಃ ಪ್ರತಿಜ್ಞೆ ಕೈಗೊಳ್ಳಬೇಕು. ಲಿಂಗಕೃತಿಯೊಡನೆ ಶರಣಸತಿಯಾಗಿ ಆಧ್ಯಾತ್ಮ ಸಂಸಾರವನ್ನು ಪ್ರಾರಂಭವಿಸಲು ಗುರುವು ಈ ದೈವೀ ವಿವಾಹವನ್ನು ಮಾಡುವನು. ತಾಯಿ ಇಲ್ಲಿ ನಾನೇ ತೆತ್ತಿಗ, ನೀನು ಮದುವಳಿಗೆ, ಲಿಂಗದೇವನೇ ಮುದುವಣಿಗ, ವಿಶ್ವದ ಬಂಧುಗಳೇ ನಿಬ್ಬಣಿಗರು ಎಂದು ಧರ್ಮೋಪದದೇಶ ಮಾಡಿದರೆಂಬ (ಮಾತೆ ಮಹಾದೇವಿ; ತರಂಗಿಣಿ; ಪು. ೧೦೮) ವಿಷಯ ಹೃದಯಸ್ಪರ್ಶಿಯಾಗಿ ಮೂಡಿಬಂದಿದೆ. ಈ ಘಟನೆಗಳನ್ನು ಅವಲೋಕಿಸಿದಾಗ ಬಾಲಕಿ ಯಾಗಿದ್ದಾಗಲೇ ಧರ್ಮೋಪದೇಶ ಮಾಡಿದ್ದು ಅದುವೇ ತನ್ನ ನಿಜವಾದ ಮದುವೆ ಎಂದು ಅಕ್ಕ ತಿಳಿದುಕೊಂಡು ಇರುವುದಾಗಿ ಲೇಖಕರು ಮನೋವಿಜ್ಞಾನದ ಹಿನ್ನೆಲೆಯಲ್ಲಿ ಈ ಘಟನೆಯನ್ನು ಬಹು ಸೊಗಸಾಗಿ ನಿರೂಪಿಸಿದ್ದಾರೆ.

ಬಹುಸುಂದರವಾದ ಈ ಮಗುವಿನ ಬಾಲಚೇಷ್ಟೆಗಳನ್ನು ನೋಡುತ್ತಲೇ ಕಾಲ ಸರಿಯುತ್ತಾ ಹೋಗುತ್ತದೆ. ಓಂಕಾರ ತನ್ನ ವ್ಯಾಪಾರ ವ್ಯವಹಾರಗಳನ್ನು ಮರೆತು ಯಾವಾಗಲೂ ಮಗುವಿನೊಡನೆ ಆಟವಾಡುತ್ತಾ ಕಾಲ ಕಳೆಯುತ್ತಾನೆ. ಇದರಿಂದಾಗಿ ತಂದೆ ಮಗಳಲ್ಲಿ ಒಂದು ಅನ್ಯೋನ್ಯ ಸಂಬಂಧ ಬೆಳೆಯುತ್ತದೆ. ತನ್ನ ಮಗಳಿಗೆ ವಿದ್ಯೆಯನ್ನು ಕಲಿಸಬೇಕೆಂಬ ಆಸೆಯಿಂದ ಓಂಕಾರ ಮಹಾದೇವಿಯನ್ನು ಮಠದ ಶಾಲೆಗೆ ಸೇರಿಸುತ್ತಾನೆ. ಅಕ್ಕಮ್ಮಳ ವಿದ್ಯಾಭ್ಯಾಸ ಸರಾಗವಾಗಿ ಸಾಗುತ್ತದೆ. ಪ್ರಚಂಡ ಬುದ್ಧಿಶಕ್ತಿ ಅಧ್ಯಯನ, ತರ್ಕ, ವಿಮರ್ಶೆಯ ರೀತಿಯಲ್ಲಿ ಇವಳ ಓದು ಸಾಗುತ್ತವೆ. ಅಕ್ಕ ಬಾಲ್ಯದಲ್ಲಿಯೇ ಬಹಳ ದಿಟ್ಟ ಸ್ವಭಾವದವಳು. ತನಗೆ ಅನಿಸಿದ್ದನ್ನು ನೇರವಾಗಿ ಹೇಳುವ ಮನೋಧರ್ಮದವಳು.

ಕಾದಂಬರಿಕಾರರು ಅಕ್ಕನ ಬಾಲ್ಯದಾಟಗಳು ಶಿವಲೀಲೆಗಳಂತಾಗಿ ಚಿತ್ರಿಸಿರುವುದರಿಂದ ಸಹಜತೆಗೆ ದೂರವಾಗಿದೆ. ಇನ್ನೂ ಮಾತನಾಡಲು ಬಾರದ ಬಾಲೆ ಹೊನ್ನೋಲೆಗಳನ್ನು ತಿರಸ್ಕರಿಸಿ ಗುರುಗಳಿಂದ ರುದ್ರಾಕ್ಷಿಯೋಲೆಗಳನ್ನು ಪಡೆಯುತ್ತಾಳೆ. ಲೌಕಿಕಾಸಕ್ತಿ ಹೊಂದಿದ ರುದ್ರಾಣಿಯು ಅಕ್ಕನ ಗೆಳತಿಯಾಗಿದ್ದಾಳೆ. ರುದ್ರಾಣಿಯು ಲೌಕಿಕ ಬದುಕಿಗೆ ಪ್ರತಿನಿಧಿಯಾಗಿ ಕಾಣಿಸಿದರೆ, ಅಕ್ಕಮಹಾದೇವಿ ಅಲೌಕಿಕ ಬದುಕಿಗಾಗಿ ಹಾತೊರೆಯುವಂತೆ ಕಾಣಿಸುತ್ತಾಳೆ.

ಮಹಾದೇವಿ ಅಲೌಕಿಕದ ಆಟ ಆಡದೇ ಶಿವನನ್ನು ಒಲಿಸಿಕೊಳ್ಳುವ ಪಾರ್ವತಿಯ ಆಟವನ್ನು ಆಡುತ್ತಾಳೆ. ಲಿಂಗಮ್ಮ ಹೇಳುವ ಧ್ರುವನ ಕಥೆಯ ಪರಿಣಾಮ ಬೀರಿ ಅಂದೇ ಶಿವನನ್ನು ಹುಡುಕಿಕೊಂಡು ಹೋಗಲು ಪ್ರಯತ್ನಿಸುತ್ತಾಳೆ.

ಹತ್ತು ವರ್ಷದವಳಿದ್ದ ಮಹಾದೇವಿ ಸಮಗಾರ ಮಾದಯ್ಯನಿಗೆ ಊಟ ಕೊಡಿಸುವ ಸಂದರ್ಭ, ಸ್ತ್ರೀ, ಪುರುಷನಿಗಿಂತ ಕೀಳಲ್ಲ ಎಂದು ದಿಟ್ಟತನದಿಂದ ಶಿವಮೂರ್ತೆಪ್ಪನ ಜೊತೆ ವಾದಿಸುವ ಸನ್ನಿವೇಶ, ಹೆಣ್ಣು ರೂಪದಲ್ಲಿಯೇ ಇದ್ದು ಗಂಡುತನವನ್ನು ಮೆರೆಯಲು ಬಯಸುವ ಸನ್ನಿವೇಶ, ಹೆಣ್ಣಿಗೆ ಯಾವುದೂ ಅಸಾಧ್ಯವಲ್ಲ ಎನ್ನುವುದನ್ನು ಸಾಧ್ಯ ಮಾಡಿ ತೋರಿಸುವ ನಿರ್ಧಾರ ಅಕ್ಕಮಹಾದೇವಿಯ ದಿಟ್ಟ ನಿಲುವುಗಳನ್ನು ಸಂಕೇತಿಸುವಂತೆ ಲೇಖಕರು ಅಕ್ಕನ ಪಾತ್ರವನ್ನು ವರ್ಣಿಸಿದ್ದಾರೆ.

ಅಕ್ಕನ ಯೌವನದ ಘಟನಾವಳಿಗಳ ವಿವರ ಕಾದಂಬರಿಯಲ್ಲಿ ೧೫೩ ಪುಟಗಳಷ್ಟು ದೀರ್ಘವಾಗಿದೆ. ಲೇಖಕರು ಕಲ್ಪನೆಯನ್ನು ಬೆರೆಸಿ, ಆಕೆಯ ಯೌವನದ ಬಗ್ಗೆ ಬಹುಸುಂದರವಾಗಿ ವರ್ಣಿಸಿದ್ದಾರೆ. ಲಿಂಗಮ್ಮ ಮಗಳ ಮದುವೆಯ ವಿಷಯವಾಗಿ ಗುರುಗಳ ಹತ್ತಿರ ಪ್ರಸ್ತಾಪ ಮಾಡುತ್ತಾಳೆ. ಗುರುಗಳು ಮಹಾದೇವಿಗೆ ಲೌಕಿಕದಂತೆ ಮದುವೆಯಾಗಿ ಆಧ್ಯಾತ್ಮ ಜೀವನ ಸಾಗಿಸು ಎನ್ನುತ್ತಾರೆ. ಆದರೆ ಮಹಾದೇವಿ, ನನಗಾಗಲೇ ಮದುವೆಯಾಗಿದೆ. ಚೆನ್ನಮಲ್ಲಿಕಾರ್ಜುನ ನನ್ನು ಗಂಡ ಅವನಿಗೆ ಮನಸ್ಸನ್ನೊಪ್ಪಿಸಿ, ಈ ದೇಹಕ್ಕಾಗಿ ಇನ್ನೊಬ್ಬನನ್ನು ಮದುವೆಯಾಗಲಾರದೇ, ವಿರಾಗಿಣಿಯಾಗಿಯೇ ಇರುವುದಾಗಿ ತಿಳಿಸುತ್ತಾಳೆ. ಮಗಳ ಮಾತುಗಳನ್ನು ಕೇಳಿದ ತಾಯಿ ಅವಳನ್ನು ಆಧ್ಯಾತ್ಮ ಜೀವನದಿಂದ ಲೌಕಿಕ ಜೀವನಕ್ಕೆ ತರುವ ಸರ್ವ ಪ್ರಯತ್ನಗಳನ್ನು ಮಾಡುತ್ತಾಳೆ. ಇದಕ್ಕಾಗಿ ಗೆಳತಿ ಕುಮುದಳ ಸಹಾಯವನ್ನು ಪಡೆಯುತ್ತಾಳೆ. ಅಲ್ಲದೆ ಮಗಳಿಗೆ ನಿನ್ನ ನಿರ್ಧಾರದಿಂದಾಗಿ ನಾವುಗಳು ಸಮಾಜದ ನಿಂದೆಗಳಿಗೆ ಗುರಿಯಾಗುತ್ತೇವೆ ಎನ್ನುತ್ತಾಳೆ. ಅದಕ್ಕೆ ಅಕ್ಕಮಹಾದೇವಿ ಲೋಕದ ನಿಂದೆಗಳನ್ನು ಎದುರಿಸುವೆ, ಇಲ್ಲದಿದ್ದರೆ ಮನೆ-ಊರು ಕರುಳ ಸಂಬಂಧಗಳನ್ನು ಬಿಟ್ಟು ದೇಶಾಂತರ ಹೋಗುತ್ತೇನೆಂದು ಸ್ಪಷ್ಟವಾಗಿ ತಿಳಿಸುತ್ತಾಳೆ.

ಮಹಾದೇವಿಯ ಸೌಂದರ್ಯಕ್ಕೆ ಮರುಳಾದ ರಾಜಶೇಖರನು ತನ್ನ ಸಹೋದರಿ ಕಮಲಾಳ ಸಹಾಯದಿಂದ ಮಹಾದೇವಿಯನ್ನು ಏಕಾಂತದಲ್ಲಿ ಕರೆದು ತನ್ನನ್ನು ಮದುವೆಯಾಗುವಂತೆ ಒತ್ತಾಯಿಸುತ್ತಾನೆ. ಆಗ ಮಹಾದೇವಿ ಇಬ್ಬರು ಭಕ್ತ ಹೃದಯದವರಾದುದರಿಂದ ಗಂಡ - ಹೆಂಡಿರ ಸಂಬಂಧ ಬೇಡ, ನಾವಿಬ್ಬರೂ ಇಂದಿನಿಂದ ಸಹೋದರ - ಸಹೋದರಿ ಎಂಬ ಸಂಬಂಧವನ್ನು ಇಟ್ಟುಕೊಂಡು ನಡೆಯೋಣ ಎಂದು ಹೇಳುತ್ತಾಳೆ. ಈ ಸನ್ನಿವೇಶ ಓದುಗರ ಮನಸ್ಸನ್ನು ಗೆಲ್ಲುತ್ತದೆ. ರಾಜಶೇಖರನ ಪಾತ್ರ ಲೇಖಕರ ಕಲ್ಪನೆಯಾಗಿದೆ.

ಲೌಕಿಕ ಗಂಡನನ್ನು ತಿರಸ್ಕರಿಸುವ ಅಕ್ಕ ಚೆನ್ನಮಲ್ಲಿಕಾರ್ಜುನನ ವಿರಹ ವೇದನೆಯಲ್ಲಿ ಬಳಲುತ್ತಾಳೆ. ಹಗಲು ನಾಲ್ಕು ಜಾವ, ಇರುಳು ನಾಲ್ಕು ಜಾವ, ಲಿಂಗದ ವಿಕಾಳಾವಸ್ಥೆಯಲ್ಲಿ ಮೈಮರೆಯುತ್ತಾಳೆ. ಚೆನ್ನನ ಒಲುಮೆ ನಿರೀಕ್ಷೆಯಲ್ಲಿ ಹಸಿವು ತೃಷೆ, ನಿದ್ರೆಯನ್ನು ಮರೆಯುವ ವಿವರಣೆ ಕಾದಂಬರಿಯಲ್ಲಿ ದೀರ್ಘವಾಗಿದೆ.

ದಿಟ್ಟತನದಿಂದ ಬೆಳೆದು ಯೌವ್ವನಕ್ಕೆ ಕಾಲಿಟ್ಟಾಗ ಅದೇ ರೂಪ ಲಾವಣ್ಯವತಿಯಾದ ಅಕ್ಕನನ್ನು ಕೌಶಿಕ ಮೋಹಿಸುತ್ತಾನೆ. ಆದರೆ ಕೌಶಿಕನನ್ನು ಅಕ್ಕ ತಿರಸ್ಕರಿಸುತ್ತಾಳೆ. ತಾನು ವೀರ ವಿರಾಗಿಣಿಯಾಗಿಯೇ ಉಳಿಯುವ ತನ್ನ ನಿರ್ಧಾರವನ್ನು ವ್ಯಕ್ತಪಡಿಸುತ್ತಾಳೆ. ಈ ನಿರ್ಧಾರದಿಂದ ವಿಚಲಿತಳಾಗುವ ಪರಿಸ್ಥಿತಿಯು ಎದುರಾಗುತ್ತದೆ. ಆಗ ೩ ಷರತ್ತುಗಳನ್ನು ಗುರುಗಳ ಮಾರ್ಗದರ್ಶನದ ಮೇರೆಗೆ ಕೌಶಿಕನಿಗೆ ತಿಳಿಸುತ್ತಾಳೆ. ಕೌಶಿಕನು ಅದಕ್ಕೆ ಒಪ್ಪಿದ ಮೇಲೆ ಅರಮನೆಗೆ ಬರುತ್ತಾಳೆ. ನಿಯಮಗಳಿಗೆ ಬದ್ಧನಾದ ಕೌಶಿಕ ನಂತರ ಅವುಗಳನ್ನು ಮುರಿಯುತ್ತಾನೆ. ಇದರಿಂದ ಜಿಗುಪ್ಸೆ ಹೊಂದಿದ್ದ ಮಹಾದೇವಿಯು ಕೌಶಿಕನನ್ನು ತಿರಸ್ಕರಿಸಿ, ದಿಗಂಬರೆಯಾಗಿ ಅರಮನೆಯಿಂದ ಹೊರಬರುತ್ತಾಳೆ. ಆನಂತರ ಊರಿನಿಂದಲೇ ಹೊರಬಂದು ತನ್ನ ಆಧ್ಯಾತ್ಮ ಸಾಧನೆಗಾಗಿ ಶ್ರೀಶೈಲದತ್ತ ಸಾಗುತ್ತಾಳೆ. ಶ್ರೀಶೈಲದತ್ತ ಪಯಣಿಸುವ ಅಕ್ಕನ ಚಿತ್ರ ಓದುಗರ ಹೃದಯದಲ್ಲಿ ಅಚ್ಚೊತ್ತಿ ನಿಲ್ಲುತ್ತದೆ. ಅಕ್ಕನ ಅಹಂನಿರಸವನ್ನು ಸೊಗಸಾಗಿ ಚಿತ್ರಿಸಿದ್ದಾರೆ.

ಕೌಶಿಕನ ಮುಂದೆ ಅಕ್ಕ ದಿಗಂಬರಳಾಗಿ ನಿಂತ ದಿನವೇ ಅವನಿಗೆ ಜ್ಞಾನೋದಯವಾಗಿರುತ್ತದೆ. ಹಿಂದೂ ಧರ್ಮದಲ್ಲಿ ನನ್ನಂತೆ ಅಸಹ್ಯವಾದರೆ ಜೈನ ಧರ್ಮದಲ್ಲಿ ಅದು ವೈರಾಗ್ಯದ ಸಂಕೇತ, ಪೂಜ್ಯತೆಯ ಪ್ರತೀಕ. ದಿಗಂಬರಳಾದ ಅಕ್ಕನನ್ನು ಕಂಡು ಅವನು "ಅಮ್ಮಾ ನನ್ನ ತಾಯಿ ಇಂತಹ ಕ್ಷಣಗಳಿಗಾಗಿ ಅನ್ನ, ನೀರಿಲ್ಲದೆ ಕೊರಗಿದೆ. ನಿದ್ರೆ-ಶಾಂತಿಗಳಿಲ್ಲದೆ ಬಳಲಿದೆ, ಜೀವಂತ ಶವವಾಗಿ ಚಿಂತಾಗ್ನಿಯಲ್ಲಿ ದಹಿಸಿದೆ. ನನ್ನ ಕರ್ಮವು ಈ ಯೋಗ ಪಾದಗಳ ಪವಿತ್ರ ಸ್ಪರ್ಶದಿಂದ ಇಂದು ಹರಿಯಿತು" (ಅದೇ; ಪು. ೮೩) ಎಂದು ಹೇಳುತ್ತಾನೆ. ಅಕ್ಕನನ್ನು 'ತಾಯಿ' ಎಂದು ಸಂಬೋಧಿಸುವ ಅಂಶ ಯಾವ ಕೃತಿಗಳಲ್ಲಿಯೂ ಇಲ್ಲ. ಇದು ಕಾದಂಬರಿಗಾರ್ತಿಯ ಸೃಷ್ಟಿಯಾಗಿದೆ.

ಅಕ್ಕ ದಿಗಂಬರೆಯಾಗಿ ಉಡುತಡಿಯ ವಲಯವನ್ನು ದಾಟಿ ಒಬ್ಬಳೇ ಮುಂದಿನ ಹಳ್ಳಿಗೆ ಬರುತ್ತಾಳೆ. ನೀರಿನ ದಾಹವನ್ನು ತೀರಿಸಿಕೊಳ್ಳಲು ಬಾವಿಯ ಹತ್ತಿರ ಹೋಗಿ ನೀರು ಕೇಳಿದರೆ ನೀರು ಸೇದುವ ಹೆಂಗಸರು ಇವಳು ಹುಚ್ಚಿ ಇರಬೇಕೆಂದು ಭಾವಿಸುತ್ತಾರೆ. ಊರು ಪ್ರವೇಶಿಸಿದಾಗ ಹುಡುಗರ ಗುಂಪು 'ಹುಚ್ಚಿ' ಎಂದು ಅಟ್ಟಿಸಿಕೊಂಡು ಹೋಗುತ್ತಾರೆ. ತಾನು ಹುಚ್ಚಿ ಅಲ್ಲ ಎಂದು ಹೇಳಿದರೂ ಕಿವಿಗೊಡದೆ ಕಲ್ಲುಗಳನ್ನು ಒಗೆಯುತ್ತಾರೆ. ಅಂದಿನ ರಾತ್ರಿ ಸ್ಮಶಾನದಲ್ಲಿ ಕಳೆಯುವ ಸಂಕಲ್ಪ ಮಾಡಿ ಅಲ್ಲಿಯೇ ಪೂಜಿಸಿ ಲಿಂಗದೇವರಿಗೆ ಪತ್ರಿಯನ್ನು ಏರಿಸುತ್ತಾಳೆ. ಹೊಟ್ಟೆಯ ಹಸಿವಿನಿಂದ ಪತ್ರಿಯನ್ನೇ ತಿನ್ನುತ್ತಾಳೆ. ರಾತ್ರಿಯೆಲ್ಲ ಭಯಂಕರ ನಾಯಿ-ನರಿಗಳ ಕೂಗಾಟ, ಕಚ್ಚಾಟ ಕೇಳಿ ಮಹಾದೇವಿ ಹೆದರಿ, ಚೆನ್ನಮಲ್ಲಿಕಾರ್ಜುನನಿಗೆ ಪೂರ್ಣ ಶರಣು ಹೋಗಿ ಚಳಿ, ಗಾಳಿ, ಎನ್ನದೆ ಧ್ಯಾನದಲ್ಲಿ ಕುಳಿತುಕೊಳ್ಳುತ್ತಾಳೆ. ವಸ್ತ್ರವಿಹೀನಳಾಗಿ ಕಲ್ಯಾಣ ತಲುಪುವುದು ಸಾಧ್ಯವಿಲ್ಲ ಎಂಬ ಅರಿವು ಅಕ್ಕನಿಗೆ ಬಂದು, ತನಗಾಗಿ ಅಲ್ಲದಿದ್ದರೂ ಈ ಲೋಕದ ಕಣ್ಣಿಗಾಗಿ, ತನ್ನ ಸಾಧನೆಯ ಪೂರ್ಣತೆಗಾಗಿ ಸೀರೆ ಉಡುವುದು ಉಚಿತ ಎಂದು ತಿಳಿದು, ಹೆಣದ ಮೇಲಿನ ಸೀರೆಯನ್ನು ಉಡುತ್ತಾಳೆ. ಇದು ಲೇಖಕಿಯ ಕಾಲ್ಪನಿಕ ಸೃಷ್ಟಿಯಾಗಿದೆ.

ಮಹಾದೇವಿಯಕ್ಕ ಭಿಕ್ಷೆ ಬೇಡುವ ಸನ್ನಿವೇಶದಲ್ಲಿ ಕಾದಂಬರಿಕಾರರು ಮಹಾದೇವಿಯ ಮಾನಸಿಕ ವಿಶ್ಲೇಷಣೆಯ ಪೂರ್ಣ ಆಳಕ್ಕಿಳಿದ ಯೋಗಿಣಿ ಮಹಾದೇವಿಯದು ಒಂದು ಪಾತ್ರವಾದರೆ, ಅಹಂ ಮತ್ತೊಂದು ಪಾತ್ರವೇನೋ ಎಂಬಂತೆ ಚಿತ್ರಿಸುತ್ತ ಹೋಗುತ್ತಾರೆ.

ಅಕ್ಕಮಹಾದೇವಿ ಸಾಧನೆಗೆ ಸೌಂದರ್ಯ ಅಡ್ಡಿ ಆಗಬಾರದೆಂದು ತನ್ನ ಮುಖವನ್ನು ಕೆಡಿಸಿಕೊಳ್ಳುವುದಕ್ಕಾಗಿ ಕಲ್ಲಿನಿಂದ ಜಜ್ಜಿಕೊಳ್ಳುತ್ತಾಳೆ. ಹಳ್ಳಕ್ಕೆ ಅರಿವೆ ತೊಳೆಯಲು ಬಂದ ಮಹಿಳೆಯೊಬ್ಬಳು ಅಕ್ಕನನ್ನು ರಕ್ಷಿಸಿ ಹಿತವನ್ನು ನುಡಿಯುತ್ತಾಳೆ. ಆಗ ಮಹಾದೇವಿ ತನ್ನ ನಿರ್ಣಯವನ್ನು ಬದಲಿಸಿಕೊಳ್ಳುತ್ತಾಳೆ. ಹರಿಪುರದ ಚಂದ್ರಪ್ಪಗೌಡ ಮತ್ತು ಅವರ ಹೆಂಡತಿ ಗುಣವತಮ್ಮ ಅಕ್ಕನನ್ನು ಆತ್ಮೀಯತೆಯಿಂದ ಉಪಚರಿಸುತ್ತಾರೆ. "ನಿಂದಕರಿಗೆ ನೀತಿಬೋಧೆ" ಮತ್ತು "ಮಹಾಗ್ರಾಮದಲ್ಲಿ ಮಹಾದೇವಿ" ಎಂಬ ಎರಡು ಸನ್ನಿವೇಶಗಳು ಬರುತ್ತವೆ. ಇನ್ನುಳಿದ ಕಾದಂಬರಿಗಳಲ್ಲಿ ಈ ಸನ್ನಿವೇಶ ಇಲ್ಲ. ಇವು ಸಂಪೂರ್ಣ ಹೊಸದಾದ ಸನ್ನಿವೇಶಗಳಾಗಿವೆ.

ಹಗಲು-ರಾತ್ರಿಯೆನ್ನದೇ, ಗುಡ್ಡ - ಕೊಳ್ಳಗಳೆನ್ನದೇ ಸತತವಾಗಿ ಪ್ರಯಾಣಿಸುತ್ತ ಅಕ್ಕ ನಡೆಯುತ್ತಾಳೆ. ತನ್ನ ನಿಶ್ಚಲ ನಿಷ್ಠೆಯ ಕಷ್ಟಕ್ಕೆ ಒರೆಗಲ್ಲಾಗಿ ಬಂದ ಎಡರು - ತೊಡರುಗಳನ್ನು ಕಷ್ಟ - ಕಾರ್ಪಣ್ಯಗಳನ್ನು ಆತ್ಮಬಲದಿಂದ ಎದುರಿಸಿ ಮುನ್ನಡೆಯುತ್ತಿರುವಂತೆ ಮಹಾದೇವಿಯ ಮಹತ್ವಾಕಾಂಕ್ಷೆ ಪ್ರಜ್ವಲಿಸುತ್ತ ನಡೆಯುತ್ತದೆ. ಏರು ಜವ್ವನದ ತರುಣಿಯೊಬ್ಬಳು ಅದು ದಿಗಂಬರೆಯಾಗಿ ನಡೆದಾಗ ಆ ಅನುಪಮ ಚೆಲುವಿಗೆ ಅಂದಿನ ಸಮಾಜ ತೋರಿದ ಪ್ರತಿಕ್ರಿಯೆ ನಿಜಕ್ಕೂ ಭಯಾನಕ! ಹುಚ್ಚಿಯೆಂದೋ, ಅರೆಮರುಳೆಯೆಂದೋ ಜನ ಬೆನ್ನಟ್ಟಿರಬೇಕು. ಅವಳ ಪೂರ್ವೇತಿಹಾಸವನ್ನು ಅರಿಯದ ಅಲ್ಲಿನ ಜನ ಲೌಕಿಕ ರೀತಿಯ ನೀತಿಗೆ ವಿರುದ್ಧವಾದ ಅವಳ ವರ್ತನೆಗೆ ವಿಪರೀತಾರ್ಥ ಕಲ್ಪಿಸಿ, ಅವಳನ್ನು ಚುಚ್ಚಿ ಚುಚ್ಚಿ ನೋಯಿಸಿದ ಸನ್ನಿವೇಶವನ್ನು ಲೇಖಕಿಯು ಓದುಗರ ಕಣ್ಣು ಒದ್ದೆಯಾಗುವಂತೆ ಚಿತ್ರಿಸಿದ್ದಾರೆ.

ಈ ಪಯಣದ ಹಾದಿಯಲ್ಲಿ ಅನೇಕ ಕಷ್ಟನಿಷ್ಠುರಗಳನ್ನು ಎದುರಿಸುತ್ತಾಳೆ. ಈ ನಿಷ್ಠುರ, ಲೋಕ ಅಪವಾದಗಳನ್ನು ಸಹಿಸಿಕೊಂಡು ತನ್ನ ಪಯಣವನ್ನು ಮುಂದುವರೆಸುತ್ತಾಳೆ. ಈ ಹಾದಿ ಮಧ್ಯದಲ್ಲಿ ಅಕ್ಕನು ಒಬ್ಬಳಾಗಿ ಕೆಲವು ಕಾಲ ಜೀವಿಸುತ್ತಾಳೆ.

ಕಿನ್ನರಿ ಬೊಮ್ಮಯ್ಯ ಅಕ್ಕನನ್ನು ಪರೀಕ್ಷಿಸುವ ಧೈರ್ಯ ತನಗಿಲ್ಲದಿದ್ದರೆ ಗುರುವಿನ ಆಜ್ಞೆಯನ್ನು ಪಾಲಿಸುವ ಉದ್ದೇಶದಿಂದ ಅಕ್ಕನನ್ನು ವಿವಿಧ ರೀತಿಯಲ್ಲಿ ಪ್ರಚೋದಿಸುತ್ತಾನೆ. ಅಕ್ಕಮಹಾದೇವಿ ಕಿನ್ನರಿಯ ಎಲ್ಲ ಪ್ರಶ್ನೆಗಳಿಗೆ ನೇರವಾಗಿ ಉತ್ತರವನ್ನು ಕೊಟ್ಟು ತನ್ನ ವೈರಾಗ್ಯದಲ್ಲಿ ಗೆಲ್ಲುತ್ತಾಳೆ. ಮಹಾದೇವಿಯಕ್ಕನ ಅನುಭಾವದ ಔನ್ನತ್ಯವನ್ನು ಅರಿಯದ ಪ್ರಪಂಚದ ಜನ ಅಂದು ಅಕ್ಕನ ಸತ್ಯಶುದ್ಧ ಚಾರಿತ್ರ್ಯಕ್ಕೆ ವಿಧವಿಧವಾದ ಕಳಂಕಗಳ ಕಟ್ಟು ಕಥೆಗಳನ್ನೆಲ್ಲ ಸೃಷ್ಟಿರಬೇಕು. ಅದನ್ನೆಲ್ಲ ತನ್ನ ಅನುಭವದಿಂದ ಅರಿತ ಅಲ್ಲಮಪ್ರಭು ಪ್ರಪಂಚಕ್ಕೆ ಮಹಾದೇವಿಯ ಮಹೋನ್ನತ ವ್ಯಕ್ತಿತ್ವ, ವೈರಾಗ್ಯ, ಜ್ಞಾನಗಳನ್ನು ಪ್ರತ್ಯಕ್ಷವಾಗಿ ತೋರಿಸಿಕೊಡುವ ಮನೋದ್ದೇಶದಿಂದ, ಲೌಕಿಕರ ಪ್ರತಿನಿಧಿಯಾಗಿ ನಿಂತು ಅವಳನ್ನು ತನ್ನ ನಿಷ್ಠುರ ತಾತ್ವಿಕ ಪರೀಕ್ಷೆಗೆ ಒಡ್ಡುತ್ತಾನೆ. ಆದ್ದರಿಂದ ಅಕ್ಕನ ಪ್ರಕಾಶ ಇನ್ನಷ್ಟು ಬೆಳಗುವಂತೆ ಲೇಖಕಿಯೇ ಬಹಳ ಮನೋಜ್ಞವಾಗಿ ವರ್ಣಿಸಿದ್ದಾರೆ. ಕಾವ್ಯ ಪುರಾಣಗಳಲ್ಲಿಯೂ ಈ ವಿಷಯವಿಲ್ಲ, ಇದು ಲೇಖಕಿಯ ವೈಯುಕ್ತಿಕ ಆಸಕ್ತಿಯಾಗಿದೆ.

ಅಕ್ಕ ತನ್ನ ವ್ಯಕ್ತಿತ್ವ, ಆದರ್ಶಗಳಿಂದ ಎಲ್ಲರ ಮನ್ನಣೆ ಗಳಿಸುತ್ತಾಳೆ. ಬಸವಣ್ಣ, ಸಿದ್ಧರಾಮ, ಚೆನ್ನಬಸವಣ್ಣ, ನೀಲಾಂಬಿಕೆಯರ ಪ್ರೀತಿಗೆ ಪಾತ್ರಳಾಗುತ್ತಾಳೆ. ಇಲ್ಲಿಂದ ಹೊರಟ ಅಕ್ಕನ ಪಯಣದ ಹಾದಿಯಲ್ಲಿ ಸಿಕ್ಕ ಊರುಗಳಲ್ಲಿ ನೀತಿ ಬೋಧನೆಯನ್ನು ಮಾಡುತ್ತಾ ಸಾಗುತ್ತಾಳೆ. ಈ ಸನ್ನಿವೇಶವು ಸಮಾಜ ಸುಧಾರಕಳಾಗಿ ಹೋಗುವಂತೆ ಕಾಣುತ್ತದೆ. ಆಡಂಬರವಾದಿಗಳನ್ನು ಮೂಢನಂಬಿಕೆಯನ್ನು ಖಂಡಿಸುತ್ತಾ, ಬಸವ ಧರ್ಮತತ್ವಗಳನ್ನು ಪ್ರಸಾರ ಮಾಡುತ್ತ ಅವಳು ಸಾಗುತ್ತಾಳೆ.

ಅಕ್ಕನ ಅಂತಿಮ ಘಟ್ಟ ಅದು ಶ್ರೀಶೈಲಕ್ಕೆ ತಲುಪಿ ಅಲ್ಲಿಂದ ಕದಳಿವನದತ್ತ ಸಾಗಿದ್ದು. ಅಲ್ಲಿ ಒಂದು ಪ್ರದೇಶವನ್ನು ಹುಡುಕಿಕೊಂಡು ಅಲ್ಲಿಯೇ ಧ್ಯಾನಾಸಕ್ತಳಾಗುತ್ತಾಳೆ. ಅಕ್ಕ ಶ್ರೀಶೈಲಕ್ಕೆ ಪ್ರವೇಶಿಸಿದಾಗಲೇ ಕೌಶಿಕ ಮತ್ತು ಶಿವಕಾಮಿಯರು ಇವರನ್ನು ಹುಡುಕಿಕೊಂಡು ಬರುತ್ತಾರೆ. ಇವರಿಗೆ ಜ್ಞಾನದೀಕ್ಷೆಯನ್ನು ಕೊಡುತ್ತಾಳೆ. ಒಂದು ದಿನ ಇವರಿಗೂ ತಿಳಿಸದಂತೆ ಕದಳಿಯುತ್ತ ಮಾಯವಾಗುತ್ತಾಳೆ. ಕೊನೆಗೆ ಅಲ್ಲಿಯೇ ಐಕ್ಯಳಾಗುತ್ತಾಳೆಂದು ತಿಳಿಸುತ್ತಾರೆ.

ಕಾದಂಬರಿಕಾರರು ಪ್ರಾರಂಭದಲ್ಲಿಯೇ ಅಕ್ಕನನ್ನು ಅತಿಮನುಷ ಸೃಷ್ಟಿ ಎಂಬಂತೆ ಚಿತ್ರಿಸಿದ್ದಾರೆ. ಇವಳ ಪ್ರತಿಯೊಂದು ಬೆಳವಣಿಗೆಗೂ ಅತಿಮಾನುಷ ಲೇಪನ ತರುತ್ತಿದ್ದಾರೆ ಎನಿಸುತ್ತದೆ. ಬಾಲ್ಯದಲ್ಲಿ ಸಹಜವಾಗಿರಬೇಕಾದ ಯಾವ ಗುಣಗಳು ಅಕ್ಕನಿಗೆ ಇಲ್ಲ. ಅವಳು ಆಡುವ ಆಟಗಳು ಶಿವಲೀಲೆಯಾಗಿ ಕಂಡುಬಂದಿದೆ. ಲೇಖಕಿಗೆ, ಅಕ್ಕನ ಐಕ್ಯವನ್ನು ಅತಿಮಾನುಷ ಕಲ್ಪನೆಯಲ್ಲಿಯೇ ತರುತ್ತಾರೆ. ಅವಳ ಜನನವನ್ನು 'ಕಾರಣಿಕ ಕನ್ಯೆ' ಎಂಬ ಹಿನ್ನೆಲೆಯಲ್ಲಿ ಚಿತ್ರಿಸುತ್ತಾರೆ. ಕಾದಂಬರಿಯ ಆದಿ ಮತ್ತು ಅಂತ್ಯಗಳನ್ನು ಅವಾಸ್ತವಿಕ ನೆಲೆಯಿಂದಲೇ ನೋಡಿದ್ದಾರೆ. ಇಲ್ಲೆಲ್ಲ ಕಾದಂಬರಿಕಾರರು ಅಕ್ಕ ಐತಿಹಾಸಿಕ ವ್ಯಕ್ತಿ ಎಂಬುದನ್ನು ಮರೆತಂತೆ ಕಾಣುತ್ತದೆ. ಜೊತೆಗೆ ಅಕ್ಕ ಬದುಕಿದ್ದು ೧೨ನೇ ಶತಮಾನದ ಶರಣ ಪರಿಸರದಲ್ಲಿ. ಆ ಸಮಾಜದ ಏಳು-ಬೀಳುಗಳು, ಅಲ್ಲಿನ ರಾಜಕೀಯ ಸ್ಥಿತಿಗತಿಗಳು, ಮತಗಳ ಮೇಲಾಟಗಳನ್ನು ಕಾದಂಬರಿಯಲ್ಲಿ ಕಟ್ಟಿಕೊಡುವ ಪ್ರಯತ್ನವನ್ನು ಕಾದಂಬರಿಕಾರರು ಮಾಡಿಲ್ಲ.

ಅಕ್ಕನ ಜೀವನ ವ್ಯಕ್ತಿತ್ವವನ್ನು ಎಳೆ ಎಳೆಯಾಗಿ ವಿವರಿಸುವ ಆಶಯವನ್ನು ಲೇಖಕರು ಹೊಂದಿದ್ದಾರೆ. ಪ್ರತಿಯೊಂದು ಸನ್ನಿವೇಶ ಪಾತ್ರಕ್ಕೂ ಹೆಚ್ಚಿನ ಮಹತ್ವವನ್ನು ಕೊಟ್ಟು ಜೀವ ತುಂಬುವ ಪ್ರಯತ್ನ ಮಾಡಿದ್ದಾರೆ. ಮಾತೆ ಮಹಾದೇವಿಯವರು ಮಧ್ಯಕಾಲೀನ ಕಾವ್ಯಗಳಿಂದ ಪ್ರಭಾವಿತರಾಗಿ ಅಕ್ಕನ ಮಹಾಜೀವನವನ್ನು ಕಾದಂಬರಿಯ ರೂಪದಲ್ಲಿ ರಚಿಸಿದ್ದಾರೆ. ಅಕ್ಕನನ್ನು ದಿಟ್ಟತನ, ಛಲವಾದಿತನ, ವಿಮರ್ಶೆ ಪ್ರಜ್ಞೆ ಇರುವ ಪ್ರಗತಿಪರ ಮಹಿಳೆಯಂತೆ ಚಿತ್ರಿಸಿದ್ದಾರೆ. ಇದಕ್ಕೆ ಪ್ರತಿಪಾತ್ರವಾದ ಕೌಶಿಕನ್ನು ರಾಜನಿಗೆ ಇರಬಹುದಾದ ರಾಗ, ಭೋಗ, ಲಾಲಾಸೆಯಿರುವ ವ್ಯಕ್ತಿಯನ್ನಾಗಿ ಚಿತ್ರಿಸಿದ್ದಾರೆ. ಅಕ್ಕಮಹಾದೇವಿ ಕೇಂದ್ರಪಾತ್ರವಾದರೆ ಉಳಿದೆಲ್ಲ ಪಾತ್ರಗಳು ಪೋಷಕಪಾತ್ರಗಳಾಗಿವೆ.

ಮಾತೆ ಮಹಾದೇವಿ ಅವರು ಅನಾವಶ್ಯಕ ಸಂಗತಿಗಳನ್ನು ಕಾದಂಬರಿಗಳಲ್ಲಿ ತಂದು ಹೆಚ್ಚಾಗಿ ಕಾಲ್ಪನಿಕ ದೃಷ್ಟಿಯಲ್ಲಿ ಬರೆದಿರುವುದು ಕಂಡುಬರುತ್ತದೆ. ಕೌಶಿಕನನ್ನು ಕಾಮುಕ

ದೃಷ್ಟಿಯಲ್ಲಿ ಚಿತ್ರಿಸಿ ಕೊನೆಗೆ ಅವನಲ್ಲಿ ಒಳ್ಳೆಯ ಗುಣವನ್ನು ಗುರುತಿಸಲು ಪ್ರಯತ್ನಿಸಿದ್ದಾರೆ. ಕೌಶಿಕ ಅಕ್ಕನು ಹಾಕಿದ ಮೂರು ಕರಾರುಗಳನ್ನು ಉಲ್ಲಂಘನೆ ಮಾಡಿದಾಗ ಅಕ್ಕ ಅರಮನೆಯಿಂದ ನಗ್ನವಾಗಿ ಹೊರಹೋಗುತ್ತಿರುವಾಗ 'ತಾಯಿ ನನ್ನನ್ನು ಕ್ಷಮಿಸು ನಿನ್ನನ್ನು ಅರ್ಥ ಮಾಡಿಕೊಳ್ಳದೇ ದುಡುಕಿದೆ. ನನಗೆ ನಿನ್ನ ಸೇವೆ ಮಾಡುವ ಅವಕಾಶ ಕೊಡು' ಎಂದು ಬೇಡುವ ಸನ್ನಿವೇಶದಲ್ಲಿ ಲೇಖಕರು ಕೌಶಿಕನ ಪರಿವರ್ತನೆಯನ್ನು ತೋರಿಸಿದ್ದಾರೆ. ಮಾತೆ ಮಹಾದೇವಿಯವರು ಕೆಲವೊಂದು ವಿವರಗಳಲ್ಲಿ, ಸನ್ನಿವೇಶಗಳಲ್ಲಿ ಸೂಕ್ತ ಬದಲಾವಣೆಗಳನ್ನು ಮಾಡಿಕೊಂಡಿದ್ದಾರೆ.

ಕಾದಂಬರಿಯು ಅಕ್ಕನ ಲೌಕಿಕ ಬದುಕಿನ ಕಥೆಯನ್ನು ಬಿಚ್ಚಿಕೊಡುತ್ತದೆ. ಅಕ್ಕನನ್ನು ಆಧ್ಯಾತ್ಮಿಕ ರಂಗದಲ್ಲಿ ಚಿತ್ರಿಸುತ್ತ ಅವಳನ್ನು ಕಾದಂಬರಿಯ ಮುಖ್ಯ ಪಾತ್ರವಾಗಿಸಿಕೊಂಡು ಮುಂದೆ ಸಾಗುತ್ತದೆ. ಲೇಖಕರು ಅಕ್ಕಮಹಾದೇವಿಯನ್ನು ಕೆಲವು ಕಡೆ ಕ್ರಾಂತಿಕಾರಿಯಂತೆ ಚಿತ್ರಿಸಿದ ಕಾರಣ ಉಗ್ರ ಹೋರಾಟದ ಮಾತುಗಳನ್ನಾಡುವುದರಿಂದ ಮಹಾದೇವಿಯ ಪಾತ್ರ ತೀರ ಅಸಹಜವಾಗಿದೆ. ಅಕ್ಕಮಹಾದೇವಿಯನ್ನು ಒಬ್ಬ ಪ್ರಗತಿಶೀಲ ಹೋರಾಟಗಾರಳನ್ನಾಗಿ ಮಾಡಹೊರಟ ಮಾತೆ ಮಹಾದೇವಿ ಅವರು ಅಸಹಜತೆಯ ದೋಷಕ್ಕೆ ಕಾರಣರಾಗಿದ್ದಾರೆ. ಪಾವರ್ತಿಯ ಪ್ರತಿರೂಪವೇ ಮಹಾದೇವಿ. ಈ ಜಗತ್ತಿನ ಜೈವಿಕ ವಸ್ತುಗಳ ಚಲನೆಯ ಹಿಂದೆ ಯಾವುದೋ ಒಂದು ದಿವ್ಯಶಕ್ತಿ ಇದೆ ಎಂಬ ಕಲ್ಪನೆಯನ್ನು ಅವಲಂಬಿಸಿ ತೀರಾ ವಾಸ್ತವವೂ ಅಲ್ಲದೆ ಅತಿ ಅಲೌಕಿಕವೂ ಅಲ್ಲದ ಮಹಾದೇವಿಯ ಜನನದ ಹಿನ್ನೆಲೆಯಲ್ಲಿ 'ತರಂಗಿಣಿ' ಕಾದಂಬರಿಯಲ್ಲಿ ಲೇಖಕರು ಕಲ್ಪಿಸಿದ್ದಾರೆ. ಪ್ರಸ್ತುತ ಕಾದಂಬರಿಯಲ್ಲಿ ಅಕ್ಕಮಹಾದೇವಿಯನ್ನು ಏಕಕಾಲಕ್ಕೆ ಸ್ತ್ರೀವಾದಿ ನೆಲೆಯಾಗಿ ಮತ್ತು ದೈವಿಕ ನೆಲೆಯಲ್ಲೂ ಚಿತ್ರಿಸಲಾಗಿದೆ.

'ಗಿರಿಯ ನವಿಲು', 'ಕದಳಿಯ ಕರ್ಪೂರ', 'ತರಂಗಿಣಿ' ಈ ಮೂರು ಕಾದಂಬರಿಗಳು ತಮ್ಮದೇ ಆದ ವಿಶಿಷ್ಟತೆ, ವಿಭಿನ್ನ ದೃಷ್ಟಿಕೋನ ಹಾಗೂ ಪಾತ್ರ ಪರಿಪೋಷಣೆಯಿಂದ ಅನ್ಯೂನವಾಗಿ ನಿಲ್ಲುತ್ತವೆ. ಗಿರಿಯನವಿಲು ಪ್ರಗತಿಶೀಲ ನೆಲೆಯನ್ನು ಎತ್ತಿ ತೋರಿಸಿದರೆ, ಕದಳಿಯಕರ್ಪೂರ ವೈಚಾರಿಕ ನೆಲೆಯನ್ನು ಹಾಗೂ ತರಂಗಿಣಿ ಧಾರ್ಮಿಕ ಮತ್ತು ಸ್ತ್ರೀವಾದಿ ನೆಲೆಯನ್ನು ಎತ್ತಿತೋರಿಸುತ್ತದೆ. ಒಟ್ಟಿನಲ್ಲಿ ಅಕ್ಕಮಹಾದೇವಿಯ ಪಾರಮಾರ್ಥಿಕ ಜಿಜ್ಞಾಸೆ, ಆಧ್ಯಾತ್ಮಿಕ ಸಾಧನೆ, ಭಕ್ತಿ, ಪೂಜೆ, ಅವಳ ವೈಚಾರಿಕ ನಡೆ. ಇವೆಲ್ಲವುಗಳನ್ನು ಕಾದಂಬರಿಕಾರರು ತಮ್ಮ ಕಲ್ಪನೆಯನ್ನು ಬೆರೆಸಿ, ಕೆಲವೊಂದು ವಿವರಣೆಗಳಲ್ಲಿ ಸೂಕ್ತ ಬದಲಾವಣೆಗಳನ್ನು ಮಾಡಿಕೊಂಡು ಕಾದಂಬರಿಗಳನ್ನು ರಚಿಸಿದ್ದಾರೆ.

### ದಾನಮ್ಮ

ಗುಡ್ಡಾಪುರದ ದಾನಮ್ಮ ಹನ್ನೆರಡನೇ ಶತಮಾನದಲ್ಲಿ ಜೀವಿಸಿದ್ದ ಪೂರ್ವ ಶಿವಶರಣೆ. ಈಕೆಯನ್ನು ಕೇಂದ್ರಪಾತ್ರವಾಗಿಸಿಕೊಂಡು ಶಾಂತಾದೇವಿ ಮಾಳವಾಡ ಅವರು 'ದಾನದಾಸೋಹಿ ದಾನಮ್ಮ' ಎಂಬ ಐತಿಹಾಸಿಕ ಕಾದಂಬರಿಯನ್ನು ರಚಿಸಿದ್ದಾರೆ. ಲೌಕಿಕ ಅಲೌಕಿಕಗಳೆರಡರಲ್ಲೂ ಬಾಳಿ ಶರಣ ಧರ್ಮದಂತೆ ಪರಹಿತಕ್ಕಾಗಿ ಬದುಕಿದ ಮಹಾಸಾಧ್ವಿ ದಾನಮ್ಮ. ಧರ್ಮ ಮತ್ತು ಆಧ್ಯಾತ್ಮವೇ ಈ ಕಾದಂಬರಿಯ ಕೇಂದ್ರ ವಸ್ತು.

“ಅನೇಕರು ತಮ್ಮ ರಾಜ್ಯಕೋಶಗಳನ್ನು ದಾನ ಮಾಡಿದ್ದಾರೆ. ಆದರೆ ತಮ್ಮ ತ್ರಿಕರಣಗಳನ್ನೇ ದಂಡಿಸಿ ತಮ್ಮ ತಪಸ್ಸಿನ ಶಕ್ತಿಯನ್ನು ದಾನ ಮಾಡಿದವರು ವಿರಳ. ಈ ವಿರಳ ಸಂಖ್ಯೆಯಲ್ಲಿ ಬರುವ ಈ ಚರಿತ್ರ ನಾಯಕಿ ಲಿಂಗಮ್ಮ ಮಾತ್ರ. ತನ್ನ ತಪಸ್ಸಿನ ಶಕ್ತಿಯನ್ನೆಲ್ಲ ಆರ್ತರ ದುಃಖ ನಿವಾರಣೆಗೆ ಧಾರೆಯೆರೆದು ವೀರಶೈವ ನಿರ್ಣಯದ ಪರಮಾವತಾರ ಶ್ರೀ ಬಸವಣ್ಣನವರಿಂದ ‘ದಾನಮ್ಮ’ ಎಂಬ ನಾಮಧೇಯ ಪಡೆದುದು ಆಕೆಯ ಅಸಾಮಾನ್ಯ ವ್ಯಕ್ತಿತ್ವಕ್ಕೆ ನಿದರ್ಶನವಾಗಿದೆ” (ಅದೇ; ಪು. ೫) ಎಂದು ಲೇಖಕಿಯೇ ಹೇಳಿದ್ದಾರೆ.

ಸುಶೀಲರೂ ಭಕ್ತಿಸಂಪನ್ನರೂ ಆದ ಶಿರಸಮ್ಮ ಅನಂತರಾಯ ದಂಪತಿಗಳಿಗೆ ಹಲವಾರು ಜನ್ಮಗಳ ಪುಣ್ಯದಿಂದ ಮಗುವಾಗಿ ಜನಿಸಿದವಳೇ ಲಿಂಗಮ್ಮ. ಈಕೆಯ ಜನನವು ದೈವೀ ಪ್ರೇರಿತ ಎಂದು ತಿಳಿದುಬರುತ್ತದೆ. ಗುಂಗುರು ಕೂದಲಿನ, ಗೋಧಿ ಕೆಂಪು ಬಣ್ಣದ ಮಗು ಬಿದಿಗೆಯ ಚಂದಿರನಂತೆ ಬೆಳೆದು, ತನ್ನ ಬಾಲಲೀಲೆಗಳಿಂದ ಹೆತ್ತವರ ಮನವನ್ನು ಮುದಗೊಳಿಸಿದ್ದಳಲ್ಲದೆ ಅವರ ಜೀವದ ಜೀವವಾದಳು. ಈ ದಂಪತಿಗಳು ಉಮರಾಣಿಯ ವೀರಮಲ್ಲಯ್ಯನ ಪರಮಭಕ್ತರಾಗಿದ್ದರು.

‘ಬೆಳೆಯುವ ಸಿರಿ ಮೊಳಕೆಯಲ್ಲಿ’ ಎನ್ನುವ ಹಾಗೆ ಹೆತ್ತವರ ಧಾರ್ಮಿಕ ಮನೋಭಾವ ಪುಟ್ಟ ಲಿಂಗಮ್ಮಳ ಮೇಲೆ ಸಾಕಷ್ಟು ಪ್ರಭಾವ ಬೀರಿತು. ತನ್ನ ಓರಗೆಯ ಮಕ್ಕಳೆಲ್ಲ ಗೊಂಬೆ, ಒಲೆ ಮುಂತಾದ ಆಟಿಗೆ ಸಾಮಾನುಗಳನ್ನು ತೆಗೆದುಕೊಂಡು ಆಡುತ್ತಿದ್ದರೆ ಲಿಂಗಮ್ಮ ಲಿಂಗಪೂಜೆಯ ಆಟವನ್ನಾಡುತ್ತಿದ್ದಳು. ಲಿಂಗಮ್ಮನಿಗೆ ಬಾಲ್ಯದಿಂದಲೂ ಓಣಿಯಲ್ಲಿರುವ ಅಸಹಾಯಕರಿಗೆ ಸಹಾಯ ಮಾಡುವುದು, ರೋಗಿಗಳಿಗೆ ಶುಶ್ರೂಷೆ ಮಾಡುವುದು, ಯಾರಾದರೂ ಭಿಕ್ಷುಕರು, ಜಂಗಮರು ಮನೆಗೆ ಬಂದರೆ ಕೈಗೆ ಸಿಕ್ಕ ಅಕ್ಕಿ, ಜೋಳ, ರೊಟ್ಟಿ ಮುಂತಾದವುಗಳನ್ನು ನೀಡುವುದು ಹವ್ಯಾಸವಾಗಿತ್ತು. ಬಾಲಕಿ ಲಿಂಗಮ್ಮನ ಬಾಲ್ಯದಲ್ಲಿಯ ಆಕೆಯ ದಾನ ಗುಣಗಳನ್ನು ಎತ್ತಿತೋರಿಸುವ ಸನ್ನಿವೇಶಗಳನ್ನು ಲೇಖಕಿ ಬಹಳ ಹೃದಯಂಗಮವಾಗಿ ಚಿತ್ರಿಸಿದ್ದಾರೆ.

ಲೇಖಕಿ ಇತಿಹಾಸ ಮತ್ತು ಕಲ್ಪನೆಯೊಂದಿಗೆ ಕೃತಿಯನ್ನು ರಚಿಸಿದರೂ ಇತಿಹಾಸಕ್ಕೆ ನ್ಯಾಯವೊದಗಿಸಿದ್ದಾರೆ. ಬಸವಣ್ಣನವರ ಕಿರಿಯ ಸಮಕಾಲೀನಳಾದ ದಾನಮ್ಮ ಬಸವಣ್ಣನ ನಂತರವೂ ಅವರ ಕಾರ್ಯವನ್ನು ಮುಂದುವರೆಸಿಕೊಂಡು ಹೋದವಳು.

ವರದಾನಿ ಗುಡ್ಡವ್ವೆಯ ಕಾಲದ ಬಗ್ಗೆ ನಿಖರವಾಗಿ ಹೇಳಲು ಬರುವುದಿಲ್ಲ. ಯಾಕೆಂದರೆ ಕವಿಗಳ ಕಾವ್ಯಗಳಲ್ಲಿ, ಶಾಸನಗಳಲ್ಲಿ, ಐತಿಹ್ಯಗಳಲ್ಲಿ ಈ ಕುರಿತು ಭಿನ್ನಾಭಿಪ್ರಾಯಗಳಿವೆ. ವರದಾನಿ ಗುಡ್ಡವ್ವೆಯ ಬಗ್ಗೆ ಯಾವುದೇ ಶರಣರ ವಚನಗಳಲ್ಲಿ ಉಲ್ಲೇಖವಿಲ್ಲ. ದಾನಮ್ಮ ಬರೆದ ಯಾವುದೇ ವಚನಗಳು ಸಹ ಸಿಗುವುದಿಲ್ಲ. ಆದರೆ ಶಿವಕವಿಗಳ ಕಾವ್ಯಗಳಲ್ಲಿ ಗುಡ್ಡವ್ವೆಯ ಬಗ್ಗೆ ನಮಗೆ ಉಲ್ಲೇಖಗಳು ದೊರೆಯುತ್ತವೆ.

ಕಲ್ಯಾಣದಿಂದ ಬಂದು ಉಮರಾಣಿಯಲ್ಲಿ ನೆಲೆಸಿದ ಶ್ರೀವೀರಯ್ಯ ಶರಣರಿಂದ ಲಿಂಗದೀಕ್ಷೆ ಪಡೆದು ಲಿಂಗಮ್ಮ ಕನ್ನಡ ಓದು-ಬರಹ ಕಲಿತಳು. ಭಕ್ತಿಗೀತೆ, ವಚನ ಸಂಗೀತವನ್ನು ತನ್ನ ಮಧುರ ಕಂಠದಿಂದ ಭಾವಪೂರ್ಣವಾಗಿ ಹಾಡುತ್ತಿದ್ದಳು. ವಯಸ್ಸಿಗೆ ಮೀರಿದ ಬೆಳವಣಿಗೆ

ಲಿಂಗಮ್ಮನದು, ಜೊತೆಗೆ ಭಕ್ತಿ, ಜ್ಞಾನಗಳೂ ಬೆಳೆಯುತ್ತಿದ್ದವು. ಅಂತರಂಗ ಶಾಂತ ಸಾಗರವಾಗಿ, ದೈವೀ ಆನಂದದಲ್ಲಿ ಇರುತ್ತಿದ್ದಳು.

ಲಿಂಗಮ್ಮನ ಅಂತರಂಗದ ಅಭೀಪ್ಸೆಯನ್ನು ತೀರಿಸುವುದಕ್ಕಾಗಿ ಹೆತ್ತವರು ಸೋಲಾಪುರಕ್ಕೆ ಸಿದ್ದರಾಮೇಶ್ವರರ ದರ್ಶನ ಪಡೆಯಲು ಬರುತ್ತಾರೆ. ಲಿಂಗಮ್ಮನ ಅಲೌಕಿಕ ಶಕ್ತಿಯನ್ನು ತಮ್ಮ ಯೋಗದೃಷ್ಟಿಯಿಂದ ತಿಳಿದ ಸಿದ್ಧರಾಮರು ಇವಳು ಸಾಮಾನ್ಯ ಸ್ತ್ರೀಯಲ್ಲ. ಅಕ್ಕನಾಗಮ್ಮ, ಗಂಗಾಂಬಿಕೆ, ನೀಲಾಂಬಿಕೆ, ಅಕ್ಕಮಹಾದೇವಿಯರಂತೆ ಮುಕ್ತವನಿತೆಯರ ಸಾಲಿನಲ್ಲಿ ನಿಲ್ಲುವ ಸ್ತ್ರೀರತ್ನ ಎಂದು ತಿಳಿದರು. ಸಿದ್ಧರಾಮರು ಲಿಂಗಮ್ಮನ ಪುಟ್ಟ ಹೃದಯದಲ್ಲಿ ಬೆಟ್ಟದಷ್ಟು ಸೇವಾಭಾವನೆ ಇರುವುದನ್ನು ಕಂಡು ಅವಳನ್ನು ನಿರಾಶೆಗೊಳಿಸದೆ 'ದೃಷ್ಟಿಯೋಗ' ಮತ್ತು 'ಅಮನಸ್ಕಯೋಗ'ಗಳ ರಹಸ್ಯ ತಿಳಿಸಿದರು. ಅಲ್ಲದೆ ಲಿಂಗಮ್ಮಳಿಗೆ ಬಾಳಿನಲ್ಲಿ ಸಾಧಿಸಬೇಕಾದ ಸಿದ್ಧಿಗೆ ಮಾರ್ಗದರ್ಶನ ಮಾಡಿ, ಹೃದಯ ತುಂಬಿ ಹರಸಿದರು.

ಲಿಂಗಮ್ಮನ ವ್ಯಕ್ತಿತ್ವದ ಬೆಳವಣಿಗೆಗೆ ವೀರಯ್ಯನವರು, ಸಿದ್ಧರಾಮ, ಮೋಳಿಗೆಯ ಮಾರಯ್ಯ ಮುಂತಾದವರು ಕಾರಣವಾಗಿರುವುದನ್ನು ಹಲವಾರು ಘಟನೆಗಳಿಂದ ತಿಳಿಯಬಹುದಾಗಿದೆ.

ಲಿಂಗಮ್ಮ ಜನರ ಹಿತಕ್ಕಾಗಿ 'ದೃಷ್ಟಿಯೋಗ'ವನ್ನು ಕರಗತ ಮಾಡಿಕೊಳ್ಳಲು ಮನೆಯನ್ನು, ಹೆತ್ತವರನ್ನು, ಹುಟ್ಟಿದ ಊರನ್ನು ತೊರೆದು ಬಸವಾದಿ ಶರಣರಿದ್ದ ಕಲ್ಯಾಣಕ್ಕೆ ಪಯಣ ಬೆಳೆಸುತ್ತಾರೆ. ಅಲ್ಲಿ ಸಾಧನೆಗೈಯುತ್ತಿರುವಾಗ ಆಕೆಗೆ 'ಲಿಂಗಾಂಗಯೋಗ' ಸಿದ್ಧಿಸುತ್ತದೆ. ಕಾದಂಬರಿಕಾರರು ಆಕೆಯ ಆಧ್ಯಾತ್ಮ ಸಾಧನೆಯ ಕುರಿತು ಈ ರೀತಿ ಹೇಳಿದ್ದಾರೆ. "ಯೋಗ ಸಾಧನೆಯಿಂದ ಚಿತ್ತ ವೃತ್ತಿಗಳು ನಿರೋಧವಾದೊಡನೆ ಆತ್ಮ ಸಾಕ್ಷಾತ್ಕಾರವಾಗುತ್ತದೆ. ಈ ಅಘಟಿತ ಘಟನಾ ಸಾಮರ್ಥ್ಯವುಂಟಾದೊಡನೆ ದಾನಮ್ಮ ತನ್ನ ಕ್ರಿಯಾಸಿದ್ಧಿಯಿಂದ, ಆರ್ತಭಕ್ತರ ದುಃಖ-ದುಮ್ಮಾನಗಳನ್ನು ದೂರ ಮಾಡುವುದು. ಕರ್ಣಾಕರ್ಣಿಯಿಂದ ಬಸವಣ್ಣನವರಿಗೆ ವಿದಿತವಾಗಿ ಮುಂದೆ ಲಿಂಗಮ್ಮ ಅವರ ಮಾನಸಪುತ್ರಿಯೇ ಆಗುತ್ತಾಳೆ" (ಅದೇ; ಪು. ೬).

ಮನೆಯಲ್ಲಿ ಹೇಳದೆ ಕಲ್ಯಾಣಕ್ಕೆ ಹೋದ ಲಿಂಗಮ್ಮನ ಬಗ್ಗೆ ಅಂದಿನ ಸಮಾಜದ ಜನತೆಯ ಭಾವನೆಗಳ ನೈಜ ಚಿತ್ರಣವನ್ನು ಲೇಖಕಿ ಸೊಗಸಾಗಿ ನಿರೂಪಿಸಿದ್ದಾರೆ.

ಕಲ್ಯಾಣಕ್ಕೆ ಬಂದ ಲಿಂಗಮ್ಮ ನೇರವಾಗಿ ಶಿವಶರಣರ ರಂಗದಲ್ಲಿ ಕೂಡಲಿಲ್ಲ. ಕೆಲಕಾಲ ಎಲೆಮರೆಯ ಕಾಯಿಯಂತೆ ಗುಪ್ತ ಭಕ್ತಿಯಿಂದ ಶರಣರ ಜೀವನ ವಿಧಾನವನ್ನು ತಿಳಿಯಬಯಸಿದಳು. ಕ್ಷಮೆ, ನಿರಹಂಕಾರ, ಸದ್‌ವಿವೇಕ, ಸತ್ಯ, ವಿಶ್ವಾಸ, ದಿವ್ಯಜ್ಞಾನ, ನಿರ್ಭ್ರಾಂತಿ, ನಿರ್ವಿಷಯಮೌನ, ಶುದ್ಧ; ಅಂತಃಕರಣದಿಂದ ಮಾಡುವ ಸೇವೆ ಇವೆಲ್ಲವುಗಳನ್ನು ಲಿಂಗಮ್ಮ ತನ್ನ ದಿವ್ಯಬಾಳಿನಲ್ಲಿ ಬೆಳೆಸಿಕೊಂಡು ಒಂದೆಡೆಯಲ್ಲಿ ಎರಕ ಹೊಯ್ದಂತೆ ಅಳವಡಿಸಿಕೊಂಡಿದ್ದಳು.

"ಯಾವುದೇ ತತ್ವಕ್ಕೆ ಸಾರ್ಥಕತೆ ಬರುವುದು ಆ ಜಿಜ್ಞಾಸೆಯನ್ನು, ಆದರ್ಶವನ್ನು ಬದುಕಿನಲ್ಲಿ ಸಾಧಿಸಿತೋರಿಸುವ ವ್ಯಕ್ತಿಗಳಿಂದ, ಇಲ್ಲವಾದರೆ ತತ್ವಧರ್ಮಗಳು ಪುಸ್ತಕದಲ್ಲಿ ಮಾತ್ರ ಉಳಿಯುತ್ತವೆ. ವಸ್ತುಪ್ರದರ್ಶನದ ಸಾಮಗ್ರಿಯಾಗುತ್ತದೆ. ಶರಣರ ತಾತ್ವಿಕ ಆದರ್ಶಗಳು ಹಾಗಾಗದೇ ಜೀವಂತ ಶಕ್ತಿಯಾಗಿ ಉಳಿದುಬಂದಿರುವುದಕ್ಕೆ ಉದಾಹರಣೆಗಳನ್ನು ಇತಿಹಾಸದುದ್ದಕ್ಕೂ ಕಾಣುತ್ತೇವೆ"

(ರಾಂಪೂರ ಬಿ.ಜಿ.; ೨೦೦೩; ಪು. ೧೨೧) ಎಂಬ ತಿಪ್ಪೇರುದ್ರಸ್ವಾಮಿಯವರ ಅಭಿಪ್ರಾಯ ಪ್ರಸುತ್ತ ದಾನಮ್ಮನ ಚರಿತ್ರೆಗೆ ಒಳ್ಳೆಯ ನಿದರ್ಶನವಾಗಿದೆ.

ಕಾದಂಬರಿಯಲ್ಲಿ ಚಿತ್ರಿತವಾದಂತೆ, ದುಃಖತಪ್ತ ಜೀವಿಗಳಿಗೊಂದು ಆಶಾಜ್ಯೋತಿಯಾಗಿರುವ ಲಿಂಗಮ್ಮ, ತ್ರಿವಿಧ ದಾಸೋಹದಿಂದ ಬಂದ ತಮ್ಮ ಶಿವಯೋಗ ಶಕ್ತಿಯನ್ನೆಲ್ಲ ಭಕ್ತರ ಕಂಬನಿ ಒರೆಸುವಲ್ಲಿ ಧಾರೆ ಎರೆಯುತ್ತಿದ್ದಳು. 'ದಯವೇ ಧರ್ಮದ ಮೂಲ'ವೆಂಬ ಬಸವಣ್ಣನವರ ಹೇಳಿಕೆಯಂತೆ ಲಿಂಗಮ್ಮ ದಯೆಯ ಸಾಕಾರಮೂರ್ತಿ ಧರ್ಮ ಸ್ವರೂಪಿಯಾಗಿದ್ದಳು ಎಂಬುದು ತಿಳಿದುಬರುತ್ತದೆ.

ಮಾನವೀಯ ಗುಣ ಮೌಲ್ಯಗಳು ದಾನಮ್ಮನಲ್ಲಿ ಹೇಗೆ ಇದ್ದವು ಎಂಬುದನ್ನು ಶಾಂತಾದೇವಿ ಮಾಳವಾಡ ಅವರು ಬಹಳ ಸೊಗಸಾಗಿ ಎತ್ತಿತೋರಿಸಿದ್ದಾರೆ.

ಲಿಂಗಮ್ಮನ ಮಹಿಮೆಯನ್ನು ಇತರರಿಂದ ಕೇಳಿ ತಿಳಿದ ಬಸವಣ್ಣನವರು ಲಿಂಗಮ್ಮನನ್ನು ಕಂಡು 'ನೀನು ಜನರ ಇಷ್ಟಾರ್ಥ ಪೂರೈಸುವ ಕಾಮಧೇನು, ಕಲ್ಪತರುವಾಗಿರುವಿ, ನಿನ್ನಂತೆ ಶಿವಯೋಗ ಸಾಧನೆಯನ್ನೇ ದಾನಗೈದವರು ಕಲ್ಯಾಣದಲ್ಲಿ ಇಲ್ಲ. ಇಂದಿನಿಂದ ನೀನು ಲಿಂಗಮ್ಮನಲ್ಲ, ದಾನದಾಸೋಹಿ ದಾನಮ್ಮಳೆಂದು ಕೀರ್ತಿವಂತಳಾಗು' ಎಂದು ಹರಸಿದರು. ಅಂದಿನಿಂದ ಲಿಂಗಮ್ಮ ದಾನಮ್ಮಳಾದಳು, ದೀನ ದುರ್ಬಲರಿಗೆ ವರದಾನಿಯಮ್ಮಳಾದಳು.

ಲಿಂಗಮ್ಮ ತನ್ನಲ್ಲಿಗೆ ಬಂದು ಗುಣ ಹೊಂದಿದ್ದ ಅನೇಕ ಜನ ಮಹಿಳೆಯರಿಗೆ ಲಿಂಗಧಾರಿಗಳಾಗಬೇಕೆಂದು ಇಚ್ಛೆಯನ್ನು ವ್ಯಕ್ತಪಡಿಸಿದಾಗ, ಅಂಥವರಿಗೆ ಮಹಿಳೆಯರು ಲಿಂಗದೀಕ್ಷೆ ಕೊಡಬಹುದೆ? ಅವರಿಗೆ ಆ ಅಧಿಕಾರವಿದೆಯೇ? ಎಂಬ ತನ್ನಲ್ಲಿಯ ಸಂಶವನ್ನು ಅಕ್ಕನಾಗಮ್ಮನವರ ಎದುರಿನಲ್ಲಿಟ್ಟಾಗ, ಅವರು ಲಿಂಗಧಾರಣ ಮಾಡಲು ಧೈರ್ಯ ಮತ್ತು ಪ್ರೋತ್ಸಾಹವನ್ನು ಕೊಟ್ಟರು. ಅಂತೆಯೇ ಲಿಂಗದೀಕ್ಷೆ ನೀಡಿದ ಪ್ರಥಮ ಮಹಿಳೆ ದಾನಮ್ಮ ಎಂದು ಕಾದಂಬರಿಯಿಂದ ತಿಳಿದುಬರುತ್ತದೆ. ಧರ್ಮರಕ್ಷಣೆಯ ಪ್ರಸಂಗ ಬಂದಾಗ, ಖಡ್ಗ ಪಾಣಿಯಾಗಿ, ವೀರಗಣಾಚಾರವೆಸಗಿ, ವೀರಶೈವವನ್ನು ನೆಲೆಗೊಳಿಸಿದವಳು. ಅಕ್ಕಮಹಾದೇವಿ, ಅಕ್ಕನಾಗಮ್ಮ, ನೀಲಾಂಬಿಕೆ, ಗಂಗಾಂಬಿಕೆಯರಂತೆ ಔನ್ನತ್ಯವನ್ನು ಮುಟ್ಟಿದ ಮಹಾಧೀರೆಯಾಗಿದ್ದಾಳೆಯೆಂದು ದಾನಮ್ಮ ಕಾದಂಬರಿಯಲ್ಲಿ ಚಿತ್ರಿತಳಾಗಿದ್ದಾಳೆ.

ಬಸವಾದಿ ಶರಣರ ದರ್ಶನಾಶೀರ್ವಾದದಿಂದ ತನ್ನ ಆತ್ಮಕಲ್ಯಾಣ ಮಾಡಿಕೊಂಡ ದಾನಮ್ಮ ಕಲ್ಯಾಣದ ಜನರಿಂದ ಬೀಳ್ಕೊಂಡು, ಮಾರ್ಗದಲ್ಲಿ ಹಿರಿಯ ಶರಣರ ದರ್ಶನಾಶೀರ್ವಾದವನ್ನು ಪಡೆಯುತ್ತ, ಕಲ್ಯಾಣದಿಂದ ಉಮರಾಣಿಯವರೆಗೂ ಹಬ್ಬಿದ ಕೀರ್ತಿಯೊಂದಿಗೆ ಭಕ್ತರ ಪ್ರೀತಿ ಆತಿಥ್ಯವನ್ನು ಸ್ವೀಕರಿಸಿ, ಅವರ ದುಃಖವನ್ನು ನಿವಾರಿಸುತ್ತ, ಉಮರಾಣಿಗೆ ಬರುತ್ತಾಳೆ. ಇಲ್ಲಿ ಲೇಖಕಿ ಸಂದರ್ಭಕ್ಕನುಸಾರವಾಗಿ ವಚನಗಳನ್ನು ಬಳಸಿ, ಹಿರಿಯ ಶರಣರ ಚರಿತ್ರೆಗಳನ್ನು ಹೆಣೆದು, ಕಲ್ಪನಾ ಕುಶಲತೆಯನ್ನು ಮೆರೆದಿದ್ದಾರೆ.

ಮಗಳ ಮದುವೆ ಮಾಡಲು ಆತುರ ಪಡುತ್ತಿದ್ದ ಹೆತ್ತವರಿಗೆ ನಿರಾಶೆಗೊಳಿಸದೆ ಸಂಕದ ಸಂಗಮನಾಥನೊಂದಿಗೆ ಮದುವೆ ನಿಶ್ಚಯವಾಗುತ್ತದೆ. ಸಂಕದಲ್ಲಿಯೇ ಮದುವೆ ವೈಭವದಿಂದ

ನಡೆಯುತ್ತದೆ. ಮದುವೆಯ ವರ್ಣನೆಯನ್ನೂ ಲೇಖಕಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಇವರ ಮದುವೆ ಲೌಕಿಕ ಮದುವೆಯಾಗಿರಲಿಲ್ಲ. ಈ ಮದುವೆ ಆಧ್ಯಾತ್ಮ ಸಾಧನೆಗೆ ಸಹಯೋಗ ಒದಗಿಸುವುದಾಗಿತ್ತು. ಶಿವಯೋಗ ಸಾಧನೆಗೆ ಸಹಕಾರಿಯಾಗಬಲ್ಲ ಮದುವೆಯಾಗಿತ್ತು. ಆದರೆ ಸಂಸಾರದ ನೂರೆಂಟು ತಾಪತ್ರಯಗಳಲ್ಲಿ ಮುಳುಗಿದವರಿಗೆ ಆಧ್ಯಾತ್ಮ ಜೀವನದ ಕಲ್ಪನೆಯೂ ಇರಲಿಲ್ಲ. ಈ ದಂಪತಿಗಳು ಲೌಕಿಕರ ಮನಸ್ಸನ್ನು ಸಂತಸಪಡಿಸಲು ಅವರು ಹೇಳಿದಂತೆ ಎಲ್ಲ ಕಾರ್ಯಗಳನ್ನು ಮಾಡಿಕೊಡುತ್ತಿದ್ದರು.

"ಸಾಮಾನ್ಯವಾಗಿ ಸಂಸಾರದಲ್ಲಿ ವ್ಯಾಮೋಹವುಂಟಾಗುವುದು ಸ್ವಾಭಾವಿಕ. ಅದಕ್ಕಾಗಿಯೇ ಇದನ್ನು ಪ್ರತಿಬಂಧಕವೆಂದು ಹೇಳಲಾಗುತ್ತದೆ. ಆದರೆ, ಮೋಹನಷ್ಟಪಡಿಸಿಕೊಂಡ ಸತ್ಯಶೀಲರಿಗೆ ಸಂಸಾರಿಕ ಜೀವನವೂ ಅಷ್ಟೇ! ವೈರಾಗ್ಯ ಜೀವನವೂ ಅಷ್ಟೇ! ಇದಕ್ಕೆ ದಾನಮ್ಮನ ದಾಂಪತ್ಯ ಜೀವನವೇ ಒಂದು ಜೀವಂತ ಉದಾಹರಣೆಯಾಗಿದೆ. ಆಕೆಗೆ ತನ್ನ ಸಂಸಾರದ ಬಾಳ ಕಡಲನ್ನು ದಾಟುವ ಹರಿಗೋಲಾಗಿ ಪರಿಣಮಿಸಿತು. ವಿರತಿ ಜೀವನದಿಂದ ವ್ಯಷ್ಟಿಗತ ಕಲ್ಯಾಣ ಮಾಡಿಕೊಳ್ಳುವುದಕ್ಕಿಂತ ಸಂಸಾರಿಕ ಜೀವನದಿಂದ ಸಮಷ್ಟಿಗತ ಕಲ್ಯಾಣವೆಸಗುವುದು. ಆಕೆಯ ವಿಶಾಲ ಹೃದಯಕ್ಕೆ ಶ್ರೇಯಸ್ಕರವಾಗಿ ಕಂಡಿತು"(ಶಾಂತಾದೇವಿ ಮಳವಾಡ; ೧೯೯೨; ಪು. ೫) ಎಂದು ಕಾದಂಬರಿಯೊಳಗೆ ಸ್ವತಃ ಲೇಖಕಿಯೇ ದಾನಮ್ಮನ ವ್ಯಕ್ತಿತ್ವದ ಬಗ್ಗೆ ಹೇಳಿಕೆ ನೀಡುತ್ತಾರೆ.

ದೇಶವನ್ನೆಲ್ಲ ಸುತ್ತಿ ಬಸವತತ್ವ ಪ್ರಚಾರ ಮಾಡಿದಳು. ಆದವಾನಿಯಲ್ಲಿ ಪರವಾದಿಗಳು ಕಿತ್ತೊಗೆದ ಬ್ರಹ್ಮೇಶ್ವರ ಲಿಂಗವನ್ನು ಪ್ರತಿಷ್ಠಾಪನೆ ಮಾಡಿದಳು. ಇಲ್ಲಿ ಶಾಂತಮೂರ್ತಿ ದಾನಮ್ಮ ಭದ್ರಕಾಳಿಯಾದಳು. ದಂಪತಿಗಳಿಬ್ಬರೂ ಬಸವಣ್ಣನ ನೆನಪಿಗಾಗಿ ರಾಮೇಶ್ವರದಲ್ಲಿ ಒಂದು ದೇವಾಲಯವನ್ನು ಕಟ್ಟಿಸಿದರು.

ಪ್ರವಾಸದಲ್ಲಿ ದಂಪತಿಗಳು ಕೈಗೊಂಡ ಲಿಂಗದೀಕ್ಷೆ, ಶಿವಾನುಭವ, ವಚನ ಸಾಹಿತ್ಯದ ಪ್ರಸಾರ ಹಾಗೂ ವೀರಶೈವ ಧರ್ಮತತ್ವಗಳನ್ನು ತಿಳಿಸಿ ಹೇಳುವುದು, ಜಾತಿ-ಮತಗಳ ಭೇದವನ್ನೆಣಿಸದೆ ನೊಂದವರ ಕಣ್ಣೀರನ್ನು ಒರೆಸುವುದು, ಕೇವಲ ಸಾಮಾನ್ಯರ ಕಣ್ಣೀರನ್ನು ಮಾತ್ರ ನೀಗಿಸದೆ ರಾಜ-ಮಹಾರಾಜರ ಆತಿಥ್ಯವನ್ನು ಸ್ವೀಕರಿಸಿ, ಅವರ ಕೊರಗನ್ನು ನಿವಾರಿಸಿದಂತಹ ಅಪರೂಪದ ದಂಪತಿಗಳ ಹನ್ನೆರಡು ವರ್ಷಗಳ ಜೀವನಯಾತ್ರೆಯನ್ನು ಲೇಖಕಿ ಸೊಗಸಾಗಿ ನಿರೂಪಿಸಿದ್ದಾರೆ.

ಬಸವನ ಕನಸಿನ ಕಲ್ಯಾಣ, ಅಲ್ಲಿಯ ರಕ್ತಕ್ರಾಂತಿಯಿಂದಾಗಿ ಸಂಪೂರ್ಣವಾಗಿ ಅಳಿಯಲಿಲ್ಲ, ನಶಿಸಿ ಹೋಗಲಿಲ್ಲ; ಅದು ದಾನಮ್ಮನಂಥ ಶರಣರಿಂದ ಮರುಹುಟ್ಟು ಪಡೆದಿತ್ತು. ಶರಣ ಧರ್ಮ ಮತ್ತೆ ಬೆಳೆದಿತ್ತು. ದಾನಮ್ಮ ಉಳಿದ ಶರಣೆಯರಂತೆ ವಚನಗಳನ್ನು ರಚಿಸಲಿಲ್ಲ. ಸಾಹಿತ್ಯದಲ್ಲಿ ಕೃಷಿ ಮಾಡಲಿಲ್ಲ. ನೇರವಾಗಿ ಸಮಾಜದಲ್ಲಿ ಧುಮುಕಿದವಳು. ಮನುಷ್ಯನ ಮನಸ್ಸಿನಲ್ಲಿಯೇ ದೇವರನ್ನು ಕಂಡವಳು. ಮಾನವರು ಮಹಾಸಾಧನೆಯಿಂದ ದೈವತ್ವಕ್ಕೇರಬಲ್ಲರು ಎಂದು ಭಾರತೀಯ ನಂಬಿಕೆಗೆ ಭಾಷ್ಯವಾಗಿದ್ದವಳು. ದಾನಮ್ಮ ತನ್ನ ದೈವೀತನವನ್ನೆಲ್ಲ ಲೋಕಕಲ್ಯಾಣಕ್ಕಾಗಿ ಧಾರೆಯೆರೆದವಳು ಎಂಬುದನ್ನು ಕಾದಂಬರಿಕಾರರು ಬಹಳ ಮನೋಜ್ಞವಾಗಿ ಚಿತ್ರಿಸಿದ್ದಾರೆ.

ಶರಣರ ಕಾಯಕ - ದಾಸೋಹಗಳಲ್ಲಿ ತಲ್ಲೀನರಾದ ದಾನಮ್ಮ ಸಂಗಮನಾಥರ ದೀರ್ಘಕಾಲದ ಪ್ರೇಮಮಯ ದಾಂಪತ್ಯದ ಚಿತ್ರಣ ಇಲ್ಲಿದೆ. ಪರಸ್ಪರ ಕೈ ಹಿಡಿದ ಸಾರ್ಥಕ ಭಾವನೆ ತುಂಬಿಕೊಳ್ಳುತ್ತಿದ್ದಂತೆ ದಾನಮ್ಮ ಲಿಂಗೈಕ್ಯಳಾಗಬೇಕಾದ ವಿಷಯವನ್ನು ಪತಿಯಲ್ಲಿ ಹೇಳಿಕೊಳ್ಳುತ್ತಾಳೆ. 'ನೀನು ಹೋಗಬೇಕೆಂದಿದ್ದರೆ ನಾನು ಬರುವೆ' ಎಂಬ ಸಂಗಮನಾಥರನ್ನು ಕರ್ತವ್ಯದ ಕಾರಣಕ್ಕಾಗಿ ತಡೆಯುತ್ತಾಳೆ ದಾನಮ್ಮ. ಇಬ್ಬರೂ ಕೂಡಿ ಮೊದಲ ಸಲ ಇಲ್ಲಿಗೆ ಬಂದಾಗ ತಿರುಗಾಡಿದ ಸ್ಥಳಗಳವರೆಗೆ ತಿರುಗಾಡಿ ಬರೋಣ ಎಂದು ಪತಿಯ ಒಡನಾಟದ ಕೊನೆಯ ಸುಖಗಳನ್ನು ಹೀರುತ್ತ, ತನ್ನನ್ನು ನಂಬಿದ ಪರಿವಾರಕ್ಕೆ ಒಡವೆ-ವಸ್ತುಗಳನ್ನು ಹಂಚುತ್ತ ಐಕ್ಯಸ್ಥಲವನ್ನೇರಲು ದಾನಮ್ಮ ಸಿದ್ಧಳಾಗುವಾಗ ಸಂಗಮನಾಥರ ಮನೋವೇದನೆಯ ಚಿತ್ರ ತುಂಬ ಮಾರ್ಮಿಕವಾಗಿ ಮೂಡಿಬಂದಿದೆ. ಪತ್ನಿಯ ಕೊನೆಯ ಊಟಕ್ಕೆ ಅವಳ ಪ್ರೀತಿಯ ಹೋಳಿಗೆಯನ್ನು ಮಾಡಿಸುತ್ತಾರೆ ಸಂಗಮನಾಥರು. "ನನಗೆ ಹೋಳಿಗೆ ಪ್ರೀತಿ ಎಂದು ಹೇಳಿ ನೀವು ಮಾಡಿಸಿದುದು ಈಗ ಗೊತ್ತಾಯಿತು"(ಅದೇ; ಪು. ೩೨೩) ಎಂದು ದಾನಮ್ಮ ಪತಿಯ ಮುಖವನ್ನು ನೋಡಿ ನಕ್ಕಳು. ಹೌದು ಎನ್ನುವಂತೆ ಗೋಣು ಹಾಕಿ, ಸಂಗಮನಾಥರು ಮೌನದಿಂದ ಊಟ ಮುಗಿಸಿ ಹೊರಗೆ ಹೋದರು. ಇಲ್ಲಿ ಮನೋವೇದನೆ ವಾಚ್ಯವಾಗದೇ ಸೂಕ್ಷ್ಮ ಸನ್ನಿವೇಶ ನಿರ್ಮಾಣದ ಮೌನದಲ್ಲಿ ಹುದುಗಿಸಿಡುವುದರಿಂದ ಹೆಚ್ಚು ಅರ್ಥಪೂರ್ಣವಾಗುತ್ತದೆ.

ದಾನಮ್ಮ ತಾಯಿ ಐಕ್ಯಳಾಗುವಳೆಂದು ಕೇಳಿದ ಅವಳ ಪರಿಚಾರಿಕೆಯರಾದ ಗೌರಮ್ಮ-ಗಿರಿಜೆಯರ ಅಳಲಿನಲ್ಲಿ, ದಾನಮ್ಮನ ಐಕ್ಯದ ಸನ್ನಿವೇಶ ನಿರೂಪಣೆಯಲ್ಲಿ ಬಸವಣ್ಣ ಐಕ್ಯವನ್ನು ವರ್ಣಿಸುವಲ್ಲಿ ಲೇಖಕಿ ನಿರ್ಮಿಸಿದ ಸನ್ನಿವೇಶಗಳು ಓದುಗರ ಕಣ್ಣುಗಳನ್ನು ಒದ್ದೆ ಮಾಡುತ್ತದೆ. ದಾನಮ್ಮ ಐಕ್ಯಳಾಗುವ ಕೆಲಸಗಳಿಗೆ ಮುಂಚೆ ಪತಿ-ಪತಿಯರಿಬ್ಬರೂ "ಒಬ್ಬರನ್ನೊಬ್ಬರು ಅಗಲಲಾರದೆ ನಿಧಾನವಾಗಿ ಒಂದು ಪ್ರದಕ್ಷಿಣೆ ಹಾಕಿದರು". ಪೂಜೆಗೆ ಕೊಡುವ ಮೊದಲು ದಾನಮ್ಮ ಪ್ರೀತ್ಯಾದರಗಳಿಂದ ಪತಿಯ ಕಾಲ್ಗೆರಗಿದರೆ, ಸಂಗಮನಾಥರು ಪ್ರೀತಿ-ಅಂತಃಕರಣದಿಂದ ಪತ್ನಿಯನ್ನು ಎಬ್ಬಿಸುತ್ತಾರೆ. ಕೂಡಿದ ನೂರೊಂದು ಭಕ್ತ ಮಹಾಪೂರಕ್ಕೆ ತಾಯಿಯಾಗಿ ದೈವತ್ವದ ನೆಲೆಗೇರಿದ ದಾನಮ್ಮನನ್ನು ಈ ಐಹಿಕ ನೆಲೆಯ ಮೂಲಕವೇ ಚಿತ್ರಿಸುವಲ್ಲಿ ಕಾದಂಬರಿಯ ಕಲಾತ್ಮಕ ಸಾಧನೆ ರೂಪತಳೆದಿದೆ.

ದಾನಮ್ಮ ಜನರ ಪಾಲಿಗೆ ಶರಣೆ ಮಾತ್ರ ಆಗಿರಲಿಲ್ಲ. ದೇವತೆಯಾಗಿದ್ದಳು, ಶಕ್ತಿಯಾಗಿದ್ದಳು. ದೃಷ್ಟಿಯೋಗ, ಬಸವಮಂತ್ರ, ವೀರಶೈವ ತತ್ವಾಚರಣೆಗಳು ಆಕೆಗೆ ಎಷ್ಟೊಂದು ಶಕ್ತಿಯನ್ನು ನೀಡಿದ್ದವೆಂದರೆ ಆಕೆಯಿಂದ ಪವಾಡಸದೃಶ ಕಾರ್ಯಗಳಾದವು. ಹಾಗೆಯೇ ಅವಳು ದಾನಮ್ಮದೇವಿ ಎಂದು ಪ್ರಖ್ಯಾತಳಾಗಿ ನೆಲೆಸಿ ಲಿಂಗೈಕ್ಯಳಾದ ಗುಡಾಪುರವೂ ಇಂದಿಗೂ ಅವಿಮುಕ್ತ ಕ್ಷೇತ್ರವಾಗಿದೆ. ೮೦೦ ವರ್ಷಗಳಿಂದಲೂ ತ್ರಿಕಾಲ ಪೂಜೆ ತಪ್ಪದೇ ನಡೆದಿದೆ. ಕರ್ನಾಟಕ, ಮಹಾರಾಷ್ಟ್ರ, ಆಂಧ್ರಪ್ರದೇಶದ ಸಾವಿರಾರು ಜನರ ಮನೆಯ ಆರಾಧ್ಯದೇವತೆಯಾಗಿ ಅವರ ದೇವರ ಜಗುಲಿಯ ಮೇಲೆ ಪೂಜೆಗೊಳ್ಳುತ್ತಿದ್ದಾಳೆಂದು ಲೇಖಕರು ಹೇಳಿದ್ದಾರೆ.

ದಾಸೋಹಿ ದಾನಮ್ಮನ ಜೀವನದ ಕೊನೆಯ ದಿನಗಳನ್ನು ಲೇಖಕಿ ಅತ್ಯಂತ ಹೃದಯ ಸ್ಪರ್ಶಿಯಾಗಿ ಚಿತ್ರಿಸಿದ್ದಾರೆ. 'ಶರಣರ ಗುಣ ಮರಣದಲ್ಲಿ ನೋಡು' ಎನ್ನುವಂತೆ ಶಿವನ ಕರೆ

ಬಂದಾಗ ನಗುನಗುತ್ತಾ ಸ್ವಾಗತಿ, ಪತಿಗೆ ಧೈರ್ಯವನ್ನು ನೀಡಿ, ಪತಿ ಮಾಡಬೇಕಾದ ಕರ್ತವ್ಯಗಳನ್ನು ಎಚ್ಚರಿಸಿ, ಬೆಳಗಿನಲ್ಲಿ ಒಳಗಾದ ಇಚ್ಛಾಮರಣಿ, ದಾನಮ್ಮನ ಚರಿತ್ರೆ ಇಂದಿಗೂ, ನಿತ್ಯಸ್ಮರಣೀಯ ಹಾಗೂ ಪ್ರಸ್ತುತ ಎಂದು ಹೇಳಬಹುದು.

ಲೇಖಕರು ದಾನಮ್ಮನ ಪಾತ್ರವನ್ನು ಆಧಾತ್ಮಿಕ ನೆಲೆಯಲ್ಲಿ ಚಿತ್ರಿಸಿದ್ದಾರೆ. ಹೆಣ್ಣಿನ ಮನಸ್ಸು ಚಂಚಲತೆಯಿಂದ ಕೂಡಿಲ್ಲ. ಆಕೆ ಜೀವನದಲ್ಲಿ ಏನು ಬೇಕಾದರೂ ಸಾಧಿಸಬಲ್ಲಳು ಎಂಬುದಕ್ಕೆ ದಾನಮ್ಮನ ಜೀವನ ವ್ಯಕ್ತಿತ್ವವೇ ನಿದರ್ಶನವಾಗಿದೆ. ಈ ಗ್ರಂಥವು ಆಧ್ಯಾತ್ಮಿಕ ರಂಗದ ಜ್ಞಾನಿಗಳಿಗೆ, ಶಿವಯೋಗ ರಹಸ್ಯವನ್ನು, ದೃಷ್ಟಿಯೋಗ ಸಿದ್ಧಿಯನ್ನು ಲೋಕದ ಕಲ್ಯಾಣಕ್ಕಾಗಿ ಅದನ್ನು ಬಳಿಸಿ ಕೀರ್ತಿಕಾಯಳಾದ ಶರಣೆ ದಾನಮ್ಮನ ಅಂತರಂಗದ ಸತ್ವವನ್ನು ಓದುಗರಿಗೆ ಉಣಬಡಿಸುವ ಆಶಯವನ್ನು ಕಾದಂಬರಿಕಾರರು ಹೊಂದಿದ್ದಾರೆ.

ದಾನದಾಸೋಹಿ ದಾನಮ್ಮ ಕಾದಂಬರಿ ಕಾಲಗರ್ಭದಲ್ಲಿ ಮರೆತುಹೋಗಬಹುದಾಗಿದ್ದ ಉದಾತ್ತ ವ್ಯಕ್ತಿಯನ್ನು ಶಾಸನ, ಕಾವ್ಯ, ಇತಿಹಾಸಗಳ ಆಧಾರದ ಮೇಲಿಂದ ಶರಣೆ ದಾನಮ್ಮನ ಜೀವನ ಹಾಗೂ ಸಾಧನೆಯ ವಿವರಗಳನ್ನು ಸಂಗ್ರಹಿಸಿ ಅವಳ ಸಮಗ್ರ ವ್ಯಕ್ತಿತ್ವವನ್ನು ಅತ್ಯಂತ ಸರಳ ಶೈಲಿಯಲ್ಲಿ ಕಲಾತ್ಮಕವಾಗಿ ನಿರೂಪಿಸಿದ ಖ್ಯಾತಿ ಶ್ರೀಮತಿ ಮಾಳವಾಡರದು. ಮಾನವೀಯತೆಯ ಸಾಕಾರಮೂರ್ತಿಯಾದ ದಾನಮ್ಮ ನೊಂದವರ, ದೀನ-ದಲಿತರ, ಬಡವರ ಕಣ್ಣೀರುರಿಸಿ, ಅವರ ಬಾಳಲ್ಲಿ ಶರಣ ಸಂದೇಶದ ಸುಧೆಯನ್ನು ಹರಿಸಿದ ದಾನಮ್ಮಳ ವ್ಯಕ್ತಿ ಚಿತ್ರಣವನ್ನು ಬಹುಮಾರ್ಮಿಕ ನಿರೂಪಿಸಿದ್ದಾರೆ. ಅಲ್ಲದೆ ಧರ್ಮಕ್ಕೆ ಚ್ಯುತಿ ಬಂದಾಗ ಖಡ್ಗ ಪಾಣಿಯಾಗಿ ವೀರಗಣಾಚಾರ ವ್ರತವನ್ನು ಕೈಕೊಂಡು ಧರ್ಮವನ್ನು ರಕ್ಷಿಸಿದ ವೀರಮಹಿಳೆಯನ್ನಾಗಿ ಸೊಗಸಾಗಿ ಚಿತ್ರಿಸಿದ್ದಾರೆ. ದೇಶವನ್ನೆಲ್ಲ ಸುತ್ತಿ ಬಸವತತ್ವ ಪ್ರಚಾರ ಮಾಡಿದ ಬಸವಣ್ಣನವರ ನೆನಪಿಗಾಗಿ ರಾಮೇಶ್ವರದಲ್ಲಿ ದೇವಾಲಯವನ್ನು ಕಟ್ಟಿಸಿದ, ಸಾವಿರಾರು ಜನರಿಗೆ ಲಿಂಗದೀಕ್ಷೆಯನ್ನು ಕೊಟ್ಟ ಪ್ರಥಮ ಮಹಿಳೆಯಾದ ದಾನಮ್ಮಳ ಚರಿತ್ರೆಯನ್ನು ಮನೋಜ್ಞವಾಗಿ ಚಿತ್ರಿಸಿದ್ದಾರೆ.

ಲೇಖಕಿಯ ಸ್ತ್ರೀಪರ ಕಾಳಜಿ, ಗಂಡು - ಹೆಣ್ಣಿನ ಸಮಾನತೆಯ ವಿಚಾರ ಸಹಕಾರತ್ವ, ಕಾಯಕದ ಮಹತ್ವ, ದಾನಧರ್ಮಗಳಿಂದ ದೊರೆಯುವ ಆನಂದ ಇತ್ಯಾದಿ ಪ್ರಮುಖ ವಿಚಾರಗಳು ಇವರ ದಾನ ದಾಸೋಹಿ ದಾನಮ್ಮ ಕಾದಂಬರಿಯಲ್ಲಿ ಎದ್ದು ಕಾಣುವ ಅಂಶಗಳಾಗಿವೆ.

ಹಿಂದಿನ ನಮ್ಮ ಆದರ್ಶ ಮಹಿಳೆಯರ ಜೀವನ, ಸಂಸ್ಕೃತಿ ಇಂದು ಪಾಶ್ಚಾತ್ಯ ಪ್ರಭಾವಕ್ಕೊಳಗಾಗಿರುವ ಇಂದಿನ ಮಹಿಳೆಯರಿಗೆ ಆದರ್ಶವಾಗಲಿ ಎನ್ನುವ ಆಶಯವನ್ನು ಶಾಂತಾದೇವಿ ಮಾಳವಾಡರಲ್ಲಿ ಕಾಣಬಹುದಾಗಿದೆ. ಒಟ್ಟಿನಲ್ಲಿ ಮಹಾಚೇತನವೊಂದರ ಆಧ್ಯಾತ್ಮಿಕ ವಿಕಾಸ ಅತ್ಯಂತ ಸಹಜವಾಗಿ ಪರಿಣಾಮಕಾರಿಯಾಗಿ ಕಾದಂಬರಿಯಲ್ಲಿ ಮೂಡಿಬಂದಿದೆ.

ಕೇಂದ್ರಪಾತ್ರವನ್ನಾಗಿರಿಸಿಕೊಂಡು ಅನುಭಾವಿ ಮಹಿಳೆಯರ ಕುರಿತು ಬರೆದಂತಹ ಕಾದಂಬರಿಯಲ್ಲಿ ಸುಮತಿ, ಗಂಗಾಂಬಿಕೆ, ನೀಲಾಂಬಿಕೆ, ರಸವಂತಿ, ಕಮಲಾಂಬಿಕೆ, ಯಶೋಧ, ಶಿರಸಮ್ಮ, ಗೌರಮ್ಮ ಗಿರಿಜೆ ಮುಂತಾದವರಿಗೆಲ್ಲ ಅಷ್ಟು ಪ್ರಾಧಾನ್ಯತೆ ಸಿಕ್ಕಿಲ್ಲ. ಆದರೂ ಪರಿಪೂರ್ಣ ಪಾತ್ರವಾಗಿ ಕಾದಂಬರಿಯಲ್ಲಿ ಆಯಾಯ ಸಂದರ್ಭಕ್ಕೆ ತಕ್ಕಂತೆ ಮೂಡಿಬಂದಿವೆ.

'ಅಕ್ಕಮಹಾದೇವಿ' ಮತ್ತು 'ದಾನ ದಾಸೋಹಿ ದಾನಮ್ಮ' ಇಬ್ಬರೂ ಅನುಭಾವಿ ಶಿವಶರಣೆಯರಾಗಿದ್ದರೂ, ಅವರ ಅನುಭಾವದ ಮಾರ್ಗಗಳು ಮಾತ್ರ ಭಿನ್ನವಾಗಿದ್ದವು. ಅಕ್ಕಮಹಾದೇವಿ ಏಕಾಂಗಿಯಾಗಿ ಚೆನ್ನಮಲ್ಲಿಕಾರ್ಜುನನನ್ನು ಅರಸಿಕೊಂಡು ಹೋದರೆ, ದಾನಮ್ಮಳ ಮಾರ್ಗವು ಸಮಾಜದ ಒಳಿತನ್ನು ಬಯಸುವುದಾಗಿತ್ತು. ಇವರಿಬ್ಬರನ್ನು ಕೇಂದ್ರ ಪಾತ್ರಗಳನ್ನಾಗಿರಿಸಿ ಕೊಂಡು ರಚಿತವಾದ ಕಾದಂಬರಿಗಳು ಕೂಡ ಅವರವರ ಜೀವನ ಮಾರ್ಗಗಳಿಗೆ ತಕ್ಕಂತೆಯೇ ಆಯಾಯ ಪಾತ್ರಗಳನ್ನು ಚಿತ್ರಿಸಿವೆ ಎನ್ನಬಹುದು.

### ೪.೧.೨. ವೀರವನಿತೆಯರು

ಕನ್ನಡ ನಾಡಿನಲ್ಲಿ ವೀರ ಪುರುಷ ಜೀವನಕ್ಕೆ ಕೊರತೆಯಿಲ್ಲ. ಸಿಂಹ - ಶಾರ್ದೂಲಗಳಂತೆ ವೈರಿಗಳ ನಿರ್ನಾಮಕ್ಕೆ ಹೋರಾಡಿದ ಮಹಿಳೆಯರಲ್ಲಿ ಅಬ್ಬಕ್ಕರಾಣಿ, ಕಿತ್ತೂರು ಚೆನ್ನಮ್ಮ, ಕೆಳದಿ ಚೆನ್ನಮ್ಮಾಜಿ, ಒನಕೆ ಓಬವ್ವ ಪ್ರಮುಖರಾಗಿದ್ದರೆ.

ವ್ಯಾಪಾರಕ್ಕೆಂದು ಬಂದಂಥ ಪಾಶ್ಚಾತ್ಯರು ಭಾರತದಲ್ಲಿನ ಸಂಪತ್ತನ್ನು ಮತ್ತು ರಾಜ, ರಾಜರ ನಡುವಿನ ದ್ವೇಷ, ಅಸೂಯೆ ಮತ್ಸರದ ಲಾಭ ಪಡೆದು ತಮ್ಮ ಪ್ರಭುತ್ವನ್ನು ಸ್ಥಾಪಿಸಿದ್ದರು. ಅಂತಹವರಲ್ಲಿ ಪೋರ್ಚುಗೀಸರು, ಡಚ್ಚರು, ಫ್ರೆಂಚರು ಮತ್ತು ಬ್ರಿಟಿಷರು ಪ್ರಮುಖರಾಗಿದ್ದಾರೆ. ಬಹುಕಾಲದವರೆಗೆ ಭಾರತ ದೇಶವನ್ನು ತಮ್ಮ ಅಧೀನಕ್ಕೆ ಒಳಪಡಿಸಿಕೊಂಡು ಸಾರ್ವಭೌಮತ್ವವನ್ನು ಸ್ಥಾಪಿಸಿದವರು ಬ್ರಿಟಿಷರು. ರಾಜರ ಅಂತರ್‌ಕಲಹವೇ ಇವರಿಗೆ ಲಾಭವಾಗಿ ಪರಿಣಮಿಸಿತು. ರಾಜರನ್ನು ಸೋಲಿಸಿ ಕಪ್ಪಕಾಣಿಕೆಯನ್ನು ಸ್ವೀಕರಿಸುತ್ತಿದ್ದರು. ಅಷ್ಟೇ ಅಲ್ಲದೆ ಅವರನ್ನು ಗುಲಾಮರಂತೆ ಕಾಣುತ್ತಿದ್ದರು. ಇಂತಹ ಸಂಕೋಲೆಯಿಂದ ಹೊರಬರುವ ಸಲುವಾಗಿ ಅನೇಕ ವೀರರ, ವೀರವನಿತೆಯರು ಆಂಗ್ಲರ ವಿರುದ್ಧ ಸಿಡಿದೆದ್ದರು. ಸ್ವಾತಂತ್ರ್ಯಕ್ಕಾಗಿ ಹೋರಾಡಿದ ವೀರವನಿತೆಯರಲ್ಲಿ ಕಿತ್ತೂರು ಚೆನ್ನಮ್ಮ ಪ್ರಮುಖಳಾಗಿದ್ದಾಳೆ. 'ಚೆನ್ನಮ್ಮನ ಜೀವನ ಚರಿತ್ರೆಯನ್ನು ಆಧರಿಸಿದ ಕೃತಿಗಳಲ್ಲಿ ಅನಕೃ ಅವರು 'ವೀರರಾಣಿ ಕಿತ್ತೂರು ಚೆನ್ನಮ್ಮಾ' ಮತ್ತು ಕೆ.ವಿ. ರಾಜೇಶ್ವರಿ ಅವರ 'ವೀರವನಿತೆ ಕಿತ್ತೂರ ಚೆನ್ನಮ್ಮ ಕಾದಂಬರಿಗಳು ಪ್ರಮುಖವಾಗಿವೆ.

### ಕಿತ್ತೂರ ಚೆನ್ನಮ್ಮ

ಅ.ನ. ಕೃಷ್ಣರಾಯರ ವೀರರಾಣಿ ಕಿತ್ತೂರ ಚೆನ್ನಮ್ಮ ಕಾದಂಬರಿ ಸ್ವಾತಂತ್ರ್ಯ ಸಂಗ್ರಾಮದ ಪರಂಪರತೆಯನ್ನೆತ್ತಿ ತೋರಿಸುತ್ತದೆ. ಕಾದಂಬರಿಯ ರಚನೆಯ ಬಗ್ಗೆ ಲೇಖಕರೇ ಹೇಳುವಂತೆ "ಭಾರತಕ್ಕೆ ಸ್ವಾತಂತ್ರ್ಯ ಲಭಿಸಿದ ಮೇಲೆ ಭಾರತೀಯ ರಾಷ್ಟ್ರೀಯತೆ ಬೆಳೆದು ಬಲಿಯುವ ಮುನ್ನವೇ ವಿವಿಧ ವಿದೇಶಿಯ ರಾಜಕೀಯ ತತ್ತ್ವ ಪ್ರಣಾಳಿಕೆಗಳು ಜನತೆಯ ಮನಸ್ಸನ್ನು ಕೆಡಿಸುತ್ತಿವೆ. ಈ ಪರ್ವಕಾಲದಲ್ಲಿ ಜನತೆಯ ಮನಸ್ಸನ್ನು ರಾಷ್ಟ್ರದ ಕಡೆಗೆ, ಅದರ ಕಲ್ಯಾಣದ ಕಡೆಗೆ ಎಳೆಯುವುದಕ್ಕೆ ಕಿತ್ತೂರಿನ ರಾಣಿಯ ಅವರ ಜೀವನಾದರ್ಶಕ್ಕಿಂತಲೂ ಹೆಚ್ಚಿನ ವಸ್ತು ಬೇಕೆ" (ಅನಕೃ; ೧೯೫೧; ಮುನ್ನುಡಿ) ಎಂದು ಹೇಳುವುದರೊಂದಿಗೆ ಕಾದಂಬರಿಕಾರರು ಜನತೆಯಲ್ಲಿ ದೇಶಾಭಿಮಾನವನ್ನು ಮೂಡಿಸುವ ಆಶಯದೊಂದಿಗೆ ಕಿತ್ತೂರು ರಾಣಿಯ ಜೀವನ ಚರಿತ್ರೆಯನ್ನು ಕುರಿತು ಕಾದಂಬರಿಯನ್ನು ರಚಿಸಿದ್ದಾರೆ.

ಪಂಡಿತ ಮಲ್ಲಪ್ಪ ಅವರು 'ವೀರರಾಣಿ ಕಿತ್ತೂರು ಚೆನ್ನಮ್ಮಾ' ಕಾದಂಬರಿಯ ಕುರಿತು ತಮ್ಮ ಅಭಿಪ್ರಾಯವನ್ನು ಹೀಗೆ ವ್ಯಕ್ತಪಡಿಸಿದ್ದಾರೆ. "ಕಿತ್ತೂರ ಸಂಸ್ಥಾನದ ಇತಿಹಾಸ ನಡುಗಾಲದಿಂದ ಪ್ರಾರಂಭವಾಗಿದ್ದರೂ ಹೊಸದಾಗಿ ಬರುವ ಸದಾಶಿವ ಶಾಸ್ತ್ರೀಗಳಿಗೆ ತಿಳಿಸುವ ನೆಪದಲ್ಲಿ ಸಂಸ್ಥಾನದ ಹಿಂದಿನ ಚರಿತ್ರೆಯನ್ನು ವಿವರಿಸಿದ್ದಾರೆ." (ಪಂಡಿತ ಮಲ್ಲಪ್ಪ; ೧೯೭೬; ಪು.೪೨) ಜನತೆಯಲ್ಲಿ ರಾಷ್ಟ್ರಾಭಿಮಾನ, ಕಿತ್ತೂರಿನ ವೀರಶ್ರೀಯ ದಿವ್ಯಚರಿತ್ರೆಯನ್ನು ಅ.ನ.ಕೃಷ್ಣರಾಯರು ಸವಿಸ್ತಾರವಾಗಿ ಕಾದಂಬರಿಯಲ್ಲಿ ಪಡಿಮೂಡಿಸಿದ್ದಾರೆ. ಚೆನ್ನಮ್ಮನ ಪೂರ್ವ ಸಂಸ್ಕಾರ ಮನೆಯ ವಾತಾವರಣ, ಶಿಕ್ಷಣ ಬೆಳವಣಿಗೆ, ಮದುವೆಯ ಸಂದರ್ಭ ಇತ್ಯಾದಿಗಳನ್ನು ಲೇಖಕರು ಬಹಳ ಸಂಕ್ಷಿಪ್ತವಾಗಿ ವಿವರಿಸಿದ್ದಾರೆ. ಕಿತ್ತೂರಿನ ದೊರೆ ಮಲ್ಲಸರ್ಜರ ಮರಣಾನಂತರ ಅಂತಃಪುರ ಬಿಟ್ಟು ಹೊರಬಂದ ಅವನ ಪತ್ನಿಯರಾದ ರುದ್ರಮ್ಮ, ಚೆನ್ನಮ್ಮ ಇಬ್ಬರೂ ವೀರಮಹಿಳೆಯರೇ ಇಬ್ಬರಲ್ಲೂ ರಾಷ್ಟ್ರಪ್ರೇಮ, ನಾಡಪ್ರೇಮ, ಸ್ವಾಭಿಮಾನ, ಸ್ವದೇಶಾಭಿಮಾನ, ಸ್ವಸಂಸ್ಕೃತಿಯ ಅಭಿಮಾನ ಇರುವುದನ್ನು ಕಾದಂಬರಿಯುದ್ದಕ್ಕೂ ಕಾಣಬಹುದು. ಮಲ್ಲಸರ್ಜನ ಮರಣದ ನಂತರ ಶಿವಲಿಂಗಸರ್ಜ ಪಟ್ಟಕ್ಕೆ ಬಂದರೂ ಆತ ರೋಗಕ್ಕೆ ತುತ್ತಾಗಿ ಆಕಸ್ಮಿಕ ಮರಣವನ್ನಪ್ಪುತ್ತಾನೆ. ಆಗ ಕಿತ್ತೂರ ಸಿಂಹಾಸನದ ಉತ್ತರಾಧಿಕಾರಿಯನ್ನು ಹುಡುಕಲೇಬೇಕಾಗುತ್ತದೆ. ಇಂಥ ಸಂದರ್ಭದಲ್ಲಿ ರಾಣಿ ಚೆನ್ನಮ್ಮನ ದೂರದೃಷ್ಟಿಯಿಂದ, ಶಿವಲಿಂಗಸರ್ಜ ಸಾಯುವ ಮುನ್ನವೇ ದತ್ತಕ ಪುತ್ರನನ್ನು ಸ್ವೀಕರಿಸಲು ಚೆನ್ನಮ್ಮ ಹೆಣಗುವ ಚಿತ್ರಣವನ್ನು ಕಾಣಬಹುದು.

ಸ್ವಾರ್ಥ ಸಾಧಕರಾದ ಮಲ್ಲಪ್ಪಶೆಟ್ಟಿ, ವೆಂಕಟರಾಯರು, ಮಹಾಂತವ್ವ ನೀಲವ್ವನಂಥವರು ಇಂಗ್ಲೀಷರೊಂದಿಗೆ ಪಿತೂರಿ ನಡೆಸಿ ತಮ್ಮ ನಾಡನ್ನು ಇಂಗ್ಲೀಷರಿಗೊಪ್ಪಿಸಿ, ಸಂತೋಷಪಡುವ ಮನೋಪ್ರವೃತ್ತಿಯುಳ್ಳವರು. ಸ್ವಾಮಿದ್ರೋಹಿಯೆಂದೇ ಗುರುತಿಸಿಕೊಳ್ಳುವ ಮಲ್ಲಪ್ಪಶೆಟ್ಟಿ ತನ್ನ ಆಸೆಗಳನ್ನು ಪೂರೈಸಿಕೊಳ್ಳಲು ಪರಕೀಯರ ಬಾಲ ಬಡಿದು ತಾನು ಕಿತ್ತೂರು ಸಂಸ್ಥಾನದ ಅಧಿಕಾರ ಪಡೆಯಲು ಹವಣಿಸುತ್ತಾನೆ. ಅದಕ್ಕಾಗಿ ದತ್ತಕ ತೆಗೆದುಕೊಳ್ಳುವುದನ್ನು ವಿರೋಧಿಸುತ್ತಾನೆ. ರಾಣಿಚೆನ್ನಮ್ಮ ಆತನ ವಿರೋಧಕ್ಕೆ ಧೃತಿಗೆಡದೆ ಬ್ರಿಟಿಷರ ಹೆದರಿಕೆಗೂ ಸೊಪ್ಪುಹಾಕದೆ ಗಂಡೆದೆಯಿಂದ ದತ್ತಕ ಸ್ವೀಕರಿಸಿ ಆಂಗ್ಲರಿಗೆ ಸವಾಲು ಹಾಕಿ ನಿಲ್ಲುತ್ತಾಳೆ.

ಪ್ರಧಾನಮಂತ್ರಿಯ ಮುಖಾಂತರ (ಮಾಸ್ತಮರಡಿಯ) ಗೌಡನ ಮಗನನ್ನು ಕರೆಯಿಸಿ ಗೋಧೂಳಿ ಲಗ್ನದಲ್ಲಿ ಶಿವಲಿಂಗ ಸರ್ಜರು ಬಾಲಕನನ್ನು ದತ್ತು ಪುತ್ರನನ್ನಾಗಿ ಸ್ವೀಕರಿಸಿಲು ಬೇಕಾದ ಸರ್ವ ಪ್ರಯತ್ನ ಮಾಡಿ, ಗುರುಲಿಂಗಮ ಸರ್ಜನೆಂದು ನಾಮಕರಣ ಮಾಡುತ್ತಾಳೆ. ಇದನ್ನು ನೋಡಿದ ಮಲ್ಲಪ್ಪಶೆಟ್ಟಿಗೆ ಮುಖಭಂಗವಾಗುತ್ತದೆ. ಬ್ರಿಟಿಷರ ಕಾನೂನಿನ ಕ್ರಮ ಜರುಗಿಸಲು ಮಾಡಿದ ಪ್ರಯತ್ನ ವ್ಯರ್ಥವಾಯಿತೆಂದು ತಿಳಿದು ಇವನು ಅಡುಗೆಯವಳಾದ 'ಮಹಾಂತವ್ವಳಿಗೆ' ಲೋಭ ಜಾಲದಲ್ಲಿ ಸಿಲುಕಿಸಿ ಚೆನ್ನಮ್ಮನಿಗೆ ವಿಷಪ್ರಾಶನ ಮಾಡಿಸುವ ಸಾಹಸ ನಡೆಯುತ್ತದೆ. ಈ ಸನ್ನಿವೇಶ ಕೆ.ವಿ.ರಾಜೇಶ್ವರಿ ಅವರ ಕಾದಂಬರಿಯಲ್ಲಿ ಇಲ್ಲ.

ಗುರುಲಿಂಗಮ ಸರ್ಜನು ಪ್ರಬುದ್ಧ ವಯಸ್ಕನಾಗುವವರೆಗೆ ರಾಜ್ಯ ಸೂತ್ರಗಳನ್ನು ಚೆನ್ನಮ್ಮಾಜಿಯೇ ವಹಿಸಿಕೊಂಡು ರಾಜ್ಯಭಾರ ಮಾಡಲು ಮುಂದಾಗುತ್ತಾಳೆ. ಈ ಸುದ್ದಿ ತಿಳಿದ

ಬ್ರಿಟಿಷ್ ಸರಕಾರದ ಪ್ರತಿನಿಧಿಯಾದ ಥ್ಯಾಕರೆಯು ತಮ್ಮನ್ನು ಕೇಳದೆ ದತ್ತಕ ಪಡೆದ ಬಗ್ಗೆ ವಿವರಣೆ ಕೇಳಲು ತನ್ನ ಪ್ರತಿನಿಧಿಯನ್ನು ಚೆನ್ನಮ್ಮನಲ್ಲಿಗೆ ಕಳುಹಿಸುತ್ತಾನೆ. ಚೆನ್ನಮ್ಮ ಆತನಿಗೆ ನೀಡಿದ ದಿಟ್ಟತನದ ಉತ್ತರ ಪ್ರಸ್ತುತ ಮಹಿಳೆಯರಿಗೂ ಆದರ್ಶವಾಗುವ ರೀತಿಯಲ್ಲಿ ಲೇಖಕರು ವರ್ಣಿಸಿದ್ದಾರೆ.

ಚೆನ್ನಮ್ಮನ ಉತ್ತರದಿಂದ ಕುಪಿತನಾದ ಥ್ಯಾಕರೆ ತನ್ನ ಸೈನ್ಯದೊಂದಿಗೆ ಕಿತ್ತೂರ ಕೋಟೆಯ ಮೇಲೆ ಮುತ್ತಿಗೆ ಹಾಕುತ್ತಾನೆ. ರಾಜಕೀಯ ಚಾಣಾಕ್ಷತೆಯನ್ನು ಹೊಂದಿದ ಚೆನ್ನಮ್ಮ ಈ ಘಟನೆಯಿಂದ ಯುದ್ಧವಾಗುವ ಸಾಧ್ಯತೆ ಇದೆ ಎಂದು ನಿರೀಕ್ಷಿಸುತ್ತಿದ್ದಳು. ತನ್ನ ಸೈನ್ಯವನ್ನು ಉದ್ದೇಶಿಸಿ, "ಕಿತ್ತೂರಿನ ವೀರರೇ, ಶತ್ರುಸೈನ್ಯದ ಮೇಲೆ ಚಂಡಮಾರುತದಂತೆ ನುಗ್ಗಿ ಅವರ ಶಿರಗಳನ್ನು ಚೆಂಡಾಡಿರಿ, ಬದುಕಿದರೆ ಸ್ವಾತಂತ್ರ್ಯ ಸತ್ತರೆ ಸ್ವರ್ಗ" ಎಂದು ಸೈನಿಕರನ್ನು ಹುರಿದುಂಬಿಸುತ್ತಾಳೆ. ಥ್ಯಾಕರೆ ತನ್ನ ಕರಾರು ಒಪ್ಪಂದಕ್ಕೆ ಒಪ್ಪಿಕೊಳ್ಳುವಂತೆ ತಿಳಿಸುತ್ತಾನೆ. ಕಿತ್ತೂರಿನ ಆತ್ಮಾಭಿಮಾನವಿರುವ ಯಾವ ಒಬ್ಬ ಪ್ರಜೆಯೂ ಸಹ ನಿಮ್ಮ ದಾಸ್ಯದ ಕರಾರಿಗೆ ಒಪ್ಪಿಗೆ ಕೊಡಲಾರರು ಎಂದು ಹೇಳಿ, ಯುದ್ಧಕ್ಕೆ ಅವನನ್ನು ಆಹ್ವಾನಿಸುತ್ತಾಳೆ. ಈಕೆಯಲ್ಲಿದ್ದ ಆತ್ಮಸ್ಥೈರ್ಯವನ್ನು ಕಾದಂಬರಿಕಾರರು ಬಹುಮಾರ್ಮಿಕವಾಗಿ ವಿವರಿಸಿದ್ದಾರೆ.

ಕಾರ್‌ಭಾರಿ ಮಲ್ಲಪ್ಪಸೆಟ್ಟಿ ವಿಶ್ವಾಸಿಗನಾದ ಶಿವಬಸಪ್ಪ ಗುಪ್ತವಾಗಿ ಬಂದು ಕಿತ್ತೂರಿನ ವಿದ್ಯಾಮಾನ ಯುದ್ಧದ ಸಿದ್ಧತೆಯನ್ನು ತಿಳಿಸುತ್ತಾನೆ. ಇದರ ಪ್ರಯೋಜನ ಪಡೆದ ಆಂಗ್ಲರು ರಾಣಿಯೊಂದಿಗೆ ಯುದ್ಧ ಮಾಡಲು ಮುಂದಾಗುತ್ತಾರೆ. ಒಬ್ಬ ಮಹಿಳೆಯನ್ನು ಸೋಲಿಸುವುದು ಏನು ಮಹಾ ಎಂದು ಪರಿಗಣಿಸಿದ ಬ್ರಿಟಿಷ್‌ರಿಗೆ ಥ್ಯಾಕರೆ ಸಾವಿನಿಂದ ಉತ್ತರ ಸಿಗುತ್ತದೆ. ಯುದ್ಧದಲ್ಲಿ ಚೆನ್ನಮ್ಮ ಗುಂಡಿನಿಂದ ಪಾರಾಗುತ್ತಾಳೆ ಆದರೆ; ತನಗೆ ಬಲಗೈಯಂತಿದ್ದ ಬಾಳಾ ಸಾಹೇಬ ಗುಂಡಿಗೆ ಆಹುತಿಯಾಗುತ್ತಾನೆ. ಬ್ರಿಟಿಷ್ ದಂಡಿನ ಗತಿ ಶೋಚನೀಯವಾಗುತ್ತದೆ. ಅವರು ದಿಕ್ಕಾಪಾಲಾಗಿ ಓಡಿಹೋಗುತ್ತಾರೆ. ಸ್ಟಿವನ್‌ಸನ್, ಈಲಿಯಟ್ ಕಿತ್ತೂರಿನಲ್ಲಿ ಬಂಧಿತರಾಗುತ್ತಾರೆ. ಚಾಪ್ಲಿನ್ ಸಂಧಾನದ ಮುಖವಾಡ ಧರಿಸಿ ಒಂದು ಪ್ರಕಟಣೆ ಹೊರಡಿಸಿ ಬಂಧಿತರಾದ ಸ್ಟಿವನ್ ಸನ್ ಈಲಿಯಟರನ್ನು ಬಿಡಿಸಿಕೊಂಡನಂತರ ಮತ್ತೆ ಯುದ್ಧ ಸಾರುತ್ತಾನೆ. ಯುದ್ಧದಲ್ಲಿ ಕಿತ್ತೂರಿಗೆ ಮೊದಲಿನ ಜಯ ದೊರಕುತ್ತದೆ. ಬ್ರಿಟಷರು ಬೈಲಹೊಂಗಲಿನ ಚಿದಂಬರ ದೀಕ್ಷಿತ, ಪ್ರಧಾನಿ ಗುರುಸಿದ್ಧಪ್ಪ ರಾಮಲಿಂಗಪ್ಪ ಅಮಟೂರ ಸೈದನ್, ಕೊಣ್ಣೂರ್‌ಮಲ್ಲಪ್ಪ, ಸಂಗೊಳ್ಳಿರಾಯಣ್ಣ, ಗಜವೀರ ಬಿಚ್ಚುಗತ್ತಿ ಚೆನ್ನಪ್ಪ ಮುಂತಾದವರನ್ನು ಹತ್ತಿಕ್ಕಲು ಹವಣಿಸುತ್ತಾರೆ. ಸಾಮಾನ್ಯವಾಗಿ ಶಿವಬಸಪ್ಪನಿಗೆ ಕಿತ್ತೂರಿನ ಅಧಿಕಾರದ ಆಸೆ ತೋರಿಸಿ, ಎರಡನೆಯ ದಿನದ ಯುದ್ಧದಲ್ಲಿ ರಾಣಿ ಚೆನ್ನಮ್ಮ ಸೋಲು ಉಂಟಾಗಲು ಸಂಚು ರೂಪಿಸುತ್ತಾರೆ. ದೇಶದ್ರೋಹಿಗಳು ಮದ್ದುಗುಂಡುಗಳಲ್ಲಿ ಸಗಣಿ ಸೇರಿಸಿ ಸಿಡಿಯದಂತೆ ಮಾಡುತ್ತಾರೆ. ಚೆನ್ನಮ್ಮ ರಾಣಿ ಎಷ್ಟೇ ವಿರೋಧ ವ್ಯಕ್ತಪಡಿಸಿದರೂ ಹಿತಶತ್ರುಗಳಿಂದ ಸೋಲುತ್ತಾಳೆ. ಬ್ರಿಟಿಷರು ಚೆನ್ನಮ್ಮ, ರುದ್ರಮ್ಮ ನೀಲಮ್ಮ ಚಿಕ್ಕದೇಸಾಯಿಯವರನ್ನು ಬಂಧಿಸಿ ಬೈಲಹೊಂಗಲ ಕಾರವಾಸಕ್ಕೆ ಕರೆದೊಯುತ್ತಾರೆ. ನಾಗರಕಟ್ಟಿ ರಾಯಣ್ಣ, ಬಾಲಣ್ಣ, ಗಜವೀರ ಚೆನ್ನಪ್ಪ ಮೆಲ್ಲನೆ ನುಸುಳಿಕೊಳ್ಳುತ್ತಾರೆ. ಉಳಿದ ಸೈನಿಕರನ್ನು ಬ್ರಿಟಿಷರು ಕೊಲ್ಲುತ್ತಾರೆ.

ಎಂತಹದ್ದೇ ಕಷ್ಟ ಬಂದರೂ ಅದನ್ನು ಎದುರಿಸಿ ನಿಲ್ಲುವ ಚೆನ್ನಮ್ಮ ರಾಣಿಯ ಧೈರ್ಯ ಸಾಹಸ ಮನಸ್ಥಿತಿಯನ್ನು ನಾಡಿನ ಎಲ್ಲ ಪ್ರಜೆಗಳಿಗೆ ಮನದಟ್ಟು ಮಾಡುವ ಉದ್ದೇಶವನ್ನು ಈ ಕಾದಂಬರಿಯಲ್ಲಿ ಲೇಖಕರು ರಾಣಿಚೆನ್ನಮ್ಮನ ಪಾತ್ರದ ಮೂಲಕ ತೋರಿಸಿದ್ದಾರೆ. ಅಲ್ಲದೆ ಉಪ್ಪು ತಿಂದ ಮನೆಗೆ ದ್ರೋಹ ಬಗೆದ ಶಿವಪ್ಪನಿಗಾದ ಗಲ್ಲು ಶಿಕ್ಷೆಯು ಪ್ರತಿಯೊಬ್ಬರಿಗೂ ಎಚ್ಚರದ ಸಂದೇಶವಾಗಿದೆ ಎಂದರೆ ತಪ್ಪಾಗಲಾರದು.

ಯುದ್ಧದಲ್ಲಿ ಜಯ ಗಳಿಸಿದ ಬ್ರಿಟಿಷರು ಕಿತ್ತೂರು ಸಂಸ್ಥಾನವನ್ನು ಕಂಪನಿ ಸರ್ಕಾರಕ್ಕೆ ಸೇರಿಸಿಕೊಳ್ಳುತ್ತಾರೆ. ಅಲ್ಲದೆ ಕಿತ್ತೂರಿನಲ್ಲಿದ್ದ ಬೆಲೆಬಾಳುವ ಮುತ್ತು ರತ್ನ, ಆಭರಣಗಳು, ಹಣ, ಆನೆಗಳು, ಕುದುರೆಗಳು, ಒಂಟೆಗಳು, ಕಬ್ಬಿಣ ಕಂಚಿನ ತೋಪುಗಳು, ಬಂದೂಕುಗಳು ಮದ್ದುಗುಂಡುಗಳೆಲ್ಲವನ್ನು ವಶಪಡಿಸಿಕೊಳ್ಳುತ್ತಾರೆ. ಕಿತ್ತೂರು ಸಾಮ್ರಾಜ್ಯದ ಮೇಲೆ ತಮ್ಮ ಸ್ವಾಮ್ಯ ಸ್ಥಾಪಿಸಿ ಕಿತ್ತೂರ ಕಿಲ್ಲೆಯ ಮೇಲೆ ಮೆರೆದಾಡುತ್ತಿದ್ದ ಸಂಸ್ಥಾನದ ಬಾವುಟ ಇಳಿಸಿ, ತಮ್ಮ ಧ್ವಜವನ್ನು ಏರಿಸುತ್ತಾರೆ. ಇದರಿಂದ ರೊಚ್ಚಿಗೆದ್ದ ರಾಯಣ್ಣ ಸೈನ್ಯ ಸಂಘಟಿಸಿ ಹೋರಾಟ ಮಾಡಿದರೂ ಫಲಕಾರಿಯಾಗದೆ, ಅವನನ್ನು ಗಜವೀರ, ನಾಗರಕಟ್ಟಿ, ಚೆನ್ನಬಸಪ್ಪ ಬಾಲಣ್ಣ ರಾಮಣ್ಣರಿಗೆ ಧಾರವಾಡನಗರ ಚೌಕದಲ್ಲಿ ಗಲ್ಲುಕಂಬಕ್ಕೆ ಹಾಕುತ್ತಾರೆ. ಇವರಲ್ಲಿದ್ದ ದೇಶಭಕ್ತಿ ರಾಣಿ ಚೆನ್ನಮ್ಮನ ಮೇಲಿನ ಅಭಿಮಾನ ಸಾವಿನಂಚಿನಲ್ಲು ನಾಡುನುಡಿಯ ಬಗ್ಗೆಯಿದ್ದ ಅಭಿಮಾನದ ಸನ್ನಿವೇಶವನ್ನು ಕಾದಂಬರಿಕಾರರು ಮನಕಲಕುಗುವಂತೆ ಚಿತ್ರಿಸಿದ್ದಾರೆ.

ವೀರವ್ವ, ಚಿಕ್ಕ ದೇಸಾಯರನ್ನು ಇರಿದು, ತಾನು ಇರಿದುಕೊಂಡು, 'ದಾಸ್ಯ ಕಿತ್ತೂರಿನಲ್ಲಿ ಬದುಕಬಾರದೆಂದು' ಮಡಿಯುತ್ತಾರೆ. ಕ್ಯಾಪ್ಟನ್ ಹ್ಯಾರಿಸ್‌ನಿಂದ ಈ ಎಲ್ಲ ಸುದ್ದಿಯನ್ನು ತಿಳಿದ ಚೆನ್ನಮ್ಮ ಸಹ ಸಾಯುತ್ತಾಳೆ. ರಾಣಿಯ ಒಂಟಿತನ, ದಾಸ್ಯದ ಬಗ್ಗೆ ಅವಳಿಗಿದ್ದ ದ್ವೇಷ, ತನ್ನ ಪ್ರಜೆಗಳು, ಹಿತಬಾಂಧವರೆಲ್ಲರ ಸಾವು ರಾಣಿಯ ಸಾವು ನಾಡು ನುಡಿಯ ಅಭಿಮಾನವೆಲ್ಲವೂ ಸಹೃದಯ ಮಿಡಿಯುವಂತೆ ವರ್ಣಿಸಲಾಗಿದೆ.

ಕಿತ್ತೂರ ಚೆನ್ನಮ್ಮ ಕೇಂದ್ರಪಾತ್ರವಾದರೂ ಲೇಖಕರು, ಐತಿಹಾಸಿಕ ವ್ಯಕ್ತಿಗಳೊಂದಿಗೆ ಚಿದಂಬರ ದೀಕ್ಷಿತ, ಸದಾಶಿವಶಾಸ್ತ್ರಿ, ನಾಗರಕಟ್ಟಿ, ಶಿವಕುಮಾರ, ಕ್ಯಾಪ್ಟನ್‌ಹ್ಯಾರಿಸ್, ಕಲಾವತಿ, ಬಾಳಪ್ಪ ಮೊದಲಾದ ಕಾಲ್ಪನಿಕ ಪಾತ್ರಗಳನ್ನು ಸೃಷ್ಟಿಸಿದ್ದಾರೆ. ಈ ಪಾತ್ರಗಳ ವರ್ತನೆ, ಮಾತುಗಳು ಹಿತಮಿತವಾಗಿದ್ದು, ಕೇಂದ್ರಪಾತ್ರಕ್ಕೆ ಪೂರಕವಾಗಿ ಐತಿಹಾಸಿಕ ಘಟನೆಗಳನ್ನು ಜೀವಂತಗೊಳಿಸುತ್ತದೆ. ಚೆನ್ನಮ್ಮ ಕಲಾವತಿ, ದೀಕ್ಷಿತ ಶಾಸ್ತ್ರಿ, ರಾಮಣ್ಣ, ಥ್ಯಾಕರೆ, ಮಲ್ಲಪ್ಪ ಶೆಟ್ಟಿ, ಪಾತ್ರಗಳು ಮರೆಯದ ಪಾತ್ರಗಳಾಗಿದ್ದರು. ರಾಣಿ ಚೆನ್ನಮ್ಮ ಇಂದಿಗೂ ಆದರ್ಶ ನೆಲೆಯಲ್ಲಿ ನೋಡುವ ಪಾತ್ರವಾಗಿ ಮೂಡಿ ಬಂದಿದ್ದಾಳೆ.

ಕೆ.ವಿ. ರಾಜೇಶ್ವರಿ ಅವರ 'ವೀರವನಿತೆ ಕಿತ್ತೂರ ಚೆನ್ನಮ್ಮ' ಕಾದಂಬರಿಯೂ ಗಾತ್ರದ ದೃಷ್ಟಿಯಿಂದ ಚಿಕ್ಕದಾದ ಕಾದಂಬರಿ. ತಾಯಿನಾಡು ಸ್ವರ್ಗಕ್ಕಿಂತಲೂ ಮಿಗಿಲೆಂದು ತಿಳಿದ ನಮ್ಮ ದೇಶದಲ್ಲಿ ಒಗ್ಗಟ್ಟಿಲ್ಲದ ಕಾರಣ ಬ್ರಿಟಿಷರು ನಮ್ಮನ್ನು ಗುಲಾಮರನ್ನಾಗಿ ಮಾಡಿ ಆಳ್ವಿಕೆ ಮಾಡಲು ಸಾಧ್ಯವಾಯಿತು. ಬೇರೆಯವರ ಅನಾನುಕೂಲವನ್ನೇ ತಮ್ಮ ಅನುಕೂಲವನ್ನಾಗಿ ಬಳಸಿಕೊಂಡವರಲ್ಲಿ

ಬ್ರಿಟಿಷರು ಪ್ರಮುಖರಾಗಿದ್ದಾರೆ. ವ್ಯಾಪಾರಕ್ಕೆಂದು ಬಂದ ಅವರು ಇಡೀ ದೇಶವನ್ನೇ ಆಕ್ರಮಿಸಿಕೊಂಡರು. ಒಬ್ಬರ ಮೇಲ್ಲೊಬ್ಬರನ್ನು ಎತ್ತಿ ಕಟ್ಟಿ ತಮ್ಮನ್ನು ಎದುರಿಸಿ ನಿಂತವರನ್ನು ಶಕ್ತಿಯಿಂದಲೋ, ಯುಕ್ತಿಯಿಂದಲೋ, ಕುತಂತ್ರದಿಂದಲೋ ಸೋಲಿಸಿದರು. ಇಂಥವರನ್ನು ಭಾರತದಿಂದ ಓಡಿಸಿಲು ಅನೇಕ ರಾಜ್ಯಗಳಲ್ಲಿ ಅನೇಕ ಪುರುಷರು, ಮಹಿಳೆಯರು ಪ್ರಯತ್ನಗಳನ್ನು ಮಾಡುತ್ತಲೇ ಇದ್ದರು. ಇಂತಹ ಹೋರಾಟದಲ್ಲಿ ಕಿತ್ತೂರು ರಾಜ್ಯದ ಚೆನ್ನಮ್ಮ ರಾಣಿ ಅಗ್ರಗಣ್ಯಳಾಗಿದ್ದಾಳೆ.

ಹೆಣ್ಣೆಂದರೆ ಭೋಗವಸ್ತು; ಅವಳು ಮನೆಯನ್ನು ನೋಡಿಕೊಳ್ಳುವುದು, ಮಕ್ಕಳನ್ನು ಸಾಕುವುದಕ್ಕೆ ಮಾತ್ರ ಸೀಮಿತ ಎಂಬ ಭಾವನೆಯಿದ್ದ ಆ ಕಾಲದಲ್ಲಿ ಕತ್ತಿ ಹಿಡಿದು ಬ್ರಟಿಷರಂತಹ ಬಲ ಶಾಲಿಗಳನ್ನು ಎದುರಿಸಿ ನಿಂತ ಚೆನ್ನಮ್ಮ ರಾಣಿಯ ಕಥೆ ಕೇಳಿದರೆ ಮೈ ರೋಮಾಂಚನಗೊಳ್ಳುತ್ತದೆ.

ಈ ವೀರರಾಣಿಯ ಕಥೆ ಎಲ್ಲರಿಗೂ ಸ್ಫೂರ್ತಿ, ಧೈರ್ಯ ಕೊಡುವಂತಹುದು. ಆಕೆಯ ಕಥೆಯನ್ನು ತಿಳಿದುಕೊಂಡಾಗ ಓದುಗ ಸಹೃದಯರಿಗೂ ತಾಯ್ನಾಡಿನ ಬಗ್ಗೆ ಅಭಿಮಾನ ಹುಟ್ಟಿ ಎಲ್ಲರೂ ತಾಯ್ನಾಡಿನ ರಕ್ಷಣೆಗೆ ನಿಂತರೆ ಪರಕೀಯರೆಂದಿಗೂ ನಮ್ಮ ಮೇಲೆ ದಬ್ಬಾಳಿಕೆ ಮಾಡಲು ಸಾಧ್ಯವೇ ಇಲ್ಲ ಎನ್ನುವ ಸಂದೇಶವನ್ನು ಸಾರುವ ಉದ್ದೇಶವನ್ನು ಲೇಖಕರು ಕಾದಂಬರಿಯ ಮೂಲಕ ತಿಳಿಸಿದ್ದಾರೆ.

ಕಿತ್ತೂರು ಸಣ್ಣ ರಾಜ್ಯವಾದರೂ, ಮಲ್ಲಸರ್ಜ ದೇಸಾಯಿ ಶೌರ್ಯ, ಧೈರ್ಯ, ಸಾಹಸಗಳಿಗೆ ಹೆಸರು ವಾಸಿವಾಗಿದ್ದ. ಈತನ ಪತ್ನಿಯಾದ ರುದ್ರಮ್ಮರಾಣಿ ರಾಜಕಾರಣದಲ್ಲಿ ಪತಿಗೆ ಬೇಕಾದ ಮಾರ್ಗದರ್ಶನ ಮಾಡುತ್ತಿದ್ದಳು.

ಕಾದಂಬರಿಯಲ್ಲಿ ಕಿತ್ತೂರ ರಾಣಿ ಚೆನ್ನಮ್ಮಾಜಿಯ ಪಾತ್ರ ವಿವರಣೆಕ್ಕಿಂತ ಮೊದಮೊದಲೇ ಕಿತ್ತೂರಿನ ಇತಿಹಾಸದ ಕುರಿತು ವಿವರಣೆಯಿದೆ. ಕಿತ್ತೂರಿನೊಂದಿಗೆ, ಟಿಪ್ಪುಸುಲ್ತಾನನ ಸಂಬಂಧ ಪೇಶ್ವೆಯವರ ಸಂಬಂಧ, ಸುತ್ತಮುತ್ತಲಿನ ಸಣ್ಣಪುಟ್ಟ ರಾಜ್ಯದ ನಡುವಿನ ಬಾಂಧವ್ಯ ವೈರತ್ವದ ಬಗ್ಗೆ, ಪೇಶ್ವೆಯವರ ಆಡಳಿತಕ್ಕೆ ಒಳಪಟ್ಟ ಸಾಮ್ರಾಜ್ಯವನ್ನು ಮುಕ್ತಗೊಳಿಸಿ ಸ್ವತಂತ್ರ ರಾಜ್ಯವನ್ನಾಗಿ ಮಾಡುವಲ್ಲಿ ಮಲ್ಲಸರ್ಜದೇಸಾಯಿ ಪಾತ್ರದ ಕುರಿತು ಸುಮಾರು ೧೦ ಪುಟಗಳಷ್ಟು ಕೆಳದಿ ಇತಿಹಾಸದ ವಿವರಣೆಯಿದೆ.

ಕಾಕತಿ ಸಂಸ್ಥಾನದ ಧೂಳಪ್ಪ ದೇಸಾಯಿ ಅವರ ಮಗಳೇ 'ರಾಣಿಚೆನ್ನಮ್ಮ'. ಧೂಳಪ್ಪ ದೇಸಾಯಿ ಮಗಳನ್ನು ಹೆಣ್ಣೆಂದು ಕಡೆಗಣಿಸಲಿಲ್ಲ. ಅವಳೇ ತಮ್ಮ ಗಂಡುಮಗು ಎಂಬ ರೀತಿಯಲ್ಲಿ ಮಗಳನ್ನು ಬೆಳೆಸಿದರು. 'ಬೆಳೆಯ ಪೈರು ಮೊಳಕೆಯಲ್ಲೇ' ಎಂಬಂತೆ ಬಾಲ್ಯದಿಂದಲೇ ಚೆನ್ನಮ್ಮಳ ಗುಣಗಳು ಪ್ರಕಾಶಕ್ಕೆ ಬರತೊಡಗಿದವು. ತಂದೆಯ ಪ್ರೋತ್ಸಾಹದಿಂದ ಚಿಕ್ಕಂದಿನಲ್ಲಿಯೇ ಕತ್ತಿ - ಗುರಾಣಿ ಹಿಡಿದು ಕಾದಾಡುವುದನ್ನು, ಕತ್ತಿವರಸೆ ಬಿಲ್ಲು ವಿದ್ಯೆ, ಖಡ್ಗವಿದ್ಯೆ ಮುಂತಾದ ವಿದ್ಯೆಗಳನ್ನು ಕಲಿತಳು. ಪುರುಷವೇಷ ಹಾಕಿಕೊಂಡು ತಂದೆಯೊಡನೆ ಚೆನ್ನಮ್ಮ ಬೇಟೆಗೆ ಹೊರಟಳೆಂದರೆ ಅವಳನ್ನು ಹೆಣ್ಣು ಎಂದು ಯಾರು ಹೇಳುತ್ತಿರಲಿಲ್ಲ. ಕುದುರೆ ಸವಾರಿ,

ಕತ್ತಿವರಸೆ ಜೊತೆಗೆ ಸಂಗೀತವನ್ನು ಕಲಿತಿದ್ದಳು. ಧಾರ್ಮಿಕ ಗ್ರಂಥಗಳಲ್ಲಿ ಬರುವ ವೀರರ ಇತಿಹಾಸ ಓದಿ ಅವರಂತೆಯೇ ಶೂರರಾಗಬೇಕೆಂದು ಪ್ರಯತ್ನಿಸುತ್ತಿದ್ದಳು. ಆಕೆಯ ವ್ಯಕ್ತಿತ್ವವನ್ನು ಲೇಖಕರು ಬಹಳ ಸೊಗಸಾಗಿ ನಿರೂಪಿಸಿದ್ದಾರೆ.

ಚೆನ್ನಮ್ಮ ಬಾಲ್ಯದಲ್ಲಿಯೇ ತನ್ನ ವ್ಯಕ್ತಿತ್ವದಿಂದಾಗಿ ಹೊರ ರಾಜ್ಯಗಳಲ್ಲಿಯೂ ಹೆಸರು ವಾಸಿಯಾಗಿದ್ದಳು. ಸಕಲ ವಿದ್ಯೆಗಳಲ್ಲಿ ನಿಪುಣಳಾದ ಈಕೆಗೆ ತಂದೆ ತಾಯಿ ಮದುವೆಯ ವಿಚಾರದಲ್ಲಿ ಸಂಪೂರ್ಣ ಸ್ವಾತಂತ್ರ್ಯವನ್ನು ನೀಡುತ್ತಾರೆ. ಚೆನ್ನಮ್ಮ ತನಗೆ ಅನುರೂಪನಾದ ವರನನ್ನು ನಾನೇ ಹುಡುಕಿಕೊಳ್ಳುತ್ತೇನೆ. ಅದಕ್ಕಾಗಿ ನೀವು ಕಷ್ಟಪಡುವುದು ಬೇಡ ಎಂದು ತಿಳಿಸುತ್ತಾಳೆ. 'ಮೃದೂನಿ ಕುಸುಮದಪಿ ವಜ್ರಾದಪಿ ಕಠೋರಾಣಿ' (ರಾಜೇಶ್ವರಿ ಕೆ.ವಿ.; ೨೦೧೧; ಪು.೧೬) ಎಂಬಂತೆ ಸುಂದರಿಯಾದ ಚೆನ್ನಮ್ಮ ಕುಸುಮದಂತೆ ಮೃದುವಾಗಿದ್ದರೂ ಅವಳಲ್ಲಿದ್ದ ಕ್ಷಾತ್ರತೇಜ ವಜ್ರದಂತೆ ಕಠಿಣವಾಗಿತ್ತು. ಕ್ಷಾತ್ರತೇಜ ಗುಣವುಳ್ಳ ಮಲ್ಲಸರ್ಜ ದೇಸಾಯಿಯೊಡನೆ ಎಲ್ಲರ ಒಪ್ಪಿಗೆ ಪಡೆದು ವೈಭವದಿಂದ ಶುಭಮುಹೂರ್ತದಲ್ಲಿ ವಿವಾಹವಾಗುತ್ತಾಳೆ.

ಚೆನ್ನಮ್ಮ ಮದುವೆಯಾದ ಮೇಲೆ ನಾಲ್ಕು ಗೋಡೆಗಳ ನಡುವೆ ಕುಳಿತುಕೊಳ್ಳಲಿಲ್ಲ. ಕಿತ್ತೂರಿನ ರಾಜಕಾರಣದಲ್ಲಿ ಕ್ರಮೇಣ ಪಾಲ್ಗೊಳ್ಳತೊಡಗಿದಳು. ಈಕೆಯ ರಾಣಕಾರಣ ಪ್ರವೇಶದಿಂದ ಹಿರಿಯರಾಣಿ ತನ್ನ ಪ್ರಭಾವ ಕಡಿಮೆಯಾಯಿತು ಎಂದು ಮರುಗಲಿಲ್ಲ. ಇವರು ಸವತಿಮತ್ಸರ ತೋರದೇ ಅಕ್ಕ-ತಂಗಿಯರಂತೆ ಸಹಬಾಳ್ವೆ ನಡೆಸುತ್ತಿದ್ದರು. ಚೆನ್ನಮ್ಮ ರಾಜ್ಯದ ಹಿತವನ್ನು ಸಾಧಿಸುವುದರಲಿಯೇ ತನ್ನ ಹಿತ ಅಡಗಿದೆ ಎಂದು ಮನಗಂಡು ದುಡಿಯ ತೊಡಗಿದಳು. ಜನರ ಸಮಸ್ಯೆಗಳ ಪರಿಹಾರ, ವ್ಯವಸಾಯ ಕ್ಷೇತ್ರದಲ್ಲಿ ಅಭಿವೃದ್ಧಿ, ಸೇನೆಯನ್ನು ಬಲಪಡಿಸುವುದು, ಜನರಲ್ಲಿ ಸಾಮಾಜಿಕ, ಧಾರ್ಮಿಕ ಬದಲಾವಣೆಗಳನ್ನು ತರುವುದು, ಆರ್ಥಿಕ ಕ್ಷೇತ್ರದಲ್ಲಿ ಅಭಿವೃದ್ಧಿ ಹೀಗಿ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಅವುಗಳ ಸಾಧನೆಗಾಗಿ ದುಡಿಯತೊಡಗಿದಳು. ಜನತೆಯ ಏಳಿಗೆಗಾಗಿ ಚೆನ್ನಮ್ಮ ರೂಪಿಸಿದ ಅನೇಕ ಕಾರ್ಯಕಾರ್ಯಕ್ರಮಗಳು ಇಂದಿಗೂ ಮಾದರಿಯಾಗುವಂತೆ ಕಾದಂಬರಿಯಲ್ಲಿ ನಿರೂಪಣೆಗೊಂಡಿದೆ.

ಮಲ್ಲಸರ್ಜ ದೊರೆಯು ನಿಧನರಾದಾಗ ರುದ್ರಮ್ಮ ರಾಣಿ ಸಹಗಮನ ಮಾಡುತ್ತೇನೆ ಎಂದು ನಿರ್ಧರಿಸುತ್ತಾಳೆ. ಆದರೆ ಚೆನ್ನಮ್ಮ ತನ್ನಲ್ಲಿ ಎಷ್ಟೇ ದುಃಖವಿದ್ದರೂ ಅದನ್ನು ತೋರಿಸಿಕೊಳ್ಳದೇ ರಾಜ್ಯದ ಹಿತಚಿಂತನೆಯ ಕಡೆಗೆ ಗಮನಹರಿಸುತ್ತಾಳೆ. ತನ್ನ ಕಣ್ಣೀರನ್ನು ತಾನೆ ಒರೆಸಿಕೊಂಡು, ಶಿವಲಿಂಗ ರುದ್ರಸರ್ಜನಿಗೆ ವಿಜೃಂಭಣೆಯಿಂದ ಪಟ್ಟಾಭಿಷೇಕ ಮಾಡುತ್ತಾಳೆ.

ನಮ್ಮ ರಾಜರಲ್ಲಿ ಒಗ್ಗಟ್ಟಿಲ್ಲದೆ ಬರೀ ಒಳಜಗಳಗಳು ಸ್ವ-ಪ್ರತಿಷ್ಠೆಗಳೇ ತುಂಬಿದ್ದವು. ಇಂತಹ ಸಂದರ್ಭದಲ್ಲಿ ಇದರ ಲಾಭ ಪಡೆದು ಇಂಗ್ಲೀಷರು ಕೆಳದಿ ರಾಜ್ಯವನ್ನು ತಮ್ಮ ಅಧೀನಕ್ಕೆ ಒಳಪಡಿಸಿಕೊಳ್ಳಲು ಸಂಚು ರೂಪಿಸುತ್ತಾರೆ. ಮರಾಠಿಗೂ ಮತ್ತು ಇಂಗ್ಲೀಷರಿಗೂ ಯುದ್ಧ ಪ್ರಾರಂಭವಾಗುತ್ತದೆ. ಶಿವಲಿಂಗ ರುದ್ರಸರ್ಜ ಇಂಗ್ಲೀಷರಿಗೆ ಸಹಾಯ ಮಾಡುತ್ತೇನೆ ಎಂದಾಗ ಚೆನ್ನಮ್ಮ ಮಗನಿಗೆ ಬುದ್ಧಿವಾದ ಮಾಡುವ ರೀತಿ ಅವರ ನಡುವಿನ ಸಂಭಾಷಣೆ ಇಂದಿನ ಕಾಲಕ್ಕೂ ಪ್ರಸ್ತುತವಾಗುವಂತಿದೆ. ಶಿವಲಿಂಗ ರುದ್ರಸರ್ಜ ಮಲ್ಲಪ್ಪಶೆಟ್ಟಿ ಹಾಗೂ ವೆಂಕಟರಾಯನ

ಮಾತು ಕೇಳಿ ಇಂಗ್ಲೀಷರಿಗೆ ಕಪ್ಪ ಕೊಡಲು ಒಪ್ಪಂದ ಮಾಡಿಕೊಳ್ಳುತ್ತಾನೆ. ಆದರೆ ಚೆನ್ನಮ್ಮ ಈ ವಿಷಯವನ್ನು ತಿಳಿದು ಕಿಡಿಕಿಡಿಯಾಗಿ, ಇಂಗ್ಲೀಷರಿಗೇಕೆ ಕಪ್ಪ ಕೊಡಬೇಕು? ಖಾನಪುರ ಅವರಿಗೇ ಬಿಟ್ಟು ಕೊಡಬೇಕು. ಈ ಕರಾರು ಖಂಡಿತ ನಡೆಯಕೂಡದು ಎಂದು ಪಟ್ಟುಹಿಡಿದ ಚೆನ್ನಮ್ಮಳನ್ನು ಲೇಖಕರರು ಬಂಡಾಯಗಾರ್ತಿಯನ್ನಾಗಿ ಚಿತ್ರಿಸಿದ್ದಾರೆ.

ಶಿವಲಿಂಗ ಸರ್ಜನು ಅಕಾಲಿಕ ರೋಗಕ್ಕೆ ತುತ್ತಾಗಿ ಅನಾರೋಗ್ಯ ಪೀಡಿತನಾಗಿ ಸಂತಾನವಿಲ್ಲದೆ ಮಡಿಯುತ್ತಾನೆಂದು ಹತ್ತಿರದ ಸಂಬಂಧಿ ಮಗನನ್ನು ಕರೆತಂದು 'ಗುರುಲಿಂಗ ಮಲ್ಲಸರ್ಜ'ನೆಂದು ನಾಮಕರಣ ಮಾಡಿ ದತ್ತು ಸ್ವೀಕಾರದ ಕಾರ್ಯವನ್ನು ಚೆನ್ನಮ್ಮ ಮಾಡಿ ಮುಗಿಸುತ್ತಾಳೆ. ಆದರೆ ಮಲ್ಲಪ್ಪಶೆಟ್ಟಿ ಕಂಪನಿ ಸರ್ಕಾರದಿಂದ ಒಪ್ಪಿಗೆ ಬೇಕೆಂದು ಹೇಳುವಾಗ ರಾಣಿ ಕಿಡಿಯಾಗುತ್ತಾಳೆ.

"ಕಿತ್ತೂರಿನ ಕಲಿಗಳೇ, ನಾವಿಂದು ರಾಜ್ಯ ದಾಹಕ್ಕಾಗಿ ಕತ್ತಿ ಹಿಡಿದು ನಿಂತಿಲ್ಲ. ನಮ್ಮ ಮಾತೃಭೂಮಿಯನ್ನು ನಮಗೆ ದಕ್ಕಿಸಿಕೊಳ್ಳಲೆಂದು ಕತ್ತಿ ಹಿಡಿದು ನಿಂತಿದ್ದೇವೆ. ಹೆತ್ತ ತಾಯಿಯನ್ನು ಕಂಡವರಿಗೆ ಒಪ್ಪಿಸುವುದಕ್ಕಿಂತ ಸಾವೇ ಮೇಲು. ನಮ್ಮಲ್ಲಿ ಕೆಚ್ಚೆದೆಯ ಕಲಿಗಳಿಗೇನೂ ಕಡಿಮೆಯಿಲ್ಲ. ಕೆಂಪು ಮುಸುಡಿಯವರನ್ನು ಈ ದೇಶದಿಂದ ಹೊಡೆದೋಡಿಸೋಣ. ನೆನಪಿಡಿ, ಗೆದ್ದರೆ ರಾಜ್ಯ, ಸತ್ತರೆ ವೀರಸ್ವರ್ಗ, ಯಾರೂ ರಣಹೇಡಿಗಳಾಗಿ ಮುಖ ತಿರುಗಿಸುವುದಿಲ್ಲವೆಂದು ನಾನು ನಂಬಿದ್ದೇನೆ. ನಮ್ಮ ಮಾತೃಭೂಮಿಯ ರಕ್ಷಣೆಗೆ ಪಣತೊಟ್ಟಿರುವ ನಮಗೆ ಜಯ ಶತಸಿದ್ಧ. ನಮ್ಮದು ನ್ಯಾಯವಾದ ಹೋರಾಟ" (ಅದೇ; ಪು. ೭೦) ಎಂದು ರಾಣಿ ಅಶ್ವಾರೋಹಿಯಾಗಿ ಸಂಚರಿಸುತ್ತ ತನ್ನ ಸೈನಿಕರನ್ನು ಹುರಿದುಂಬಿಸುತ್ತಿದ್ದಳು. ಈಕೆಯ ಇಂಥ ಸಮಯ ಸ್ಫೂರ್ತಿಯ ಮಾತುಗಳು ಆದರ್ಶವಾಗಿದೆ. ಯುದ್ಧದಲ್ಲಿ ಥ್ಯಾಕರೆಯು ಸಾಯುತ್ತಾನೆ. ಕಿತ್ತೂರಿಗೆ ವಿಜಯ ಪ್ರಾಪ್ತವಾಗುತ್ತದೆ. ಸೆರೆಸಿಕ್ಕ ಆಂಗ್ಲ ಸೈನಿಕರೊಡನೆ ರಾಣಿಯು ಒಳ್ಳೆಯತನದಿಂದಲೇ ನಡೆದುಕೊಳ್ಳುತ್ತಾಳೆ. ಶುತ್ರು ಸೈನಿಕರೆಂದು ಅವರನ್ನು ಹಿಂಸಿಸಲಿಲ್ಲ. ತೊಂದರೆ ಮಾಡಲಿಲ್ಲ. ಈಕೆಯ ಈ ಔದಾರ್ಯವನ್ನು ಆಂಗ್ಲ ಸೈನಿಕರು ಬಹುವಾಗಿ ಹೊಗಳಿದರು. ಯುದ್ಧದಲ್ಲಿ ಜಯ ದೊರೆತರೂ ರಾಣಿ ತನ್ನ ಮುಂದಾಲೋಚನೆಯಿಂದ ಕಂಪನಿ ಸರ್ಕಾರವು ಬಹು ಸೈನ್ಯದೊಡನೆ ತಮ್ಮ ಮೇಲೆ ದಂಡೆತ್ತಿ ಬರುತ್ತಾರೆಂದು ತಿಳಿದು ಅದಕ್ಕೆ ಪೂರಕವಾದ ಸಿದ್ಧತೆ ಮಾಡಲು ಮುಂದಾಗುತ್ತಾಳೆ. ರಾಣಿಗೆ ರಾಜ್ಯದಾಹವಿರಲಿಲ್ಲ. ಇಂಗ್ಲೀಷರಿಗೆ ಬುದ್ಧಿ ಕಲಿಸಬೇಕು, ಕನ್ನಡತಿಯ ಶೌರ್ಯವನ್ನು ತೋರಿಸಿ, ದಾಸ್ಯದಿಂದ ಮುಕ್ತರಾಗಬೇಕೆಂಬ ಆಸೆ ಇತ್ತು. ಕಪಟ, ಮೋಸ, ವಂಚನೆ, ಒಬ್ಬರ ಮೇಲೊಬ್ಬರನ್ನು ಎತ್ತಿ ಕಟ್ಟುವುದರಲ್ಲಿ ಆಂಗ್ಲರೂ ನಿಸ್ಸಿಮರು. ಅಂಥ ದೇಶದ್ರೋಹಿಗಳ ವಿರುದ್ಧ ತನ್ನ ನಾಡಿಗಾಗಿ ಹೋರಾಡಲು ಚೆನ್ನಮ್ಮ ಸಿದ್ಧಳಾದಳು. ಆದರೆ ದುರಾದೃಷ್ಟತೆಯಿಂದ ಚೆನ್ನಮ್ಮ ರಾಣಿ ಮತ್ತು ಪರಿಹಾರದವರು ಆಂಗ್ಲರ ವಶವಾಗುತ್ತಾರೆ ಅವರನ್ನು ಬೈಲಹೊಂಗಲದ ಕೋಟೆಗೆ ತೆಗೆದುಕೊಂಡು ಹೋಗಿ ಬಂದಿಯಾಗಿಟ್ಟರು. ಯುದ್ಧದ ಭೀಕರ ಪರಿಣಾಮವನ್ನು ಕಾದಂಬರಿಕಾರ್ತಿ ಮಾರ್ಮಿಕವಾಗಿ ಚಿತ್ರಿಸಿದ್ದಾರೆ. ಆಂಗ್ಲರಿಗೂ ಮತ್ತು ಕಿತ್ತೂರಿನಿನ ಸೈನಿಕರಿಗೂ ನಡೆದ ಯುದ್ಧದ ವರ್ಣನೆ ಹೃದಯ ಕರಗುವಂತೆ ಚಿತ್ರಿಸಲಾಗಿದೆ.

ದೇಶದ್ರೋಹಿ ಕೆಲಸ ಮಾಡಿದ ಶಿವಬಸಪ್ಪನ ಶಿಕ್ಷೆ ಬೇರೆಯುವರಿಗೆ ಒಂದು ಪಾಠ ವಾದಂತಾಯಿತು. ಬಂಧನದಲ್ಲಿ ಇದ್ದರೂ ರಾಣಿಯ ಮನಸ್ಸು ಮಾತ್ರ ಸದಾ ಕಿತ್ತೂರಿನ

ಸ್ವಾತಂತ್ರ್ಯದ ಕನಸು ಕಾಣುತ್ತಿತ್ತು. ರಾಯಣ್ಣ ತನ್ನನ್ನು ಬಂಧಮುಕ್ತಳನ್ನಾಗಿ ಮಾಡುತ್ತಾನೆ ಎಂಬ ವಿಷಯ ಆಕೆಗೆ ಧೈರ್ಯ ಉತ್ಸಾಹವನ್ನು ಕೊಟ್ಟಿತ್ತು. ಬದುಕುವ ಶಕ್ತಿಯನ್ನು ಕೊಟ್ಟಿತ್ತು. ಆದರೆ ರಾಯಣ್ಣ ತಾನು ನಂಬಿದವರಿಂದಲೇ ಮೋಸಕ್ಕೆ ಒಳಗಾಗಿ ಆಂಗ್ಲರ ಕೈವಶವಾಗುತ್ತಾನೆ. ಅಲ್ಲದೆ ಮರಣದಂಡನೆ ಶಿಕ್ಷೆ ಒಳಗಾಗುತ್ತಾನೆ. ಈ ಸುದ್ದಿ ತಿಳಿದ ಚೆನ್ನಮ್ಮ ಇನ್ನು ಯಾರಿಗಾಗಿ ಬದುಕುವುದು; ಮುಂದಿನ ಜನ್ಮವಿದ್ದರೆ ಮತ್ತೆ ಕಿತ್ತೂರಿನಲ್ಲಿ ಹುಟ್ಟಿ ಆಂಗ್ಲರನ್ನು ದೇಶದಿಂದ ಹೊರ ಹಾಕೋಣ ಎಂದು ಹೇಳುತ್ತಾ ತನ್ನ ಕೊನೆ ಉಸಿರನ್ನು ಬಿಡುತ್ತಾಳೆ. ಬಲಶಾಲಿಯಾದ ಬ್ರಿಟಿಷ್ ಚಕ್ರಾಧಿಪತ್ಯದ ವಿರುದ್ಧ ಹೋರಾಡಿದ ರಾಜ್ಯಾಧಿಪತಿಗಳಲ್ಲಿ ಮೊದಲಿಗಳು. ಅವಳು ಬ್ರಿಟಿಷರ ವಿರುದ್ಧ ಜಯ ಸಂಪಾದಿಸಿ ಹಲವು ಕಾಲ ತನ್ನ ರಾಜ್ಯವನ್ನು ಸಂರಕ್ಷಿಸಿಕೊಂಡಳು. ರಾಣಿ ಚೆನ್ನಮ್ಮ ಒಂದು ಸಣ್ಣ ಸಂಸ್ಥಾನದ ರಾಣಿಯಾದರೂ ಅತ್ಯಂತ ದೇಶಾಭಿಮಾನಿಯೂ, ಅದಮ್ಯವಾದ ಧೈರ್ಯಶಾಲಿನಿಯೂ ಆದ ಮಹಿಳೆಯಾಗಿದ್ದಳು. ತನ್ನ ನಾಡು ಹಾಗೂ ಜನತೆಯಲ್ಲಿ ಆಕೆಗೆ ಅನುಪಮವಾದ ಪ್ರೀತಿ ಅಭಿಮಾನ, ನಾಡಿಗಾಗಿ, ಆ ಜನತೆಯ ಸ್ವಾತಂತ್ರ್ಯಕ್ಕಾಗಿ ಅವಳು ಯಾವ ತ್ಯಾಗಕ್ಕಾದರೂ ಸಿದ್ಧಳಾಗಿದ್ದಳು. ಎಂಥ ವಿಪತ್ತೇ ಒದಗಿದರೂ ಅದನ್ನು ಎದುರಿಸುವ ಚೌಕಚಕ್ಯತೆ ಅವಳಲ್ಲಿತ್ತು. ಪ್ರಬಲರಾದ ಬ್ರಿಟಿಷರ ವಿರುದ್ಧ ಆಕೆ ಹೋರಾಡಿದಳು. ಭಯಾನಕರವಾದ ರಕ್ತಪಾತವಾದರೂ, ರಾಣಿ ಚೆನ್ನಮ್ಮನ ಧೈರ್ಯದ ಹೋರಾಟವನ್ನು ಎದುರಿಸಲಾರದೇ ಆಂಗ್ಲರು ಅತ್ಯಂತ ಹೀನಾಯಮಾನವಾಗಿ ಮುಖಭಂಗ ಹೊಂದುತ್ತಾರೆ. ಇಂಥ ಶೂರರಾಣಿಯ ಧೀರೋದಾತ್ತ ಚರಿತ್ರೆಯನ್ನು ಲೇಖಕರು ಯಾವುದೇ ಉತ್ಪ್ರೇಕ್ಷೆಯಿಲ್ಲದೆ ಚಿತ್ರಿಸಿದ್ದಾರೆ.

ನಾಡು-ನುಡಿಗಾಗಿ ಹೋರಾಡಿದ ಕೆಚ್ಚೆದೆಯ ವೀರರಾಣಿ ಕಿತ್ತೂರ ಚೆನ್ನಮ್ಮಳು ಬ್ರಿಟಿಷರನ್ನು ಭಾರತ ಬಿಟ್ಟು ತೊಲಗಿಸಬೇಕು ಎಂಬ ಆಶಯವನ್ನು ಹೊಂದಿದ್ದಳು. ಅದಕ್ಕಾಗಿ ಜನತೆಯಲ್ಲಿ ಒಗ್ಗಟ್ಟಿನಿಂದ ಇರಬೇಕು ಎಂಬ ಸಂದೇಶವನ್ನು ಲೇಖಕರು ಪಾತ್ರದ ಮೂಲಕ ತಮ್ಮ ಆಶಯವನ್ನು ವ್ಯಕ್ತಪಡಿಸಿದ್ದಾರೆ.

ಆಂಗ್ಲರನ್ನು ಭಾರತದಿಂದ ಹೊಡೆದೋಡಿಸಿ ದೇಶವನ್ನು ಸ್ವತಂತ್ರ ಮಾಡಬೇಕೆಂದು ಆಶಿಸಿದ ಚೆನ್ನಮ್ಮರಾಣಿ, ರಾಯಣ್ಣನ ಆಶಯಗಳು ಆ ಕ್ಷಣಕ್ಕೆ ಕನಸಾಗಿಯೇ ಉಳಿದರೂ ಸಹ ಅವರ ಜೀವನದ ಆದರ್ಶದ ಹೋರಾಟ ಇಂದಿಗೂ ಪ್ರಸುತ್ತವಾಗಿದೆ ಎಂದರೆ ತಪ್ಪಾಗಲಾರದು. ಪರಕೀಯರ ದಾಸ್ಯದಲ್ಲಿ ಇರುವುದಕ್ಕಿಂತ ಸ್ವತಂತ್ರವಾಗಿರುವುದು ಲೇಸು, ದಾಸ್ಯದ ಬದುಕಿಗಿಂತಲೂ ಮರಣವೇ ಲೇಸು ಎಂದು ಇಂಗ್ಲೀಷರನ್ನು ಎದುರಿಸಿ, ಸ್ವಾತಂತ್ರ್ಯಕ್ಕಾಗಿ ಹೋರಾಡಿ ತನ್ನ ಪ್ರಾಣವನ್ನೇ ತೆತ್ತು ಚರಿತ್ರೆಯಲ್ಲಿ ಅಜರಾಮರಳಾಗಿದ್ದಾಳೆ. ಇಂಥ ಚೆನ್ನಮ್ಮ ರಾಣಿಯ ಆದರ್ಶ ಇಡೀ ಜಗತ್ತೇ ಅನುಸರಿಸಬೇಕಾದಂಥದ್ದು.

ನಮ್ಮ ದೇಶದ ರಾಜರಲ್ಲಿದ್ದ ಸ್ವಾರ್ಥ, ಒಳಜಗಳಗಳು, ಬೇರೆಯವರ ಉನ್ನತಿಯನ್ನು ಸಹಿಸದಿರುವುದು ಇವೆಲ್ಲವೂ ನಮ್ಮನ್ನೇ ನಾಶ ಮಾಡಿ ಪರಕೀಯರ ದಾಸ್ಯಕ್ಕೆ ಈಡುಮಾಡಿದವು. ನಮ್ಮಲ್ಲಿ ಒಗ್ಗಟ್ಟಿಲ್ಲದಿದ್ದರೆ ದೇಶವು ಎಂತಹ ಗುಲಾಮಗಿರಿಗೆ ಈಡಾಗಬಹುದೋ ಎನ್ನುವುದಕ್ಕೆ ಭಾರತದ ಇತಿಹಾಸವೇ ಜ್ವಲಂತ ನಿದರ್ಶನ. ಒಗ್ಗಟ್ಟಿನಲ್ಲಿರುವ ಒಲವು ಯಾವುದರಲ್ಲಿಯೂ ಇಲ್ಲ ಎಂಬ ಸಂದೇಶವನ್ನು ಸಾರುವ ಆಶಯವನ್ನು ಕಾದಂಬರಿಕಾರರು ಹೊಂದಿದ್ದಾರೆ.

ದೇಶ ಸುರಕ್ಷಿತವಾಗಿರಬೇಕಾದರೆ ಜನತೆಯಲ್ಲಿ ಹಾಗೂ ಜನನಾಯಕರಲ್ಲಿ ಒಗ್ಗಟ್ಟಿರಬೇಕು. ಒಗ್ಗಟ್ಟಿನ ಕೋಟೆಗೆ ಸ್ವಲ್ಪ ಧಕ್ಕೆ ಉಂಟಾದರೂ ಅದರಲ್ಲಿ ಶತ್ರುಗಳು ಬರಲು ಆರಂಭಿಸುತ್ತಾರೆ. ಇದನ್ನು ತಡೆಯಬೇಕಾದರೆ ನಮ್ಮಲ್ಲಿ ಒಗ್ಗಟ್ಟಿರಬೇಕೆಂದು ಲೇಖಕಿಯೂ ಕಾದಂಬರಿಯುದ್ದಕ್ಕೂ ತಿಳಿಸುತ್ತಾ ಹೋಗಿದ್ದಾರೆ.

ಕಿತ್ತೂರ ಚೆನ್ನಮ್ಮ ಕಾದಂಬರಿಯಲ್ಲಿ ಅವಳ ಜೀವನದ ಸಾಧನೆ, ಸಿದ್ಧಿ, ಏಳಿಗೆ, ಅವನತಿಗಳನ್ನು, ನಾಡಿನ ಸ್ವಾತಂತ್ರ್ಯಕ್ಕಾಗಿ ನಡೆಸಿದ ಹೋರಾಟ, ಬಲಿದಾನಗಳ ಚಿತ್ರಣವನ್ನು ಕಾಣಬಹುದು. ಬಂಧನದಲ್ಲಿ ಇದ್ದಾಗ ಚೆನ್ನಮ್ಮನ ಮನೋವೇದನೆ, ಒಂಟಿತನ, ರಾಯಣ್ಣ ಬಂಧಮುಕ್ತನನ್ನಾಗಿ ಮಾಡುತ್ತಾನೆಂಬ ಆಸೆ–ನಿರಾಸೆಗಳ ಮನಸ್ಥಿತಿಯನ್ನು ಲೇಖಕರು ಹೃದಯ ಮಿಡಿಯುವಂತೆ ಚಿತ್ರಿಸಿದ್ದಾರೆ.

ಒಟ್ಟಿನಲ್ಲಿ ಅ.ನ.ಕೃಷ್ಣರಾಯರ 'ವೀರರಾಣಿ ಕಿತ್ತೂರ ಚೆನ್ನಮ್ಮ ಮತ್ತು ಕೆ.ವಿ.ರಾಜೇಶ್ವರಿ ಅವರ 'ವೀರವನಿತೆ ಕಿತ್ತೂರ ಚೆನ್ನಮ್ಮ ಈ ಎರಡು ಕಾದಂಬರಿಗಳಲ್ಲಿ ಆದರ್ಶ ಮಹಿಳೆಯ ಪಾತ್ರವಾಗಿ ಕಿತ್ತೂರ ಚೆನ್ನಮ್ಮ ಚಿತ್ರಿತಳಾಗಿದ್ದಾಳೆ.

**ಅಬ್ಬಕ್ಕರಾಣಿ**

ಉಳ್ಳಾಲದ ರಾಣಿ ಅಬ್ಬಕ್ಕ ದೇವಿಯು ವೀರ ಮಹಿಳೆಯಾಗಿ ಇತಿಹಾಸದಲ್ಲಿ ಕಂಡು ಬರುತ್ತಾಳೆ. ಸ್ವಾತಂತ್ರ್ಯ ಪ್ರೇಮಿ, ಸಾಹಸಿ, ಪರಕೀಯರ ದಾಸ್ಯಕ್ಕೆ ತುತ್ತಾಗದ ರಾಣಿ ಸ್ವಾತಂತ್ರ್ಯವನ್ನು ಸಾರಿ ಪೋರ್ಚುಗೀಸರಿಗೆ ಸಿಂಹಸ್ವಪ್ನವಾಗಿದ್ದಳು. ಬ್ರಿಟಿಷರಿಗೆ ನೀಡಬೇಕಾದ ಕಪ್ಪ ಕಾಣಿಕೆಯನ್ನು ನಿಲ್ಲಿಸಿ ಅವರ ವಿರುದ್ಧ ಹೋರಾಡಿದಳು. ತನ್ನ ಜೀವಿತ ಕಾಲದಲ್ಲಿ ತೋರಿದ ಸಾಹಸವೇ ಚರಿತ್ರೆಯಲ್ಲಿ ಆಕೆಯ ಹೆಸರು ಚಿರಸ್ಥಾಯಿಯಾಗಿ ಉಳಿಯಲು ಕಾರಣವಾಯಿತು. ಅಬ್ಬಕ್ಕ ರಾಣಿ ತನ್ನ ಸಾಮ್ರಾಜ್ಯವು ವಿದೇಶಿಯರ ಪಾಲಾಗದಂತೆ ಹೋರಾಡಿ ಪೋರ್ಚುಗೀಸರನ್ನು ಸಂಪೂರ್ಣವಾಗಿ ಹಿಮ್ಮೆಟ್ಟಿಸಿದ್ದಳು. ಇಂಥ ವೀರಮಾತೆಯ ಕುರಿತು ರಾ. ಮೋ. ವಿಶ್ವಾಮಿತ್ರರು 'ಅಭಯರಾಣಿ' ಎಂಬ ಕಾದಂಬರಿಯನ್ನು ಬರೆದಿದ್ದಾರೆ.

ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಧೀರ ಮಹಿಳೆ ಅಬ್ಬಕ್ಕ ಅವಳ ಸಾಹಸ ಜೀವನ, ದೂರದೃಷ್ಟಿ, ಸ್ವಾಭಿಮಾನ, ಹೋರಾಟಗಳಿಂದ ಕೂಡಿದ ಮುಖಗಳನ್ನು ಚಿತ್ರಿಸುವುದೇ ಈ ಕಾದಂಬರಿಯ ಮುಖ್ಯ ಆಶಯವಾಗಿದೆ. ಕುಲದೇವರಾದ ಸೋಮನಾಥ ದೇವಾಲಯದಿಂದ ಅರಮನೆ ಪ್ರವೇಶ ಮಾಡುವುದರೊಂದಿಗೆ ಕಾದಂಬರಿಯಲ್ಲಿ ಅಬ್ಬಕ್ಕದೇವಿಯ ಪಾತ್ರ ಪ್ರಾರಂಭ ವಾಗುತ್ತದೆ. ಕಡಲ್ಗಳ್ಳರಾದ ಪೋರ್ಚುಗೀಸರ ಹಾವಳಿ ಹೆಚ್ಚಾಗಿದ್ದ ಕಾರಣ ಅಬ್ಬಕ್ಕದೇವಿಯನ್ನು ಮೂಡಬಿದರೆಯ ಅರಮನೆಯಲ್ಲಿ ಬೆಳೆಯುವಂತೆ ಸಕಲ ವ್ಯವಸ್ಥೆಯನ್ನು ಮಾವ ತಿರುಮಲರಾಯ ಮಾಡಿರುತ್ತಾನೆ. ಹಾಗೆಯೇ ಅಬ್ಬಕ್ಕನ ಪೋಷಣೆಯನ್ನು ಮಾಡುವುದರೊಂದಿಗೆ ಕ್ಷತ್ರಿಯೋಚಿತವಾದ ಹಲವು ವಿದ್ಯೆಗಳನ್ನು ರಾಣಿಗೆ ಕಲಿಸುವ ಏರ್ಪಾಟನ್ನು ಮಾಡಿರುತ್ತಾನೆ. ಕತ್ತಿ ಬೀಸುವುದು, ಕುದುರೆ ಸವಾರಿ ಮಾಡುವುದು, ಕೋಟೆ ಏರುವುದು ಮೊದಲಾದ ವಿದ್ಯೆಗಳನ್ನು ಕಲಿಸಿರುತ್ತಾನೆ. ಇದರ ಜೊತೆಗೆ ಕುಲಪುರೋಹಿತರಿಂದ ರಾಜ ಧರ್ಮದ ಉಪದೇಶವನ್ನು ಮಾಡಿಸಿರುತ್ತಾನೆ. ಯುದ್ಧ

ವಿದ್ಯೆಗಳ ಜೊತೆ ಜೊತೆಗೆ ಸಂಗೀತ, ಸಾಹಿತ್ಯ, ಕಲೆ, ಧರ್ಮಶಾಸ್ತ್ರಗಳಲ್ಲಿ ಅಬ್ಬಕ್ಕ ಆಸಕ್ತಿ ಹೊಂದಿದ್ದಳು. ಎಲ್ಲವನ್ನು ತಿಳಿದುಕೊಳ್ಳಬೇಕು. ಆಸಕ್ತಿಯಿಂದ ವಿಷಯವನ್ನು ಕಲಿತು ಸೂಕ್ತ ರೀತಿಯಲ್ಲಿ ನಡೆದುಕೊಳ್ಳಬೇಕು. ಮನಸ್ಸಿನಲ್ಲಿ ವಿಷಯವನ್ನು ಮನನ ಮಾಡಿಕೊಳ್ಳಬೇಕು ಎಂಬ ನಿರ್ಧಾರವನ್ನು ಹೊಂದಿದ ಅಬ್ಬಕ್ಕನ ಬಾಲ್ಯದ ಗುಣಗಳನ್ನು ಲೇಖಕರು ಸೊಗಸಾಗಿ ವರ್ಣಿಸಿದ್ದಾರೆ.

ನಾಡಿನ ಜನರ ರಕ್ಷಣೆಯ ಹೊಣೆಯನ್ನು ಹೊತ್ತಿರುವ ಅಬ್ಬಕ್ಕ ತನ್ನೆಲ್ಲ ಸುಖಗಳನ್ನು, ಸರ್ವಸ್ವವನ್ನು ನಾಡಿನ ಅಭಿವೃದ್ಧಿಗಾಗಿ, ಪ್ರಜೆಗಳಿಗಾಗಿ ತ್ಯಾಗ ಮಾಡಿದಳು. ರಾಜ್ಯದ ಏಳಿಗೆಗಾಗಿ ಸರ್ವತ್ಯಾಗ ಮಾಡುವುದು, ಆಡಂಬರದ ಜೀವನವನ್ನು ತ್ಯಜಿಸಿ ಇಂದ್ರಿಯ ಸುಖಗಳಿಂದ ವಿಮುಖಳಾಗಬೇಕು ಎಂಬ ಗುರುಗಳ ಉಪದೇಶವು ಅಬ್ಬಕ್ಕನ ನೆನಪಿನಾಳದಲ್ಲಿ ನೆಲೆಯೂರುತ್ತದೆ. ವಿಷಯದ ಕುರಿತು ವಿಮರ್ಶೆ ಮಾಡುವ, ವಿಚಾರ ವಿನಿಮಯ ಮಾಡಿ ಅರಿತುಕೊಳ್ಳುವ, ಸಮಸ್ಯೆಗಳನ್ನು ಗುರುಗಳ ಮುಂದೆಯಿಟ್ಟು ಅದನ್ನು ಪರಿಹರಿಸಿಕೊಳ್ಳುವ ಆಕೆಯ ಧೈರ್ಯ ಮೆಚ್ಚುವಂಥದ್ದು. ರಾಜನಾದವನು ತನ್ನ ರಾಜ್ಯ, ತನ್ನ ಪ್ರಜೆಗಳು ಅವರ ರಕ್ಷಣೆಗಾಗಿ ಸರ್ವಸುಖಗಳನ್ನು ತ್ಯಾಗ ಮಾಡುವುದಕ್ಕೆ ಸಿದ್ಧರಾಗಬೇಕು ಎಂದಿರುವ ಗುರುಗಳ ಹಿತವಚನದಂತೆ ಅಬ್ಬಕ್ಕ ಸರ್ವತ್ಯಾಗಕ್ಕೂ ಸಿದ್ಧಳಾಗಿದ್ದಳು. ಕಾದಂಬರಿಯ ಪ್ರಾರಂಭದಲ್ಲಿಯೇ ಇಂದ್ರಿಯ ನಿಗ್ರಹದ ಕುರಿತು ಗುರುಗಳ ಜೊತೆ ಅಬ್ಬಕ್ಕ ರಾಣಿ ಚರ್ಚಿಸಿರುವುದು ಕಂಡು ಬರುತ್ತದೆ. ಇಂದ್ರಿಯ ನಿಗ್ರಹಕ್ಕೆ ಪೂರಕವಾದ ಪುರಾಣ ಕಥೆಗಳನ್ನು ಗುರುಗಳಿಂದ ಕೇಳಿ ತಿಳಿದುಕೊಳ್ಳುವುದರ ಜೊತೆಗೆ ಶ್ರೀರಾಮಚಂದ್ರ, ಸತ್ಯಹರಿಶ್ಚಂದ್ರ ಮೊದಲಾದ ಪುಣ್ಯಪುರುಷರ ಕಥೆಯನ್ನು ಕೇಳಿ ತಿಳಿದುಕೊಳ್ಳುತ್ತಿದ್ದಳು. ನಾಡಿನ ಬಗ್ಗೆ ಪ್ರೀತಿ, ದೇಶಭಕ್ತಿ, ಕರ್ತವ್ಯನಿಷ್ಠೆ, ಪ್ರಜಾವಾತ್ಸಲ್ಯ, ಸ್ವಾಮಿಭಕ್ತಿ ಮತ್ತು ಆದರ್ಶ ಗುಣಗಳನ್ನು ಅಬ್ಬಕ್ಕ ತನ್ನ ಜೀವನದಲ್ಲಿ ಮೈಗೂಡಿಸಿಕೊಳ್ಳಲು ಗುರುಗಳು ಹೇಗೆ ಕಾರಣರಾದರು ಎಂಬುದನ್ನು ಲೇಖಕರು ಬಹಳ ಮಾರ್ಮಿಕವಾಗಿ ಚಿತ್ರಿಸಿದ್ದಾರೆ.

ನಾಡಿನ ಬಗ್ಗೆ ಅಗಾಧವಾದ ಗೌರವವನ್ನು ಹೊಂದಿದ್ದ ಅಬ್ಬಕ್ಕ ತನ್ನ ಮಾವನೊಂದಿಗೆ ಚರ್ಚಿಸುತ್ತಾ, ನಾಡಿನ ಜನರಲ್ಲಿ, ನಾಡಿನ ಬಗ್ಗೆ ಅಭಿಮಾನ ಗೌರವಗಳು ಕಡಿಮೆಯಾದುದೇ ನಮ್ಮ ಈ ರಾಜ್ಯಗಳ ಅವನತಿಗೆ ಕಾರಣ. ಜನರಲ್ಲಿ ಪ್ರೀತಿ ವಿಶ್ವಾಸಗಳು ಕಡಿಮೆಯಾಗಿ ಸ್ವಾರ್ಥ, ಅಸೂಯೆ, ವಂಚನೆಗಳು ಹೆಚ್ಚಾಗಿವೆ. ಪರಕೀಯರಾದ ಪೋರ್ಚುಗೀಸರಿಗೆ ಶರಣಾಗಿರುವುದಕ್ಕಿಂತ ದೊಡ್ಡದಾದ ಅಪರಾಧ ಬೇರೆಯಿಲ್ಲ ಎಂಬ ತನ್ನ ಮನದಾಳದ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾಳೆ. ಲೇಖಕರು ಅಬ್ಬಕ್ಕ ಪಾತ್ರದ ಮೂಲಕ ದೇಶದ ಬಗ್ಗೆ ಜನರಲ್ಲಿ ಅಭಿಮಾನ ಗೌರವಗಳು ಇರಬೇಕೆಂದು ತಿಳಿಸಿದ್ದಾರೆ. ನಮ್ಮಲ್ಲಿ ಒಗ್ಗಟ್ಟಿಲ್ಲದ ಕಾರಣ ಪರಕೀಯರ ಪ್ರವೇಶವಾಗಿದೆ. ನಮ್ಮವರೇ ನಮಗೆ ಶತ್ರುಗಳಾಗಿ ಪರಕೀಯರಿಗೆ ಮಿತ್ರರಾಗಿದ್ದಾರೆ. ನಾವು ನಮ್ಮೊಳಗೆ ಸಣ್ಣ ಕಾರಣಗಳಿಗಾಗಿ ಜಗಳವಾಡುವುದನ್ನು ಸಂಪೂರ್ಣ ನಿಲ್ಲಿಸಬೇಕು. ಪರಕೀಯರಿಗೆ ಇಲ್ಲಿ ಪ್ರವೇಶ ಮಾಡದಂತೆ ಎಚ್ಚರವಹಿಸಬೇಕು, ಹಾಗಾಗಬೇಕಾದರೆ ನಾವೆಲ್ಲ ಒಗ್ಗಟ್ಟಿನಿಂದಿರಬೇಕು ಎಂಬ ತತ್ವವನ್ನು ಅಬ್ಬಕ್ಕನ ಪಾತ್ರದ ಮೂಲಕ ಚಿತ್ರಿಸಲಾಗಿದೆ.

ತಿರುಮಲರಾಯನು ಮೂಡಬಿದರೆಯಲ್ಲಿ ದೊಡ್ಡ ಬಸದಿಯಲ್ಲಿ ನಡೆಯುವ ಉತ್ಸವಕ್ಕೆ ಹಾವಳಿ ಬಂಗರಾಜರೂ ಪರಿವಾರಸಮೇತರಾಗಿ ಬರಬೇಕೆಂದು ಆಮಂತ್ರಣವನ್ನು ಕಳುಹಿಸುತ್ತಾನೆ.

ಬಹು ಹಿಂದಿನಿಂದಲೂ ಸ್ನೇಹವನ್ನು ಹೊಂದಿದ ಇವರ ಸಂಬಂಧವು ಲಕ್ಷ್ಮಪ್ಪ ಬಂಗರಸ ಮತ್ತು ಅಬ್ಬಕ್ಕ ದೇವಿಯ ವಿವಾಹದಿಂದ ಇನ್ನೂ ಗಟ್ಟಿಗೊಳ್ಳುವುದು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾನೆ. ಸಕಲ ವಿದ್ಯೆಗಳಲ್ಲಿ ಪಾರಂಗತಳಾದ ಅಬ್ಬಕ್ಕದೇವಿಯ ಸಾಹಸ ಶೌರ್ಯಕ್ಕೆ ಬಂಗರಾಜರು ಲಕ್ಷ್ಮಪ್ಪ ಬಂಗರಸನೊಂದಿಗೆ ಮದುವೆ ಮಾಡಿಸಲು ಒಪ್ಪಿಕೊಳ್ಳುತ್ತಾರೆ.

ಅಬ್ಬಕ್ಕದೇವಿಯು ಅರಮನೆಯ ಮುಂದಿರುವ ಉದ್ಯಾನದಲ್ಲಿ ತನ್ನ ಸಖಿಯೊಂದಿಗೆ ಕುಳಿತುಕೊಂಡು ಉದ್ಯಾನದ ಸೊಬಗನ್ನು ವೀಕ್ಷಿಸುತ್ತಿದ್ದಾಗ, ಮಾವನು ಆಕೆಗೆ ಮದುವೆಯ ವಿಚಾರದಲ್ಲಿ ಕೊಟ್ಟಂತಹ ಸ್ವಾತಂತ್ರ್ಯದ ಬಗ್ಗೆ, ಗಂಡನನ್ನು ಆಯ್ಕೆ ಮಾಡುವುದರ ಬಗ್ಗೆ ಸ್ನೇಹಿತೆಯೊಂದಿಗೆ ಮಾತಾನಾಡುತ್ತಾಳೆ. ಪತಿ - ಪತ್ನಿಯರು ಆದರ್ಶವನ್ನಿಟ್ಟುಕೊಂಡು ಬಾಳಬೇಕು. ಜೀವನದಲ್ಲಿ ಧ್ಯೇಯ ಗುರಿ ಮುಟ್ಟಬೇಕು ಎಂದೆಣಿಸುವ ಆಕೆ ಆಸೆ - ಆಕಾಂಕ್ಷೆಗಳನ್ನು ಸಕಾರಗೊಳಿಸಿಕೊಳ್ಳಲು ಇಬ್ಬರೂ ಅದಕ್ಕೆ ಸಹಕರಿಸಬೇಕು ಎಂದು ಸಖಿಯೊಂದಿಗೆ ಅಬ್ಬಕ್ಕ ಚರ್ಚಿಸುತ್ತಾಳೆ. ಜೀವನದಲ್ಲಿ ಪ್ರತಿಯೊಬ್ಬ ಮನುಷ್ಯನೂ ಕೂಡ ಯಾವುದಾದರೊಂದು ಉದ್ದೇಶವನ್ನುಟ್ಟುಕೊಂಡು ಜೀವನವನ್ನು ನಡಸಬೇಕಾಗುತ್ತದೆ. ಇಲ್ಲದಿದ್ದರೆ ಬಾಳ್ವೆ ನಿರರ್ಥಕವೆನಿಸುತ್ತದೆ ಎನ್ನುವ ನುಡಿಗಳು ಪ್ರಸ್ತುತ ಸಂದರ್ಭದಲ್ಲಿರುವ ಪ್ರತಿಯೊಬ್ಬರಿಗೂ ಅನ್ವಯಿಸುತ್ತದೆ ಎಂದರೆ ತಪ್ಪಾಗಲಾರದು. ಆದರ್ಶ ಗುಣವೇ ಮನುಷ್ಯನ ವ್ಯಕ್ತಿತ್ವವನ್ನು ತಿಳಿಸುತ್ತದೆ.

ಜೋಯಿಸ ನರ್ಸಪ್ಪಯ್ಯ ನುಡಿದ ಭವಿಷ್ಯವಾಣಿಯಂತೆ ಅಬ್ಬಕ್ಕದೇವಿಯ ಮದುವೆ ನಡೆಯುತ್ತದೆ. ಕಾಮರಾಯನು ಅಬ್ಬಕ್ಕದೇವಿ ಮತ್ತು ಲಕ್ಷ್ಮಪ್ಪ ಬಂಗರಸರ ಮದುವೆಯನ್ನು ನಿಲ್ಲಿಸಲು ಹಲವಾರು ಸಂಚುಗಳನ್ನು ರೂಪಿಸುತ್ತಾನೆ.

ಕಾದಂಬರಿಯ ಮೂರು ಮತ್ತು ನಾಲ್ಕನೇ ಅಧ್ಯಾಯಗಳಲ್ಲಿ ಮದುವೆಯ ವಿಚಾರದ ಕುರಿತು ಚರ್ಚಿಸಲಾಗಿದೆ. ಗಂಡ ಹೆಂಡತಿಯರೆಂದ ಮೇಲೆ ಒಬ್ಬರ ಅಭಿಪ್ರಾಯವನ್ನು ಮತ್ತೊಬ್ಬರು ಒಪ್ಪಲೇಬೇಕು. ಹೆಣ್ಣು ಸಾಮಾನ್ಯಳು ಅವಳು ಹೇಳಿದ್ದನ್ನು ಗಂಡನಾದವನು ಕೇಳಬಾರದು ಎಂಬುದನ್ನು ಬಿಡಬೇಕು. ಅವರ ಅಭಿಪ್ರಾಯಕ್ಕೂ ಮನ್ನಡೆಣೆ ದೊರಕಬೇಕು ಎಂದು ಅಬ್ಬಕ್ಕ ಧೈರ್ಯದಿಂದ ನುಡಿಯುತ್ತಾಳೆ.

ಅಬ್ಬಕ್ಕದೇವಿಯ ದಾಂಪತ್ಯ ಜೀವನವನ್ನು ಕುರಿತು ತುಂಬಾ ದೀರ್ಘವಾಗಿ ಚಿತ್ರಿಸಲಾಗಿದೆ. ರಾಜಕೀಯ ವಿಷಯ, ಪೋರ್ಚುಗೀಸರಿಗೆ ಕೊಡುತ್ತಿದ್ದ ಸುಂಕ, ಅವರನ್ನು ಹೇಗಾದರೂ ಮಾಡಿ ನಮ್ಮ ನಾಡನನ್ನು ಬಿಟ್ಟು ಹೊರ ಓಡಿಸಬೇಕೆಂಬ ನಿಲುವು ಹೀಗೆ ವಿವಿಧ ಸನ್ನಿವೇಶಗಳನ್ನು ರಾಜ್ಯದ ಹಿತಕ್ಕಾಗಿ ಪತಿಪತ್ನಿಯರ ಸಂಭಾಷಣೆ, ವರ್ಣನೆಗಳು ಕಾದಂಬರಿಯಲ್ಲಿ ಕಂಡುಬರುತ್ತವೆ. ಅಬ್ಬಕ್ಕನಲ್ಲಿದ್ದಂತಹ ಆದರ್ಶ ಗುಣಗಳು, ಬುದ್ಧಿವಂತಿಕೆ, ಧೈರ್ಯ, ಸಾಹಸ ಸಾಮಥ್ಯಗಳು ಪ್ರತಿಯೊಂದನ್ನು ಲೌಕಿಕವಾಗಿ ಯೋಚಿಸಿ, ಪ್ರಶ್ನಿಸುತ್ತಿದ್ದ ರೀತಿ ಅದ್ಭುತವಾಗಿದೆ.

ಅಬ್ಬಕ್ಕ ಮತ್ತು ಲಕ್ಷ್ಮಪ್ಪ ಬಂಗರಸರ ದಾಂಪತ್ಯ ಜೀವನವು ಅನ್ಯೋನ್ಯವಾಗಿತ್ತು. ಅಬ್ಬಕ್ಕ ತಾವು ಆದರ್ಶ ದಂಪತಿಗಳಾಗಿ ಬಾಳಬೇಕು, ನಾಡಿನ ಚರಿತ್ರೆಯಲ್ಲಿ ಹೊಸ ಅಧ್ಯಾಯವನ್ನು ತೆರೆಯಬೇಕು ಎಂಬ ಆಶಾಭಾವನೆಯನ್ನು ಹೊಂದಿದಳು. ಈಕೆಯ ಆಶಾ ಭಾವನೆಗೆ ಪತಿಯೂ ಸಹಕಾರ ನೀಡಿದರೆ, ಕಾಮರಾಯ ಕೆಡುಕನ್ನೇ ಸದಾ ಬಯಸುತ್ತಿದ್ದ. ಚಂದ್ರಯ್ಯ ಶೆಟ್ಟಿಯೊಂದಿಗೆ

ಕಾಮರಾಯನು ಅಬ್ಬಕ್ಕಳ ಕುರಿತು ಕುಹಕದ ಮಾತುಗಳನ್ನು ಆಡುತ್ತಾನೆ. ಅಲ್ಲದೆ ದುಷ್ಟಟಕ್ಕೆ ಬಲಿಯಾಗಿ ರಾಜ್ಯಹಿತವನ್ನು ಬಯಸದೇ, ಸದಾ ಸ್ತ್ರೀ ವ್ಯಾಮೋಹದಲ್ಲಿಯೇ ಹೆಚ್ಚಿನ ಸಮಯ ಕಳೆಯುತ್ತಿರುತ್ತಾನೆ.

ಅಬ್ಬಕ್ಕದೇವಿಯು ಶಸ್ತ್ರಕಲೆಗಳನ್ನು ಚೆನ್ನಾಗಿ ಅಭ್ಯಾಸ ಮಾಡಿದವಳು. ಕಾಮರಾಯನನ್ನು ಸರಿದಾರಿಗೆ ತರಲು ಹಾವಳಿ ಬಂಗರಸ ಎಷ್ಟೇ ಪ್ರಯತ್ನಿಸಿದರೂ ಆಗಿರಲಿಲ್ಲ. ಆ ಕೆಲಸವನ್ನು ಅಬ್ಬಕ್ಕನಿಗೆ ವಹಿಸುತ್ತಾನೆ. ಒಂದು ಹುಣ್ಣು ಮೈಯಲ್ಲಿದ್ದರೆ ಅದು ಕೊಳೆತು ನಾರುವ ಮೊದಲು ಮದ್ದು ಮಾಡಿ ಗುಣಪಡಿಸಬೇಕು. ಬೆಳೆದುಹೋದ ಮೇಲೆ ರೋಗ ಗುಣಪಡಿಸುವುದಕ್ಕೆ ಬಲು ಕಷ್ಟವಾಗುತ್ತದೆ ಎಂದು ಅಬ್ಬಕ್ಕ ರಾಣಿಯು ಪ್ರಜೆಗಳ ಸಮಸ್ಯೆಗಳನ್ನು ಪರಿಹರಿಸಿದಂತೆ, ತನ್ನ ಮನೆಯಲ್ಲಿ ನಡೆಯುತ್ತಿದ್ದ ಕಾಮರಾಯನ ಅವಿವೇಕಿತನವನ್ನು ಅಂಕೆಯಲ್ಲಿ ತರಲು ಪ್ರಯತ್ನಿಸಲು ಹೆಣಗುವ ಚಿತ್ರಣವನ್ನು ಕಾಣಬಹುದು.

ಯಾವಾಗಲೂ ಯಾವುದೇ ವಿಷಯವನ್ನಾಗಲಿ ಮನುಷ್ಯನಾದವನು ಶುದ್ಧವಾದ ಮನಸ್ಸಿನಿಂದ ಒಳ್ಳೆಯ ಮಾತನಾಡಿದರೆ ಆ ಮಾತುಗಳು ಒಂದಲ್ಲ ಒಂದು ಉಪಯೋಗಕ್ಕೆ ಬರುತ್ತದೆ ಎಂದು ತಿಳಿದ ಅಬ್ಬಕ್ಕ ದೇವಿಯು ತೋರಿಸಿದ, ಸಜೀಪ ಬಲ್ಲಾಳರ ಮಗಳಾದ ಪದ್ದಕ್ಕ ನೊಂದಿಗೆ ಕಾಮರಾಯನ ವಿವಾಹ ಮಾಡಿಸುತ್ತಾಳೆ.

ಅಬ್ಬಕ್ಕ ದೇವಿಯ ಮನಸ್ಸು ಸದಾ ಪೋರ್ಚುಗೀಸರನ್ನು ನಾಡು ಬಿಟ್ಟು ತೊಲಗಿಸಬೇಕು, ಅದಕ್ಕೆ ಯಾವೆಲ್ಲ ತಯಾರಿ ನಡೆಸಬೇಕು ಎನ್ನುವುದನ್ನೇ ಪತಿಯೊಂದಿಗೆ ಯೋಚಿಸುತ್ತಿದ್ದಳು. ಮಂಗಳೂರು ಮತ್ತು ಉಳ್ಳಾಲದಿಂದ ಪೋರ್ಚುಗೀಸರಿಗೆ ಕೊಡಬೇಕಾದ ಸುಂಕವನ್ನು ನಿಲ್ಲಿಸುತ್ತಾಳೆ. ಕಾದಂಬರಿಯಲ್ಲಿ ಲೇಖಕರು ಅಬ್ಬಕ್ಕಳನ್ನು ಪ್ರತಿಭಟನಕಾರಳನ್ನಾಗಿ ಚಿತ್ರಿಸಿದ್ದಾರೆ. ತಪ್ಪು ಮಾಡಿದವರು ದೊಡ್ಡವರೇ ಇರಲಿ ಚಿಕ್ಕವರೇ ಇರಲಿ ಅದನ್ನು ಪ್ರತಿಭಟಿಸಬೇಕು. ಅದು ಬಿಟ್ಟು ನಮಗೆ ಆ ಶಕ್ತಿಯಿಲ್ಲ ಎಂದು ಅಳುತ್ತಿದ್ದರೆ, ಆ ಅಳುಕೇ ನಮಗೆ ದೊಡ್ಡ ವೈರಿ ಎನ್ನುತ್ತಾಳೆ. ಶಕ್ತಿಯ ಅರಿವು ಸಂದರ್ಭ ಬಂದಾಗ ಮಾತ್ರ ತಿಳಿಯುತ್ತದೆ ಎನ್ನುವ ಮಾತು ಸರ್ವಕಾಲಕ್ಕೂ ಒಪ್ಪಿತವಾದದ್ದು.

ನಾಡಿನ ಏಳಿಗೆಗಾಗಿ ಮಹಾತ್ಯಾಗವನ್ನು ಮಾಡಿ ಕೀರ್ತಿ ಗಳಿಸಬೇಕು. ಉತ್ಸಾಹ ಸಾಹಸ ಧೈರ್ಯ, ಬುದ್ಧಿಶಕ್ತಿ, ಪರಾಕ್ರಮಗಳು ಎಲ್ಲಿವೆಯೋ ಅಲ್ಲೆಲ್ಲ ದೈವದ ಒಲವಿದೆಯೆಂದು ಆರ್ಯೋಕ್ತಿಯಲ್ಲಿ ಬರುವ ಉಲ್ಲೇಖದಂತೆ ಅಬ್ಬಕ್ಕಳ ಜೀವನದ ಚರಿತ್ರೆಯನ್ನು ಲೇಖಕರು ಬಹುಗಂಭೀರವಾಗಿ ಪಡಿಮೂಡಿಸಿದ್ದಾರೆ.

ವೀರರಾಣಿಯಾದ ಅಬ್ಬಕ್ಕಳು ಪೌರುಷ, ಸಿದ್ಧತೆಗಳಿಗೆ ಹೆಚ್ಚಿನ ಮಹತ್ವ ಕೊಟ್ಟಿದ್ದಳು. ಇವುಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳದೇ ಹೋದರೆ ಮಾಡುವ ಕೆಲಸ ನಿರರ್ಥಕವಾಗುತ್ತದೆ ಎಂಬ ವರ್ಣನ ಭಾಗವಂತೂ ಬಹುಸುಂದರವಾಗಿ ಮೂಡಿಬಂದಿದೆ. "ರೋಗಿ ಬದುಕುವನೋ ಸಾಯುವನೋ ಯಾರು ಬಲ್ಲರು. ಅದು ದೈವೇಚ್ಛೆ! ಆದರೂ ರೋಗಿಯ ರೋಗ ಗುಣವಾಗಬೇಕೆಂಬುದು ವೈದ್ಯರು ಪ್ರಯತ್ನಿಸಬೇಕಾದ ಧರ್ಮ. ಹಾಗೆಯೇ ನಮ್ಮೆಲ್ಲರ ಸ್ಥಿತಿಯೂ

ಕೂಡ ಪೋರ್ಚುಗೀಸರ ಅನ್ಯಾಯ ನಮ್ಮ ನಾಡಿನ ಬಗ್ಗೆ ಅಸಹನೀಯ ರೋಗವಾಗಿ ಪರಿಣಮಿಸಿದೆ. ಅದಕ್ಕಿರುವ ಮದ್ದನ್ನೆರೆಯಬೇಕಾದುದು ನಮ್ಮೆಲ್ಲರ ಧರ್ಮವಾಗಿದೆ" (ವಿಶ್ವಾಮಿತ್ರ ರಾ. ಮೋ.; ೨೦೦೩; ಪು. ೩೭) ಎಂದು ಹೇಳುವ ಲೇಖಕರ ಈ ಅಭಿಪ್ರಾಯದಲ್ಲಿ ಪ್ರಯತ್ನಕ್ಕೆ ಕೊಟ್ಟಂತಹ ಮಹತ್ವನ್ನು ತಿಳಿಯಬಹುದು.

ಪೋರ್ಚುಗೀಸರು ಮಾಡುತ್ತಿದ್ದ ಕಡಲ್ಗಳ್ಳತನದಿಂದಾಗಿ ಕರಾವಳಿ ಸಮುದ್ರದಲ್ಲಿ ವ್ಯಾಪಾರ ಮಾಡುತ್ತಿದ್ದ ಎಲ್ಲಾ ವ್ಯಾಪಾರಿಗಳಿಗೂ ಸುರಕ್ಷತೆ ಎನ್ನುವುದೇ ಇಲ್ಲವಾಗಿ ಭಯದ ವಾತಾವರಣದಲ್ಲಿ ಬದುಕುತ್ತಿದ್ದರು. ಪೋರ್ಚುಗೀಸರ ಸೈನಿಕರು ವ್ಯಾಪಾರಕ್ಕೆಂದು ಹೊರಟ ಹಡಗುಗಳನ್ನು ನಿಲ್ಲಿಸಿ ಮನಬಂದಂತೆ ಜನರ ಕೈ ಕಾಲುಗಳನ್ನು ಕಟ್ಟಿ ಸಮುದ್ರಕ್ಕೆಸೆಯತೊಡಗಿದರು. ಜನರು ಎಷ್ಟೇ ಬೇಡಿಕೊಂಡರೂ ಅವರು ತಮ್ಮ ಕ್ರೂರ ಕೃತ್ಯವನ್ನು ಕೊನೆಗಾಣಿಸುತ್ತಿರಲಿಲ್ಲ. ಕೆಲವೊಮ್ಮೆ ಕಣ್ಣುಗಳನ್ನು ಕಿತ್ತರು, ಕೈಕಾಲುಗಳನ್ನು ಕಡಿದರು. ಕಿವಿಮೂಗು ಕತ್ತರಿಸಿ ನೌಕೆಯಲ್ಲಿಯೇ ಬಂಧಿಸಿದರು. ನೌಕೆಗಳಲ್ಲಿದ್ದ ಸಾಮಾನುಗಳನ್ನೆಲ್ಲಾ ತಮ್ಮ ಹಡಗುಗಳಲ್ಲಿ ತುಂಬಿಕೊಂಡು ನೌಕೆಗೆ ಬೆಂಕಿ ಹಚ್ಚಿದರು. ಈ ಕ್ರೂರ ಕೃತ್ಯದಲ್ಲಿ ಪಾತುಮ್ಮಳ ಗಂಡ ಹಸನನೂ ಸಹ ಸಾಯುತ್ತಾನೆ. ಇವರ ನೋವು ಕೇಳುವವರು, ರಕ್ಷಣೆ ನೀಡುವವರು, ಅಲ್ಲಿ ಯಾರು ಇರುವುದಿಲ್ಲ. ಗೋಳಿಗೆ ಮಾತ್ರ ಕೊನೆಯಿರಲಿಲ್ಲ. ಲೇಖಕರು ಈ ಸನ್ನಿವೇಶವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಹಸನನೊಂದಿಗೆ ಹೋಗಿದ್ದ ಇದಿನಬ್ಬನು ಸಾಗರಕ್ಕೆ ಧುಮುಕಿದವನು ಮುಳುಗುತ್ತಾ ಏಳುತ್ತಾ ಹೇಗೋ ದಡ ಸೇರುತ್ತಾನೆ. ಅಲ್ಲದೆ ಪೋರ್ಚುಗೀಸ್ ಸೈನಿಕರು ನಡೆಸಿದ ಹಿಂಸೆಯ ಕುರಿತು ತಮ್ಮ ಜನರಿಗೆಲ್ಲ ವಿವರಿಸುತ್ತಾನೆ. ಇದನ್ನು ಕೇಳಿದ ಪಾತಮ್ಮ ಗಂಡನನ್ನು ಕಳೆದುಕೊಂಡ ನೋವಿನಲ್ಲಿ ಮತಿಭ್ರಮೆ ಹೊಂದಿ, ಪೋರ್ಚುಗಿಸರನ್ನು ಕೊಲ್ಲುತ್ತೇನೆಂದು ಹೇಳುತ್ತ, ಸಮುದ್ರಕ್ಕೆ ಓಡಿಹೋಗಿ ತನ್ನ ಕೊನೆಯುಸಿರನ್ನು ಬಿಡುತ್ತಾಳೆ. ಕಾದಂಬರಿಯಲ್ಲಿ ಚಿಕ್ಕ ಪಾತ್ರವಾಗಿ ಮೂಡಿಬಂದ ಪಾರ್ವತಮ್ಮಳ ಪಾತ್ರವೂ ಹೃದಯ ಮಿಡಿಯುವಂತೆ ಚಿತ್ರಿತಗೊಂಡಿದೆ.

ಪಾತುಮ್ಮಳು ಹುಚ್ಚಿಯಾಗಿ ನಾಲ್ಕು ದಿನ ಅಲೆದು ಕೊನೆಗೆ ಸಾಗರಕ್ಕೆ ಧಮುಕಿದಳೆಂಬ ಸುದ್ದಿಯನ್ನು ತಿಳಿದ ಅಬ್ಬಕ್ಕ ದೇವಿಯ ಹೃದಯಕ್ಕೆ ಅಪಾರವಾದ ವೇದನೆಯಂಟಾಗುವ ದೃಶ್ಯವನ್ನು ಕಾಣಬಹುದು. ರಾಣಿಯು ತನ್ನಲ್ಲಿಯೇ ಪ್ರಜೆಗಳ ಹಿತಕ್ಕಾಗಿ ಏನೆಲ್ಲ ಕಾರ್ಯಗಳನ್ನು ಕೈಗೊಳ್ಳಬಹುದೆಂದು ತನ್ನ ಅಭಿಮಾನಕ್ಕೆ ತಾನೇ ಪ್ರಶ್ನಿಸಿಕೊಂಡು ಅದಕ್ಕೆ ಉತ್ತರವನ್ನು ಕಂಡುಕೊಳ್ಳಲು ಪ್ರಯತ್ನಿಸುತ್ತಾಳೆ. ನಾಡಿಗಾಗಿ ಜನರ ಸುರಕ್ಷತೆಗಾಗಿ ಏನೆಲ್ಲ ಕಾರ್ಯಗಳನ್ನು ಕೈಗೊಳ್ಳಬೇಕು ಎಂಬ ಪ್ರಶ್ನೋತ್ತರಗಳು ಮನದಲ್ಲೇ ನಡೆಯುತ್ತದೆ.

ಪೋರ್ಚುಗೀಸರಿಗೆ ಸುಂಕ ಕೊಡುವ ವಿಚಾರದ ಕುರಿತು ಅಬ್ಬಕ್ಕ ಅನ್ಯಾಯವಾಗಿ ನಾವು ಪರಕೀಯರಿಗೆ ಸುಂಕವನ್ನು ಕೊಡಬಾರದು. ನಮ್ಮ ನಾಡಿನ ಮಕ್ಕಳು ಜೀವದ ಹಂಗು ತೊರೆದು ದುಡಿಯುತ್ತಿರುವರು. ಅವರ ಬಡತನ ಕಷ್ಟಗಳನ್ನು ನಾವು ಪರಿಗಣಿಸಿ ಅವರ ಶ್ರೇಯೋಭಿವೃದ್ಧಿಗಾಗಿ ಬಳಸಬೇಕೆಂದು ಪತಿ ಲಕ್ಷ್ಮಪ್ಪನೊಂದಿಗೆ ಸಮಾಲೋಚಿಸುತ್ತಾ, ಏನೆ ಆದರೂ ಪೋರ್ಚುಗೀಸರಿಗೆ ಸುಂಕವನ್ನು ಕೊಡುವುದಿಲ್ಲ ಎಂದು ಸಭೆಯಲ್ಲಿ ಪ್ರಸ್ತಾಪಿಸಿ,

ಅನುಮತಿ ದೊರಕುವಂತೆ ಹಟಹಿಡಿದು ಅದನ್ನು ಸಾಧಿಸಿ ತೋರಿಸುತ್ತಾಳೆ. ಆಕೆಯಲ್ಲಿದ್ದ ಧೈರ್ಯ ಹಟಮಾರಿತನದ ಬಗ್ಗೆ ವರ್ಣಿತವಾಗಿದೆ.

ಕಾಮರಾಜನು ಚಂದ್ರಯ್ಯನೊಂದಿಗೆ ಸೇರಿಕೊಂಡು ಲಕ್ಷ್ಮಪ್ಪ ಬಂಗರಸ ಮತ್ತು ಅಬ್ಬಕ್ಕ ದೇವಿಯ ಕುರಿತು ನಾಡಿನ ತುಂಬೆಲ್ಲ ಅಪಪ್ರಚಾರವನ್ನೇ ಎಸಗುವುದಕ್ಕೆ ತೊಡಗುತ್ತಾರೆ. ಉಳ್ಳಾಲದ ಅಬ್ಬಕ್ಕರಾಣಿ ಲಕ್ಷ್ಮಪ್ಪ ಬಂಗರಸರನ್ನು ತನ್ನ ಹಿಡಿತದಲ್ಲಿಟ್ಟುಕೊಂಡು ತಾನೇ ರಾಜ್ಯವಾಳುವುದಕ್ಕೆ ಪ್ರಯತ್ನಿಸುತ್ತಿದ್ದಾಳೆ. ಮಹಾಸ್ವಾರ್ಥಿಯಾಗಿದ್ದುಕೊಂಡು ರಾಜ್ಯವನ್ನೇ ನುಂಗುವ ಬಯಕೆ ಅವಳದು ಎಂದು ಕಾಮರಾಯ ಅಲ್ಲಲ್ಲಿ ಹೇಳುತ್ತಿರುವ ಮಾತುಗಳನ್ನು ಕೇಳಿಸಿಕೊಂಡ ರಾಣಿ, ಅವನು ಮುಂದೊಂದಿನ ರಾಜ್ಯಕ್ಕೆ ಗಂಡಾಂತರವನ್ನು ತಂದೊಡ್ಡುವ ವ್ಯಕ್ತಿಯಾಗಿ ಪರಿಣಮಿಸಬಹುದು. ಇದಕ್ಕೆ ಪರಿಹಾರ ಹುಡುಕಬೇಕೆಂದು ಆಕೆ ಆಲೋಚನೆ ಮಾಡುವ ಮುಂದಾಲೋಚನೆಯ ಸನ್ನಿವೇಶ ಬಹು ಸೊಗಸಾಗಿ ನಿರೂಪಿತವಾಗಿದೆ. ಅಬ್ಬಕ್ಕದೇವಿ ಪೋರ್ಚುಗೀಸರಿಗೆ ಕೊಡುವ ಕಪ್ಪವನ್ನು ನಿಲ್ಲಿಸುತ್ತಾಳೆ. ಇದರಿಂದಾಗುವ ಪರಿಣಾಮವನ್ನು ಮೊದಲೇ ಅರಿತ ರಾಣಿಯು ಉಳ್ಳಾಲದ ಕೋಟೆಯನ್ನು ಭದ್ರಪಡಿಸುತ್ತಾಳೆ. ಸುಂಕವನ್ನು ನಿಲ್ಲಿಸುವುದರಿಂದಾಗುವ ಅನಾಹುತದ ಬಗೆ ಲಕ್ಷ್ಮಪ್ಪ ಬಂಗರಸ ಆಲೋಚುಸುತ್ತಿರುವಾಗ ರಾಣಿಯು ಅರಸನಾದವನು ಯೋಗ್ಯತೆಗೆ ತಕ್ಕಂತೆ ಬಾಳಬೇಕು. ಇಲ್ಲವೆ ಈ ಅರಸುಪಟ್ಟವನ್ನು ತ್ಯಾಗ ಮಾಡಬೇಕು ಎನ್ನುವಲ್ಲಿ ಪ್ರಜೆಗಳ ಹಿತಕ್ಕಾಗಿ ರಾಜನಾದವನು ಯಾವ ರೀತಿ ನಡೆದುಕೊಳ್ಳಬೇಕೆಂದು ತಿಳಿಸುತ್ತಾಳೆ. ಅಬ್ಬಕ್ಕರಾಣಿ ಪ್ರಜೆಗಳ ಶ್ರೇಯೋಭಿವೃದ್ಧಿಗಾಗಿ ಶ್ರಮಿಸುವುದರಿಂದ ಭಕ್ತಿ ಗೌರವವಾದರಗಳಿಗೆ ಪಾತ್ರಳಾಗಿದ್ದಾಳೆ.

ಪೋರ್ಚುಗೀಸರ ಸ್ನೇಹ ಬೆಳೆಸಿಕೊಂಡು ಅತ್ತೆ-ಮಾವಂದಿರಿಗೆ ಬುದ್ಧಿ ಕಲಿಸಬೇಕೆಂಬ ಹಂಬಲದಿಂದ ರಾಮರಾಯನು ಒಳಸಂಚಿನಲ್ಲೇ ಮಗ್ನನಾಗುತ್ತಾನೆ. ಲಕ್ಷ್ಮಪ್ಪ ಬಂಗರಸನು ಪ್ರತಿಯೊಂದು ಕೆಲಸ ಮಾಡಬೇಕಾದರೂ ಪತ್ನಿಯ ಅಭಿಪ್ರಾಯವನ್ನು ಪಡೆದು ಮುನ್ನಡೆಯುತ್ತಿದ್ದನು. ಮೂಲರೊಂದಿಗೆ ಹೋರಾಡಿ ಸೋತರೂ ಮೂಲರ ಸೈನ್ಯದಲ್ಲಿದ್ದ ದೇವಪೂಂಜನ ವ್ಯಕ್ತಿತ್ವ ಇವರಿಗೆ ಆಕರ್ಷಿತವಾಗುತ್ತದೆ. ಹದಿನಾರು ವರ್ಷದ ಹರೆಯದವನಾದ ದೇವಪೂಂಜ ಮೂಲರಾಜನಿಂದ ಅಲಕ್ಷ್ಯಕ್ಕೆ ಒಳಗಾದಾಗ ಅವನನ್ನು ತಮ್ಮ ಸೈನಾಧಿಪತಿಯಾಗಿ ಮಾಡಿಕೊಳ್ಳಲು ಪ್ರಯತ್ನಿಸುತ್ತಾನೆ. ಈ ವಿಚಾರದಲ್ಲಿ ರಾಣಿಯಾಡುವ ಮಾತುಗಳು ಓದುಗನ ಮೈ ರೋಮಾಂಚನಗೊಳಿಸುತ್ತವೆ. ಮನುಷ್ಯನಿಗಿರಬೇಕಾದ ವ್ಯಕ್ತಿ ಸ್ವಾತಂತ್ರ್ಯ ನಾಡಿನ ಅಭಿಮಾನ ಗೌರವಗಳು ಔದಾರ್ಯ ಶೀಲಭಾವನೆಗಳು ಕಾದಂಬರಿಯಲ್ಲಿ ಚಿತ್ರಿತವಾಗಿದೆ. ಸ್ವಜನ ವಿರೋಧಿಗಳೇ ನಮ್ಮ ದೇಶದಲ್ಲಿ ಪೋರ್ಚುಗೀಸರು ಕಾಲೂರಿನಿಲ್ಲುವಂತೆ ಅವಕಾಶ ಕಲ್ಪಿಸಿ ಕೊಟ್ಟದ್ದಾಗಿದೆ. ನಮ್ಮವರಿಗೆ ನಾಡಿನ ಬಗ್ಗೆ ಅಭಿಮಾನ ಬರುವವರೆಗೆ ಪರಕೀಯರ ಅಟ್ಟಹಾಸ ನಿಲ್ಲುವುದಿಲ್ಲ.

ಜೀವನದ ಹಂಗು ತೊರೆದು ನಮ್ಮ ಜನರು ಹೋರಾಡಿದಲ್ಲಿ ಅವರು ಖಂಡಿತವಾಗಿಯೂ ನಮ್ಮೆದುರು ನಿಲ್ಲಲಾರರು. ನಮ್ಮ ಮಗಳು ತಿರುಮಲದೇವಿಗೂ ಕೂಡ ನಾನು ಯುದ್ಧ ವಿದ್ಯೆಯನ್ನು ಕಲಿಸುತ್ತಿರುವೆನು. ಹೆಂಗಸರು ಮಕ್ಕಳು ಎಲ್ಲರೂ ಕೂಡ ಜೀವದ ಹಂಗು ತೊರೆದು ಹೋರಾಡಬೇಕು ಎಂದು ಉತ್ಸಾಹದಿಂದ ಅಬ್ಬಕ್ಕರಾಣಿ ನುಡಿಯುತ್ತಾಳೆ. ೨೪೦೦

ಮುಡಿ ಅಕ್ಕಿ ೧೦೦೦ ಬದ್ದಲಿ ಎಣ್ಣೆಯನ್ನು ಸುಂಕದ ರೂಪದಲ್ಲಿ ಕೊಡುತ್ತಿದ್ದನ್ನು ನಿಲ್ಲಿಸಿ, ಪೋರ್ಚುಗೀಸರ ದಾಸ್ಯದಿಂದ ಹೊರಬರಬೇಕೆಂದು ಲಕ್ಷ್ಮಪ್ಪ ಬಂಗರಸ ಸಭೆಯಲ್ಲಿ ಈ ವಿಚಾರವನ್ನು ವ್ಯಕ್ತಪಡಿಸುತ್ತಾನೆ. ಆದರೆ ಕಾಮರಾಯನ ಕುತಂತ್ರದಿಂದ ಸಭೆಯು ಇದಕ್ಕೆ ಅವಕಾಶ ಮಾಡಿ ಕೊಡುವುದಿಲ್ಲ. ಮೊದಲು ಯಾವ ರೀತಿ ಸುಂಕ ಕೊಡುತ್ತಿದ್ದೆವು ಅದನ್ನು ಮುಂದುವರೆಸಬೇಕು ಮತ್ತು ಅಬ್ಬಕ್ಕ ರಾಣಿಯನ್ನು ಮಂಗಳೂರಿನಿಂದ ಹೊರಹಾಕಬೇಕೆಂದು ಸಭೆಯು ತೀರ್ಮಾನಿಸುತ್ತದೆ. ಎಂಥ ವಿಪತ್ತು ಒಂದರೂ ಧೈರ್ಯವನ್ನು ತಾಳಬೇಕೆಂಬುದು ರಾಣಿಯ ಗುರಿಯಾಗಿದ್ದ ಕಾರಣ, ಸಭೆಯಲ್ಲಿ ತೀರ್ಮಾನಿಸಿದಂತೆ ಮಂಗಳೂರನ್ನು ಬಿಟ್ಟು ಹೋಗುತ್ತಾಳೆ. ಲಕ್ಷ್ಮಪ್ಪ ಬಂಗರಸನ ಮನಸ್ಸಿಗೆ ವೇದನೆಯಾಗುತ್ತದೆ. ನಾಡಿನ ರಕ್ಷಣೆಗಾಗಿ ಅಬ್ಬಕ್ಕ ಗಂಡನನ್ನೇ ತೊರೆದು, ಹೋದ ಅವಳ ಚಿತ್ತಸ್ಥೈರ್ಯ ಮೆಚ್ಚುವಂತಹದ್ದು.

'ಪೋರ್ಚುಗೀಸರೊಡನೆ ಕೊನೆಯುಸಿರಿರುವ ತನಕ ಹೋರಾಡುವೆವು. ನಾಡಿನ ಸ್ವಾತಂತ್ರ್ಯವನ್ನು ಕಾಪಾಡುವೆವು. ನಾಡಿನ ರಕ್ಷಣೆಯೇ ನಮ್ಮ ಆದ್ಯ ಕರ್ತವ್ಯ ನಾಡಿನ ಸ್ವಾತಂತ್ರ್ಯ ರಕ್ಷಣೆಯ ಕಾರ್ಯದಲ್ಲಿ ತಮ್ಮ ಸರ್ವಸ್ವವನ್ನು ತ್ಯಾಗ ಮಾಡುವುದಕ್ಕೆ ನಾವು ಸಿದ್ಧರೆಂದು' ವೀರ ಯೋಧರಿಂದ ಪ್ರತಿಜ್ಞೆ ಮಾಡಿಸುತ್ತಿದ್ದುದಲ್ಲದೆ ನಾನಾ ರೀತಿಯಲ್ಲಿ ಹೋರಾಡುವುದಕ್ಕೆ ತಕ್ಕ ಸಿದ್ಧತೆಯನ್ನು ಕೈಗೊಳ್ಳುತ್ತಾಳೆ.

ಪೋರ್ಚುಗೀಸರೊಡನೆ ಹೋರಾಡುವುದಕ್ಕೆ ಸಿದ್ಧತೆಯನ್ನೆಸಗುತ್ತಿರುವ ವೇಳೆಯಲ್ಲಿ ತನ್ನ ಈ ವಿಚಾರವಾಗಿ ಪ್ರಜೆಗಳ ಅಭಿಪ್ರಾಯವನ್ನು ಕೇಳುವುದಕ್ಕಾಗಿ ಸೋಮನಾಥೇಶ್ವರ ದೇಗುಲದ ಮುಂದೆ ಸಭೆಯನ್ನು ಕರೆಯುತ್ತಾಳೆ. ದೇಗುಲದ ಎದುರುಗಡೆಯಲ್ಲಿರುವ ವಿಶಾಲವಾದ ಬಯಲಲ್ಲಿ ನೆರೆದಿದ್ದ ಜನಸ್ತೋಮಕ್ಕೆ ರಾಣಿಯಲ್ಲಿದ್ದ ನಾಡು - ನುಡಿಯ ಅಭಿಮಾನ ಪರಕೀಯರ ಗುಲಾಮಗಿರಿ ಯಿಂದ ಮುಕ್ತಿ ಹೊಂದಬೇಕೆಂಬ ಆಕೆಯ ಪ್ರಚೋದನಕಾರಿ ಮಾತುಗಳೇ ಉಳ್ಳಾಲದ ಜನರಲ್ಲುಂಟಾದ ಜನಜಾಗೃತಿಯ ಪ್ರತೀಕವೆಂಬಂತೆ ಕಾದಂಬರಿಯಲ್ಲಿ ವರ್ಣಿತವಾಗಿದೆ.

ರಾಣಿಯ ಆಡಂಬರರಹಿತವಾದ ಜೀವನವೇ ಪ್ರಜೆಗಳಿಗೆ ಅವಳಲ್ಲಿ ಮತ್ತು ಹೆಚ್ಚಿನ ಗೌರವನ್ನುಂಟು ಮಾಡಿತು. ಪೋರ್ಚುಗೀಸರು ಕಳುಹಿಸಿದ ಪತ್ರದಂತೆ ರಾಣಿಯು ಸುಂಕ ಕೊಡವ ವಿಚಾರವಾಗಿ ಇನ್ನೆರಡು ದಿನದಲ್ಲಿ ತಿಳಿಸುತ್ತೇವೆಂದು ಹೇಳಿ ಮರುಪತ್ರ ಬರೆಯುತ್ತಾಳೆ. 'ಮುಳ್ಳನ್ನು ಮುಳ್ಳಿನಿಂದಲೇ ತೆಗೆಯಬೇಕು' ಎನ್ನುವಂತೆ ವಿಜಯ ಸಾಧಿಸಿದೆವು ಎಂಬ ಭ್ರಮೆಯಲ್ಲಿದ್ದ ಪೋರ್ಚುಗೀಸರ ಸೈನಿಕರ ಹಡಗುಗಳಿಗೆ ರಾತ್ರಿಯ ಸಮಯದಲ್ಲಿ ಬೆಂಕಿ ಹಚ್ಚಿ ಅವುಗಳನ್ನು ನಾಶ ಮಾಡಿದಳು. ಈ ಅನಾಹುತದಿಂದ ಹೇಗೋ ಪಲಾಯನವಾದ ವೈಸರಾಯಿಯು ಜನವರಿ ೬ನೇ ತಾರೀಕಿನಂದು ಮತ್ತೆ ಉಳ್ಳಾಲದ ರಾಣಿಯೊಂದಿಗೆ ಭಯಂಕರ ಕಾಳಗವನ್ನೇ ನಡೆಸುತ್ತಾನೆ. ಇದರ ಹಾನಿಯಿಂದಾಗಿ ರಾಣಿ ತಲಪಾಡಿ ಕೋಟೆಯನ್ನು ಸೇರಿ ರಕ್ಷಣೆಯನ್ನು ಪಡೆಯುತ್ತಾಳೆ. ಮತ್ತೆ ಉಳ್ಳಾಲಕ್ಕೆ ಬಂದ ರಾಣಿಯು ಅಲ್ಲಿನ ಪರಿಸ್ಥಿತಿಯನ್ನು ಕಂಡು; ಮತ್ತೆ ಹೇಗಾದರೂ ಮಾಡಿ ಪೋರ್ಚುಗೀಸರನ್ನು ಈ ನಾಡಿನಿಂದ ಓಡಿಸಬೇಕು ಎಂದು ಯೋಚಿಸತೊಡಗುತ್ತಾಳೆ. ಜಾಮೋರಿನ್ ಅರಸನು ಪೋರ್ಚುಗೀಸರ ವಿರುದ್ಧವಾಗಿ ಹೋರಾಡುತ್ತಿದ್ದ

ಅವನ ಸಾಹಸವನ್ನು ತಿಳಿದ ರಾಣಿ ಜಾಮೋರಿನ ಅರಸನ ಸಹಾಯ ಕೇಳುತ್ತಾಳೆ. ಅವನು ಮತ್ತು ಕುಟ್ಟಿಪೋಕರೆಯು' ಎಷ್ಟೇ ಹೋರಾಡಿದರೂ ಪ್ರಯೋಜನವಾಗಲಿಲ್ಲ. ರಾಣಿಯು ಮತ್ತೆ ಸ್ವಪ್ರಯತ್ನವನ್ನು ಬಿಡದೇ ಹೋರಾಡಿದಳು. ತನ್ನ ಜೀವನದ ಕೊನೆಯವರೆಗೂ ಪೋರ್ಚುಗೀಸರಿಗೆ ಸಿಂಹಸ್ವಪ್ನವಾಗಿ ಕಾಡುತ್ತಾಳೆ.

ಹೆಣ್ಣಿನ ಹೋರಾಟ ಕುಟುಂಬದ ಒಳಗಿನಿಂದ ಆರಂಭವಾಗಿ ಬಹುವಾಗಿ ಅಲ್ಲಿಗೆ ನಿಲ್ಲುತ್ತಿತ್ತೆಂಬುದು ನಿಜ. ಆದರೆ ಇಂತಹ ಐತಿಹಾಸಿಕ ಘಟನೆಯನ್ನು ನೋಡಿದಾಗ ಕೇವಲ ರಾಜನ ನೆರಳಾಗಿರುವ ರಾಣಿ ಎಂದಷ್ಟೇ ತೆರೆಮರೆಯ ಪರದೆಯ ಹಿಂದೆ ಇರದೇ ರಾಜನ ಸರಿಸಮಾನವಾಗಿ ಸ್ವತಂತ್ರವಾಗಿ ಆಡಳಿತ ಮಾಡಿದ ಅಬ್ಬಕ್ಕನ ಜೀವನ ಮತ್ತು ವ್ಯಕ್ತಿತ್ವ ಇಂದಿಗೂ ಮಾದರಿಯಾಗುವಂತೆ ಕಾದಂಬರಿಕಾರರು ಚಿತ್ರಿಸಿದ್ದಾರೆ.

ಕೇಂದ್ರಪಾತ್ರವಾದ ಅಬ್ಬಕ್ಕದೇವಿಯ ಪಾತ್ರವನ್ನು ಹೊರತುಪಡಿಸಿದರೆ ಉಳಿದೆಲ್ಲ ಪಾತ್ರಗಳು ಅಬ್ಬಕ್ಕದೇವಿಯ ಬೆಳವಣಿಗೆಗೆ ಪೋಷಕ ಪಾತ್ರಗಳಾಗಿ ಮೂಡಿ ಬಂದಿದೆ. ಅವುಗಳಲ್ಲಿ ಮಾವ ತಿರುಮಲರಾಯ, ಗುರುಗಳು, ಪತಿ ಲಕ್ಷ್ಮಪ್ಪ ಬಂಗರಸ. ಪ್ರಧಾನಿ ನಾರ್ಣಪ್ಪಯ್ಯ ಪ್ರಮುಖರಾಗಿದ್ದಾರೆ. ಹಾವಳಿ ಬಂಗರಸ, ಜಾಮೋರಿನ ಅರಸ, ದೇವಪೂಂಜ ಪಾತ್ರಗಳು ದೇಶಾಭಿಮಾನ ಹೊಂದಿರುವ ಪಾತ್ರಗಳಾದರೆ ಕಾಮರಾಯ, ಚಂದ್ರಯ್ಯಶೆಟ್ಟಿ ಮಿಕಾಯಲ್ ಡೆ ಆಲ್ಮಿಡಾ ಪಾತ್ರಗಳು, ಸದಾ ದ್ವೇಷ ಮತ್ಸರ ತುಂಬಿದ ಪಾತ್ರಗಳಾಗಿವೆ.

ಕಾದಂಬರಿಯಲ್ಲಿ ಅಲ್ಲಲ್ಲಿ ಮಹಾಭಾರತದ ಕಥೆ, ರಾಮಾಯಣದ ಕಥೆ, ಗಾದೆ ಮಾತುಗಳು, ನುಡಿಗಟ್ಟುಗಳಲ್ಲಿ ಆಯಾಯ ಸಂದರ್ಭ ಸನ್ನಿವೇಶಕ್ಕೆ ತಕ್ಕಂತೆ ಬಳಕೆಯಾಗಿದೆ. ಒಟ್ಟಿನಲ್ಲಿ ಅಬ್ಬಕ್ಕದೇವಿಯು ಅಸಾಮಾನ್ಯ ಮಹಿಳೆಯಾಗಿದ್ದಳು. ಧೈರ್ಯ ಸ್ವಾಭಿಮಾನ, ಬುದ್ಧಿಶಕ್ತಿ ಮುಂತಾದ ವೀರಗುಣಗಳಲ್ಲಿ ಆಕೆಯ ಸಮಕಾಲೀನ ಅನೇಕ ರಾಜರನ್ನು ಮೀರಿಸಿದ್ದಳು. ಝಾನ್ಸಿರಾಣಿ ಲಕ್ಷ್ಮೀಬಾಯಿ, ಕಿತ್ತೂರ ಚೆನ್ನಮ್ಮರಂತಹ ದೇಶಪ್ರೇಮಿಗಳಿಗಿಂತ ೨ ಶತಮಾನಗಳ ಮುಂಚಿತವಾಗಿ ಪರದೇಶಿಯರಾದ ಪೋರ್ಚುಗೀಸರ ವಿರುದ್ಧ ಸ್ವಾತಂತ್ರ್ಯದ ರಣಕಹಳೆಯೂದಿದ ಉಜ್ವಲ ದೇಶಾಭಿಮಾನಿಯಾಗಿದ್ದಾಳೆ. ನಾಡಿಗಾಗಿ ತನ್ನನ್ನು ತಾನು ಅರ್ಪಿಸಿಕೊಂಡ ಅಬ್ಬಕ್ಕದೇವಿಯ ಸಾಹಸ ಜೀವನವನ್ನು ನಾಡಿನ ಜನತೆಗೆ ತಿಳಿಸುವ ಉದ್ದೇಶದಿಂದಲೇ ಕಾದಂಬರಿಕಾರರು ಆಕೆಯ ವ್ಯಕ್ತಿತ್ವವನ್ನು ಬಹಳ ಮನೋಜ್ಞವಾಗಿ ಚಿತ್ರಿಸಿದ್ದಾರೆ.

**ಒನಕೆ ಓಬ್ಬವ್ವ**

ಬಿ.ಎಲ್. ವೇಣು ಅವರ 'ವೀರವನಿತೆ ಒನಕೆ ಓಬವ್ವ' ಕಾದಂಬರಿಯು ಒನಕೆ ಓಬವ್ವನನ್ನು ಕೇಂದ್ರವಾಗಿರಿಸಿಕೊಂಡು ರಚನೆಯಾದ ಕೃತಿಯಾಗಿದೆ. ಚಿತ್ರದುರ್ಗ ಎಂದೊಡನೆ ತಟ್ಟನೆ ಜನತೆಯ ಕಂಗಳ ಮುಂದೆ ಮೂಡಿಬರುವ ವ್ಯಕ್ತಿಗಳೆಂದರೆ ವೀರವನಿತೆ ಒನಕೆ ಓಬವ್ವ ಮತ್ತು ಮದಕರಿ ನಾಯಕ. ಏಳುಸುತ್ತಿನ ಕೋಟೆಯನ್ನು ನೋಡಲು ಬಂದವರು ಒನಕೆ ಕಿಂಡಿ ನೋಡದೆ ಹೋಗುವುದೇ ಇಲ್ಲವೆಂದರೂ ತಪ್ಪಾಗಲಾರದು. ನಾಡಿನ ಜನರ ಹೃದಯದಲ್ಲಿ ಚಿರಸ್ಥಾಯಿಯಾಗಿ ಉಳಿದವಳು ವೀರವನಿತೆ ಒನಕೆ ಓಬವ್ವ. ಓಬವ್ವೆಯ ಬಗ್ಗೆ ಹಾಡು, ಲಾವಣಿ ಜಾನಪದಗಳು

ಹೆಚ್ಚಾಗಿವೆ. ಜನರಿಗೆ ಒಬ್ಬವ್ವನ ಧೈರ್ಯ ಸಾಹಸ ನಾಡಿಗಾಗಿ ತನ್ನ ಪ್ರಾಣವನ್ನೇ ಮುಡಿಪಿಟ್ಟ ರೋಮಾಂಚನಕಾರಿ ಕಥೆಯನ್ನು ಚಿತ್ರಿಸುವುದೇ ಕಾದಂಬರಿಯ ಆಶಯವಾಗಿದೆ.

ಚರಿತ್ರೆಯಲ್ಲಿ ದಿಟ್ಟತನದಿಂದ ಹೋರಾಡಿದ ಮಹಿಳೆಯರು ನಮ್ಮ ಕಣ್ಣ ಮುಂದೆ ಹಾದು ಹೋಗುತ್ತಾರೆ. ಇವರೆಲ್ಲ ಮಹಾರಾಣಿಯರು. ಇವರುಗಳು ತಮ್ಮ ರಾಜ್ಯಕ್ಕಾಗಿ ಪಟ್ಟ ಪದವಿಗಳಿಗಾಗಿ ಜೊತೆಗೆ ದೇಶದ ಉಳಿವಿಗಾಗಿಯೂ ಕೆಚ್ಚಿನಿಂದ ಹೋರಾಡಿದ್ದು ನಿಜ. ಆದರೆ ಓಬವ್ವ ಸಾಮಾನ್ಯ ಚಲವಾದಿ ಹೆಣ್ಣುಮಗಳು. ಯಾವುದೇ ಯುದ್ಧತಂತ್ರ ಅರಿತವಳಲ್ಲ. ಕತ್ತಿ ಹಿಡಿದವಳೂ ಅಲ್ಲ. ತನ್ನ ದೇಶ, ದೊರೆಯ ಉಳವಿಗಾಗಿ ಕೈಗೆ ಸಿಕ್ಕಿದ ಒನಕೆ ಹಿಡಿದು ಬಡಿದಡಿದ ಧೀಮಂತೆ. ಇಂತಹ ಅಸಾಮಾನ್ಯ ಹೆಣ್ಣಿನ ಸಾಧನೆ ಚಿರಸ್ಮರಣೆಯಾಗಿದೆ.

ದಸರಾ ಹಬ್ಬದ ವರ್ಣನೆಯೊಂದಿಗೆ ಕಾದಂಬರಿಯ ಕ್ರಿಯೆ ಆರಂಭವಾಗುತ್ತದೆ. ದಸರಾ ಹಬ್ಬದ ಅಂಗವಾಗಿ ಚಿತ್ರದುರ್ಗ ಸಂಸ್ಥಾನದಲ್ಲಿ ವಿರೋಚಿತ ಕ್ರೀಡೆಗಳನ್ನು ಹಮ್ಮಿಕೊಳ್ಳಲಾಗುತ್ತಿತ್ತು. ಕ್ರೀಡೆಯಲ್ಲಿ ಅಪ್ರತಿಮ ಶೌರ್ಯ ಸಾಹಸಗಳನ್ನು ಪ್ರದರ್ಶಿಸಿದವರಿಗೆ, ಸೈನ್ಯದಲ್ಲಿ ಸೇರಿಸಿಕೊಳ್ಳ ಲಾಗುತ್ತಿತ್ತು. ಪುರುಷರಿಗೂ ಮಹಿಳೆಯರಿಗೂ ಪ್ರತ್ಯೇಕವಾದ ಕ್ರೀಡೆಗಳನ್ನು ಹಬ್ಬಿಕೊಳ್ಳಲಾಗಿತ್ತು. ವನಿತೆಯರಿಗಾಗಿ ದೇವಾಲಯಗಳಲ್ಲಿ ರಂಗೋಲಿ ಸ್ಪರ್ಧೆ, ಭತ್ತ ಕುಟ್ಟುವ ಸ್ಪರ್ಧೆಯನ್ನು ಏರ್ಪಡಿಸಲಾಗಿತ್ತು. ಓಬವ್ವಳ ಭತ್ತ ಕುಟ್ಟುವ, ಅದರ ಸಿಪ್ಪೆ ತೆಗೆದು ಒಂದು ಗಂಟೆಗೂ ಮುಂಚೆಯೇ ಅದನ್ನು ಹಸನುಮಾಡಿದ ರೀತಿಯನ್ನು ಲೇಖಕರು ಬಹು ಸುಂದರವಾಗಿ ವರ್ಣಿಸಿದ್ದಾರೆ. ಈ ಕ್ರೀಡೆಗಳ ಸ್ಪರ್ಧೆಯೊಂದಿಗೆ ಓಬವ್ವಳ ಪಾತ್ರ ಕಾದಂಬರಿಯಲ್ಲಿ ಪ್ರಾರಂಭವಾಗುತ್ತದೆ. ಕೈಚಳಕಕ್ಕೆ ರಾಣಿ ರತ್ನಮ್ಮ ನಾಗತಿ ಕೊರಳಲ್ಲಿದ್ದ ಪಚ್ಚೆಯ ಹಾರವನ್ನು ತೆಗೆದು ಓಬವ್ವಳ ಕೈಗೆ ಹಾಕುತ್ತಾಳೆ. ದೊಡ್ಡ ಮದಕರಿ ಕಾಳಗದಲ್ಲಿ ವಿಶೇಷವಾದ ಅನುಭವ, ಅಭ್ಯಾಸ ಉಳ್ಳವರು. ಇವರು ನಡೆಸಿದ ಖಡ್ಗಕಾಳಗ ಸ್ಪರ್ಧೆಯಲ್ಲಿ ಚಿಕ್ಕಮದರಿ ಎಲ್ಲರನ್ನು ಸೋಲಿಸುವ ವರ್ಣನೆಯೇ ಹೆಚ್ಚಾಗಿದೆ. ಕಾದಂಬರಿಯ ಕಾಲುಭಾಗದಷ್ಟು ದೊಡ್ಡ ಮದಕರಿ ಚಿಕ್ಕಮದಕರಿಯ ಕಾಳಗ, ಪ್ರಕೃತಿ ವರ್ಣನೆ ಪ್ರಜೆಗಳಿಗೆ ಏರ್ಪಡಿಸಿದ ಸ್ಪರ್ಧೆಗಳ ವಿವರಗಳೇ ಹೆಚ್ಚಾಗಿ ಚಿತ್ರಿತಗೊಂಡಿದೆ. ಚಿಕ್ಕ ಮದಕರಿಯು ಮಾರುವೇಷ ಧರಿಸಿ, ಸ್ಪರ್ಧೆಯಲ್ಲಿ ಸಾವಲು ಹಾಕುವುದರಿಂದ ಹಿಡಿದು ಆತನು ದೊಡ್ಡ ಮದಕರಿಯನ್ನು ಸೋಲಿಸುವರೆಗಿನ ವರ್ಣನೆ ಕಣ್ಣಿಗೆ ಕಟ್ಟುವಂತಿದೆ.

ಸ್ಪರ್ಧೆಯೆಲ್ಲ ಮುಗಿದ ಮೇಲೆ ವಿಜೇತರಿಗೆ ಮದಕರಿಯೇ ಬಹುಮಾನವನ್ನು ವಿತರಿಸಿದರು. ಯುವತಿಯರ ಸಾಲಿನಲ್ಲಿ ಬಹಳಷ್ಟು ಸ್ಪರ್ಧೆಗಳಲ್ಲಿ ಓಬವ್ವಳೇ ಮೊದಲಿಗಳು. ಜಂಪಣ್ಣನಾಯಕ ದೇವಾಲಯ ಕಟ್ಟುತ್ತಿರುವ ಜಾಗದ ಹತ್ತಿರ ಹೋಗಿ ಕೂಲಿ ಕಾರ್ಮಿಕರಿಗೆ ತನ್ನ ಮನಬಂದಂತೆ ಮಾತನಾಡುತ್ತಾ ಚಾಟಿಯಿಂದ ಹೊಡೆಯುತ್ತಿದ್ದ ಊಟದ ಸಮಯವಾದರೂ ಕೂಲಿ ಕಾರ್ಮಿಕರಿಗೆ ಊಟಕ್ಕೆ ಹೋಗಲು ಅನುಮತಿ ನೀಡಿರಲಿಲ್ಲ. ಸಿರಿಯಜ್ಜಿಯೂ ಊಟದ ಸಮಯವಾಗಿದೆ ನಮಗೆ ಊಟ ಮಾಡಲು ಅಪ್ಪಣೆ ನೀಡಬೇಕೆಂದು ವಿನಯದಿಂದ ಕೇಳಿಕೊಂಡರೆ, ಜಂಪಣ್ಣನಾಯಕ 'ಎಲಾ ಮುದುಕಿ ನನಗೆ ಎದುರು ಮಾತನಾಡುತ್ತೀಯಾ?' ಎಂದು ಚಾಟಿಯಿಂದ ಹೊಡೆಯಲು

ಕೈಯೆತ್ತಿದ್ದ ಅದನ್ನು ಓಬವ್ವ ತಡೆಯುತ್ತಾಳೆ. ಅಧಿಕಾರವಿದೆಯೆಂದು ತನ್ನ ಮನಸ್ಸಿಗೆ ಬಂದಂತೆ ದಬ್ಬಾಳಿಕೆ ನಡೆಸುತ್ತಿದ್ದ ಜಂಪಣ್ಣನನ್ನು ಚಿಕ್ಕವಯಸ್ಸಿನ ಓಬವ್ವ ದಿಟ್ಟತನದಿಂದ ಹೀಗೆ ವಿರೋಧ ವ್ಯಕ್ತಪಡಿಸಿದಳು ಎಂಬ ವಿವರಣೆಯಿದೆ.

ಪೆಟ್ಟು ತಿಂದ ಹುಲಿಯಂತಾದ ಜಂಪಣ್ಣ ನಾಯಕ ಕಾಮಪಿಪಾಸೆಯಿಂದಾಗಿ ಓಬವ್ವಳ ಶೀಲಹರಣಕ್ಕೆ ಮುಂದಾಗುತ್ತಾನೆ. ಮುದ್ದಹನುಮಪ್ಪ ತೀವ್ರವಾದ ಪ್ರತಿರೋಧ ವ್ಯಕ್ತಪಡಿಸುತ್ತಾನೆ. ಆದರೂ ಜಂಪಣ್ಣನ ಕ್ರೌರ್ಯ ನಿಲ್ಲದಿದ್ದಾಗ ಚಿಕ್ಕ ಮದಕರಿನಾಯಕನು ಮಧ್ಯ ಪ್ರವೇಶಿಸಿ, ಜಂಪಣ್ಣ ನಾಯಕನನ್ನು ದುರ್ಗದ ಎಲ್ಲ ಜನತೆಯಲ್ಲಿ ಕ್ಷಮೆ ಕೇಳುವಂತೆ ಮಾಡುವ ಸನ್ನಿವೇಶವಂತೂ ಕಾದಂಬರಿಯಲ್ಲಿ ಚೆನ್ನಾಗಿ ಮೂಡಿಬಂದಿದೆ.

ದುರ್ಗ ಕೋಟೆ ಕಾಯುವುದು ಎಷ್ಟು ಪುಣ್ಯದ ಕೆಲಸವೋ ಅದಕ್ಕಿಂತ ಮಿಗಿಲಾದದ್ದು ಹೆಣ್ಣಿನ ಮಾನ ಸಂರಕ್ಷಣೆ ಎನ್ನುವ ಮಾತುಗಳು ಏನು ಸಂಬಂಧವಿಲ್ಲದ ಮುದ್ದಹನುಮಪ್ಪನು ಓಬವ್ವನ ಮಾನ ರಕ್ಷಿಸಲು ಮುಂದಾದ ಸನ್ನಿವೇಶ, ಪ್ರಸ್ತುತ ಸಂದರ್ಭಕ್ಕೆ ಅನ್ವಯವಾಗುತ್ತದೆ. ಹೆಣ್ಣಿನ ಮಾನ ಸಂರಕ್ಷಣೆ ನಮ್ಮೆಲ್ಲರ ಕರ್ತವ್ಯವಾಗಿದೆ. ಅನ್ಯಾಯವನ್ನು ದೇಶದ ದೊರೆ ಮಾಡಿದರೂ ಅದನ್ನು ಮನ್ನಿಸಕೂಡದು ಎನ್ನುತ್ತಾರೆ.

ಜಟ್ಟಂಗಿ ರಾಜನ ಮಗಳನ್ನು ಚಿಕ್ಕಮದಕರಿಗೆ ಕೊಟ್ಟು ಮದುವೆ ಮಾಡಲಾಗುತ್ತದೆ. ಇವರು ಗುರುಗಳ ಆರ್ಶೀವಾದ ಪಡೆಯಲು ಹೋದಾಗ ದುರ್ಗಕ್ಕೆ ಮುಂದೆ ಆಗಬಹುದಾದ ತೊಂದರೆಯನ್ನು ಲೇಖಕರು ಗುರುಪಾದ ಸ್ವಾಮಿಗಳ ಮೂಲಕ ಬಹುಸೂಚ್ಯವಾಗಿ ತಿಳಿಸಿದ್ದಾರೆ. "ಅರಿತು ನಡೆದರೆ ಆರು ತಲೆ, ಮರೆತು ನಡೆದರೆ ಮುಗಿದ ತಲೆ, ಧರ್ಮಾ ರಕ್ಷಿತ; ಸ್ವಧರ್ಮವನ್ನು ಬಿಡಬೇಡ. ಸಜ್ಜನರ ಸಹವಾಸ ಹೆಜ್ಜೇನು ಸವಿದಂತೆ. ದುರ್ಜನರ ಸಹವಾಸ ದುರ್ಗತಿಗೆ ನಾಂದಿ' (ವೇಣು ಬಿ.ಎಲ್.; ೨೦೦೫; ಪು. ೩೯) ಎಂದು ದುರ್ಗಕ್ಕೆ ಒದಗಲಿರುವ ವಿಪತ್ತನ್ನು ಗುರುಗಳು ಭವಿಷ್ಯ ನುಡಿಯುತ್ತಾರೆ.

ಓಬವ್ವೆಯು ಮುದ್ದಹನುಮಪ್ಪನೊಂದಿಗೆ ಶಾಲಿವಾಹನ ಶಕೆ ೧೬೮೩ ವೃಷಭ ಸಂವತ್ಸರ ವೈಶಾಖ ಶುದ್ಧ ಪಂಚಮಿಯದ್ದು ಮದುವೆಯಾಗುತ್ತಾಳೆ. ಹನುಮಪ್ಪನಿಗೆ ಕೂಲಿ ಕೆಲಸದಿಂದ ಮುಕ್ತಿ ದೊರಕಿ ಕಹಳೆ ಬತೇರಿ ಕಾವಲು ಕಾಯುವ ನೌಕರಿ ಸಿಗುತ್ತದೆ.

ದುರ್ಗದ ರಾಜರು ರಾಣಿಯರು ಯಾವುದೇ ಬೇಧಭಾವವಿಲ್ಲದೇ ಸರ್ವಧರ್ಮಗಳ ಸಹಿಷ್ಣುತೆಯನ್ನು ಹೊಂದಿದರು. ಇದಕ್ಕೆ ಉದಾಹರಣೆಯಂತೆ, ಚೆನ್ನಮ್ಮ ಮದುವೆಯಾಗಿ ಅರಮನೆಗೆ ಕೆಲಸ ನಿಮಿತ್ತ ಬಂದಾಗ ರಾಣಿ ಪದ್ಮಮ್ಮ ಆಕೆಯನ್ನು ತನ್ನ ಅಂತಃಪುರಕ್ಕೆ ಕರೆದು ತನ್ನ ಉಚ್ಚ ಸಂಸ್ಕೃತಿಯನ್ನು ಮರೆಯುತ್ತಾಳೆ.

ಮದಕರಿಯ ವೀರ ಪರಾಕ್ರಮಗಳೇ ಆತನಿಗೆ ಮುಳ್ಳಾಗುತ್ತದೆ. ಕಳ್ಳಿನರಪ್ಪನ ಕುತಂತ್ರದಿಂದ ಹೈದರನು ಮನಸ್ಸಿನಲ್ಲಿಯೇ ಮದಕರಿಯಲ್ಲಿ ದ್ವೇಷಿಸುತ್ತಾನೆ. ಕಾದಂಬರಿಯಲ್ಲಿ ಓಬವ್ವಳ ವಿವರಣೆಕ್ಕಿಂತ ದೊಡ್ಡ ಮದಕರಿಯ ರಾಜಕೀಯದ ವಿವರಣೆಯೇ ಹೆಚ್ಚಾಗಿದೆ. ಅಲ್ಲದೆ ರಾಜಕೀಯ ನಿಪುಣನಾದ ಮದಕರಿಯು ನವಾಬನ ವಿರುದ್ಧ ಹೋರಾಡಲು ಮರಾಠರ ಶತ್ರುತ್ವನ್ನು ಹಿಂದೆ ಬೆಳೆಸಿಕೊಂಡರೂ

ಮುಂದೆ ಆಗಬಹುದುದಾದ ತೊಂದರೆಯನ್ನು ತಡೆಯಲು ಪೇಶ್ವೆಯ ಸ್ನೇಹ ಕೇಳುತ್ತಾನೆ. ಮದಕರಿ ನಾಯಕನು ಜನೋಪಯೋಗ ಕಾರ್ಯಗಳಿಗಿಂತ ಆತನ ದ್ವಂದ್ವನೀತಿ ಗೊಂದಲ ತೀರ್ಮಾನಗಳು ಯುದ್ಧದಲ್ಲೇ ಹೆಚ್ಚು ತೊಡಗಿಸಿಕೊಳ್ಳುವಂತೆ ಮಾಡುತ್ತದೆ.

ಬಿ.ಎಲ್ ವೇಣು ಅವರ ವೀರವನಿತೆ ಒನಕೆ ಓಬವ್ವ ಕಾದಂಬರಿಯಲ್ಲಿ ಓಬವ್ವ ಪಾತ್ರ ಚಿತ್ರಣ ಸಂಕ್ಷಿಪ್ತವಾಗಿದ್ದು, ಪ್ರಕೃತಿವರ್ಣನೆ, ಸ್ಪರ್ಧೆ, ದೊಡ್ಡಮದಕರಿ ಚಿಕ್ಕಮದಕರಿಯ ಖಡ್ಗಕಾಳಗ ಹೈದರಾಲಿಯು ಯುದ್ಧದಲ್ಲಿ ಮದಕರಿ ನಾಯಕನನ್ನು ಸೋಲಿಸಲು ಸಂಚು ರೂಪಿಸುವ ಬಗ್ಗೆ ದೇವಸ್ಥಾನಗಳ ದುರಸ್ತಿ ಕಾರ್ಯ ಚಟುವಟಿಕೆಗಳ ಬಗ್ಗೆಯೇ ವಿವರಣೆ ಹೆಚ್ಚಾಗಿದೆ. ಹೈದರಾಲಿಯು ಮದಕರಿ ನಾಯಕನೊಂದಿಗೆ ಯುದ್ಧಕ್ಕೆ ತಯಾರಿ ನಡೆಸುತ್ತಿರುವ ವಿಷಯ ತಿಳಿದು ಓಬವ್ವ ಏಕನಾಥಿ ಹುಚ್ಚಂಗಿಯವರಿಗೆ ವಂದಿಸದಿದ್ದ ದಿನಗಳೇ ಇಲ್ಲ. ನಾಡಿಗಾಗಿ ಒಡೆಯನಾಗಿ ಬೇಡರ ಪಾಪ್ಗನು ದೇಶದ್ರೋಹಿ ಕೆಲಸ ಮಾಡಿದ್ದಕ್ಕೆ ಅವನಿಗೆ ನೀಡಿದ ಶಿಕ್ಷೆಯ ಸನ್ನಿವೇಶವಿದೆ. ರಾಜದ್ರೋಹಿಗೆ ಆದ ಶಿಕ್ಷೆಯನ್ನು ದುರ್ಗದ ಜನ ಅರಿಯಲಿ ಎಂದು ಅವನನ್ನು ಮೆರವಣಿಗೆ ಮಾಡಿದರು. ಇದು ಊರಿನಲ್ಲಿರುವ ಪ್ರಜೆಗಳಿಗೆಲ್ಲರಿಗೂ ಎಚ್ಚರಿಕೆಯನ್ನು ನೀಡುವಂತೆಯಿತ್ತು. ಪಾಪ್ಗನ ಶಿಕ್ಷೆ ಆ ಘಟನೆ ಸ್ಥಳಕ್ಕೆ ಬಂದು ಓಬವ್ವ ತನ್ನ ದೊರೆಯಣ್ಣನನ್ನು ಕೆಟ್ಟದೃಷ್ಟಿಯಿಂದ ನೋಡಿದವನಿಗೆ ಶಪಿಸುತ್ತಾ ಅಲ್ಲಿಂದ ಹೋಗುತ್ತಾಳೆ. ತಿಂಗಳುಗಟ್ಟಲೆ ನಡೆದ ಯುದ್ಧದಲ್ಲಿ ಎರಡು ಕಡೆಯ ಸೇನೆಗಳೂ ಹತರಾದರೇ ಹೊರತು ಜಯ ಯಾರಿಗೂ ಲಭಿಸಲಿಲ್ಲ. ದುರ್ಗದಲ್ಲಿ ವಿಶೇಷವಾಗಿ ನಡೆಯುವ ಏಕನಾಥೇಶ್ವರ ಅಮ್ಮನ ಉತ್ಸವವನ್ನು ವಿಜ್ರಂಭಣೆಯಿಂದಲೇ ಆಚರಿಸಿದರು. ದುರ್ಗದ ದೊರೆಯನ್ನು ಮತ್ತು ನಮ್ಮನ್ನು ರಕ್ಷಿಸು ಎಂದು ದೇವರಲ್ಲಿ ಬೇಡಿಕೊಂಡು ಕುರಿ ಕೋಣಗಳನ್ನು ಬಲಿಕೊಟ್ಟರು. ಉತ್ಸವದಲ್ಲಿ ಆಚರಿಸಲಾಗುವ 'ಸಿಡಿ' ಎಂಬ ಅಮಾನುಷ ಹರಕೆಯನ್ನು ಗಂಡಸರಷ್ಟೇ ಮಾಡುತ್ತಿದ್ದರು. ಈ ಹರಕೆ ಹೊತ್ತವರ ಸಾಲಿನಲ್ಲಿ ವೀರಗೆಜ್ಜೆ ಹಾಕಿ, ಹಳದಿ ಸೀರೆಯುಟ್ಟ ಹಳದಿ ರವಿಕೆ ತೊಟ್ಟು ಬೇವು ಮುಡಿದು, ಅರಿಶಿಣ ಕುಂಕುಮಗಳನ್ನು ಲೇಪಿಸಿಕೊಂಡು ಮುಡಿ ಕೆದರಿಕೊಂಡು ಕರಜೋಡಿಸಿ ನಿಂತ ಓಬವ್ವಳ ಮುಖದಲ್ಲಿ ದೈವೀ ಕಳೆ ಉಕ್ಕುತ್ತಿರುವ ಸನ್ನಿವೇಶವನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾರೆ. ದೊರೆ ಮತ್ತು ಓಬವ್ವಳ ನಡುವಿನ 'ಸಿಡಿ' ಹರಕೆಯ ಸಂಭಾಷಣೆಯಿದೆ. ಇವಳು ತನ್ನ ದೊರೆ ಹಾಗೂ ಪ್ರಜೆಗಳ ಹಿತಕ್ಕಾಗಿ ಸಿಡಿ ಹರಕೆಯನ್ನು ಹೊತ್ತ ಗಂಡೆದೆಯ ವೀರವನಿತೆಯಾಗಿದ್ದಾಳೆ. ಓಬವ್ವಳ ನಿಷ್ಕಲ್ಮಶ, ನಿಸ್ವಾರ್ಥ ಪ್ರೇಮಕ್ಕೆ ದುರ್ಗದ ದೊರೆ ಮತ್ತು ಮಹಾರಾಣಿ ಪದ್ಮಮ್ಮನಾಗತಿಯರ ಹೃದಯ ತುಂಬಿ ಬರುವ ವರ್ಣನೆಯೊಂದಿಗೆ ಓಬವ್ವಳ ಪಾತ್ರವನ್ನು ಇತರರಿಗೂ ಮಾದರಿಯಾಗುವಂತೆ ನಿರೂಪಿಸಲಾಗಿದೆ.

ಕಳ್ಳನರಸಪ್ಪ ಹೈದರಾಲಿಗೆ ಕಳ್ಳಗಂಡಿಯ ರಹಸ್ಯವನ್ನು ಬಿಟ್ಟುಕೊಡುತ್ತಾನೆ. ವಾಯುವ್ಯ ದಿಕ್ಕಿನಲ್ಲಿರುವ ಕಳ್ಳಗಂಡಿ ತಗ್ಗಿನಲ್ಲಿರುವುದರಿಂದ ಅಲ್ಲಿ ಅಷ್ಟಾಗಿ ಸೇನೆಯವರಾಗಲಿ, ಮನೆಗಳಾಗಿ ಇಲ್ಲದಿರುವುದರಿಂದ ನಿಮಗೆ ಅನುಕೂಲವೆಂದು ಕಳ್ಳಗಂಡಿಯ ದಾರಿಯನ್ನು ತೋರಿಸುತ್ತಾನೆ. ಭತ್ತ ಕಟ್ಟು ಒನಕೆಯನ್ನು ಹಿಂದಿರುಗಿಸಲು ನೆರೆಮನೆಯ ಕಡೆ ಹೋದಾಗ, ಓಬವ್ವ ಕಳ್ಳಗಂಡಿಯಿಂದ

ನುಸುಳಲು ಪ್ರಯತ್ನಿಸುತ್ತಿದ್ದ ಹೈದರಾಲಿಯ ಸೈನಿಕರನ್ನು ನೋಡುತ್ತಾಳೆ. ಏನು ಮಾಡಬೇಕೆಂದು ತೋಚದ ಓಬವ್ವ ಕೈಯಲ್ಲಿದ್ದ ಒನಕೆಯಿಂದ ಹೈದರಾಲಿ ಸೈನಿಕರನ್ನು ಹೊಡೆಯುತ್ತಾಳೆ. ಶತ್ರುಪಡೆಯನ್ನು ಸಂಹರಿಸಿದನ್ನು ಕಂಡ ಅಲ್ಲಿನ ಜನತೆ ದಿಗ್ಭ್ರಾಂತರಾಗುತ್ತಾರೆ. ಇವಳು ದುರ್ಗವನ್ನು ರಕ್ಷಿಸಿದ ದುರ್ಗಿಯೆಂದು ಹೊಗಳುತ್ತಾರೆ. ಓಬವ್ವೆ ಏಕಾಂಗಿ ಶತ್ರು ಸೈನ್ಯದೊಡನೆ ಹೋರಾಡಿ ತೋರಿದ ಸಾಹಸದ ಚಿತ್ರಣವಂತೂ ಓದುಗರ ಮನಸ್ಸಿನ ಮೇಲೆ ಅಚ್ಚಳಿಯದ ಪರಿಣಾಮವನ್ನು ಮೂಡಿಸುತ್ತದೆ.

ಓಬವ್ವಳ ಈ ಸಾಹಸವನ್ನು ನೋಡಲು ಬಂದ ಮದಕರಿಯು ಓಬವ್ವಳನ್ನು ಉಪಚರಿಸಿ ಆರೈಕೆ ಮಾಡಿದರು. ಕಣ್ಣುಬಿಟ್ಟು ಮದಕರಿಯನ್ನೇ ನಿಚ್ಚಲವಾಗಿ ನೋಡುತ್ತಿದ್ದ ಓಬವ್ವೆ ಅಣ್ಣ ನಿನ್ನ ತಲೆ ಯಾವ ಶತ್ರುಗಳಿಗೂ ಸಿಗಬಾರದು; ಅವರಿಗೆ ತಲೆ ಬಾಗಬಾರದು ಎಂದು ಹೇಳುತ್ತಾ ಅಸುನೀಗುತ್ತಾಳೆ. ಈಕೆಯನ್ನು ಹೂವಿನಿಂದ ಅಲಂಕರಿಸಿದ ಹಾಸಿಗೆಯಲ್ಲಿ ಮಲಗಿಸಿ ಸರ್ವರಿಗೂ ಅಂತಿಮ ದರ್ಶನ ಮಾಡಿಸುವ ಏರ್ಪಾಡು ನಡೆಯುತ್ತದೆ. ಈ ಸನ್ನಿವೇಶವು ಇಂದಿನ ಸಮಾಜದಲ್ಲಿ ನಡೆಯುವಂತೆ ಚಿತ್ರಿಸಲಾಗಿದೆ.

ಕಾದಂಬರಿಯಲ್ಲಿ ಓಬವ್ವ ಕೇಂದ್ರಪಾತ್ರವಾದರೆ, ದೊಡ್ಡ ಮದಕರಿನಾಯಕ, ರಾಣಿರತ್ನಮ್ಮ ನಾಗತಿ, ರಾಜಮಾತೆ, ಓಬವ್ವನಾಗತಿ, ಚಿಕ್ಕಮದಕರಿ, ಭರಮಪ್ಪನಾಯಕ, ಪ್ರಧಾನಿ ಕಳ್ಳಿನರಸಪ್ಪ ಜಂಪಣ್ಣನಾಯಕ ಸಿರಿಯಜ್ಜಿ, ಹೈದರಾಲಿ ಮುಂತಾದವು ಪೋಷಕ ಪಾತ್ರಗಳಾಗಿವೆ.

ಕಾದಂಬರಿಯಲ್ಲಿ ಓಬವ್ವಳದೇ ಕೇಂದ್ರಪಾತ್ರವಾಗಿದ್ದರೂ ಆಕೆಯ ಪಾತ್ರ ಚಿತ್ರಣ ಅಷ್ಟೊಂದು ವಿಸ್ತಾರವಾಗಿ ಮೂಡಿಬಂದಿಲ್ಲ. ಮದಕರಿನಾಯಕ ಮತ್ತು ಹೈದರಾಲಿಯ ಯುದ್ಧ ಸನ್ನಿವೇಶಗಳಿಗೆ ಹೆಚ್ಚಿನ ಆದ್ಯತೆ ನೀಡಲಾಗಿದೆ. ಲೇಖಕರೇ ಹೇಳಿರುವಂತೆ "ಅವರೇ ಬರೆದ ಗಂಡುಲಿ ಮದಕರಿ ನಾಯಕ ಕಾದಂಬರಿಯಲ್ಲಿ ಬರುವ ಓಬವ್ವೆಯ ಅನೇಕ ಪ್ರಸಂಗಗಳನ್ನೇ ಎತ್ತಿಕೊಂಡು ಜೋಡಿಸಿ ಓಬವ್ವಗೇ ಆದ್ಯತೆ ಕೊಟ್ಟು ಅಷ್ಟಿಷ್ಟು ಮಾರ್ಪಡಿಸಿ ಒಂದಷ್ಟು ಸೇರಿಸಿ ಕಾದಂಬರಿ ರೂಪಕೊಟ್ಟಿರುವುದಾಗಿ"(ಅದೇ; ಪು. ನಿಮ್ಮೊಂದಿಗೆ) ಹೇಳಿದ್ದಾರೆ. ಹಾಗಿದ್ದರೂ ವೀರವನಿತೆಯಾದ ಓಬವ್ವಳ ಪಾತ್ರವನ್ನು ಐತಿಹಾಸಿಕ ಮತ್ತು ಕಾಲ್ಪನಿಕ ಸಂಗತಿಗಳೊಂದಿಗೆ ಕಟ್ಟಿಕೊಡುವ ಕಾದಂಬರಿಯಾಗಿ ಮಹತ್ವವನ್ನು ಪಡೆದುಕೊಳ್ಳುತ್ತದೆ.

ಪಾಳೇಗಾರನಿಂದ ಹಿಡಿದು ಇಡೀ ನಾಡೇ ಆಕೆಯ ಸಾಹಸವನ್ನು ಬಣ್ಣಿಸುತ್ತದೆ. ಆಕೆಯ ಮರಣಕ್ಕೆ ಕಣ್ಣೀರಿಟ್ಟರೂ, ವೀರಮರಣಕ್ಕೆ ಸಂತಸ ಹೊಂದುತ್ತದೆ. ಈ ಮೂಲಕ ಜನತೆ ಬಾಳುವವರೆಗೂ ವೀರ ವನಿತೆ ಓಬವ್ವನ ಹೆಸರು ಶಾಶ್ವತವಾಗಿ ನಿಲ್ಲುತ್ತದೆ.

**ಕೆಳದಿ ಚೆನ್ನಮ್ಮಾ**

ಕೆಳದಿಯ ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ ಹಾಗೂ ಆಡಳಿತಾತ್ಮಕ ಸಂದರ್ಭಗಳಲ್ಲಿ ತನ್ನ ಹೆಸರನ್ನು ಅಚ್ಚಳಿಯದಂತೆ, ಇತಿಹಾಸದಲ್ಲಿ ಮೂಡಿಸಿ ಮಹಿಳೆಯರಿಗೆ ಮಾದರಿಯಾಗಿ ಕೀರ್ತಿ ತಂದಾಕೆ ಕೆಳದಿಯ ಚೆನ್ನಮ್ಮಾ. ದೀನ ರಕ್ಷಕಳಾಗಿ ದುಷ್ಟರನ್ನು ಸದೆಬಡಿಯುವ ಶಕ್ತಿಯಾಗಿ, ಆಧ್ಯಾತ್ಮಿಕ ಚಿಂತನಕಾರಳಾಗಿ, ಸಾಹಿತ್ಯ ಸಂಸ್ಕೃತಿ-ಕಲೆಗಳ ಪೋಷಕಳಾಗಿ, ಕನ್ನಡಿಗರ

ಕೆಚ್ಚನ್ನು ಹೊರಸೂಸಿ ಕಂಗೊಳಿಸಿದ ಕೆಳದಿ ಚೆನ್ನಮ್ಮನ ಚರಿತ್ರೆಯನ್ನು ಕುರಿತು ಮತ್ತು ಕೆಳದಿಯ ರಾಜಮನೆತನದ ವಿವರಗಳನ್ನು ಕೊಡುವ ಕುರಿತು ಅನೇಕ ಕನ್ನಡ ಕಾದಂಬರಿಗಳು ರಚನೆಗೊಂಡಿವೆ.

೧. ಶಾಂತಾದೇವಿ ಮಾಳವಾಡ - ಶೂರರಾಣಿ ಕೆಳದಿಯ ಚೆನ್ನಮ್ಮಾಜಿ

೨. ಲಕ್ಕಪ್ಪ ಶಿರಹಟ್ಟಿ - ವೀರರಾಣಿ ಮಹಾಮುತ್ಸದ್ಧಿ ಕೆಳದಿಯ ಚೆನ್ನಮ್ಮಾ

೩. ನಾ. ಡಿಸೋಜ - ಚೆನ್ನಿ ಚೆನ್ನಮ್ಮ ಚೆನ್ನಮ್ಮಾಜಿ

ಕಾದಂಬರಿಗಳಲ್ಲಿ ಶಿಸ್ತಿನ ಶಿವಪ್ಪನಾಯಕ ರಾಜ್ಯದ ಭದ್ರ ಬುನಾದಿಯಾದರೆ, ಚೆನ್ನಮ್ಮಾಜಿ ಅದರ ಕೀರ್ತಿಯ ಕಲಶ. ಶೌರ್ಯದಲ್ಲಿ, ಧೈರ್ಯದಲ್ಲಿ, ಸ್ವಾಭಿಮಾನದಲ್ಲಿ, ದೂರದೃಷ್ಟಿಯಲ್ಲಿ, ಧರ್ಮಾಚರಣೆಯಲ್ಲಿ, ನಿಷ್ಠೆಯಲ್ಲಿ ರಾಜ್ಯ ಕಾರ್ಯೋದ್ಯೋಗದಲ್ಲಿ ಸಮದೃಷ್ಟಿಯಲ್ಲಿ ಚೆನ್ನಮ್ಮ ಅಸಾಮಾನ್ಯಳು. ಇಂತಹ ಮೌಲ್ಯಗಳ, ಗುಣಗಳ ಪ್ರತಿಪಾದನೆಯನ್ನು ಚಿತ್ರಿಸುವುದು ಈ ಕಾದಂಬರಿಗಳ ಆಶಯವೂ ಆಗಿದೆ.

ಶಾಂತಾದೇವಿ ಮಾಳವಾಡ ಅವರ 'ಶೂರರಾಣಿ ಕೆಳದಿಯ ಚೆನ್ನಮ್ಮಾಜಿ' ಕಾದಂಬರಿಯು ಗಿರಿಜಮ್ಮ ಗರ್ಭಿಣಿಯಾದ ಸನ್ನಿವೇಶದೊಂದಿಗೆ ಪ್ರಾರಂಭವಾಗುತ್ತದೆ. ಗಿರಿಜಮ್ಮ ಮತ್ತು ಸಿದ್ದಪ್ಪಶೆಟ್ಟಿ ದಂಪತಿಗಳು ಮಕ್ಕಳಿಗಾಗಿ ಪರಿತಪಿಸುವ ಸನ್ನಿವೇಶ ಬರುತ್ತದೆ. ಸಿದ್ದಪ್ಪಶೆಟ್ಟರು ಮತ್ತು ಗಿರಿಜಮ್ಮ ಉದಾರ ಹೃದಯದವರಾಗಿದ್ದರು. ನಂದಗೋಕುಲದಂತಿದ್ದ ಆ ಮನೆಯಲ್ಲಿ ಎಲ್ಲ ಭಾಗ್ಯವಿದ್ದರೂ ಮಕ್ಕಳ ಭಾಗ್ಯವಿರಲಿಲ್ಲ. ದಂಪತಿಗಳು ಕುಲದೇವತೆ ಮುಕಾಂಬಿಕೆಗೆ, ಕೆಳದಿ ವೀರಭದ್ರನಿಗೆ, ಬನವಾಸಿ ಮಧುಕೇಶ್ವರನಿಗೆ, ನೂರೆಂಟು ಹರಕೆಯನ್ನು ಹೊತ್ತಿದ್ದರು. ಮದುವೆಯಾಗಿ ಹನ್ನೆರಡು ವರ್ಷ ಕಳೆದರೂ ಮಕ್ಕಳಾಗಿರಲಿಲ್ಲ. ಪ್ರತಿ ವರುಷದಂತೆ ಹುಣ್ಣಿಮೆಯಂದು ಗಿರಿಜಮ್ಮ ಲಲಿತ ಸಹಸ್ರವನ್ನೋದಿ ಐದು ಜನ ಮುತ್ತೈದೆಯರಿಗೆ ಊಟ ಮಾಡಿಸಿ ಉಡುಗೊರೆ ಕೊಟ್ಟಳು. ಅವರೆಲ್ಲರೂ ಗಿರಿಜಮ್ಮನಿಗೆ ಒಂದು ಮಗುವಾಗಲಿ ಎಂದು ಹರಸಿ ಹೋದರು. ಸಿದ್ದಪ್ಪಶೆಟ್ಟರು ಮತ್ತು ಗಿರಿಜಮ್ಮ ದೇವಿ ಪ್ರತ್ಯಕ್ಷಳಾಗಿ ಮಲ್ಲಿಗೆ ಹೂವನ್ನು ಮತ್ತು ಒಂದು ಸುಂದರವಾದ ಹೆಣ್ಣು ಮಗುವೊಂದನ್ನು ಉಡಿಯಲ್ಲಿ ಹಾಕಿದಂತೆ ಕನಸನ್ನು ಕಾಣುತ್ತಾರೆ. ಕೆಲಕಾಲದ ನಂತರ ಗಿರಿಜಮ್ಮ ಗರ್ಭಿಣಿಯಾಗುತ್ತಾಳೆ.

ಲೇಖಕರು ಚೆನ್ನಮ್ಮಾಜಿಯ ಜನನದ ವಿಷಯವಾಗಿ ಹೊಸದೊಂದು ಸನ್ನಿವೇಶವನ್ನೇ ಸೃಷ್ಟಿಸಿದ್ದಾರೆ. ಗಿರಿಜಮ್ಮ ಗರ್ಭಿಣಿಯಾದಾಗ ಅಂಗಾಂಗಗಳ ವರ್ಣನೆ ಬರುವುದಿಲ್ಲ. ಅವಳ ಕೆಲವೊಂದು ಬಯಕೆಗಳ ವರ್ಣನೆಯಿದೆ. ಇತರ ಮಹಿಳೆಯರಂತೆ ಹುಣಸೆಕಾಯಿ, ಮಾವಿನಕಾಯಿ ತಿನ್ನುವ ಬಯಕೆಗಳು ಅವಳಲ್ಲಿ ಇರಲಿಲ್ಲ. ಬದಲಾಗಿ ಗುರುಸೇವೆ ಹರಪೂಜೆಯ ಬಯಕೆಯಾಗುತ್ತಿತ್ತು. ಪ್ರಕೃತಿಯ ಮಡಿಲಲ್ಲಿ ಕುಳಿತು ಪಕ್ಷಿಗಳ ಕಲರವ ಕೇಳುವಂತೆನಿಸುತ್ತಿತ್ತು. ಬೆಳದಿಂಗಳ ಬೆಳಕಿನಲ್ಲಿ ಕುದುರೆಯ ಮೇಲೆ ಕುಳಿತು ಊರು ಸರೋವರವನ್ನೆಲ್ಲ ನೋಡಬೇಕು ಎನ್ನುವ ಆಕೆಯ ಬಯಕೆ ಸಾಮಾನ್ಯ ಹೆಣ್ಣುಮಗಳ ಸಾಧಾರಣ ಬಯಕೆ ಆಗದೆ ವೈಶಿಷ್ಟ್ಯ ಪೂರ್ಣವಾಗಿತ್ತು. "ಶುಕ್ರವಾರ ಬೆಳಗಿನ ಶುಭ ಮುಹೂರ್ತದಲ್ಲಿ ಗಿರಿಜಮ್ಮ ಹೆಣ್ಣು ಮಗುವಿಗೆ ಜನ್ಮವಿತ್ತಳು.

ದಷ್ಟಪುಷ್ಟವಾದ ಮಗುವಿನ ಮೈಬಣ್ಣ ಮಲ್ಲಿಗೆಯಂತೆ ಶುಭ್ರವಾಗಿತ್ತು. ಸಕಲ ಲಕ್ಷಣ ಸಂಪತ್ತು ಮಗುವಾಗಿತ್ತು"(ಶಾಂತಾದೇವಿ ಮಾಳವಾಡ; ೧೯೮೮; ಪು. ೫) ಎಂದು ಚೆನ್ನಮ್ಮಾಜಿಯ ಜನನದ ವಿಷಯವನ್ನು ಇಂದಿನ ಸಂಪ್ರದಾಯಗಳಂತೆ ಚಿತ್ರಿಸಿದ್ದಾರೆ. ಶಾಂತಾದೇವಿ ಮಾಳವಾಡ ಅವರು ಐತಿಹಾಸಿಕ ವ್ಯಕ್ತಿಯನ್ನು ಧಾರ್ಮಿಕ ದೃಷ್ಟಿಯನ್ನಿಟ್ಟುಕೊಂಡು ಚಿತ್ರಿಸಿದ್ದಾರೆ. ಇದರಿಂದಾಗಿ ಲೇಖಕರು ದೈವಿಕ ಶಕ್ತಿಯನ್ನು ನಂಬಿದವರಾಗಿದ್ದಾರೆ ಎಂಬುದು ಸ್ಪಷ್ಟವಾಗುತ್ತದೆ. ಕಾದಂಬರಿಯು ಚೆನ್ನಮ್ಮಾಜಿಯ ಜನನದ ವಿಷಯದಲ್ಲಿ ಸಂಪೂರ್ಣ ಭಿನ್ನವಾಗಿದೆ.

ಚೆನ್ನಮ್ಮಾಜಿ ಹುಟ್ಟಿದ ಸಂದರ್ಭದಲ್ಲಿ ನಾಮಕರಣವಾದ ನಂತರ ಮಹತ್ತಿನ ಮಠದ ಸ್ವಾಮಿಯವರನ್ನು ಕರೆಯಿಸಿ ಲಿಂಗಪೂಜೆ ಮಾಡಿಸಿ, ಮಗುವಿಗೆ ಲಿಂಗಧಾರಣೆ ಮಾಡಿದರು. ಕಾದಂಬರಿಕಾರರು ವೀರಶೈವ ಧರ್ಮದ ಆಚರಣೆಯ ನೆಲೆಯಲ್ಲಿ ಹೆಚ್ಚಿನ ಆಸಕ್ತಿ ಇಟ್ಟುಕೊಂಡಿದ್ದರಿಂದ ಚೆನ್ನಮ್ಮಾಳ ಲಿಂಗಧಾರಣೆ ನಾಮಕರಣದ ಸನ್ನಿವೇಶವನ್ನು ಕಾದಂಬರಿಯಲ್ಲಿ ಬಹುಸುಂದರವಾಗಿ ಚಿತ್ರಿಸಿರುವುದು ಕಂಡುಬರುತ್ತದೆ. ಮಗುವಿನ ಜನನ ಮತ್ತು ಲಿಂಗಧಾರಣೆಯ ಸನ್ನಿವೇಶದೊಂದಿಗೆ ಚೆನ್ನಮ್ಮಾಜಿಯ ಪಾತ್ರಚಿತ್ರಣ ಕಾದಂಬರಿಯಲ್ಲಿ ಪ್ರಾರಂಭವಾಗುತ್ತದೆ.

ಪಶ್ಚಿಮಘಟ್ಟ ಹಾಗೂ ಕರಾವಳಿಯ ಮಧ್ಯದಲ್ಲಿರುವ 'ಕೊಟ್ಟೀಪುರ' ಎಂಬ ಪಟ್ಟಣದಲ್ಲಿ ಚೆನ್ನಮ್ಮಾಜಿ ಹುಟ್ಟುತ್ತಾಳೆ. ತಂದೆ 'ಸಿದ್ದಪ್ಪಶೆಟ್ಟಿ' ತಾಯಿ ಗಿರಿಜಮ್ಮ. ಗಿರಿಜಮ್ಮ ಎಂಬ ಹೆಸರು ಲೇಖಕರ ಕಲ್ಪನೆ ಮಾತ್ರವಾಗಿದೆ. ಸಿದ್ದಪ್ಪಶೆಟ್ಟರು ಶಿವಪ್ಪನಾಯಕರಿಗೆ ಬೇಕಾದವರಾಗಿದ್ದರು. ಆಗರ್ಭ ಶ್ರೀಮಂತರಾಗಿದ್ದರು. ಪರದೇಶದ ಜನರೊಂದಿಗೆ ವ್ಯಾಪಾರ ಮಾಡುತ್ತಿದ್ದರು. ಚತುರ ವ್ಯಾಪಾರಿಯಾಗಿದ್ದ ಇವರು ಅರಮನೆಗೆ ಬೇಕಾದ ಹಲವಾರು ಬಗೆಯ ವಸ್ತುಗಳನ್ನು ಖರೀದಿಸಿ ಕಳುಹಿಸುತ್ತಿದ್ದರು. ಧಾರ್ಮಿಕ ಭಾವನೆ ಉಳ್ಳ ದಂಪತಿಗಳ ಮನೆಯಲ್ಲಿ ನಿತ್ಯವೂ ಹಲವಾರು ಜನ ಜಂಗಮರ ಪೂಜೆ, ಪ್ರಸಾದ ವಿನಿಯೋಗ ನಡೆಯುತ್ತಿತ್ತು. ಇಂತಹ ಧಾರ್ಮಿಕ ಪರಿಸರದಲ್ಲಿ ಚೆನ್ನಮ್ಮ ಬೆಳೆಯುತ್ತಾಳೆ.

ಕೆಳದಿಯ ನೃಪವಿಜಯದಲ್ಲಾಗಲಿ, ಶಾಸನಗಳಲ್ಲಾಗಲಿ ಚೆನ್ನಮ್ಮಾಜಿಯ ಬಾಲ್ಯದ ವಿವರಗಳಿಲ್ಲ. ಆದರೂ ಲೇಖಕರು ತಮ್ಮ ಕಲ್ಪನಾ ಸಾಮರ್ಥ್ಯಗಳಿಂದ ಅವಳ ಬಾಲ್ಯವನ್ನು ಚಿತ್ರಿಸಿದ್ದಾರೆ.

ಆಕೆಯನ್ನು ಗಂಡುಮಕ್ಕಳಂತೆ ಬೆಳೆಸಬೇಕೆಂಬ ಆಸೆಯನ್ನು ಹೊಂದಿದವನು ಸಿದ್ದಪ್ಪಶೆಟ್ಟಿ. ಹಾಗಾಗಿ ಚೆನ್ನಮ್ಮ ಸಿದ್ದಪ್ಪಶೆಟ್ಟಿ ಮತ್ತು ಗಿರಿಜಮ್ಮರಿಗೆ ಮಗಳು, ಮಗ ಎಲ್ಲ ಅವಳೇ ಆಗಿದ್ದಳು. ಅಪಾರ ಆಸ್ತಿ, ವ್ಯಾಪಾರ, ವ್ಯವಹಾರವನ್ನು ಒಬ್ಬಳೇ ಮಗಳು ಚೆನ್ನಮ್ಮಾಜ್ಜಿನೇ ನೋಡಿಕೊಳ್ಳುವಳಾಗಿದ್ದರಿಂದ ಬಾಲ್ಯದಲ್ಲಿ ಆಕೆಗೆ ಯೋಗ್ಯ ಶಿಕ್ಷಣ ಕೊಡಬೇಕು ಎಂದು ಯೋಚಿಸಿದ್ದನು. "ಹೆಣ್ಣುಮಕ್ಕಳು ಅಂಜುಬುರುಕರಾಗಿ, ಅಡುಗೆ ಮನೆಯಲ್ಲಿ ಕುಳಿತರೆ ಈ ಕಾಲದಲ್ಲಿ ನಡೆಯುವುದಿಲ್ಲ. ಇತ್ತೀಚೆಗೆ ಸುತ್ತಲಿನ ಅರಸರೆಲ್ಲ ನಮ್ಮ ರಾಜ್ಯದ ಮೇಲೆ ಯುದ್ಧಕ್ಕೆ ಬರುತ್ತಿದ್ದಾರೆ. ಯುದ್ಧಕಾಲದಲ್ಲಿ ಸ್ವರಕ್ಷಣೆಗಾಗಿ ನಮ್ಮ ಮಹಿಳೆಯರು ಕತ್ತಿವರಸೆ ಕಲಿಯಬೇಕು. ಬಿಲ್ಲುವಿದ್ಯೆಯನ್ನು ಬಲ್ಲವರಾಗಬೇಕು" (ಅದೇ; ಪು. ೭) ಎನ್ನುವುದರಿಂದ ಯುದ್ಧಕಲೆಗಳನ್ನು ಮಗಳಿಗೆ ಬಾಲ್ಯದಲ್ಲಿಯೇ ತಂದೆ ಸಿದ್ದಪ್ಪಶೆಟ್ಟಿ ಕಲಿಸಿದ್ದ ಚೆನ್ನಮ್ಮಾಜಿಗೆ ಐದು ವರ್ಷ ತುಂಬುತ್ತಲೇ ತಂದೆ ಮಠದ ಅಯ್ಯನವರನ್ನು

ಕರೆಯಿಸಿ ಸರಸ್ವತಿ ಪೂಜೆ ಮಾಡಿಸಿ ಮಗಳಿಗೆ ಅಕ್ಷರಾಭ್ಯಾಸ ಪ್ರಾರಂಭಿಸುತ್ತಾರೆ. ಚೆನ್ನಮ್ಮಾಳ ಉಜ್ವಲ ವ್ಯಕ್ತಿತ್ವ ನಿರ್ಮಾಣದ ರೂವಾರಿ ಅವಳ ತಂದೆ ಸಿದ್ಧಪ್ಪಶೆಟ್ಟಿಯೇ ಎಂಬುದು ಸ್ಪಷ್ಟವಾಗುತ್ತದೆ. ಪ್ರಸ್ತುತ ಸಂದರ್ಭದಲ್ಲಿ ಮಹಿಳೆಯರಿಗೆ ಸ್ವರಕ್ಷಣೆ ಅಗತ್ಯವಾಗಿಬೇಕು. ತನ್ನನ್ನು ತಾನು ರಕ್ಷಿಸಿಕೊಳ್ಳಲು ಶಿಕ್ಷಣದ ಜೊತೆಗೆ ಶಸ್ತ್ರಾಭ್ಯಾಸವನ್ನು ಕಲಿತುಕೊಳ್ಳಬೇಕೆಂದು ಚೆನ್ನಮ್ಮಾನ ಪಾತ್ರದ ಮೂಲಕ ಲೇಖಕರು ತಿಳಿಸಿದ್ದಾರೆ.

ಚೆನ್ನಮ್ಮ ತನ್ನ ಬಾಲ್ಯದಲ್ಲೇ ಧೈರ್ಯ, ಸಾಹಸ ಪ್ರವೃತಿ ಬೆಳೆಸಿಕೊಂಡವಳು. ಚಿಕ್ಕಂದಿನಲ್ಲೇ ಕುದುರೆ ಸವಾರಿಯಲ್ಲಿ ಆಸಕ್ತಿ ತನ್ನ ವಯಸ್ಸಿನ ಮಕ್ಕಳಲ್ಲಿರದ ವಿಭಿನ್ನ ವ್ಯಕ್ತಿತ್ವ, ಬುದ್ಧಿಮತ್ತೆಗಳನ್ನು ಹೊಂದಿದ್ದಳು. ಗುರು ಹಿರಿಯರಲ್ಲಿ ಭಕ್ತಿ, ಗೌರವ, ಆದರ್ಶ ಗುಣಗಳನ್ನು ಹೊಂದಿದ್ದಳು. ಆಕೆಯ ಬೆಳವಣಿಗೆಯಲ್ಲಿ ಮಾತಾಪಿತೃಗಳ ಪಾತ್ರ ಕಾದಂಬರಿಯಲ್ಲಿ ಸಹಜವಾಗಿ ಮೂಡಿಬಂದಿವೆ. 'ಮಹಿಳೆಯ ಸ್ಥಾನ ಮನೆಯ ಒಳಗೆ' ಎಂಬಂತಹ ಕಾಲಘಟ್ಟದಲ್ಲಿ ತನ್ನ ನಡವಳಿಕೆಯಿಂದ ಪ್ರಬುದ್ಧತೆಯನ್ನು ಸಾಧಿಸಿದ ಚೆನ್ನಮ್ಮಾಳ ವೀರಗಾಥೆಯನ್ನು ಜನತೆಗೆ ತಿಳಿಸುವ ಉದ್ದೇಶದಿಂದಲೇ ಲೇಖಕರು ವಸ್ತುನಿಷ್ಠವಾಗಿ ಈ ಕಾದಂಬರಿಯನ್ನು ಚಿತ್ರಿಸಿದ್ದಾರೆ. ಚೆನ್ನಮ್ಮಾಜಿಯು ಸಾಮಾನ್ಯ ವ್ಯಾಪಾರಿಯ ಮಗಳು. ಇವಳು ಯುವ ರಾಜನ ಕೈಹಿಡಿದು ಅರಮನೆಗೆ ಹೋಗುವ ಚಿತ್ರಣವನ್ನು ಲೇಖಕರು ಕಲ್ಪನೆಗಳ ಹಿನ್ನೆಲೆಯಲ್ಲಿ ವರ್ಣಿಸಿದ್ದಾರೆ. ಶಿವಪ್ಪನಾಯಕರು ಹೊನ್ನಾವರದ ಬಳಿ ದ್ವೀಪವೊಂದನ್ನು ಗೆದ್ದು ಅಲ್ಲೊಂದು ಕೋಟೆ ಕಟ್ಟಿಸಿದ್ದರು. ಅದಕ್ಕೆ 'ಬಸವರಾಜ ದುರ್ಗ' ಎಂದು ನಾಮಕರಣ ಮಾಡುವವರಿದ್ದರು. ಅದಕ್ಕಾಗಿ ರಾಜಪರಿವಾರದೊಂದಿಗೆ ಬಿದನೂರಿನಿಂದ ಹೋಗುವ ಸಮಯದಲ್ಲಿ ಸಿದ್ದಪ್ಪಶೆಟ್ಟರು ಪ್ರೀತಿಯ ಸತ್ಕಾರ ಸ್ವೀಕರಿಸಬೇಕೆಂದು ಕೇಳಿಕೊಂಡಾಗ ಪರಿವಾರಸಮೇತರಾಗಿ ಸಿದ್ದಪ್ಪಶೆಟ್ಟರ ಮನೆಗೆ ಬರುತ್ತಾರೆ. ಆ ಸಮಯದಲ್ಲಿ ಚೆನ್ನಮ್ಮಾಜಿಯನ್ನು ಸೋಮಶೇಖರ ನೋಡಿ ಮೆಚ್ಚಿಕೊಳ್ಳುತ್ತಾನೆ. ಈ ವಿಷಯವನ್ನು ಮಹಾರಾಣಿ ಸೂಕ್ಷ್ಮವಾಗಿ ತಿಳಿದುಕೊಳ್ಳುತ್ತಾಳೆ. ಯಾವ ಹೆಣ್ಣನ್ನು ಕಣ್ಣೆತ್ತಿ ನೋಡದ ಮಗ, ಚೆನ್ನಮ್ಮಳನ್ನು ಹಲವು ಬಾರಿ ನೋಡಿದುದನ್ನು ಕಂಡ ರಾಣಿ, ಚೆಲುವಿನ ಕಣಿ, ಸರ್ವಗುಣ ಸಂಪನ್ನೆ ಚೆನ್ನಮ್ಮಾಜಿಯನ್ನು ತಂದುಕೊಳ್ಳುವ ವಿಚಾರವಾಗಿ ಮಗನೊಂದಿಗೆ ಚರ್ಚಿಸಿ ಅವನ ಒಪ್ಪಿಗೆಯನ್ನು ಪಡೆದು ಅವರಿಬ್ಬರ ಮದುವೆಯನ್ನು ಮಾಡುತ್ತಾರೆ. ಕಾದಂಬರಿಯಲ್ಲಿ ಮದುವೆಯನ್ನು ಸಾಂಪ್ರದಾಯಿಕವಾಗಿ ಬಣ್ಣಿಸಲಾಗಿದೆ. ಮದುವೆಯ ಮುನ್ನ ಚೆನ್ನಮ್ಮಾಜಿಯನ್ನು ನೋಡಿ ಅವಳ ಒಪ್ಪಿಗೆಯನ್ನು ಪಡೆದು ಸಿದ್ದಪ್ಪಶೆಟ್ಟಿರಿಗೆ ಒಪ್ಪಿಸಿ ಸೋಮಶೇಖರ ನಾಯಕನೊಂದಿಗೆ ಚೆನ್ನಮ್ಮಾಜಿಯ ನಿಶ್ಚಿತಾರ್ಥ ಮಾಡಿ ನಂತರ ಬಿದನೂರ ಅರಮನೆಯಲ್ಲಿ ಶಾಸ್ತ್ರೋಕ್ತವಾಗಿ ಮದುವೆ ನೆರವೇರುತ್ತದೆ. ಚೆನ್ನಮ್ಮ ಮತ್ತು ಸೋಮಶೇಖರ ನಾಯಕರ ನಿಶ್ಚಿತಾರ್ಥದ ಸನ್ನಿವೇಶ ಒಂದು ಅಧ್ಯಾಯವೇ ಆಗಿದೆ. ರಾಜಪರಿವಾದವಳಲ್ಲದ ಚೆನ್ನಮ್ಮ ಅದೃಷ್ಟದಿಂದ ಕೆಳದಿ ಸಾಮ್ರಾಜ್ಯದ ರಾಣಿಯಾಗುವ ಅವಕಾಶ ಬಂದಾಗ ತನ್ನ ತಂದೆಯ ಮಾತಿನಂತೆ, ಸೋಮಶೇಖರನಾಯಕನ ಮಡದಿಯಾಗಿ ಅರಮನೆ ಪ್ರವೇಶ ಮಾಡುತ್ತಾಳೆ. ರಾಜ ಪರಿವಾರದರೆಲ್ಲರ ಪ್ರೀತಿ ಗೌರವಕ್ಕೆ ಪಾತ್ರಳಾಗುತ್ತಾಳೆ.

ಪತಿಯೊಂದಿಗೆ ಸಹಬಾಳ್ವೆ ನಡೆಸುತ್ತಿದ್ದ ಚೆನ್ನಮ್ಮ ಅವನೊಂದಿಗೆ ಕುದುರೆ ಸವಾರಿ ಮಾಡುತ್ತಿದ್ದಳು. ಅರಮನೆಯಲ್ಲಿ ಸೊಸೆಯಾಗಿ ಬಂದು ಮಗಳಾಗಿ ಓಡಾಡುತ್ತಿದ್ದಳು. ಪತಿಯೊಂದಿಗೆ

ಅನ್ಯೋನ್ಯದಿಂದಿದ್ದಳು. ಆಕೆ ಗುಣಗಳಿಂದ ಎಲ್ಲರ ಪ್ರೀತಿಗೆ ಪಾತ್ರಳಾಗಿದ್ದಳು. ಚೆನ್ನಮ್ಮಾಳ ದಾಂಪತ್ಯ ಜೀವನವನ್ನು ಕಾದಂಬರಿಯಲ್ಲಿ ತುಂಬಾ ದೀರ್ಘವಾಗಿ ಚಿತ್ರಿಸಲಾಗಿದೆ. ವಿವಿಧ ಸನ್ನಿವೇಶಗಳಾದ ಯುದ್ಧ, ವನಭೋಜನ ಧಾರ್ಮಿಕ ಕಾರ್ಯ ಮೊದಲಾದ ವರ್ಣನೆಗಳು ಕಾದಂಬರಿಯಲ್ಲಿ ಕಂಡು ಬರುತ್ತವೆ. ಕೃತಿಯಲ್ಲಿ ೩೨೫ ವರ್ಷಗಳ ಹಿಂದಿನ ಸಾಮಾಜಿಕ ಪರಿಸರ, ಜನಜೀವನ ಆಚರಣೆಗಳು, ಜೀವನಪದ್ಧತಿ ಮತ್ತು ಮಲೆನಾಡಿನ ವರ್ಣನೆಯಿದೆ. ಚೆನ್ನಮ್ಮಳ ಜೀವನ ಚರಿತ್ರೆಯನ್ನು ತಿಳಿಸುವುದರ ಜೊತೆಯಲ್ಲಿ ಆಗಿನ ಕಾಲದ ಪರಿಸರವನ್ನು ಸಹೃದಯರಿಗೆ ತಿಳಿಸುವ ಆಶಯವನ್ನು ಲೇಖಕರು ಹೊಂದಿದ್ದಾರೆ.

ಚೆನ್ನಮ್ಮಾಜಿ ಮತ್ತು ಸೋಮಶೇಖರ ನಾಯಕರಿಗೆ ಮದುವೆಯಾಗಿ ಎಂಟು ವರ್ಷಗಳಾದರೂ ಅವರಿಗೆ ಮಕ್ಕಳಾಗಿರಲಿಲ್ಲ. ಅವರು ಪ್ರಜೆಗಳ ಹಿತಚಿಂತನೆಯಲ್ಲಿ ಆ ನೋವನ್ನು ಮರೆಯುತ್ತಿದ್ದರು. ಆದರೂ ರಾಜ್ಯದ ಭವಿಷ್ಯತ್ತಿನ ಚಿಂತೆ ಬಂದಾಗಲೆಲ್ಲ ರಾಜ್ಯಕ್ಕೆ ಹಕ್ಕುದಾರನೊಬ್ಬನಿರಬೇಕು ಎಂದು ಹಂಬಲಿಸುತ್ತಿದ್ದರು. ಇದನ್ನು ಅರಿತ ಜಿನ್ನೋಪಂತ ಸಂಪದ್ಭರಿತವಾದ ಕೆಳದಿಯನ್ನು ತನ್ನ ವಂಶಕ್ಕೆ ತೆಗೆದುಕೊಳ್ಳಬೇಕೆಂಬ ವಿಚಾರ ಮಾಡುತ್ತಾನೆ. ಮಹಾರಾಜರ ಬೆಂಗಾವಲಿನ ಭರವೇಮಾವುತ, ಬಾಲ್ಯದಿಂದ ದೊರೆಯೊಂದಿಗೆ ಅರಮನೆಯಲ್ಲಿ ಬೆಳೆದವನು. ಆಪ್ತಸೇವಕ ಅಂಗರಕ್ಷಕ ಎಂಬುದನ್ನರಿತ ಚಾಣಾಕ್ಷ ಜಿನ್ನೋಪಂತ ೫೦ ಸಾವಿರ ವರಹಗಳನ್ನು ಭರಮೇಮಾವುತನಿಗೆ ಕೊಟ್ಟು, ಆಸೆಯನ್ನು ಹುಟ್ಟಿಸುತ್ತಾನೆ. ಇದರಿಂದ ಭರಮೇಮಾವುತನಲ್ಲಿ ದುಷ್ಟ ವಿಚಾರಗಳು ಬರುತ್ತಲಿದ್ದವು. ಮಕ್ಕಳಿಲ್ಲದ ಮಹಾರಾಜರನ್ನು ಕೊಂದರೆ, ಮಕ್ಕಳಿಲ್ಲದ ಅಣ್ಣ ತಮ್ಮಂದಿರಿಲ್ಲದ ರಾಜ್ಯ ಸಹಜವಾಗಿ ತನಗೆ ದೊರೆಯುವುದು. ಹೆಣ್ಣು ಹೆಂಗಸು ಚೆನ್ನಮ್ಮಾ ಒಬ್ಬಳೇ ಏನು ಮಾಡಲು ಸಾಧ್ಯ ಎಂಬ ಭಾವನೆ ಅವನಲ್ಲಿ ಮೂಡಿತ್ತು. ಆ ವೇಳೆಗೆ ಜಿನ್ನೋಪಂತನ ಸೇವಕ ೫೦ ಸಾವಿರ ಹಣವನ್ನು ಭರಮೇಮಾವುತನಿಗೆ ಕೊಟ್ಟ, ಸ್ವಾರ್ಥ ಮುಂದೆ ಬಂದು, ಅರಮನೆಯ ಅನ್ನವನ್ನುಂಡು ಬೆಳೆದು ಮಹಾರಾಜರ ಪ್ರೀತಿಗೆ ಪಾತ್ರನಾದ ಭರಮೇಮಾವುತ ಸೋಮಶೇಖರ ನಾಯಕರಿಗೆ ದ್ರೋಹ ಬಗೆಯಲು ಮುಂದಾದ ಆನೆಯ ಮದೋದಕದಲ್ಲಿ ಗಾಂಜಾ ಹಾಕಿ ನಾಯಕನಿಗೆ ಕುಡಿಸಿದನು. ಇದರಿಂದಾಗಿ ಆನೆಗಳ ಬಲ ಬರುತ್ತದೆ. ತಮಗೆ ಮಕ್ಕಳಾಗುತ್ತವೆ ಎಂಬ ಆಸೆಯನ್ನು ಹಚ್ಚಿದನು. ಅಲ್ಲದೆ ನೃತ್ಯಗಾತಿ ಚೆನ್ನಿಯ ಸಹವಾಸ ಮಾಡಿಸಿದನು. ಹೀಗೆ ಹಾಲಿನಂತಹ ಸಂಸಾರದಲ್ಲಿ ಭರಮೇಮಾವುತನ ಪ್ರವೇಶವಾಗುತ್ತದೆ. 'ಮನುಷ್ಯನ ದೌರ್ಬಲ್ಯವನ್ನು ತಮ್ಮ ಸ್ವಾರ್ಥಕ್ಕಾಗಿ ಜನರು ಹೇಗೆ ಬಳಸಿಕೊಳ್ಳುತ್ತಾರೆಂಬುದನ್ನು ಕಾದಂಬರಿ ನಮ್ಮ ಮುಂದಿಡುತ್ತದೆ.

ದುಷ್ಟನಾದ ಭರಮೇಮಾವುತನನ್ನು ಕೊಲೆ ಮಾಡಿ ಅವನ ಶವವನ್ನು ನಾಯಕನ ಮುಂದೆ ತಂದು ಹಾಕುವ ಚಿತ್ರಣ ಈ ಕಾದಂಬರಿಯಲ್ಲಿ ಮಾತ್ರವಿದೆ. ಕಾದಂಬರಿಯಲ್ಲಿ ಚೆನ್ನಮ್ಮಳು ಸೋಮಶೇಖರನೊಂದಿಗೆ ಯುದ್ಧಭೂಮಿಗೆ ಬಂದ ಸಂದರ್ಭ ಇದೆ. ಜನೋಪಂತನು ಮೋಸದಿಂದ ಸೋಮಶೇಖರನಾಯಕ ಕುತ್ತಿಗೆಗೆ ಗುರಿಯಿಟ್ಟು ಹೊಡೆದನು. ಇದನ್ನು ನೋಡಿದ ಚೆನ್ನಮ್ಮ ದುಃಖದಿಂದ ಅಳುತ್ತಿದ್ದಳು. ಸೋಮಶೇಖರನು 'ಚೆನ್ನಾ, ನಾನಿನ್ನು ಬದುಕಲಾರೆ

ನೀನು ಸತಿ ಹೋಗಬೇಡ, ರಾಜ್ಯವನ್ನಾಳು' ಎಂದು ಹೇಳುತ್ತ ಪ್ರಾಣಬಿಟ್ಟನು. ಈ ದೃಶ್ಯವು ಮನಕರಗುವಂತಿದೆ. ಸತಿಸಹಗಮನವು ಅಂದಿನ ಕಾಲದಲ್ಲಿ ಹೆಚ್ಚಾಗಿತ್ತು. ಈ ಅನಿಷ್ಟ ಆಚರಣೆಯು ನಿಲ್ಲಬೇಕು ಎಂಬ ಮನೋಧೋರಣೆ ಕಾದಂಬರಿಯಲ್ಲಿದೆ. 'ಹೆಣ್ಣು ಒಲಿದರೆ ನಾರಿ ಮುನಿದರೆ ಮಾರಿ; ಎನ್ನುವಂತೆ ಗಂಡನ ಮರಣವನ್ನು ಕಂಡು ಅಸಹಾಯಕಳಾಗಿ ಕೂರದೇ, ವೀರಾವೇಶದಿಂದ ದೊರೆಯ ಕೈಯಲ್ಲಿದ್ದ ನಾಗಮುರಿ ಖಡ್ಗದಿಂದ ಜಿನ್ನೋಪಂತನ ರುಂಡವನ್ನು ಚೆಂಡಾಡಿದಳು.

ಮಹಿಳೆಯಾದ ವೀರರಾಣಿ ಚೆನ್ನಮ್ಮಾಜಿಗೆ ಪಟ್ಟಾಭಿಷೇಕ ನಡೆದದ್ದು ಕರ್ನಾಟಕ ಇತಿಹಾಸದಲ್ಲಿಯೇ ಮಹತ್ವದ ದಿನವಾಗಿದೆ. ೧೬೭೨ರಲ್ಲಿ ಮಹಾರಾಣಿಗೆ ಪಟ್ಟಾಭಿಷೇಕವಾಯಿತು. ರಾಜ್ಯದ ಹಿತದೃಷ್ಟಿಯಿಂದ ರಾಜ್ಯಕ್ಕೆ ಉತ್ತರಾಧಿಕಾರಿಯನ್ನು ಒದಗಿಸಿಕೊಳ್ಳುವುದು ಒಳ್ಳೆಯದೆಂದು ನಿರ್ಧಾರ ಮಾಡುತ್ತಾಳೆ. ಚೆನ್ನಮ್ಮಾಜಿಯ ಪಟ್ಟಾಭಿಷೇಕದ ದಿನವೇ ದತ್ತು ಸ್ವೀಕಾರದ ಸನ್ನಿವೇಶ ಬರುತ್ತದೆ.

ಇದು ಕಾದಂಬರಿಕಾರರ ಬದಲಾವಣೆಯಾಗಿದೆ. ಉಳಿದ ಕಾದಂಬರಿಯಲ್ಲಿ ಮೊದಲು ಚೆನ್ನಮ್ಮಾಜಿಗೆ ಪಟ್ಟಾಭಿಷೇಕವಾಗುತ್ತದೆ. ನಂತರ ಕೆಲವು ದಿನಗಳ ಬಳಿಕ ದತ್ತು ಪುತ್ರೋತ್ಸವದ ಸನ್ನಿವೇಶಗಳು ಬರುತ್ತದೆ. ಶೂರರಾಣಿ ಕೆಳದಿ ಚೆನ್ನಮ್ಮಾಜಿ ಕಾದಂಬರಿಯಲ್ಲಿ "ಹತ್ತು ವರುಷದ ಹೊಳೆದ ಕಣ್ಣಿನ ಸದ್ಗುಣ ಸಂಪನ್ನನಾದ ಶಿವಪ್ಪನಾಯಕ ಮೊಮ್ಮಗಳಾದ ಗೌರಮ್ಮನ ಮಗ ಬಸವೇಶ್ವರನಿಗೆ ಬಸಪ್ಪನಾಯಕನೆಂದು ನಾಮಕರಣ ಮಾಡಿ, ದತ್ತು ಸ್ವೀಕಾರದ ವಿಧಾನ ನೆರವೇರಿಸಿದರು. ನಂತರ ಚೆನ್ನಮ್ಮಾಜಿಗೆ ೧೬೭೨ರಲ್ಲಿ ಮಹಾರಾಣಿ ಚೆನ್ನಮ್ಮಾಜಿಯವರಿಗೆ ಪಟ್ಟಾಭಿಷೇಕವಾಯಿತು" (ಅದೇ; ೨೨೭-೧೧೮) ಎಂಬ ಉಲ್ಲೇಖಗಳಿವೆ. ಚೆನ್ನಮ್ಮಾಜಿ ತನ್ನ ಪರಾಕ್ರಮದಿಂದ ಹರಿದುಹೋಗಿದ್ದ ತನ್ನ ಪ್ರದೇಶಗಳನ್ನೆಲ್ಲ ವಶಪಡಿಸಿಕೊಂಡಲ್ಲದೆ, ಗಜ ತುರುಗ, ವಜ್ರ ಸಂಪತ್ತನ್ನು ರಾಜಬೊಕ್ಕಸಕ್ಕೆ ಸೇರಿಸಿಕೊಂಡಳು. ಶರಣಾಗತರಾಗಿ ಬಂದವರಿಗೆ ಅವರ ರಾಜ್ಯವನ್ನು ಹಿಂದಿರುಗಿಸಿಕೊಟ್ಟು ಕೆಳದಿ ರಾಜ್ಯದ ಗಡಿಯನ್ನು ಭದ್ರಪಡಿಸಿಕೊಂಡಳು.

ಪತಿ ದುಷ್ಟ ಸಹವಾಸಕ್ಕೆ ಬಿದ್ದು, ಸೇವಕರ ಸಂಚಿನಿಂದ ಅಕಾಲಿಕ ಮರಣವನ್ನಪ್ಪಿದಾಗ ಆಗಿನ ಪದ್ಧತಿಯಂತೆ ಸತಿಸಹಗಮನವನ್ನು ವಿರೋಧಿಸಿ ಧೈರ್ಯದಿಂದ ಸಂಚುಕೋರರನ್ನು ಸೆದೆ ಬಡಿದಳು. ಮಂತ್ರಿಗಳ, ದಂಡನಾಯಕರ ವಿಶ್ವಾಸಗಳಿಸಿ ರಾಜ್ಯದ ಚುಕ್ಕಾಣಿ ಹಿಡಿದಳು. ಕೌಲೇದುರ್ಗದ ಅರಮನೆಯಲ್ಲಿ ಪಟ್ಟಾಭಿಷಿಕ್ತಳಾದ ಸಂಗತಿಗಳನ್ನು ಲೇಖಕರು ಕಣ್ಮುಂದೆ ನಿಲುವಂತೆ ಚಿತ್ರಿಸಿದ್ದಾರೆ.

ಆಡಳಿತ ವಿಚಕ್ಷಣತೆ, ಸರ್ವಧರ್ಮ ಸಹಿಷ್ಣುತೆ, ಆಧ್ಯಾತ್ಮಿಕ ಚಿಂತನೆ, ಶೈಕ್ಷಣಿಕ ಆಡಳಿತದ ಸಾಂಸ್ಕೃತಿಕ ಪರಂಪರೆ, ರಾಜನೀತಿ ಕಾಯಕ ತತ್ವ ಪ್ರಜೆಗಳ ರಕ್ಷಣೆ ಹಿತಚಿಂತನೆ ನ್ಯಾಯ ಪರಿಪಾಲನೆ ಇತ್ಯಾದಿಗಳನ್ನು ರಾಜನಾದವನು ಹೀಗೆ ಪರಿಪಾಲಿಸಬೇಕು ಎಂಬುದನ್ನು ತಿಳುವಳಿಕೆ ನೀಡುವ ರಾಣಿ ತನ್ನ ಮಗನಾದ ಬಸವಪ್ಪನಾಯಕನಿಗೆ ಹಿತೋಪದೇಶ ಮಾಡುವ ಭಾಗ ಕಾದಂಬರಿಯಲ್ಲಿ ತುಂಬಾ ಪರಿಣಾಮಕಾರಿಯಾಗಿ ಮೂಡಿಬಂದಿದೆ. ಚೆನ್ನಮ್ಮಾ ಪ್ರಜೆಗಳೆಲ್ಲರ ಹಿತಚಿಂತನೆಯನ್ನು ಮಾಡುತ್ತಿದ್ದಳು. ರಾಜ್ಯ ಬೊಕ್ಕಸದಿಂದ ಧನಸಹಾಯ ಮಾಡಿದಳು. ಸೈನಿಕರ

ಸಂಬಳ ಹೆಚ್ಚಿಸಿದಳು. ಪರದೇಶಗಳೊಂದಿಗೆ ವ್ಯಾಪಾರ ಸಂಬಂಧವನ್ನು ಚೆನ್ನಾಗಿಟ್ಟುಕೊಂಡು ಚಾತುರ್ಯದಿಂದ ವ್ಯಾಪಾರವನ್ನು ಬಲಪಡಿಸಿಕೊಂಡಿದ್ದಳು. ಈ ರೀತಿಯಾಗಿ ಚೆನ್ನಮ್ಮ ಐದು ವರುಷಗಳವರೆಗೆ ಒಳಗಿನ ಮತ್ತು ಹೊರಗಿನ ಶತ್ರುಗಳನ್ನು ನಿಯಂತ್ರಿಸುವುದರಲ್ಲಿ ತೊಡಗಿದ್ದಳು. ರಾಜ್ಯದಲ್ಲಿ ಯಾರೊಬ್ಬರೂ ಹಸಿವಿನಿಂದ ಇರಬಾರದು ಚಳಿಯಲ್ಲಿ ಮಲಗಬಾರದು ಎಂಬ ಉದ್ದೇಶದಿಂದ ರಾಜ್ಯದ ಅಲ್ಲಲ್ಲಿ ಗಂಜಿಕೇಂದ್ರಗಳನ್ನು ಏರ್ಪಡಿಸಿ, ದಾಸೋಹ ಮಠಗಳಿಗೆ ದಾನದತ್ತಿಗಳನ್ನು ಬಡವರಿಗೆ ಕಂಬಳಿ ದಾನ ಕೇಂದ್ರಗಳನ್ನು ತೆರೆದು ಸಹಾಯ ಮಾಡಿದ ಸಂಗತಿಗಳು ವಿವರವಾಗಿ ನಿರೂಪಿತವಾಗಿದೆ.

ಸಾಂಪ್ರದಾಯಿಕ ವಿರೋಧಿಗಳಾಗಿದ್ದ ಮರಾಠ ದೊರೆ ಶಿವಾಜಿಯ ೨ನೇ ಮಗ ರಾಜರಾಮನು ಮೊಘಲರ ಉಪಟಳ ತಾಳಲಾರದೆ, ತನ್ನ ರಾಜ್ಯದಿಂದ ಪಲಾಯನ ಮಾಡುತ್ತಾನೆ.

ರಾಜಾರಾಮನು ಆಶ್ರಯ ಬಯಸಿ ಚೆನ್ನಮ್ಮನ ಬಳಿ ಬಂದಾಗ ಚೆನ್ನಮ್ಮ, ಬಸವಪ್ಪನಾಯಕ, ಸಿದ್ದಪ್ಪಶೆಟ್ಟಿ ಮೂವರು ಮೊದಲು ಚರ್ಚಿಸುತ್ತಾರೆ. ರಕ್ಷಣೆ ಬೇಡಿ ಬಂದವರಿಗೆ ರಕ್ಷಣೆ ಕೊಡುವುದು ಕನ್ನಡಿಗರ ಧರ್ಮವಾಗಿದೆ ಎನ್ನುತ್ತಾರೆ. ಅದಕ್ಕೆ ಸಿದ್ದಪ್ಪಶೆಟ್ಟಿಯು ಔರಂಗಜೇಬನ ವಿರೋಧ ಕಟ್ಟಿಕೊಳ್ಳುವುದೆಂದರೆ ಬೆಂಕಿಯನ್ನು ಸೆರಗಿನಲ್ಲಿ ಕಟ್ಟಿಕೊಂಡಂತೆ ಎಂದು ತಿಳಿಸಿ ಹೇಳುವ ಪ್ರಯತ್ನ ಮಾಡುತ್ತಾರೆ. ಸಹಾಯ ಯಾಚಿಸಿ ಬಂದವರನ್ನು ಕಾಪಾಡುವುದು ನಮ್ಮ ಧರ್ಮವೆಂದು ಹೇಳುವುದರೊಂದಿಗೆ ಮಂತ್ರಿಮಂಡಲದ ಸಭೆಯಲ್ಲಿ ಚರ್ಚಿಸಿ ರಾಜರಾಮನಿಗೆ ಆಶ್ರಯ ನೀಡುತ್ತಾಳೆ. ತನ್ನ ಪ್ರಜೆಗಳಿಗೆ ಸ್ಫೂರ್ತಿಯ ಚಿಲುಮೆಯಾದ ಚೆನ್ನಮ್ಮ ಧೈರ್ಯ ತುಂಬುವ ಮಾತುಗಳನ್ನಾಡುತ್ತಾಳೆ. ಈ ಸಲ ಯುದ್ಧದ ಮುಂದಾಳತನ ನನಗಿರಲಿ, ಇದು ಕೊನೆಯ ಯುದ್ಧವಾಗಲಿ, ನಮ್ಮ ಧನಬಲ, ಜನಬಲ ಎಲ್ಲವನ್ನೂ ಪಣಕ್ಕಿಟ್ಟು ಗೆಲ್ಲುವ ಪ್ರತಿಜ್ಞೆ ಮಾಡೋಣ ಕನ್ನಡತಿಯ ಶೌರ್ಯ ಸಾಹಸಗಳನ್ನು ವೈರಿಗಳು ನೋಡಲಿ ಎಂದು ಹೇಳುವ ಮಾತುಗಳು ಇಂದಿಗೂ ಆದರ್ಶವಾಗಿದೆ.

ರಾಜಸಿಂಹಾಸನ ಹೂವಿನ ಹಾಸಿಗೆಯಲ್ಲವಾದರೂ, ಉತ್ತಮ ಆಡಳಿತ ನೀಡಿದ ಆದರ್ಶ ಮಹಿಳೆಯ ಸಾಹಸಮಯ ಜೀವನ ಚರಿತ್ರೆ ಸಮಗ್ರವಾಗಿ ಕಾದಂಬರಿಯಲ್ಲಿ ಮಾಡಿಬಂದಿದೆ. ಪ್ರಜೆಗಳಿಗೆ ರಕ್ಷಕಳಾಗಿದ್ದು, ಮೊಘಲ್ ದೊರೆಗಳ ವಿರುದ್ಧ ರಾಜರಾಮನಿಗೆ ಶರಣಾಗತ ರಕ್ಷಣೆ ನೀಡಿ ಕಾಪಾಡಿದ ವಿವರಗಳು ಚೆನ್ನಮ್ಮಾಜಿಯ ರಾಜಕೀಯ ಮುತ್ಸದ್ಧಿತನವನ್ನು ನಿರೂಪಿಸುತ್ತದೆ. ಸಮೀಪದ ಬಂಧುಗಳ ಪುತ್ರ ಬಸವಪ್ಪನಾಯಕನನ್ನು ದತ್ತು ತೆಗೆದುಕೊಳ್ಳುವಾಗ ನಡೆದ ರಾಜಕೀಯ ಸಂಚುಗಳು ದತ್ತುಪುತ್ರನ ಬಾಲ್ಯ, ವಿದ್ಯಾಭ್ಯಾಸ, ಶಿಕ್ಷಣ ಮುಂತಾದ ವಿವರಗಳು ಮನೋಜ್ಞವಾಗಿ ಮೂಡಿಬಂದಿದೆ.

ಶೂರರಾಣಿ ಕೆಳದಿಯ ಚೆನ್ನಮ್ಮಾಜಿ ಕಾದಂಬರಿಯ ಲೇಖಕರು ಒಬ್ಬ ಹೆಣ್ಣಾಗಿ ಅನುಭವಿಸಿದ ಹೆಣ್ಣಿನ ಸಮ್ಯಸೆಗಳನ್ನು ಚಿತ್ರಿಸಿರುವುದರಿಂದ ಕೆಲವು ಬದಲಾವಣೆಗಳು ಕಂಡುಬರುತ್ತವೆ. ಶಾಂತಾದೇವಿ ಮಾಳವಾಡ ಅವರು ಒಬ್ಬ ಹಿಂದುವಾಗಿ, ವೀರಶೈವ ಪಂಥದ ಹಿನ್ನೆಲೆಯಲ್ಲಿಯೇ ಐತಿಹಾಸಿಕ ವ್ಯಕ್ತಿಯಾದ ಚೆನ್ನಮ್ಮನ ಜೀವನ ಚರಿತ್ರೆಯನ್ನು ಚಿತ್ರಿಸಲು ಪ್ರಯತ್ನ ಮಾಡಿದ್ದಾರೆ. ಈ

ಕೃತಿಯಲ್ಲಿ ಐತಿಹಾಸಿಕತೆಗಿಂತ ಧಾರ್ಮಿಕ ಅಂಶಗಳೇ ಹೆಚ್ಚಾಗಿ ಕಂಡು ಬರುತ್ತದೆ. ಶೂರರಾಣಿ ಕೆಳದಿಯ ಚೆನ್ನಮ್ಮಾಜಿ ಕಾದಂಬರಿಯಲ್ಲಿ ಚೆನ್ನಮ್ಮನ ಪಾತ್ರ ಮುಖ್ಯವಾದರೂ ಉಳಿದ ಪಾತ್ರಗಳು ಸ್ಫುಟವಾಗಿ ಮೂಡಿ ಬಂದಿವೆ. ದಳಪತಿ ಸುಬ್ಬನೀಸ, ಕೃಷ್ಣಪ್ಪಯ್ಯ, ತಿಮ್ಮಪ್ಪ, ರಾಜರಾಮ ಮೊದಲಾದ ಪಾತ್ರಗಳು ತಮ್ಮ ವ್ಯಕ್ತಿ ವಿಶೇಷಣಗಳಿಂದ ಗಮನ ಸೆಳೆಯುತ್ತವೆ. ಆ ಕಾಲದ ರಾಜಕೀಯ ಇವರ ಜೀವನವನ್ನೆಲ್ಲ ವ್ಯಾಪಿಸಿಬಿಟ್ಟಿದೆ. ಕಾದಂಬರಿಯ ಮೊದಲ ಭಾಗವೆಲ್ಲ ಚೆನ್ನಮ್ಮ ಸೋಮಶೇಖರ ನಾಯಕನ ಮದುವೆ, ಕೆಳದಿ ಶಿವಪ್ಪನಾಯಕರ ಪರಿವಾರದ ಸನ್ನಿವೇಶ ಚಿತ್ರಣ ಹಾಗೂ ವರ್ಣನೆಗಳಿಂದ ಕೂಡಿದೆ. ಲೇಖಕರು ವೀರಶೈವ ಪಂಥಕ್ಕೆ ಎಷ್ಟೊಂದು ಅಂಟಿಕೊಂಡಿದ್ದಾರೆ ಎಂಬುವುದು ಶೂರರಾಣಿ ಕೆಳದಿಯ ಚೆನ್ನಮ್ಮಾಜಿ ಕಾದಂಬರಿಯ ಮೊದಲನೇ ಭಾಗದಲ್ಲಿ ಚೆನ್ನಮ್ಮನ ಹುಟ್ಟು, ಮದುವೆ ಮಾಡುವ ಸನ್ನಿವೇಶಗಳಿಂದ ತಿಳಿಯುತ್ತದೆ. ಐತಿಹಾಸಿಕ ಘಟನೆಗಳನ್ನು ಮರೆತುಬಿಟ್ಟಿದ್ದುಂಟು. ಕಾದಂಬರಿಯ ಎರಡನೆಯ ಭಾಗದಲ್ಲಿ ತುಂಬಾ ಸ್ವಾರಸ್ಯಪೂರ್ಣ ಚೆನ್ನಮ್ಮನ ರಾಜನೀತಿ, ನ್ಯಾಯ ಪರಿಕಲ್ಪನೆ, ಧಾರ್ಮಿಕ ಭಾವನೆ ದಕ್ಷ ರಾಜ್ಯಭಾರ ಇವುಗಳನ್ನು ಕಾಣುತ್ತೇವೆ. ಚೆನ್ನಮ್ಮ ಬಸಪ್ಪನಾಯಕನನ್ನು ದತ್ತು ಪಡೆದು ರಾಜಕೀಯ ಸೂತ್ರ ಹಿಡಿಯುವುದು, ರಾಜಾರಾಮನಿಗೆ ಆಶ್ರಮ ನೀಡಿ ಮಾತಾಜಿ ಎಂದು ಕರೆಯಿಸಿಕೊಳ್ಳುವುದು, ಔರಂಗಜೇಬನನ್ನು ಸೋಲಿಸಿ ಕೆಳದಿ ರಾಜ್ಯವನ್ನು ಸ್ವತಂತ್ರ ರಾಜ್ಯವನ್ನಾಗಿ ಮಾಡುವುದು ಈ ಎಲ್ಲ ಅಂಶಗಳಿಂದ ಕಾದಂಬರಿ ಒಂದು ಬಗೆಯ ಸಮಗ್ರತೆ ಪಡೆಯುತ್ತದೆ. ರಾಜಕೀಯ, ಮಾನವೀಯತೆಯ ಚಟುವಟಿಕೆಗಳಿಗೆ ಹೊಸದೊಂದು ಆಯಾಮ ನೀಡುವುದರ ಮೂಲಕ ಆಕರ್ಷಕ ಕಥೆಯಾಗಿ ಕಾದಂಬರಿಯು ಓದಿಸಿಕೊಂಡು ಹೋಗುತ್ತದೆ.

ಕೆಳದಿ ಸಾಮ್ರಾಜ್ಯದ ಉದಯ, ಹಿಂದೆ ಆಳಿದ ರಾಜರ ಜನೋಪಯೋಗಿ ಕಾರ್ಯಗಳು, ಶಿಸ್ತಿನ ಶಿವಪ್ಪನಾಯಕ ರಾಜ್ಯಾಡಳಿತದ ವಿವರಗಳು ಚೆನ್ನಮ್ಮ, ಸೋಮಶೇಖರ ನಾಯಕ, ಸಿದ್ಧಪ್ಪಶೆಟ್ಟಿ ಗಿರಿಜಮ್ಮ, ಪಾರ್ವತಿ ಭರಮೇಮಾವುತ ಮುಂತಾದ ಪಾತ್ರಗಳು ಕಾದಂಬರಿಯಲ್ಲಿ ಆಯಾಯ ಸನ್ನಿವೇಶಕ್ಕೆ ತಕ್ಕಂತೆ ರಚನೆಗೊಂಡಿದೆ.

ಒಟ್ಟಿನಲ್ಲಿ ಓರ್ವ ಐತಿಹಾಸಿಕ ವೀರವನಿತೆಯಾಗಿ ಉತ್ತಮ ಆಡಳಿತಗಾರ್ತಿಯಾಗಿ ಕೆಳದಿಯ ಚೆನ್ನಮ್ಮನ ಪಾತ್ರವನ್ನು ಕಟ್ಟಿಕೊಂಡವಲ್ಲಿ ಕಾದಂಬರಿಯು ಯಶ್ವಸಿಯಾಗಿ ಎನ್ನುಬಹುದು.

ಲಕ್ಕಪ್ಪ ಶಿರಹಟ್ಟಿ ಅವರ ವೀರರಾಣಿ ಮಹಾಮುತ್ಸದ್ಧಿ ಕೆಳದಿಯ ಚೆನ್ನಮ್ಮ ಕಾದಂಬರಿಯಲ್ಲಿನ ಚೆನ್ನಮ್ಮ ಬಾಲ್ಯದಲ್ಲಿ ಬಲು ಜಾಣೆಯೆನಿಸಿಕೊಂಡಿದ್ದಳು. ವಿವೇಚನಾತ್ಮಕ ಬುದ್ಧಿ ಅವಳದು. ಚಿಕ್ಕಂದಿನಲ್ಲಿ ತಂದೆಯ ಬಳಿಯಲ್ಲಿಯೇ ಬಂದು ಬಹಳ ಹೊತ್ತು ಆಡಿಕೊಂಡಿರುವಳು. ಬರಬರುತ್ತ ಆಕೆ ತಂದೆಯ ಮಾತುಕತೆಗಳನ್ನು, ವ್ಯವಹಾರಗಳನ್ನು ಗಮನವಿಟ್ಟು ಕೇಳುತ್ತಿದ್ದಳು. ರಾಜರುಗಳ ಪರಸ್ಪರ ಸ್ನೇಹದಲ್ಲಿ ವೈರಿಗಳ ಕಥೆಗಳನ್ನು ಅರಮನೆಗಳ ಸುದ್ದಿಗಳನ್ನು ಯಾರಾದರೂ ಹೇಳುತ್ತಿದ್ದರೆ ಕುತೂಹಲದಿಂದ ಆಲಿಸುತ್ತಿದ್ದಳು. ಹೊಸದೆನಿಸಿದರಲ್ಲಿ ಕುತೂಹಲಕರವಾದ ಪ್ರಶ್ನೆಗಳನ್ನು ತಂದೆಗೆ ಕೇಳಿ ವಿವರಣೆ ಪಡೆಯುತ್ತಿದ್ದಳು. ತಿಳುವಳಿಕೆ ಹೆಚ್ಚಿದಂತೆ ಅಂಗಡಿಯ ಗುಮಾಸ್ತರೊಡನೆ ಅಪ್ಪನ ಕಾರ್ಯಕಲಾಪಗಳಲ್ಲಿ ಓಡಾಡಿದಳು. ಆಕೆ ಅದ್ಭುತವಾದ ರಮ್ಯವಾದ ರಾಜಕೀಯ.

ಸಾಮಾಜಿಕ, ಸಂಗತಿಗಳನ್ನು ತಿಳಿಯಲು ಆತುರಳಾಗಿದ್ದಳು. ಚೆನ್ನಮ್ಮಾಜಿಯ ಚಿಕಿತ್ಸಕ ಬುದ್ಧಿ, ಚಟುವಟಿಕೆಯಿಂದ ಕೂಡಿದ ಚಿಂತನೆಗಳು ಬಾಲ್ಯದಲ್ಲಿ ಹೇಗೆ ಅವಳಲ್ಲಿ ಮೈಗೊಂಡಿಕೊಂಡಿತು ಎನ್ನುವುದನ್ನು ತಾಯಿಯು ಮಗಳಿಗೆ 'ಗಂಡುಗಡಸುಗಾತಿ' ಎಂದು ಹೇಳುತ್ತಿದ್ದರೆ, ಸಿದ್ಧಪ್ಪಶೆಟ್ಟಿ ಅದಕ್ಕೆ ತಕ್ಕಂತೆ ಎದೆಗಾರಿಯೂ ಬುದ್ಧಿಯೂ ನಮ್ಮ ಮಗಳಿಗಿದೆ ಎಂದು ಹೇಳುತ್ತಿದ್ದನು.

ಚೆನ್ನಮ್ಮಾಜಿಯ ಜೀವನದಲ್ಲಿ ಮದುವೆ ಮರೆಯಲಾಗದ ಅನುಭವ. ಏಕೆಂದರೆ ಸಾಮಾನ್ಯ ಒಬ್ಬ ವ್ಯಾಪಾರಿಯ ಮಗಳು ಯುವ ರಾಜನ ಕೈಹಿಡಿದು ಅರಮನೆಗೆ ಹೋಗುವದೆಂದರೆ ಅದೊಂದು ರಾಜಯೋಗವೇ ಸರಿ. ಈಕೆಯ ಮದುವೆ ಸನ್ನಿವೇಶವನ್ನು ಲೇಖಕರು ಕಲ್ಪನೆಯನ್ನು ಬೆರೆಸಿಕೊಂಡು ಚಿತ್ರಿಸಿದ್ದಾರೆ.

'ವೀರರಾಣಿ ಮಹಾಮುತ್ಸದ್ಧಿ ಕೆಳದಿಯ ಚೆನ್ನಮ್ಮಾ' ಕಾದಂಬರಿಯಲ್ಲಿ ಸೋಮಶೇಖರ ನಾಯಕನು ತನ್ನ ಗೆಳೆಯನೊಂದಿಗೆ ಅಶ್ವಾರೂಢನಾಗಿ ಕೊಟ್ಟೀಪುರಕ್ಕೆ ಹೋದಾಗ ಸಿದ್ದಪ್ಪಶೆಟ್ಟಿ ಮನೆಯಲ್ಲಿ ಬಿಡಾರ ಮಾಡುವ ಪ್ರಸಂಗ ಒದಗುತ್ತದೆ. ಸಿದ್ದಪ್ಪಶೆಟ್ಟಿ ಮನೆಯಲ್ಲಿ ನಾಯಕನಿಗೆ ಆದರೋಪಚಾರ ಮಾಡುವ ಸಮಯದಲ್ಲಿ ಓಡಾಡುವ ಚೆನ್ನಮ್ಮನ ಮೇಲೆ ಸೋಮಶೇಖರ ನಾಯಕನ ದೃಷ್ಟಿ ಬೀಳುತ್ತದೆ. ಇದನ್ನು ಗೆಳೆಯ ಭರಮೇಮಾವುತ ಸೂಕ್ಷ್ಮ ತಿಳಿದುಕೊಂಡಿರುವ ಸಂದರ್ಭವಿದೆ. ಅವನು ನಾಯಕನ ಒಲವನ್ನು ಸ್ಪಷ್ಟಪಡಿಸಿಕೊಂಡು, ಬಸವಲಿಂಗಮ್ಮಾಜಿಯವರಿಗೆ ಕುಮಾರನ ಮನೋಗತವನ್ನು ವಿನಯದಿಂದ ತಿಳಿಸುತ್ತಾನೆ. ಅಷ್ಟೇ ಅಲ್ಲದೆ ಚೆನ್ನಮ್ಮಾಜಿಯ ಗುಣ ಸೌಂದರ್ಯಗಳನ್ನು ಹೊಗಳಿ ಹೇಳಿರುತ್ತಾನೆ. ಶಿವಪ್ಪನಾಯಕನಿಗೆ ಸಿದ್ದಪ್ಪಶೆಟ್ಟಿಯ ಘನತೆ ಮೊದಲೇ ಗೊತ್ತಿತ್ತು. ಆತನ ಮಗಳ ಪ್ರಬುದ್ಧತೆಯ ವಾರ್ತೆಯೂ ಅವನ ಕಿವಿಗೆ ಬಿದ್ದಿದ್ದರಿಂದ ಮದುವೆಗೆ ಒಪ್ಪಿಗೆಯನ್ನು ಸೂಚಿಸುತ್ತಾನೆ. ಈ ವಿಚಾರವಾಗಿ ಮಾತನಾಡಲು ಕೊಟ್ಟೀಪುರಕ್ಕೆ ಪರಿವಾರದೊಡನೆ ಚೆನ್ನಮ್ಮಾನನ್ನು ಬಿದನೂರ ಅರಮನೆಗೆ ಕರೆದು ತರಬೇಕೆಂದು ಬಂಡಿಯನ್ನು ಕಳುಹಿಸುತ್ತಾನೆ. ವರ್ತಕನ ಮಗಳನ್ನು ರಾಜಕುಮಾರ ಮದುವೆಯಾಗುವ ಸನ್ನಿವೇಶ ವಿವರಿಸುವಲ್ಲಿ ಲಕ್ಕಪ್ಪ ಶಿರಹಟ್ಟಿ ಅವರು ಕಲ್ಪನೆಯನ್ನು ಬೆರೆಸಿಕೊಂಡು ವಿವರಿಸಿದ್ದಾರೆ.

ಚೆನ್ನಮ್ಮಾಜಿಯನ್ನು ಕೈಹಿಡಿದ ಮೇಲೆ ಸೋಮಶೇಖರ ನಾಯಕನ ಜೀವನಲ್ಲಿ ಹೊಸ ಅಧ್ಯಾಯ ಆರಂಭವಾಗಿ ಅವನು ಚೆನ್ನಮ್ಮಾಜಿಯ ಪ್ರಣಯ ಪಂಜರದಲ್ಲಿ ಸೆರೆಯಾದನು. ಮದುವೆಯಾದ ಕೆಲವೇ ದಿವಸಗಳಲ್ಲಿ ಅರಮನೆಯ ವ್ಯವಸ್ಥೆಯಲ್ಲಿ ತನ್ನ ಬುದ್ಧಿವಂತಿಕೆ, ಜಾಣ್ಮೆಗಳನ್ನು ಬಳಸಿ ಚೆನ್ನಮ್ಮಾಜಿ ಪ್ರಭಾವ ಬೀರಿದಳು. ಎಲ್ಲರ ಪ್ರೀತಿಗೆ ಪಾತ್ರಳಾದಳು. ಇವಳು ಅರಮನೆಯಲ್ಲಿ ಚಿಕ್ಕಸೊಸೆಯಾಗಿ ಓಡಾಡುತ್ತಿದ್ದಳು. ಆಡಳಿತದಲ್ಲಿ ಗಮನಹರಿಸುತ್ತಿದ್ದಳು. ಇದನ್ನು ಕಂಡು ಶಿವದೊರೆಗೆ ಎಲ್ಲಿಲ್ಲದ ಸಂತೋಷ ಉಂಟಾಗಿತ್ತು. ಚಿಕ್ಕಪುಟ್ಟ ಕಾರ್ಯಗಳಲ್ಲಿ ವಿಚಾರಿಸಿ ನಿರ್ಣಯಿಸುವುದನ್ನು ಚೆನ್ನಮ್ಮಾಳಿಗೆ ಬಿಟ್ಟುಕೊಟ್ಟನು. ಮಾವನ ಜೊತೆಗೆ ರಾಜಕಾರ್ಯಗಳಿಗೆ ಸಂಬಂಧಿಸಿದ ಮತ್ತಷ್ಟು ಕೆಲಸಕಾರ್ಯಗಳನ್ನು ಮಾಡುವ ಉತ್ಸಾಹವನ್ನು ಚೆನ್ನಮ್ಮಾ ಹೊಂದಿದ್ದಳು. ತನ್ನ ಪತಿಯನ್ನು ಪ್ರೇರೇಪಿಸಿ ಕರೆದುಕೊಂಡು ಗ್ರಾಮಾಂತರಗಳಿಗೂ ಹೋಗುವಳು. ಅಲ್ಲಿನ ಜನರ ಕುಂದುಕೊರತೆಗಳನ್ನು ಪರಿಶೀಲಿಸಿ, ತಿಳಿದು ರಾಜಕರ್ಮಿಗಳಿಗೆ

ಇಬ್ಬರೂ ಸಲಹೆ ನೀಡುವರು. ಈ ರೀತಿಯ ಸಂಚಾರಗಳ ಸಮಯದಲ್ಲಿ ಚೆನ್ನಮ್ಮ ಕುದುರೆ ಸವಾರಿ ಮಾಡುವ ರೂಢಿಯನ್ನು ಚೆನ್ನಾಗಿ ಬಲಪಡಿಸಿಕೊಂಡಳು. ಈಕೆಯ ಕುದುರೆ ಸವಾರಿಯ ಸನ್ನಿವೇಶದ ವರ್ಣನೆಯನ್ನು ಕಾದಂಬರಿಯಲ್ಲಿ ಕಣ್ಣಿಗೆ ಕಟ್ಟುವಂತೆ ಚಿತ್ರಿಸಲಾಗಿದೆ. ಪತಿಗೆ ಪ್ರೇರಕಳಲ್ಲದೆ, ಚೇತನಶಕ್ತಿಯೂ ಆಗಿದ್ದಳು. ರಾಜದಂಪತಿಗಳ ಆದರ್ಶ ಜೀವನದಲ್ಲಿ ಬಿರುಗಾಳಿ ಎಬ್ಬಿಸಿದವನು ಭರಮೇಮಾವುತ. ಮಕ್ಕಳಾಗುತ್ತವೆ ಎಂಬ ಭಾವನೆಯನ್ನು ಹುಟ್ಟಿಸಿ ಸೋಮಶೇಖರ ನಾಯಕನಿಗೆ ಆನೆಯ ಮದೋದಕವನ್ನು ಕೊಡುತ್ತಿದ್ದ ವಿಷಯವನ್ನು ತಿಳಿದು ಚೆನ್ನಮ್ಮ ಯಾವ ಸಂಕಟ ಬಂದರೂ ಬರಲೆಂದು ಅದನ್ನು ಎದುರಿಸಲು ಕ್ರಿಯಾಶೀಲಳಾಗಿ ನಿಂತಳು. ರಾಜ್ಯದ ಕ್ಷೇಮಾಭಿವೃದ್ಧಿ, ಗಂಡನ ಮಾನಮರ್ಯಾದೆಗಳ ರಕ್ಷಣೆಯೊಂದೇ ಆಕೆಯ ಚಿಂತನೆಯ ವಿಷಯವಾಗಿತ್ತು. ಭರಮೇಮಾವುತನ ಕಥೆಯನ್ನು ಕಾದಂಬರಿಕಾರರೇ ಹೇಳುತ್ತ ಹೋಗುವ ಸನ್ನಿವೇಶ ಇದೆ. ಆಕೆ ಪತಿಯ ಮನಸ್ಸನ್ನು ದುಷ್ಟಕೋಟೆಯತ್ತ ಹರಿಯದಂತೆ ಯತ್ನಿಸುತ್ತಾಳೆ. ಪತಿಯೊಡನೆ ಕೆಳದಿಗೆ ಹೋಗಿ ರಾಜಗುರುಗಳ ಸೇವೆ ಮಾಡಿ, ಹಿತವಚನವನ್ನು ಹೇಳಿಸುವ ಸನ್ನಿವೇಶ ಮೂಡಿಬಂದಿದೆ. ಭರಮೇಮಾವುತನ ಬಗ್ಗೆ ಗುಪ್ತಚಾರದಿಂದ ವಿಷಯವನ್ನು ತಿಳಿದು ಭರಮೇಮಾವುತನ ರುಂಡವನ್ನು ಚೆಂಡಾಡಬೇಕು ಎಂಬ ಛಲ ಹೊಂದುತ್ತಾಳೆ. ಭರಮೇಮಾವುತನ ದುಷ್ಟಕಾರ್ಯಕ್ಕೆ ಒಳಗಾದ ಸೋಮಶೇಖರ ನಾಯಕನನ್ನು ಅನಾರೋಗ್ಯದಿಂದ ಮುಕ್ತಗೊಳಿಸಲು ಹೆಣಗುವ ಚಿತ್ರಣವನ್ನು ನೀಡಿದ್ದಾರೆ ಕಾದಂಬರಿಕಾರರು. ಅವಕಾಶ ಸಿಕ್ಕಾಗ ದುಶ್ಚಟದ ನೆನಪಿನಿಂದಾಗಿ ಅದರ ಕಡೆಗೆ ಹೆಚ್ಚಿನ ಆಸಕ್ತಿಯನ್ನು ತೋರಿಸುತ್ತಿದ್ದ ಇದೇ ಸಮಯವನ್ನು ಕಾಯುತ್ತಿದ್ದ ಜೀನೋಪಂತನು ತನ್ನ ಸೈನಿಕರೊಂದಿಗೆ ಕೆಳದಿ ರಾಜ್ಯದಲ್ಲಿ ಪ್ರವೇಶಿಸುತ್ತಾನೆ. ಜಿನ್ನೋಪಂತನು ಮಹಾನವಮಿ ಬಯಲು ಎಂಬ ಮೈದಾನದಲ್ಲಿ ಬೀಡುಬಿಟ್ಟನು. ಇದನ್ನು ತಿಳಿದ ನಾಯಕನು ರಾಜ್ಯದ ದುರ್ಗಾಧಿಪತಿಗಳಿಗೆ ತಮ್ಮ ತಮ್ಮ ಪಡೆಯೊಡನೆ ಬರಲು ಆಜ್ಞೆ ಕಳುಹಿಸಿ ತಾತ್ಕಾಲಕ್ಕೆ ಸಿದ್ಧವಿದ್ದ ದಂಡಿನೊಡನೆ ಹೊರಟನು. ಜಿನೋಪಂತ ರಾಜನನ್ನು ದೂರದಿಂದ ನೋಡಿ ಹಿಂಭಾಗದಲ್ಲಿ ನುಗ್ಗಿ ಮೋಸದಿಂದ ಸೋಮಶೇಖರನಾಯಕನನ್ನು ಇರಿದು ಪರಾರಿಯಾದನು.

ಸೋಮಶೇಖರ ನಾಯಕನ ಮರಣದ ವಿಷಯ ಅರಮನೆಯಲ್ಲಿದ್ದ ಚೆನ್ನಮ್ಮಳಿಗೆ ಗೊತ್ತಾದಾಗ ಪತಿಯ ಮರಣದ ದುಃಖ ಕೆನೆಗಟ್ಟಿ ಕೋಪೋದ್ರೇಕದಿಂದ ಬೆಂಕಿಯಾಗುತ್ತಾಳೆ. ಚಂಡಿಯಾಗಿ ತಕ್ಷಣ ದಿವ್ಯಾಶ್ವವನ್ನೇರಿ ರಣರಂಗಕ್ಕೆ ಧಾವಿಸಿ ಹೋಗುತ್ತಾಳೆ. ಇದನ್ನು ಕಂಡ ಕೆಳದಿ ಸೈನಿಕರೆಲ್ಲರೂ ಒಂದುಗೂಡಿದರು. ಕೆಳದಿ ಯೋಧರು ಯಮನ ಭಟರಾಗಿ ಹೊಡೆತ ಕೊಟ್ಟಿದ್ದರಿಂದ ಜಿನ್ನೋಪಂತನ ತುರುಷ್ಕದಳ ಪುಡಿ ಪುಡಿಯಾಗಿ ಉರುಳಿತು. ಜಿನ್ನೋಪಂತ ಯುದ್ಧಭೂಮಿಯಿಂದ ತಪ್ಪಿಸಿಕೊಳ್ಳುವನು. ಚೆನ್ನಮ್ಮ ಪತಿಯ ಶವದೊಡನೆ ನಗರಕ್ಕೆ ಬರುತ್ತಾಳೆ. ಚೆನ್ನಮ್ಮನ ಮನಸ್ಸಿನ ಮರೆಯಲ್ಲಿದ್ದ ವೀರರಸವು ಯಾವ ರೀತಿ ಹೊರಹೊಮ್ಮಿತು ಎಂಬುದಕ್ಕೆ ಈ ಪ್ರಸಂಗವು ಸಾಕ್ಷಿಯಾಗಿದೆ.

ಕೆಳದಿ ರಾಜ್ಯದ ರಕ್ಷಣೆಗಾಗಿ ತನ್ನ ಪ್ರಾಣವನ್ನೇ ಮುಡುಪಾಗಿಟ್ಟು ಪ್ರಸ್ತುತ ಸ್ಥಿತಿಯನ್ನು ಕೂಲಂಕಷವಾಗಿ ಚರ್ಚಿಸುತ್ತಾ, ರಾಣಿ ಮಾತನಾಡುತ್ತಾಳೆ. ಮಾವ, ಭಾವ, ಗಂಡ ಇವರು

ತಮ್ಮ ರಕ್ತಧಾರೆಯೆರೆದು ಕಾಪಾಡಿದ ರಾಜ್ಯವನ್ನು ಕಾಪಾಡದೆ ನನ್ನ ರಕ್ತವನ್ನು ಉಳಿಸಿಕೊಳ್ಳುವ ಹೇಡಿತನದ ಜೀವನ ನನಗೆ ಬೇಡ; ಪತಿಯ ಕಾರ್ಯವನ್ನು ನಿರ್ವಹಿಸಿ ಮುಂದುವರಿಸುವುದೇ ನನ್ನ ಕರ್ತವ್ಯವೆಂದು ನಂಬುತ್ತೇನೆ ಎಂದು ನುಡಿದು ಸಮರವನ್ನು ಸಾರುತ್ತಾಳೆ. ಜಿನ್ನೋಪಂತನ ಸೈನ್ಯವನ್ನು, ತನ್ನ ಪತಿಯನ್ನು ಕೊಂದವರನ್ನು ಇರಿಯುತ್ತ ಸಾಗುತ್ತಾಳೆ. ಜಿನ್ನೋಪಂತನ ಸಹಾಯಕ್ಕೆ ಬಂದ ವಿಜಾಪುರದ ಇನ್ನೊಂದು ದಂಡನ್ನು ಚೆನ್ನಮ್ಮ ತಾನೇ ಹೋಗಿ ಸೋಲಿಸುತ್ತಾಳೆ. ವಂಚಕರಾದ ಪಾಳೆಯಗಾರರನ್ನು ದಂಡಿಸುತ್ತಾಳೆ.

ಶಕವರ್ಷ ೧೫೬೪ ವಿರೋಧಿಕೃತ ಸಂವತ್ಸರ ಪಾಲ್ಗುಣ ಬಹುಳ ೧೦ ಶುಭ ಮುಹೂರ್ತದಲ್ಲಿ ಭಾವನಗೌರಿಯ ದುರ್ಗದ ಅರಮನೆಯಲ್ಲಿ ಚೆನ್ನಮ್ಮಳಿಗೆ ರಾಜ್ಯ ಪಟ್ಟಾಭಿಷೇಕ ಶಾಸ್ತ್ರೋಕ್ತವಾಗಿ ನಡೆಯಿತು.

ರಾಜ್ಯ ಹಿತದೃಷ್ಟಿಯಿಂದ ಮತ್ತು ತನಗೆ ಮಕ್ಕಳಾಗದ ಕಾರಣ ದತ್ತುಪುತ್ರನನ್ನು ಪಡೆಯುವ ಯೋಚನೆ ಮಾಡುತ್ತಾಳೆ. ಸುಂದರರೂಪ, ಸುಲಲಿತ ಮಾತು, ಅರಳುತ್ತಿರುವ ಪುಷ್ಪದ ನರುಗಂಪಿನಂತೆ ಸದ್ಗುಣಗಳುಳ್ಳ ಗೌರಮ್ಮ ಮರಿಯಪ್ಪ ಶೆಟ್ಟರ ಮಗನಾದ ಬಸವಪ್ಪನಾಯಕನನ್ನು ಆಯ್ಕೆ ಮಾಡುತ್ತಾಳೆ. ಸರ್ವ ಧರ್ಮಗುರುಗಳ, ಹಿರಿಯರ ಸಮ್ಮುಖದಲ್ಲಿ ರಾಣಿ ಚೆನ್ನಮ್ಮ ಬಸವಪ್ಪನನ್ನು ಮುರಿಯಪ್ಪ, ಗೌರಮ್ಮರ ಹಸ್ತದಿಂದ ಶಾಸ್ತ್ರೋಕ್ತವಿಧಿಯಂತೆ ದತ್ತು ಸ್ವೀಕರಿಸಿ 'ಬಸವಪ್ಪನಾಯಕ'ನೆಂದು ನಾಮಕರಣ ಮಾಡಿದಳು. ದತ್ತು ಪುತ್ರೋತ್ಸವನ್ನು ಕಣ್ಣಿ ಕಟ್ಟುವಂತೆ ಲೇಖಕರು ವರ್ಣಿಸಿದ್ದಾರೆ.

ಕಾಸರಗೋಡು ತಿಮ್ಮಣ್ಣನಾಯಕರನ್ನು ಸೈನ್ಯದೊಂದಿಗೆ ಕಳುಹಿಸಿ ಫಲಸಂಪತ್ತಿನ ಹೊನ್ನಾಳಿ ಕೋಟೆಯನ್ನು ತಿರುಗಿ ವಶಪಡಿಸಿಕೊಂಡಳು. ಹನುಮನಾಯಕನ ಶೌರ್ಯವನ್ನು ಮಣ್ಣು ಗೂಡಿಸಿ, ಸೋದೆಯ ರಾಮಚಂದ್ರನನ್ನು ಸೋಲಿಸಿ ಬನವಾಸಿ, ಬಾಳೂರು ವಶಪಡಿಸಿಕೊಂಡಳು. ಗರ್ವಿಷ್ಠನಾಗಿ ಪ್ರಜೆಗಳನ್ನು ಪೀಡಿಸುತ್ತಿದ್ದ ಜಿರುಮತಿ ಅರಸನ ಬಿಂಕವನ್ನು ಬಿಡಿಸಿದಳು. ಅವನ ಮೊಳಕಾಲಬಾಸಿಗ ಬಿರುದನ್ನು ಕಿತ್ತೆಸೆದಳು. ಚೆನ್ನಮ್ಮ ರೂಪಿಸುವ ಯುದ್ಧತಂತ್ರಗಳನ್ನು ನೋಡಿ ಅನುಭವಿ ಸೇನಾಧಿಪತಿಗಳು ಕೂಡ ಮೆಚ್ಚಿ ತಲೆದೂಗುತ್ತಿದ್ದರು. ಆಕೆ ರಣರಂಗದ ಪರಿಣಾಮಗಳನ್ನು ನಿರೀಕ್ಷಿಸಿ ಮುಂದಿನ ಕ್ರಮಗಳನ್ನು ನಿರ್ಧರಿಸುವುದಕ್ಕಾಗಿ ಆಹಾರ, ನಿದ್ರೆಗಳ ಪರಿವೆಯಿಲ್ಲದೆ ಚಲಿಸುತ್ತಿದ್ದಳು. ಜಾಣಳು, ಧೀರಳು ಆಗಿದ್ದ ಒಡತಿ ಕರುಣಾಳು ಆಗಿದ್ದಳು. ಸೈನಿಕರು ಅವಳ ಇಚ್ಛೆಯಂತೆ ಹೋರಾಡಿ ವಿಜಯಕ್ಕೆ ಕಾರಣರಾಗುತ್ತಿದ್ದರು. ಚೆನ್ನಮ್ಮರಾಣಿ ಪ್ರತಾಪಶಾಲಿ ಎಂದು ಪ್ರಸಿದ್ಧವಾದಳು. ಈಕೆಯ ಶೌರ್ಯ ಗುಣ, ಆದರ್ಶ, ಮೌಲ್ಯಗಳು ಜನತೆಗೆ ಮಾದರಿಯಾಗಿವೆ.

ರಾಜಾರಾಮನು ಅಸಹಾಯಕ ಸ್ಥಿತಿಯಲ್ಲಿದ್ದ; ದಯೆಯಿಂದ ನನ್ನನ್ನು ಪಾರುಮಾಡಿ ಕಾಪಾಡಬೇಕೆಂದು ಪ್ರಾರ್ಥಿಸಿದನು. ಆಗ ಚೆನ್ನಮ್ಮಾಜಿ ರಾಜಾರಾಮನಿಗೆ ಆಶ್ರಯ ನೀಡಬೇಕೋ ಅಥವಾ ಬೇಡವೋ ಎನ್ನುವ ನಿರ್ಧಾರ ತೆಗೆದುಕೊಳ್ಳಲು ಮಂತ್ರಿಮಂಡಲದ ಸಭೆಯನ್ನು ಕರೆಯುತ್ತಾಳೆ. ಈ ಸಭೆ ಕರೆಯುವ ಸನ್ನಿವೇಶವು ಇನ್ನಿತರ ಕಾದಂಬರಿಗಳಾದ 'ಶೂರರಾಣಿ ಕೆಳದಿಯ ಚೆನ್ನಮ್ಮಾ', 'ಚೆನ್ನಚೆನ್ನಮ್ಮ ಚೆನ್ನಮ್ಮಾಜಿ' ಕಾದಂಬರಿಗಳಲ್ಲಿ ಕಂಡುಬರುತ್ತದೆ. ವೀರರಾಣಿ

ಮಹಾಮುತ್ಸದ್ಧಿ ಕೆಳದಿ ಚೆನ್ನಮ್ಮ ಕಾದಂಬರಿಯಲ್ಲಿನ ಪ್ರಧಾನಿ ನರಸಪ್ಪಯ್ಯ ರಾಜಾರಾಮನಿಗೆ ಆಶ್ರಯ ನೀಡುವುದು ಧರ್ಮಸಂಕಟ ಎನ್ನುತ್ತಾನೆ. ಆದರೆ ಚೆನ್ನಮ್ಮ ಧರ್ಮ ಬೆಳಗುವುದು ಸಂಕಟದ ಸಂದರ್ಭದಲ್ಲಿಯೇ ಎಂದು ತಿಳಿಸಿ ಹೇಳುತ್ತಾಳೆ. ಬಲಾಢ್ಯನಾದ ವೈರ ಬಳಸಿ, ನಮ್ಮ ಸಂಪತ್ತುಗಳನ್ನು ವಿಧ್ವಂಸಗೊಳಿಸಿಕೊಳ್ಳುವ ಗಂಡಾಂತರಕ್ಕೆ ಸಿಲುಕಬಾರದು ಎಂದು ಹೇಳುತ್ತಾರೆ. ಆಗ ಚೆನ್ನಮ್ಮಾಜಿಯು ಮೊರೆಹೊಕ್ಕವರನ್ನು ಯಾವ ಕಷ್ಟನಷ್ಟಗಳನ್ನು ಲೆಕ್ಕಿಸದೇ ಕಾಪಾಡುವುದು ನಿಜಧರ್ಮ. ಕಾಪಾಡು ಎಂದು ಆಶ್ರಯ ಕೋರಿ ಬಂದವರನ್ನು ರಕ್ಷಿಸಿ, ವೈರಿಗಳನ್ನು ಎದುರಿಸಿ ಯಶಸ್ವಿಯಾದರೆ ಉಭಯ ಕೀರ್ತಿ ಆತ್ಮ ಶಾಂತಿ, ಅಳಿದರೆ ಧರ್ಮಕ್ಕಾಗಿ ಅಳಿದ ಕೀರ್ತಿ, ತೃಪ್ತಿ ಆಗುವುದೆಂದು ಹೇಳಿ ರಾಜಾರಾಮನಿಗೆ ಆಶ್ರಯ ನೀಡುತ್ತಾಳೆ. ಪ್ರತಿಯೊಂದು ಮಾತಿನಲ್ಲಿಯೂ ಆಕೆಯ ಧೈರ್ಯ, ಆಲೋಚನಾ ಕ್ರಮ ಎಲ್ಲರನ್ನು ಚಕಿತಗೊಳಿಸುತ್ತದೆ. ಒಂದು ಹೆಣ್ಣು ತನ್ನ ಪ್ರಾಣದ ಹಂಗನ್ನು ತೊರೆದು ಪ್ರಜೆಗಳ ಹಿತಕ್ಕಾಗಿ ಹಗಲಿರುಳು ಶ್ರಮಿಸುವ ಈಕೆಯ ಬದುಕಿನ ಸುಂದರ ಚಿತ್ರಣವನ್ನು ಸೊಗಸಾಗಿ ನಿರೂಪಿಸುವುದೇ ಕಾದಂಬರಿಯ ಉದ್ದೇಶವಾಗಿದೆ.

ಔರಂಗಜೇಬನು ತನ್ನ ಮಗನೊಂದಿಗೆ ಅಪಾರ ಸೈನ್ಯವನ್ನು ಯುದ್ಧ ಮಾಡಲು ಕಳುಹಿಸುತ್ತಾನೆ. ಆದರೆ ರಾಣಿ ಚೆನ್ನಮ್ಮನ ಚಾಣಾಕ್ಷತನದ ಮುಂದೆ ಸೋತು ಹೋಗುತ್ತಾನೆ. ಕನ್ನಡ ನಾಡಿನ ಕಲಿಗಳ ಕೆಚ್ಚು ತೋರಿದ ಚೆನ್ನಮ್ಮ ಕೆಳದಿ ರಾಜ್ಯವನ್ನು ಸ್ವತಂತ್ರ ರಾಜ್ಯವನ್ನಾಗಿ ಮಾಡಿದಳು. ವೈರಿಗಳಿಗೆ, ದುಷ್ಟರಿಗೆ ಮರ್ದಿನಿಯಾಗಿದ್ದಳು. ಪ್ರಾಣಾಪಾಯದಿಂದ ಮೊರೆಹೊಕ್ಕ ರಾಜಾರಾಮನಂಥವರಿಗೆ ಆಶ್ರಯದಾತಳಾಗಿದ್ದಳು. ಈ ಕಾರಣಕ್ಕಾಗಿ ಚೆನ್ನಮ್ಮನನ್ನು 'ಶರಣಾಗತರಕ್ಷಕಿ' ಎಂದು ಕರೆಯಲಾಗಿದೆ.

ಚೆನ್ನಮ್ಮ ಕಾಳಗದಲ್ಲಿ ಕಲಿತನದಿಂದ ಹೋರಾಡಿದ ಸೈನಿಕರಿಗೆ ಪಟು-ಭಟರನ್ನು ಸನ್ಮಾನಿಸಿದಳು. ವೀರಾಗ್ರಣಿಗಳಿಗೆ ಉಂಬಳಿ ಕೊಟ್ಟಳು. ವಿಜಯೋತ್ಸವದ ಅಂಗವಾಗಿ ಸಕಲ ಪರಿವಾರ ಮಂತ್ರಿಗಳನ್ನು ಒಳಗೊಂಡಂತೆ ಸುಬ್ರಹ್ಮಣ್ಯೇಶ್ವರ ಯಾತ್ರೆ ಮಾಡಿ, 'ಪ್ರತಾಪಶಾಲಿನಿ ಚೆನ್ನಮ್ಮಾ' ಎನಿಸಿದಳು. ಕೆಳದಿಯನ್ನು ಈಗ ಯಾರೂ ಎಡಗಣ್ಣಿನಿಂದ ನೋಡುವಂತಿಲ್ಲ. ಆಕೆಯ ಕೀರ್ತಿ ದೂರದ ರಾಜ್ಯದಲ್ಲೆಲ್ಲ ಪಸರಿಸಿತು. ಮೊಗಲರ ಮೇಲಿನ ವಿಜಯವು ಆ ಕೀರ್ತಿಯ ಕಳಸವಾಯಿತು. ಧರ್ಮದಲ್ಲಿ ಆಸಕ್ತಿ, ಸಹಕಾರ ಈ ಉಜ್ವಲ ಸದ್ಗುಣಗಳು ಬೆಳಗಿದವು, ರಾಜ್ಯದ ಜನರಿಗೆ ಮಾತೃದೇವತೆಯಾದಳು. ಮೊಗಲರೊಡನೆ ನಡೆದ ಯುದ್ಧದ ಜಯದ ನೆನಪಿಗಾಗಿ ಬಿದನೂರಿನಲ್ಲಿ ಕಲ್ಮಠ ಕಟ್ಟಿಸಿದಳು. ಅರ್ಧಕ್ಕೆ ನಿಂತ ಕೆರೆ, ಬಾವಿ, ಸರೋವರ, ಕಾಲುವೆಗಳ ಕಾರ್ಯವನ್ನು ಪೂರ್ಣಗೊಳಿಸಿದಳು.

ತುಂಗಭದ್ರ ನದಿ ತೀರದಲ್ಲಿ ತನ್ನ ಪತಿಯಾದ ಸೋಮಶೇಖರ ನಾಯಕನ ಹೆಸರಿನಲ್ಲಿ 'ಸೋಮಶೇಖರಪುರ' ಎಂಬ ಅಗ್ರಹಾರವನ್ನು ಕಟ್ಟಿಸಿ ಅಲ್ಲಿ ಬ್ರಾಹ್ಮಣ ಶ್ರೋತ್ರಿಯರಿಗೆ ಸಕಲ ಅನುಕೂಲಗಳನ್ನು ಮಾಡಿಕೊಟ್ಟಳು. ಬಸವಪಟ್ಟಣ ಸೀಮೆಯಲ್ಲಿದ್ದ ಹುಲಿಕೋಟೆಯನ್ನು ಸ್ವಾಧೀನಪಡಿಸಿಕೊಂಡಳು. ಅದಕ್ಕೆ 'ಚೆನ್ನಗಿರಿ' ಎಂದು ಹೆಸರಿದ್ದು ಆ ಪ್ರದೇಶವನ್ನು ಕೆರೆ

ಕಾಲುವೆಗಳ ಮೂಲಕ ಅಭಿವೃದ್ಧಿಪಡಿಸಿದಳು. ವೇಣುಪುರದ ನೀಲಕಂಠೇಶ್ವರ ಗುಡಿ ಕೆಳದಿ ರಾಮೇಶ್ವರಿ, ವೀರಭದ್ರೇಶ್ವರ, ಕೊಲ್ಲೂರು ಮುಕಾಂಬಿಕೆ, ಶೃಂಗೇರಿ ಶಾರದಾಂಬೆ ಮೊದಲಾದ ದೇವಾಲಯಗಳಿಗೆ ಭೂಮಿಯನ್ನು ಬಿಟ್ಟು ಶಾಸನಗಳನ್ನು ಬರೆಸಿದ್ದೇ ಅಲ್ಲದೆ ಶಿಥಿಲವಾದ ಗುಡಿಗಳನ್ನು ದುರಸ್ತಿಗೊಳಿಸಿದಳು. ಈ ಗುಡಿಗಳ ಮುಂದೆ ರಂಗಮಂಟಪ, ಧ್ವಜಸ್ತಂಭ ಮೊದಲಾದವುಗಳನ್ನು ಸ್ಥಾಪಿಸಿದಳು. ಜೊತೆಗೆ ಅರಮನೆಯ ಸೇವೆಯನ್ನು ಮಾಡಿಕೊಂಡು ಬಂದ ಹಲವರಿಗೆ ದಾನ - ಧರ್ಮಗಳನ್ನು ಮಾಡಿದಳು. ಹಲವು ಮಠಗಳಿಗೆ ದಾನಗಳನ್ನು, ಉಂಬಳಿಗಳನ್ನು ನೀಡಿದಳು. ರಾಜ್ಯದಲ್ಲಿದ್ದ ಅನ್ಯಮತೀಯರನ್ನು ಕೂಡ ಇವಳು ಮರೆಯಲಿಲ್ಲ. ಚೆನ್ನಮ್ಮಾಜಿಯ ಧಾರ್ಮಿಕ ಕಾರ್ಯಗಳು ಉಳಿದ ಕಾದಂಬರಿಗಳಲ್ಲಿ ಹೆಚ್ಚು ಕಡಿಮೆ ಒಂದೇ ರೀತಿಯಾಗಿ ಚಿತ್ರಿತಗೊಂಡಿವೆ. ಚೆನ್ನಮ್ಮ ಎಲ್ಲ ಮತ, ಪಂಥಗಳ ಧಾರ್ಮಿಕ ನಂಬಿಕೆಗಳನ್ನು ಗೌರವಿಸುತ್ತಿದ್ದಳು. ಭೇದಭಾವವಿಲ್ಲದೆ ಎಲ್ಲ ಮತಗಳ ಪವಿತ್ರ ಸ್ಥಾನಗಳಿಗೆ ಅನೇಕ ದಾನ - ಧರ್ಮಗಳನ್ನು ಮಾಡಿದಳು. ಅಲ್ಲದೆ ಕಲೆಗಳಿಗೆ ಹೆಚ್ಚಿನ ಪ್ರೋತ್ಸಾಹವನ್ನು ಸಹ ನೀಡಿದಳು.

ಲಕ್ಕಪ್ಪ ಶಿರಹಟ್ಟಿ ಅವರು ವೀರರಾಣಿ ಮಹಾಮುತ್ಸದ್ಧಿ ಕೆಳದಿ ಚೆನ್ನಮ್ಮಾ ಕಾದಂಬರಿಗೆ ಐತಿಹಾಸಿಕ ದಾಖಲೆಗಳನ್ನು ಆಧಾರವಾಗಿಟ್ಟುಕೊಂಡು ರಚಿಸಲಾಗಿದೆ. ಲಿಂಗಣ್ಣ, ಕವಿ ವಿರಚಿತ ಕೆಳದಿ ನೃಪವಿಜಯ ಕಾವ್ಯವನ್ನು ಓದಿ ಕಾದಂಬರಿಯನ್ನು ಬರೆದಿರುವುದಾಗಿ ಕಾದಂಬರಿಕಾರರೇ ತಿಳಿಸುತ್ತಾರೆ. ಹಲವು ಸಮಸ್ಯೆಗಳ ಮಧ್ಯದಲ್ಲಿ ಚೆನ್ನಮ್ಮ ಪತಿಯನ್ನು ಕಳೆದುಕೊಂಡು, ದುಃಖವನ್ನೇ ಸವಾಲಾಗಿ ಸ್ವೀಕರಿಸುವಲ್ಲಿ ಅವಳ ಬದುಕಿನ ಜೀವಸತ್ವ, ಮೌಲ್ಯ ಕಾಣುತ್ತದೆ.

ವೀರರಾಣಿ ಕೆಳದಿಯ ಚೆನ್ನಮ್ಮ ಕಾದಂಬರಿಯು ರಾಜಕೀಯ ಕಾದಂಬರಿಯಾಗಿದೆ. ಚೆನ್ನಮ್ಮಾಜಿ, ಸೋಮಶೇಖರನಾಯಕ, ಭರಮೇಮಾವುತ ಈ ಪಾತ್ರಗಳನ್ನು ಲೇಖಕರು ತುಂಬಾ ಜಾಣ್ಮೆಯಿಂದ ಬಳಸಿಕೊಂಡಿದ್ದಾರೆ. ಲೇಖಕರು ಒಬ್ಬ ಗಂಡಸಾಗಿ ಹೆಣ್ಣಿನ ಬಗ್ಗೆ ಕೊಡುವ ವಿವರಣೆಗಳಲ್ಲಿ ವ್ಯತ್ಯಾಸ ಕಂಡು ಬರುತ್ತದೆ.

ಚೆನ್ನಮ್ಮನ ಶೌರ್ಯ, ಧೈರ್ಯ, ಸ್ವಾಭಿಮಾನ, ರಾಜ್ಯ ಧರ್ಮಾಚರಣೆಯ ಅಗತ್ಯ ಸಾಹಸದ ಕಾರ್ಯಗಳು ಲಕ್ಕಪ್ಪ ಶಿರಹಟ್ಟಿ ಅವರ ಕಾದಂಬರಿಯ ಮೂಲ ಪ್ರೇರಣೆಗಳು. ಇವುಗಳ ನೆಲೆಯಲ್ಲಿ ಆ ಕಾಲದ ಜೀವನವನ್ನು ವ್ಯಕ್ತಿಗಳ ಜೀವನ ಸಂದರ್ಭದಲ್ಲಿ ಪುನರ್‌ಸೃಷ್ಟಿಸಿದ್ದಾರೆ. ಕಾದಂಬರಿಯ ಪ್ರಾರಂಭದಲ್ಲೇ ಅದರ ವಸ್ತುವಿಷಯಗಳ ಬಗ್ಗೆ ಮುಖ್ಯ ಸೂಚನೆ ದೊರೆಯುತ್ತದೆ.

ಪ್ರಖ್ಯಾತ ವೀರಶೈವ ರಾಜಮನೆತನಗಳಲ್ಲಿ ಕೆಳದಿಗೆ ಒಂದು ಪ್ರಮುಖ ಸ್ಥಾನವಿದೆ. ಸೋಮಶೇಖರನಾಯಕ ಕೆಳದಿಯ ರಾಜ. ಅವನ ರಾಣಿ ಚೆನ್ನಮ್ಮ; ಸೋಮಶೇಖರನಾಯಕ ಸ್ವಾರ್ಥ ಸಾಧಕರ ಕುಹಕಿಗಳ ಕಪಟಕ್ಕೆ ಪತಿ ಸೋಮಶೇಖರ ನಾಯಕ ಕೊಲ್ಲಲ್ಪಟ್ಟನು. ಇದಕ್ಕೆ ಧೈರ್ಯಗೆಡದೆ ರಾಜ್ಯವನ್ನು ರಕ್ಷಿಸಿದಳು, ಪೋಷಿಸಿದಳು. ದತ್ತು ಪಡೆದ ಬಸವಪ್ಪನಾಯಕನನ್ನು ಮುಂದೆ ಮಾಡಿಕೊಂಡು ರಾಜ್ಯವಾಳುತ್ತ ಮುಂದೆ ಸಾಗಿದಳು. ಇದು ಕಾದಂಬರಿಯ ಪ್ರಮುಖ ವಿಷಯ.

ಕಾದಂಬರಿಯ ಕೇಂದ್ರಪಾತ್ರ ಚೆನ್ನಮ್ಮ. ತನ್ನ ಪತಿಯನ್ನು ಕಳೆದುಕೊಂಡರೂ ಆಕೆ ಸಂಯಮವನ್ನು ಕಳೆದುಕೊಳ್ಳಲಿಲ್ಲ. ತನ್ನ ಸ್ವಾಭಿಮಾನವನ್ನು ಮರೆಯಲಿಲ್ಲ. ರಾಣಿಯಾಗಿ ರಾಜ್ಯವನ್ನು

ಕಾಯ್ದುಕೊಳ್ಳುವುದು ಅವಳಿಗೆ ಕೇವಲ ಕರ್ತವ್ಯದ ಪ್ರಶ್ನೆಯಾಗಿರಲಿಲ್ಲ. ಅಭಿಮಾನದ ಪ್ರಶ್ನೆಯಾಗಿತ್ತು. ಈ ಕೆಲಸವನ್ನು ಅವಳು ಎಷ್ಟು ನಿಷ್ಠೆಯಿಂದ, ಕುಶಲತೆಯಿಂದ ನಿರ್ವಹಿಸುತ್ತಾಳೆಂದರೆ ಅವಳ ತಂತ್ರದ ಮುಂದೆ ಯಾವ ಪ್ರತಿತಂತ್ರವೂ ಯಶಸ್ವಿಯಾಗುವುದಿಲ್ಲ. ಚೆನ್ನಮ್ಮ ಅಕ್ಕಪಕ್ಕದ ರಾಜ್ಯಗಳೊಂದಿಗೆ ಶಾಂತಿಯುತ ಸಂಬಂಧಗಳನ್ನಿಟ್ಟುಕೊಳ್ಳುವುದು, ಪ್ರಜೆಗಳನ್ನು ತನ್ನ ಮಕ್ಕಳಂತೆ ತಿಳಿಯುವುದು ಈ ಎಲ್ಲಾ ಸಂದರ್ಭಗಳಲ್ಲಿ ಆಕೆಯ ಜಾಣ್ಮೆ, ರಾಜನೀತಿ ಬುದ್ಧಿಮತ್ತೆಯನ್ನು ಆಯಾಯ ಸಂದರ್ಭಗಳಿಗೆ ತಕ್ಕಂತೆ ಕಾದಂಬರಿಕಾರರು ಕಾದಂಬರಿಯಲ್ಲಿ ನಿರೂಪಿಸಿದ್ದಾರೆ.

ಕಾದಂಬರಿಯಲ್ಲಿ ಬರುವ ಮನುಷ್ಯ ಸಂಬಂಧಗಳನ್ನು ನೋಡಿದಾಗ ಆ ಕಾಲದ ರಾಜಕೀಯ ಸಮಸ್ಯೆಗಳ ಸ್ವರೂಪ ತಿಳಿದುಬರುತ್ತದೆ. ಚೆನ್ನಮ್ಮ ಮತ್ತು ಸೋಮಶೇಖರನಾಯಕ ದಂಪತಿಗಳು ಮಕ್ಕಳಿಗಾಗಿ ಎದುರಿಸುವ ಮಾನಸಿಕ ಸಮಸ್ಯೆಗಳು ಒಂದು ಸಂಕ್ರಮಣ ಕಾಲದ ಸಮಸ್ಯೆಗಳೇ ಆಗಿ ಬಿಡುತ್ತವೆ. ಸೋಮಶೇಖರ ನಾಯಕ ಈ ಸಂಕೀರ್ಣ ಸಮಸ್ಯೆಗಳನ್ನು ಮನುಷ್ಯ ಎದುರಿಸುವ ಒಂದು ಮಾರ್ಗವನ್ನು ಸೂಚಿಸಿದರೆ, ಮತ್ತೊಂದು ಮಾರ್ಗವನ್ನು ಚೆನ್ನಮ್ಮ ಸಂಕೇತಿಸುತ್ತಾಳೆ.

ಚೆನ್ನಮ್ಮನನ್ನು ಕೇಂದ್ರವಾಗಿಟ್ಟುಕೊಂಡು ರಚನೆಯಾದ ಮೂರನೇ ಕಾದಂಬರಿ ನಾ.ಡಿಸೋಜ ಅವರ 'ಚೆನ್ನಿ ಚೆನ್ನಮ್ಮ ಚೆನ್ನಮ್ಮಾಜಿ'. ಸೋಮಶೇಖರನಾಯಕ ಭರಮೇಮಾವುತನ ಮೋಸಕ್ಕೆ ಒಳಗಾಗಿ ಕೊಲೆಯಾದ ಸನ್ನಿವೇಶದಿಂದ ಕಾದಂಬರಿಯು ಪ್ರಾರಂಭವಾಗುತ್ತದೆ.

ಕೆಳದಿ ರಾಜ್ಯವನ್ನು ಇಪ್ಪತ್ತೈದು ವರ್ಷಗಳ ಕಾಲ ಆಳಿದ ಸದೃಢ ವ್ಯಕ್ತಿತ್ವದ ಚೆನ್ನಮ್ಮ ಸಾಮಾನ್ಯ ಗೃಹಿಣಿಯಾಗಿದ್ದವಳು. ಸಮರ್ಥ ರಾಣಿಯಾಗಿ, ತಾಯಿಯಾಗಿ ಬೆಳೆದ ಬಗೆಯನ್ನು, ಹಲವು ತೊಡಕುಗಳಿಂದ ರಾಜ್ಯವನ್ನು ಪಾರುಮಾಡಿ ಯೋಗ್ಯ ಉತ್ತಾರಾಧಿಕಾರಿಯನ್ನು ದೊರಕಿಸಿಕೊಟ್ಟು ಕಣ್ಣುಚ್ಚಿದ ಕತೆಯೇ ಈ ಕಾದಂಬರಿಯ ವಸ್ತು. ಲೇಖಕರು ಈ ಕಾದಂಬರಿಯಲ್ಲಿ ಚೆನ್ನಮ್ಮಳ ವ್ಯಕ್ತಿತ್ವವನ್ನು ತುಂಬಾ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಕಾದಂಬರಿಯ ಶೀರ್ಷಿಕೆಯೇ ಮುದ್ದು ಹುಡುಗಿಯಾದ್ದವಳೊಬ್ಬಳು ಗೃಹಿಣಿಯಾಗಿ, ಗೌರವಯುತ ವ್ಯಕ್ತಿತ್ವದ ಮಹಿಳೆಯಾಗಿ ಬೆಳೆದದ್ದನ್ನು ಸೂಚಿಸುತ್ತದೆ.

ಸಿದ್ದಪ್ಪಶೆಟ್ಟಿ ಮತ್ತು ಪಾರ್ವತಿ ದಂಪತಿಗಳಿಗೆ ಮೂಕಾಂಬಿಕೆಯ ಹರಕೆಯ ಕೂಸಾಗಿ ಚೆನ್ನಮ್ಮ ಜನಿಸುತ್ತಾಳೆ. ಇವಳು ಬಾಲ್ಯದಲ್ಲಿ ಮನೆಯಲ್ಲಿ ಆಟವಾಡಿಕೊಂಡು ಅಯ್ಯನವರ ಶಾಲೆಯಲ್ಲಿ ಅಕ್ಷರ ಕಲಿಯುತ್ತಾ ಗೆಳತಿಯರ ಜೊತೆ ಕೊಟ್ಟೀಪುರದ ಗುಡಿ, ಕೆರೆ ಎಂದೆಲ್ಲ ಅಲೆದಾಡುತ್ತ ಮನೆಯ ಮುದ್ದಿನ ನಂದಾದೀಪವಾಗಿದ್ದಳು.

ಚೆನ್ನಮ್ಮ ಯಾವಾಗಲೂ ಒಂದೇ ರೀತಿ ಇರುತ್ತಿದ್ದಳು ಎಂದು ಹೇಳಲಾಗುವುದಿಲ್ಲ. ಅವಳ ಮನಸ್ಸಿಗೆ ಒಂದಾಗ ಮಾತ್ರ ಕೆಲಸ ಮಾಡುತ್ತಿದ್ದಳು. ಒಂದು ಛಲವೆಂದೋ, ಸವಾಲೆಂದೋ ಅವಳಿಗೆ ತೋರಿದರೆ ಮಾತ್ರ ಅದನ್ನು ಮಾಡುವ ಮನೋಧರ್ಮದವಳು. ನೋಡಲು ಸುರಸುಂದರಿ, ಜಾಣೆ, ದಿಟ್ಟೆಯೂ ಆಗಿದ್ದಳು. ಸಂಗೀತವನ್ನು ಎಲ್ಲರ ಹಾಗೆ ಕಲಿತಿದ್ದಳು. ಬಾಲ್ಯದಲ್ಲಿ ತುಂಬಾ ಹಟಮಾರಿಯಾಗಿದ್ದಳು. ಈಜು ಹೊಡೆಯುವುದರಲ್ಲಿ, ಮರ ಹತ್ತುವುದರಲ್ಲಿ ಮುಂಡ ಎತ್ತನ್ನು

ಹಿಡಿದು ಕಟ್ಟಿ ಹಾಕುವುದರಲ್ಲಿ ನಿಪುಣಳಾಗಿದ್ದಳು. ಹಟಮಾರಿತನದವಳಾಗಿದ್ದ ಚೆನ್ನಮ್ಮ ಯಾವುದೇ ಕೆಲಸಕ್ಕೆ ಕೈಹಾಕಿದರೆ ಆ ಕೆಲಸ ಮುಗಿಯುವರೆಗೆ ಬಿಡುತ್ತಿರಲಿಲ್ಲ. ಚೆನ್ನಮ್ಮಾಜಿಯು ಬಾಲ್ಯದಲ್ಲಿ ಹೊಂದಿದ ಹಟಮಾರಿತನದ ಗುಣಸ್ವಭಾವವನ್ನು ಲೇಖಕರು ಸೊಗಸಾಗಿ ಚಿತ್ರಿಸಿದ್ದಾರೆ. ಚೆನ್ನಮ್ಮಾಜಿಗೆ ಸಿದ್ಧಪ್ಪಶೆಟ್ಟಿ ತಂದೆ ಮಾತ್ರವಲ್ಲ ಒಳ್ಳೆಯ ಮಾರ್ಗದರ್ಶಕ ಕೂಡ ಆಗಿದ್ದನು.

ಸಾಮಾನ್ಯ ವ್ಯಾಪಾರಿ ಮಗಳಾದ ಚೆನ್ನಮ್ಮಳ ಬಾಳಿನಲ್ಲಿ ಮದುವೆಯೊಂದು ಮರೆಯಲಾಗದ ಅನುಭವ. ಯುವರಾಜನಾದ ಸೋಮಶೇಖರನಾಯಕನೊಂದಿಗೆ ಮದುವೆಯಾಗುವ ಸನ್ನಿವೇಶವನ್ನು ಲೇಖಕರು ಕಾಲ್ಪನಿಕತೆಯೊಂದಿಗೆ ಬಹಳ ವೈಭವಪೂರಿತವಾಗಿ ವರ್ಣಿಸಿದ್ದಾರೆ. ಸೋಮಶೇಖರ ನಾಯಕ ಬಳ್ಳಿಗಾವೆಗೆ ಹೋಗುವ ದಾರಿಯಲ್ಲಿ ಕೊಟ್ಟೀಪುರಕ್ಕೆ ಬಂದಾಗ ಆಕಸ್ಮಿಕವಾಗಿ ಅವನ ಕಣ್ಣಿಗೆ ಬಿದ್ದವಳು ಚೆನ್ನಮ್ಮ. ಗೆಳತಿಯರ ಜೊತೆ ಮಾವಿನ ತೋಪಿನಲ್ಲಿ ಉಯ್ಯಾಲೆ ಯಾಡುತ್ತಿದ್ದ ಚೆನ್ನಮ್ಮ ಅವನ ಮನಸೆಳೆಯುತ್ತಾಳೆ. ಅಂಗರಕ್ಷಕರಿಂದ ಮಾಹಿತಿ ಸಂಗ್ರಹಿಸಿದ ಸೋಮಶೇಖರ ನಾಯಕನು ರಾಜದಂಪತಿಗಳಿಗೆ ಚೆನ್ನಮ್ಮನ ವಿಷಯವಾಗಿ ಆಕೆಯನ್ನು ಮದುವೆ ಯಾಗುತ್ತೇನೆ ಎಂದು ಹೇಳುತ್ತಾನೆ. ಶಿವಪ್ಪನಾಯಕ ಮದುವೆಗೆ ಒಪ್ಪಿದರೂ ಬಸವ ಲಿಂಗಮ್ಮಾಜಿ ಒಪ್ಪಿಕೊಳ್ಳುವುದಿಲ್ಲ. ರಾಜಮನೆತನದ ಕನ್ಯೆಯನ್ನು ತರೋಣ, ವ್ಯಾಪಾರಿಯೋರ್ವನ ಮಗಳು ಬೇಡ, ಆಕೆ ಅರಮನೆಗೆ ಹೊಂದಿಕೊಳ್ಳಲಾರಳು ಎಂದಾಗ ಸೋಮಶೇಖರನಾಯಕ ಹಟ ಹಿಡಿಯುತ್ತಾನೆ. ಬಸವಲಿಂಗಮ್ಮ ಚೆನ್ನಮ್ಮಳ ಗುಣಸ್ವಭಾವದ ಬಗ್ಗೆ ಪರಿಶೀಲನೆ ಮಾಡಿ ನಂತರ ಮದುವೆಗೆ ಒಪ್ಪಿಕೊಳ್ಳುತ್ತಾಳೆ. ಮದುವೆಯ ಶುಭವಾರ್ತೆಯನ್ನು ರಾಯಸದ ಮಂತ್ರಿ ತೆಗೆದುಕೊಂಡು ಸಿದ್ಧಪ್ಪಶೆಟ್ಟಿಯ ಮನೆಗೆ ಬರುತ್ತಾನೆ. ಎಲ್ಲರೂ ಸೇರಿ ಚರ್ಚಿಸಿ, ಚೆನ್ನಮ್ಮಳ ಒಪ್ಪಿಗೆಯನ್ನು ಪಡೆದುಕೊಳ್ಳುತ್ತಾರೆ. ತಂದೆ - ತಾಯಿ ಒಪ್ಪಿದವನನ್ನು ಮಗಳು ಒಪ್ಪಿಕೊಳ್ಳಬೇಕು, ಆಕೆಯ ಒಪ್ಪಿಗೆ ಪಡೆಯುವ ಅಗತ್ಯವಿಲ್ಲ ಎನ್ನುವಂತಹ ಸಮಾಜಕ್ಕೆ ಚೆನ್ನಮ್ಮ ಭಿನ್ನ ಧೋರಣೆಯನ್ನು ಹೊಂದಿರುವ ಪಾತ್ರವಾಗಿ ಕಾಣಿಸಿಕೊಳ್ಳುತ್ತಾಳೆ.

ಚೆನ್ನಮ್ಮಳ ಮದುವೆಯಾದ ಒಂದೆರಡು ವರ್ಷಗಳಲ್ಲಿ ಶಿವಪ್ಪನಾಯಕನು ಮರಣವನ್ನು ಹೊಂದುತ್ತಾನೆ. ವೆಂಕಟಪ್ಪನಾಯಕರ ತರುವಾಯ ಸೋಮಶೇಖರನಾಯಕನಿಗೆ ಪಟ್ಟವಾಗುತ್ತದೆ. ಚೆನ್ನಮ್ಮ ಮಹಾರಾಣಿಯಾದಳು. ಮದುವೆಯಾಗಿ ಕೆಲವರ್ಷಗಳಾಗಿದ್ದರೂ ಮಕ್ಕಳಾಗದೆ ಇರಲು ತಾನೇ ಕಾರಣನಾಗಿರಬಹುದೆಂದು ಸೋಮಶೇಖರನಾಯಕ ಸಂಶಯಪಡುತ್ತಿದ್ದ. ತಾನೊಬ್ಬ ಅಪರಾಧಿ ಎನ್ನುವ ಹಾಗೆ ನರಳುತ್ತಿದ್ದ. ಕಾದಂಬರಿಯಲ್ಲಿ ಚೆನ್ನಮ್ಮ ಆತನನ್ನು ಸಂತೈಸುವ ಸನ್ನಿವೇಶವಿದೆ. ಚೆನ್ನಮ್ಮ ಮತ್ತು ಸೋಮಶೇಖರನಾಯಕ ಇವರ ದಾಂಪತ್ಯ ಜೀವನದ ವರ್ಣನೆ ಉಳಿದ ಕಾದಂಬರಿಯಲ್ಲಿ ಹೆಚ್ಚಾಗಿ ಕಂಡುಬಂದರೆ ಈ ಕಾದಂಬರಿಯಲ್ಲಿ ದೀರ್ಘ ವರ್ಣನೆ ಬರುವುದಿಲ್ಲ. ದಾಂಪತ್ಯ ಜೀವನದಲ್ಲಿನ ಸುಖ-ದುಃಖಗಳನ್ನು ಸ್ತ್ರೀಗೆ ಇರಬೇಕಾದ ಸಹಜ ಗುಣಗಳನ್ನು ವಿವರಿಸಿದ್ದಾರೆ.

ಭರಮೆಮಾವುತನ ಕಪಟಕಾರ್ಯಕ್ಕೆ ಒಳಗಾದ ಸೋಮಶೇಖರ ನಾಯಕನು ಕೊಲೆ ಯಾಗುತ್ತಾನೆ. ಆ ಸಂದರ್ಭದಲ್ಲಿ ಚೆನ್ನಮ್ಮ ತನ್ನ ತಂದೆಯ ಮುಂದೆ ಭರಮೆಮಾವುತನ

ಕಪಟತನವನ್ನು ಕುರಿತು ಆಕೆ ಹೇಳುವ ಸನ್ನಿವೇಶವಿದೆ. ಲೇಖಕರು ಭರಮೆಮಾವುತನು ಸೋಮಶೇಖರನಾಯಕನಿಗೆ ಮಾಡಿದ ದ್ರೋಹವನ್ನು ಚೆನ್ನಮ್ಮನ ಮೂಲಕ ಹೇಳಿಸುತ್ತಾರೆ.

ಭರಮೆಮಾವುತ ಆನೆ ಮದೋದಕ ಸೇವಿಸಲು ಸೋಮಶೇಖರನಾಯಕನಿಗೆ ಕೊಟ್ಟಾಗ ಇನ್ನು ಮೇಲೆ ಇದನ್ನು ನಾನು ಸೇವಿಸಲಾರೆ ಎನ್ನುತ್ತಾನೆ. ಅವನು ನೀವು ನನ್ನ ಗುಲಾಮ ಎನ್ನುತ್ತಾನೆ. ನಾನು ರಾಜ್ಯದ ದೊರೆ ನನ್ನ ಹತ್ತಿರವೇ ಹೀಗೆ ಮಾತನಾಡುತ್ತೀಯಾ? ಎಂದಾಗ ಒಂದೆರಡು ದಿನಗಳಲ್ಲಿ ನಿರ್ಧಾರವಾಗುತ್ತದೆ. ಜಿನ್ನೋಪಂತ ಕೊಡಸೆ ಕೋಟೆಯಲ್ಲಿ ನಿಮ್ಮ ಪಟ್ಟಾಭಿಷೇಕದ ವ್ಯವಸ್ಥೆ ಮಾಡುತ್ತಿದ್ದಾನೆ ಎನ್ನುತ್ತಾನೆ. ಈ ವಿಷಯ ತಿಳಿದು ಕೆರಳಿದ ಸೋಮಶೇಖರನಾಯಕನು ಕುದುರೆಯನ್ನೇರಿ ಕೊಡಸೆಯುತ್ತ ಧಾವಿಸುತ್ತಾನೆ. ಅವನ ಅಂಗರಕ್ಷಕರಿಗೆ ಈ ವಿಷಯ ತಿಳಿದಿರಲಿಲ್ಲ. "ಕೊಡಸೆಹಳ್ಳ ದಾಟಿದ ನಾಯಕನನ್ನು ಮಹಾನವಮಿ ಬಯಲಿನಲ್ಲಿ ವಿಜಾಪುರದ ಸೇನೆ ಎದುರಾಗುತ್ತದೆ. ಆ ಸೇನೆಯ ಮೇಲೆ ಏಕಾಂಗಿಯಾಗಿ ಏರಿಹೋದ ನಾಯಕನನ್ನು ಸೈನಿಕರು ಐದಾರು ಕತ್ತಿಗಳಿಂದ ಘಾಸಿಗೊಳಿಸುತ್ತಾರೆ. 'ರಣಧೀರ' ಎಂಬ ಹೆಸರು ಪಡೆದ ನಾಯಕನ ಮೈ ತುಂಬ ಗಾಯಗಳಾಗಿ ರಕ್ತ ಹರಿಯುತ್ತದೆ. ಬಿಜಾಪುರದ ಸೈನಿಕರು ನಾಯಕನ ದೇಹವನ್ನು ತಂದು ಹಳ್ಳದ ದಂಡೆಯಲ್ಲಿ ಚೆಲ್ಲಿ ಹೋಗುತ್ತಾರೆ" (ನಾ. ಡಿಸೋಜ; ೨೦೦೧; ಪು. ೪೧). ಹೀಗೆ ಶತ್ರುಗಳ ಕುತಂತ್ರಕ್ಕೆ ಒಳಗಾಗಿ ಮರಣ ಹೊಂದುತ್ತಾನೆ. ಅದುವರೆಗೂ ಗೃಹಿಣಿಯಾಗಿ ರಾಜಕಾರಣದ ಬಗ್ಗೆ ಹೆಚ್ಚು ತಿಳಿಯದಿದ್ದ ಚೆನ್ನಮ್ಮ ಈಗ ಪರಿಸ್ಥಿತಿಯನ್ನು ನಿಭಾಯಿಸಬೇಕಾಗುತ್ತದೆ. ಸೋಮಶೇಖರನಾಯಕನ ಕೊಲೆಯಾದ ನಂತರವೇ ಚೆನ್ನಮ್ಮ ರಾಜಕೀಯಕ್ಕೆ ಬರುತ್ತಾಳೆ. ನಾಯಕನಿದ್ದಾಗ ರಾಜಕಾರಣದಿಂದ ದೂರವೇ ಇರುವ ವಿವರಗಳಿವೆ. ಸೋಮಶೇಖರನಾಯಕ ಬಿಟ್ಟುಹೋದ ರಾಜ್ಯವನ್ನು, ಪ್ರಜೆಗಳನ್ನು, ಕಾರ್ಯಭಾರವನ್ನು ಎಲ್ಲರ ಸೂಚನೆಯ ಮೇರೆಗೆ ತಾನೇ ಆಡಳಿತ ನಡೆಸಲು ಮುಂದಾಗುತ್ತಾಳೆ. ಸಿಂಹಾಸನಾಕಾಂಕ್ಷಿಗಳಾದ ದೂರದ ರಾಜಬಂಧುಗಳು ರಾಜಧಾನಿಯ ಮೇಲೆ ದಂಡೆತ್ತಿ ಬರುತ್ತಾರೆ. ಹೆಣ್ಣು ರಾಜ್ಯವಾಳುವುದನ್ನು ಸಹಿಸದ ಕೆಲವು ದಂಡನಾಯಕರು ಅವರಿಗೆ ಬೆಂಬಲವಾಗುತ್ತಾರೆ. ಅವುಗಳಿಗೆಲ್ಲ ಹೆದರದೇ ಚೆನ್ನಮ್ಮ ಅವರ ಸೊಕ್ಕನ್ನು ಅಡಗಿಸುತ್ತಾಳೆ. ಆಡಳಿತ ಬಿಗು, ಸೈನ್ಯ, ಜನೋಪಯೋಗಿ ಕಾರ್ಯಗಳನ್ನು ಮಂತ್ರಿಗಳೊಡನೆ ಚರ್ಚಿಸಿ ಮುಂದುವರೆಯುತ್ತಾಳೆ. ಇವುಗಳಿಂದಾಗಿ ಚೆನ್ನಮ್ಮನ ಆಡಳಿತ ಯಶಸ್ವಿಯಾಗಿಯೂ, ಪ್ರಗತಿ ಪರವೂ ಆಗುತ್ತದೆ.

ದತ್ತು ಪುತ್ರನಾದ ಕೆಳದಿ ನೃಪಾಲ ಬಸವಪ್ಪನಾಯಕನನ್ನು ಯೋಗ್ಯ ರೀತಿಯಲ್ಲಿ ಸಾಕಿ ಸಲಹುವುದರಲ್ಲಿ ಪತಿಯ ಮರಣದ ದುಃಖವನ್ನು ಮರೆಯುತ್ತಾಳೆ. ಹತ್ತು ವರ್ಷದ ಚೂಟಿಯಾದ ಬಸವಬಾಲಕ ಮತ್ತು ಚೆನ್ನಮ್ಮಳ ನಡುವೆ ಪ್ರೀತಿಯ ಸಂಭಾಷಣೆಗಳಿವೆ. ಬಸವಪ್ಪನಾಯಕ ಎಲ್ಲಾ ವಿದ್ಯೆಗಳಲ್ಲಿ ಪರಿಣಿತನಾಗುವುದನ್ನು ನೋಡಿದ ಚೆನ್ನಮ್ಮ ಸಂತೋಷಪಡುತ್ತಿದ್ದಳು. ತನ್ನ ಪ್ರೀತಿಯ ಮಗನಿಗೆ ವೈಭವದ ಮದುವೆ ಮಾಡುತ್ತಾಳೆ. ಹಿರಿಯರು ಹಾಕಿಕೊಟ್ಟ ಮಾರ್ಗದರ್ಶನ ದಂತೆ ಚೆನ್ನಮ್ಮಾಜಿ ದಕ್ಷ ರಾಜ್ಯಭಾರ ವಹಿಸಿಕೊಂಡು ಸುಖದಿಂದ ಕಾಲ ಕಳೆಯುತ್ತಿದ್ದಳು.

ರಾಜಾರಾಮನಿಗೆ ಆಶ್ರಯ ನೀಡಿ ಭಾರತದ ಇತಿಹಾಸದಲ್ಲಿ ಚರಿತ್ರೆಯನ್ನು ನಿರ್ಮಿಸಿದ ಸಾಹಸದ ಕಥೆ ಚೆನ್ನಮ್ಮಳದಾಗಿದೆ. ಮೊಗಲರನ್ನು ಸೋಲಿಸಿದ ಕಾರಣ ಕೆಳದಿ ರಾಜ್ಯದಲ್ಲಿ ವಿಜಯೋತ್ಸವಗಳು ನಡೆದವು. ದೇವಸ್ಥಾನಗಳಲ್ಲಿ ವೈಭವದ ಪೂಜೆ, ಸಮಾರಂಭಗಳು ನಡೆದವು. 'ಎಲೆಮರೆಯ ಕಾಯಿಯಂತೆ' ಸಾಮಾನ್ಯ ಗೃಹಿಣಿಯಾಗಿದ್ದ ರಾಣಿ ರಾಜಕಾರಣಕ್ಕೆ ಬಂದ ಮೇಲೆ ಔರಂಗಜೇಬನ ಪ್ರಬಲ ಸೇನೆಯನ್ನು ಎದುರು ಹಾಕಿಕೊಂಡು ಚಾತುರ್ಯದಿಂದ ಅದನ್ನು ಸೋಲಿಸಿ ಹೊಸ ಇತಿಹಾಸ ಸೃಷ್ಟಿಸುತ್ತಾಳೆ. ಕೆಳದಿಯ ಸಾಮ್ರಾಜ್ಯಕ್ಕೆ ಗಂಡಸರ ದಿಕ್ಕಿಲ್ಲ. ಆಡಳಿತ ಮಾಡುವವಳು ವಿಧವೆ ಮಹಿಳೆ ಆಳುವ ರಾಜ್ಯವನ್ನು ಗೆಲ್ಲುವುದೇನು ಮಹಾ' ಎಂದು ನೆರೆಯ ರಾಜರು ಮಾತುಗಳನ್ನಾಡುತ್ತಿದ್ದರು. ಚೆನ್ನಮ್ಮನ ರಣಸಾಹಸ, ಕೆಳದಿ ಯುವ ನಾಯಕರ ಕೀರ್ತಿ ಪತಾಕೆಯನ್ನು ಹಿಡಿದೆತ್ತಿ ಸಾರ್ಥಕಪಡಿಸಿಕೊಂಡ ಚಿತ್ರಣವನ್ನು ಈ ಕಾದಂಬರಿ ವರ್ಣಿಸಿರುವ ರೀತಿ ಅಮೋಘವಾದುದು. ಅಲ್ಲಿಂದ ಆರಂಭವಾಗುವ ಚೆನ್ನಮ್ಮಾಳ ರಾಜಕೀಯ ಜಾಗೃತ ಪ್ರಜ್ಞೆ ವಿಶಾಲ ಹರವನ್ನು ಪಡೆಯುತ್ತದೆ. ಮಹಾರಾಣಿ ಚೆನ್ನಮ್ಮ ದತ್ತು ಪುತ್ರ ಬಸವಪ್ಪನಾಯಕನಿಗೆ ಪ್ರತಿ ಹಂತದಲ್ಲೂ ಕೆಳದಿಯ ಒಳಿತಿಗಾಗಿ ಕೊಡುವ ಸೂಕ್ತಮಾರ್ಗದರ್ಶನ, ಧೈರ್ಯ ತುಂಬುವಿಕೆ, ಪ್ರೀತಿ, ವಾತ್ಸಲ್ಯ ಇವೆಲ್ಲ ಆತನ ಸಮರ್ಥ ರಾಜಕಾರಣಕ್ಕೆ ಭದ್ರ ಬುನಾದಿಯಾಗುತ್ತದೆ.

೧೫೭ ಪುಟಗಳಿರುವ ಈ ಕಾದಂಬರಿಯಲ್ಲಿ ಸೋಮಶೇಖರನಾಯಕನ ದುರ್ಬಲತೆ, ಆದರ ಹಿಂದಿನ ವಿರೋಧಿಗಳ ಪಿತೂರಿ, ರಾಣಿ ಸಮಾಲೋಚನಾ ಸಭೆಯಲ್ಲಿ ವರ್ತಿಸುತ್ತಿದ್ದ ರೀತಿ, ಆಕೆಯ ತಂದೆಯ ವ್ಯಕ್ತಿತ್ವ, ರಾಜಗುರುಗಳ ವ್ಯಕ್ತಿತ್ವ, ಪ್ರಧಾನಿಯಾದ ಗುರು ಬಸಪ್ಪದೇವರ ಪರಮನಿಷ್ಠೆ ಹಾಗೂ ತೀಕ್ಷ್ಣ ಬುದ್ಧಿಶಕ್ತಿ, ಇಂಥ ಅನೇಕ ಸಂಗತಿಗಳು ಕಾದಂಬರಿಯಲ್ಲಿ ಸೊಗಸಾಗಿ ನಿರೂಪಿತವಾಗಿದೆ.

ಶಾಂತಿ, ಸಹನೆ, ತಾಳ್ಮೆ, ಕ್ಷೇಮಾಗುಣ, ಔದಾರ್ಯ ಗುಣಗಳಿಂದ ಸಾಮಾನ್ಯ ಗೃಹಿಣಿಯೆಂದು ಗುರುತಿಸಿಕೊಳ್ಳುವ ಚೆನ್ನಮ್ಮ ಪರಿಸ್ಥಿತಿ ಕಲಿಸಿದ ಅನುಭವದಿಂದಾಗಿ ತನ್ನ ಜೀವನದಲ್ಲಿ ಶೌರ್ಯ, ಸಾಹಸ, ದಿಟ್ಟತನಗಳನ್ನು ಹೊಂದಿ, ಸಮರ್ಥ ರಾಣಿಯಾಗಿ, ಪ್ರಜಾರಕ್ಷಕಿಯಾಗಿ, ವಾತ್ಸಲ್ಯದ ಸಾಕಾರಮೂರ್ತಿಯಾಗಿ ತನ್ನ ಜೀವನವನ್ನು ಇನ್ನೊಬ್ಬರಿಗೆ ಮಾದರಿಯಾಗುವ ರೀತಿಯಲ್ಲಿ ಹೇಗೆ ನಡೆದುಕೊಂಡಳೆಂಬುದನ್ನು ಲೇಖಕರು ಬಹಳ ಮನೋಜ್ಞವಾಗಿ ನಿರೂಪಿಸಿದ್ದಾರೆ.

ಒಟ್ಟಿನಲ್ಲಿ ಈ ಮೂರು ಕಾದಂಬರಿಗಳಲ್ಲಿ ಕೇಂದ್ರ ಪಾತ್ರವಾಗಿ ಮೂಡಿಬಂದ ಕೆಳದಿಯ ಚೆನ್ನಮ್ಮಳ ಜೀವನ ಇತರರಿಗೆ ಆದರ್ಶವಾದದ್ದು. ಚೆನ್ನಮ್ಮ ಐತಿಹಾಸಿಕ ಪಾತ್ರವಾಗಿರುವುದರಿಂದ ಎಲ್ಲ ಕಾದಂಬರಿಗಳಲ್ಲಿ ಆಕೆಯ ಪಾತ್ರಸೃಷ್ಟಿಯಲ್ಲಿ ಸಾಮ್ಯತೆ ಕಂಡುಬರುತ್ತದೆ.

ಪ್ರಪ್ರಥಮ ವೀರಶೈವ ರಾಣಿಯಾಗಿ ಕೆಳದಿ ಸಾಮ್ರಾಜ್ಯಕ್ಕೆ ಭದ್ರವಾದ ತಳಹದಿ ಹಾಕಿಕೊಟ್ಟ ರಾಜಕಾರಣಿ. ಮಹಿಳೆಯರು ಮನಸ್ಸು ಮಾಡಿದರೆ ಬದುಕಿನಲ್ಲಿ ಏನೆಲ್ಲವನ್ನು ಸಾಧಿಸಬಲ್ಲರು ಎಂಬುದನ್ನು ಲೋಕಕ್ಕೆ ತೋರಿಸಿದವಳು. ಇಂಥ ವೀರಶ್ರೀಯ ಜೀವನ ಚರಿತ್ರೆ ಚಿರಸ್ಮರಣೆಯ ವಾದುದು.

### ೪.೧.೩. ಕಲಾವಿದೆಯರು

ಒಂದು ಸಾಮ್ರಾಜ್ಯದ ಉನ್ನತಿಗೆ ಕಾರಣರಾದ ಆದರ್ಶ ರಾಣಿಯರನ್ನು ಪ್ರಧಾನವಾಗಿಟ್ಟುಕೊಂಡು ಕೆಲವು ಕಾದಂಬರಿಗಳು ರಚನೆಗೊಂಡಿವೆ. ಹೊಯ್ಸಳ ರಾಜ ಮನೆತನಕ್ಕೆ ಸಂಬಂಧಿಸಿದಂತೆ ಆ ವಂಶದಲ್ಲಿ ಪ್ರವರ್ಧಮಾನಗಳಾಗಿ ಬೆಳೆದ ವಿಷ್ಣುವರ್ಧನನ ಪಟ್ಟದರಸಿ ಶಾಂತಲದೇವಿಯನ್ನು ಕುರಿತು ಸಿ.ಕೆ. ನಾಗರಾಜರಾವ್ ಅವರ 'ಪಟ್ಟಮಹಾದೇವಿ ಶಾನ್ತಲದೇವಿ', ಕೆ.ವಿ. ಅಯ್ಯರ್ ಅವರ 'ಶಾಂತಲಾ', ಮ.ನ. ಮೂರ್ತಿ ಅವರ 'ನಾಟ್ಯರಾಣಿ ಶಾಂತಲಾ' ಸಮೇತನಹಳ್ಳಿ ರಾಮರಾಯರ 'ಸವತಿಗಂಧವಾರಣೆ' ಕಾದಂಬರಿಗಳಲ್ಲಿ ಚಿತ್ರತವಾದ ಶಾಂತಲೆಯ ವ್ಯಕ್ತಿತ್ವವನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ.

ಸಾಹಿತ್ಯ, ಸಂಗೀತ, ನೃತ್ಯ, ಶಿಲ್ಪಕಲೆಗಳಿಗೆ ಹೊಯ್ಸಳರ ಕಾಲದಲ್ಲಿ ವಿಶೇಷ ಪ್ರೋತ್ಸಾಹ ದೊರಕಿದೆ. ವಿಷ್ಣುವರ್ಧನನ ಪಟ್ಟದ ರಾಣಿಯಾದ ಶಾಂತಲೆಯ ಬಾಳನ್ನು ಕಾದಂಬರಿಕಾರರು ಬೇರೆ ಬೇರೆ ರೀತಿಯಲ್ಲಿ ಅನಾವರಣಗೊಳಿಸಿದ್ದಾರೆ. ಕಾದಂಬರಿಗಳಲ್ಲಿ ಆಗಿನ ಕಾಲದ ಕಲೆ-ಸಂಸ್ಕೃತಿ, ಶಿಲ್ಪ - ಧರ್ಮ, ಸಾಹಿತ್ಯ, ಜನಜೀವನ, ರಾಜಕೀಯ ಹೋರಾಟ, ಆರ್ಥಿಕ ಪರಿಸ್ಥಿತಿ, ಕುತಂತ್ರಗಳು, ಮಾನವೀಯ ದೌರ್ಬಲ್ಯಗಳ ತಾಂಡವ ಮೊದಲಾದವು ವಿವರವಾಗಿ ವರ್ಣನೆಯಾಗಿವೆ. ಲೌಕಿಕ ವಿಚಾರಗಳ ಜೊತೆಗೆ ಪರಾಲೌಕಿಕ ವಿಚಾರಗಳು ಹೆಣೆದುಕೊಂಡಿವೆ. ಶಾಂತಲೆಯ ಬಾಲ್ಯದಿಂದ ಸಾಯುವವರೆಗಿನ ಘಟನೆಗಳು ಸ್ಪಷ್ಟವಾಗಿ ಮೂಡಿಬಂದಿವೆ.

ನಾಲ್ಕು ಕಾದಂಬರಿಗಳಲ್ಲಿ ಕಾದಂಬರಿಕಾರರು ಶಾಂತಲೆಯ ಪಾತ್ರ ರಚನೆಯನ್ನು ಆದರ್ಶೀಕೃತವಾಗಿ, ಅಮೂಲ್ಯರತ್ನ ಹೊಳೆಯುವಂತೆ ಚಿತ್ರಿಸಿ ಅವಳ ವ್ಯಕ್ತಿತ್ವಕ್ಕೊಂದು ಮೆರಗು ನೀಡಿದ್ದಾರೆ. ಮಾರಸಿಂಗಮಯ್ಯ ಇವಳ ತಂದೆ, ಮಾಚಿಕಬ್ಬೆ ತಾಯಿ. ಶೈವ ಮತೀಯನಾದ ತಂದೆ ಜೈನ ಮತೀಯಳಾದ ತಾಯಿಗೆ ಧರ್ಮೇಶ್ವರನ ವರಪ್ರಸಾದದಿಂದ ಏಕಮಾತ್ರ ಪುತ್ರಿಯಾಗಿ ಜನಿಸಿದಳು. ಶಾಂತಲೆ ನಾಡಿನ ಸಂಸ್ಕೃತಿಯ ಪರಿಪಕ್ವ ಫಲ. ಆದರ್ಶಪ್ರಾಯವಾದ ಧರ್ಮ ಸಮನ್ವಯದ ಪ್ರತೀಕವೆನಿಸಿದಳು. ವಿಷ್ಣುವರ್ಧನನ ಕೈಹಿಡಿದ ನಂತರದಲ್ಲೂ, ತನ್ನ ಬದುಕಿನುದ್ದಕ್ಕೂ ಜೈನ ಧರ್ಮ ಪರಿಪಾಲಕಳಾಗಿದ್ದಳು. ಜೈನ ಧರ್ಮದ ಇತಿಹಾಸದಲ್ಲಿ ಶಾಂತಲೆಯದು ಅದ್ವಿತೀಯ ಹೆಸರು. ಜೈನ ಧರ್ಮದ ಕೀರ್ತಿಯನ್ನು ಹತ್ತನೆಯ ಶತಮಾನದಲ್ಲಿಯೇ ಬೆಳಗಿ ಹೋದ ಅತ್ತಿಮಬ್ಬೆಯನ್ನು ಬಿಟ್ಟರೆ ಕಣ್ಮುಂದೆ ನಿಲ್ಲುವ ಇನ್ನೊಂದು ಅನುಪಮ ವ್ಯಕ್ತಿತ್ವ ಶಾಂತಲೆಯದು. ಅತ್ತಿಮಬ್ಬೆ ಧಾರ್ಮಿಕ ಕ್ಷೇತ್ರವನ್ನು ಬೆಳಗಿದ್ದರೆ, ಶಾಂತಲೆ ರಾಜಕೀಯ, ಕಲೆ, ಧಾರ್ಮಿಕ ಕ್ಷೇತ್ರಗಳಿಗೆ ತನ್ನದೇ ಆದ ಕೊಡುಗೆಯನ್ನು ನೀಡಿದ್ದಾಳೆ. 'ಮುನಿಜನವಿನೇಯ ಜನವನೀತೆ', 'ಸಮ್ಯಕ್ತ ಚೂಡಾಮಣಿ', 'ಚತುಸಮಯಸಮುದ್ದರಣಕಾರಿಣಿ' ಮೊದಲಾದ ಬಿರುದುಗಳು ಶಾಂತಲೆಯ ಜೈನ ಧರ್ಮನಿಷ್ಠೆಯ ಪ್ರತೀಕಗಳೆನಿಸಿವೆ. ಇವಳು ಶ್ರವಣಬೆಳ್ಗೊಳ ತೀರ್ಥದಲ್ಲಿ 'ಸವತಿಗಂಧವಾರಣೆ' ಬಸದಿ ನಿರ್ಮಿಸಿ ಅಲ್ಲಿ ದೇವತಾ ಪೂಜೆ ಜಿನಮುನಿಗಳ ಆಹಾರ ದಾನಕ್ಕೆ 'ಕಲ್ಕಣಿನಾಡು', ಮೊಟ್ಟೆನವಿಲೆ ಗ್ರಾಮ್ಯವನ್ನು ಗುರುಗಳಾದ ಪ್ರಭಾಚಂದ್ರ ಸಿದ್ಧಾಂತ ದೇವರಿಗೆ ಬಿಟ್ಟುಕೊಟ್ಟಳು. ಶಾಂತಲೆಯ ಅನುಪಮ ಸಾಧನೆಗಾಗಿ 'ಸಂಗೀತ ಸಂಗತ ಸರಸ್ವತಿ', 'ಸಂಗೀತ ವಿದ್ಯಾ ಸರಸ್ವತಿ', 'ವಿಚಿತ್ರ ನರ್ತನ ಪ್ರವರ್ತನ', 'ಪಾತ್ರ ಶಿಶಾಮಣಿ' ಎಂಬ ಬಿರುದುಗಳ ಸರಮಾಲೆಯೇ

ಇವಳಿಗೆ ಸಂದಿವೆ. ಶಾಂತಲೆಗೆ 'ಕುಮಾರ ಬಲ್ಲಾಳ'ನೆಂಬ ಮಗ, 'ಹರಿಯಲದೇವಿ' ಎಂಬ ಮಗಳು ಇದ್ದರೆಂದು ಶಾಸನದ ಮೂಲಕ ತಿಳಿದುಬರುತ್ತದೆ. ವೈಭವಪೂರ್ಣ ಜೀವನ ನಡೆಸಿದ ಶಾಂತಲೆಯು ಶಿವಗಂಗೆ ತೀರ್ಥದಲ್ಲಿ 'ಮುಡಿಪಿ' ಸ್ವರ್ಗಸ್ಥಳಾದಳು. ದೊರೆ ವಿಷ್ಣುವರ್ಧನನ ಬಾಳಿನಲ್ಲಿ ಹಾಲಾಗಿ ಬೆರೆತು, ನಾಡಿನ ಸಂಸ್ಕೃತಿಯ ಇತಿಹಾಸಕ್ಕೆ ತನ್ನದೇ ಆದ ಕೊಡುಗೆಯನ್ನು ನೀಡಿ ಅಜರಾಮರವಾದವಳು ಶಾಂತಲಾದೇವಿ.

ಶಾಂತಲೆಯನ್ನು ಕೇಂದ್ರವಾಗಿಟ್ಟುಕೊಂಡು ಅವಳ ಜೀವನ ಚರಿತ್ರೆಯ ಕೆಲವು ಸಂಗತಿಗಳನ್ನು ಶಾಸನಗಳು ಹೇಳುತ್ತವೆ. ಕ್ರಿ.ಶ. ೧೧೧೬ರಿಂದ ಕ್ರಿ.ಶ. ೧೧೩೧ರವರೆಗಿನ ಹದಿನಾರು ವರ್ಷಗಳ ಕಾಲಕ್ಕೆ ಸಂಬಂಧಪಟ್ಟಂತೆ ದೊರೆಯುವ ಅನೇಕ ಶಾಸನಗಳಲ್ಲಿ ಅವಳ ವಿಷಯ ವರ್ಣಿತವಾಗಿದೆ. ಕನ್ನಡ ನಾಡಿನ ಯಾವೊಬ್ಬ ಮಹಾರಾಣಿಯನ್ನು ಕುರಿತಾಗಿಯೂ ಇಷ್ಟು ಶಾಸನಗಳು ಇಲ್ಲ. ಶಾಸನಕಾರರು ಅವಳಿಗೆ ಕೊಟ್ಟಿರುವಷ್ಟು ವಿಶೇಷಣಗಳು ಯಾವ ಚಕ್ರವರ್ತಿಯ ಹೆಸರಿನೊಂದಿಗೂ ಬರುವುದಿಲ್ಲ. ಅವಳ ಹೊಗಳಿಕೆಗೆ ಮಾತುಗಳೇ ಸಾಲದೋ ಎನ್ನುವಷ್ಟು ಅವಳನ್ನು ಹೊಗಳಿದ್ದಾರೆ. ಲಭ್ಯವಿರುವ ಶಾಸನಗಳನ್ನು ಆಧಾರವಾಗಿಟ್ಟುಕೊಂಡು ಶಾಂತಲೆಯ ಜೀವನ ಚರಿತ್ರೆಯನ್ನು ಲೇಖಕರು ಚಿತ್ರಿಸಿದ್ದಾರೆ. ಶಾಂತಲೆಯಂತೆ ಕಲೆಗಾಗಿ ತನ್ನ ಜೀವನವನ್ನು ಮುಡಿಪಾಗಿಟ್ಟವಳು 'ಚಿನ್ನಸಾನಿ'. ಈಕೆಯ ಕುರಿತು ದೇವುಡು ಅವರು 'ಚಿನ್ನಾ' ಎಂಬ ಐತಿಹಾಸಿಕ ಕಾದಂಬರಿಯನ್ನು ರಚಿಸಿದ್ದಾರೆ. ರಾಜ್ಯ ರಾಜ್ಯಗಳ ನಡುವಿನ ಯುದ್ಧವನ್ನು ನಿಲ್ಲಿಸುವ ಸಲುವಾಗಿ ಈಕೆಯ ನೃತ್ಯ, ಅಭಿನಯವು ಹೇಗೆ ಉಪಯೋಗವಾಗುತ್ತದೆ ಎಂಬುದನ್ನು ಈ ಕಾದಂಬರಿಯ ಮೂಲಕ ಕಾಣಬಹುದಾಗಿದೆ.

**ಶಾಂತಲೆ**

ಶಾಂತಲೆಯನ್ನು ಕುರಿತು ರಚನೆಯಾದ ಸಿ.ಕೆ. ನಾಗರಾಜರಾವ್ ಅವರ ಪಟ್ಟಮಹಾದೇವಿ ಶಾನ್ತಲದೇವಿ ೨೧೪೭ ಪುಟಗಳ ಬೃಹತ್ ಕಾದಂಬರಿ. ಹೊಯ್ಸಳ ದೊರೆ ವಿನಯಾದಿತ್ಯ ಮತ್ತು ಆತನ ಪುತ್ರ ಎರೆಯಂಗ ಪ್ರಭು ಆತನ ಮಗ ಒಂದನೇ ಬಲ್ಲಾಳ. ಸಹೋದರ ಹಾಗೂ ಅದ್ವಿತೀಯ ಪರಾಕ್ರಮಿ ಬಿಟ್ಟಿದೇವ ಇವರ ಚರಿತ್ರೆ ಕಾದಂಬರಿಯಲ್ಲಿದ್ದರೂ, 'ಶಾಂತಲೆಯ' ಭವ್ಯ ಮನಮೋಹಕ ವ್ಯಕ್ತಿತ್ವ ಚಿತ್ರಣವೇ ಈ ಕೃತಿಯ ಮುಖ್ಯ ಆಶಯವಾಗಿದೆ. ವೀರಾಗೃಹಣಿಯಾದ ಶಾಂತಲದೇವಿ ತಾನು ಬದುಕಿದ್ದಾಗಲೇ ತನ್ನ ವಿದ್ವತ್ತು, ಜ್ಞಾನ, ಸಂಯಮದ, ಮನೋಭೂಮಿಕೆ, ಸಮದರ್ಶಿತ್ವಗಳಿಂದ ಭವ್ಯ ಮನಮೋಹಕ ವ್ಯಕ್ತಿತ್ವ ಹೊಂದಿದ್ದಳು. ಶಾಸನಗಳಲ್ಲಿ ಉಲ್ಲೇಖ ಗೊಂಡಿರುವ ಅನೇಕ ಬಿರುದುಗಳು ಶಾಂತಲೆಯ ವ್ಯಕ್ತಿತ್ವದ ಕುರುಹಾಗಿ ನಮ್ಮ ಎದುರಿಗೆ ಇವೆ.

ಕಾದಂಬರಿಯ ಮುನ್ನುಡಿಯಲ್ಲಿ "ಶಾಂತಲದೇವಿಯ ಬಾಳಿನಲ್ಲಿಯ ನಲವತ್ತು ವರ್ಷಗಳ ಕಾಲವ್ಯಾಪ್ತಿಯನ್ನು ಪಡೆದ ಶಾಂತಲದೇವಿಯ ಪರಿಪೂರ್ಣ ವ್ಯಕ್ತಿತ್ವ ನಮಗೆ ಶಿಲಾಶಾಸನ, ತಾಮ್ರಶಾಸನಗಳಿಂದ ತಿಳಿಯುತ್ತದೆ" (ನಾಗರಾಜರಾವ್ ಸಿ.ಕೆ.; ೧೯೯೭; ಪು. X) ಎಂದು ಕಾದಂಬರಿರು ಹೇಳಿದ್ದಾರೆ. ಇವುಗಳ ಆಧಾರದ ಮೇಲೆ ಕೃತಿಯನ್ನು ರಚಿಸಿದ್ದಾರೆ.

ಸಿ.ಕೆ. ನಾಗರಾಜರಾವ್ ಅವರು ಕಾದಂಬರಿ ರಚನೆಗೆ ಹೊಯ್ಸಳರ ಕಾಲಕ್ಕೆ ಸಂಬಂಧಪಟ್ಟ ಶಾಸನಗಳು, ಐತಿಹ್ಯಗಳು, ದಂತಕಥೆಗಳು, ಕಡತಗಳು, ಶಿಲ್ಪಕ್ಕೆ ಸಂಬಂಧಿಸಿದ ಸಂಗತಿಗಳು

ಇವೆಲ್ಲಾ ಆಕರಗಳ ಅಧ್ಯಯನದಿಂದ ಕಾದಂಬರಿಯನ್ನು ರಚಿಸಿದ್ದಾರೆ. ಹೀಗಾಗಿ ಕೃತಿಯಲ್ಲಿ ಇನ್ನೂರು ಶಾಸನೋಕ್ತ ಐತಿಹಾಸಿಕ ಪಾತ್ರಗಳು, ನೂರಿಪ್ಪತ್ತು ಕಲ್ಪಿತ ಪಾತ್ರಗಳು ಕಂಡುಬರುತ್ತವೆ. ಕಾದಂಬರಿಯಲ್ಲಿ ಶಾಂತಲೆಯ ಪಾತ್ರವನ್ನು ಪ್ರಮುಖವಾಗಿರಿಸಿಕೊಂಡ ಕಾರಣ ಅವಳ ಪತಿ ಬಿಟ್ಟಿದೇವನನ್ನು ಒಳಗೊಂಡಂತೆ ಉಳಿದ ಪಾತ್ರಗಳು ಗೌಣವಾಗಿ ಬಿಡುತ್ತವೆ. ಆದರೆ ಶಾಂತಲೆಯ ಪಾತ್ರ ವಾಚಕರ ಮನಸ್ಸಿನಲ್ಲಿ ಅಚ್ಚೊತ್ತಿ ನಿಲ್ಲುತ್ತದೆ. ನಲವತ್ತು ವರ್ಷಗಳ ಶಾಂತಲೆಯ ಸುಂದರ ಬದುಕಿನ ಚಿತ್ರಣವನ್ನು ಈ ಕಾದಂಬರಿಯಲ್ಲಿ ಕಾಣುತ್ತೇವೆ.

ಪಟ್ಟಮಹಾದೇವಿ ಶಾಂತಲಾದೇವಿ ಕಾದಂಬರಿಯ ಕುರಿತು ಲೇಖಕರು ಈ ರೀತಿ ಹೇಳಿದ್ದಾರೆ. “ವೈವಿಧ್ಯತೆಗಳಲ್ಲಿ ಏಕತೆಯನ್ನು ಈ ಕಾದಂಬರಿಯಲ್ಲಿ ಕಾಣಲು ಪ್ರಯತ್ನಿಸಿದ್ದೇನೆ. ನಿಜವಾದ ಮಾನವೀಯ ಮೌಲ್ಯಗಳತ್ತ ಗಮನಹರಿಸಿದ್ದೇನೆ. ಲೌಕಿಕ ವಿಚಾರಗಳ ಸೆಳೆಯಲ್ಲಿ ಪಾರಲೌಕಿಕ ವಿಚಾರಗಳು ಇದರಲ್ಲಿ ಅಂತರ್ವಾಹಿನಿಯಾಗಿ ಹರಿದಿವೆ. ಐತಿಹಾಸಿಕ ದಾಖಲೆಗಳಲ್ಲದೆ ಅನೇಕ ಸನ್ನಿವೇಶಗಳನ್ನು ಇದರಲ್ಲಿ ಕಲ್ಪಿಸಲಾಗಿದೆ (ಅದೇ; ಪು. xi-xii).

ಪಟ್ಟಮಹಾದೇವಿ ಶಾಂತಲಾದೇವಿ ಕಾದಂಬರಿ ಗಾತ್ರದಲ್ಲೂ, ಸತ್ವದಲ್ಲೂ ಕನ್ನಡ ಕಾದಂಬರಿ ಕ್ಷೇತ್ರದ ಒಂದು ಅದ್ಭುತ ಸಾಹಸದಂತಿದೆ. ಒಬ್ಬ ಮಹಿಳೆಯನ್ನು ಕುರಿತು ಬರೆದ ಕಾದಂಬರಿಗಳಲ್ಲಿಯೇ ಇದು ದೊಡ್ಡ ಕಾದಂಬರಿ. ಶಾಂತಲೆಯ ವ್ಯಕ್ತಿತ್ವ ಚಿತ್ರಣವನ್ನು ಚಿತ್ರಿಸುವುದೇ ಈ ಕೃತಿಯ ಮುಖ್ಯ ಉದ್ದೇಶ. ಈಕೆಯ ಸುಂದರ ಸುಸಂಸ್ಕೃತ ಬದುಕಿನ ಚಿತ್ರಣ ಕಾದಂಬರಿಯಲ್ಲಿ ಸೊಗಸಾಗಿ ಮೂಡಿಬಂದಿದೆ. ಬಾಲ್ಯದಿಂದ ಪ್ರಾರಂಭಗೊಂಡ ಕಾದಂಬರಿ ಅವಳ ಸಾವಿನೊಂದಿಗೆ ಮುಕ್ತಾಯವಾಗುತ್ತದೆ.

ಶಾಂತಲೆಯು ತನ್ನ ಬಹುಮುಖ ವ್ಯಕ್ತಿತ್ವದಿಂದಲೇ ಪ್ರಖ್ಯಾತಿಯನ್ನು ಹೊಂದಿದವಳು. ಕಲೆಗಾಗಿ ತನ್ನ ಜೀವನವನ್ನು ಮುಡಿಪಿಟ್ಟವಳು. ಸಾಂಸ್ಕೃತಿಕ, ಧಾರ್ಮಿಕ, ರಾಜಕೀಯ ಕ್ಷೇತ್ರಗಳಿಗೆ ತನ್ನನ್ನು ಸಕ್ರಿಯವಾಗಿ ತೊಡಗಿಸಿಕೊಂಡವಳು. ದೇವಸ್ಥಾನ ನೀಲಕಂಠೇಶ್ವರನ ದೇವಸ್ಥಾನ, ಕೇದಾರೇಶ್ವರನ ದೇವಸ್ಥಾನಗಳು, ವೀರಶೈವ ಧರ್ಮದ ಪ್ರತೀಕವಾಗಿದ್ದವು. ಸರ್ವಧರ್ಮ ಸಹಿಷ್ಣುತೆಗೆ ಮಾದರಿಯಾಗಿದ್ದವು. ಇಂಥ ಧಾರ್ಮಿಕ ಪರಿಸರದಲ್ಲಿ ಶಾಂತಲೆ ತನ್ನ ಬಾಲ್ಯವನ್ನು ಕಳೆಯುತ್ತಾಳೆ.

ವ್ಯವಸ್ಥಿತವಾದ ಜ್ಞಾನಾರ್ಜನೆಯು ಮಾನವನನ್ನು ಎಷ್ಟು ಉತ್ತಮನನ್ನಾಗಿ ಮಾಡಬಲ್ಲದೆಂಬುದಕ್ಕೆ ಶಾಂತಲೆ ಸಾಕ್ಷಿಯಾಗಿ ನಿಲ್ಲುತ್ತಾಳೆ. ಮಂಗಳಕಾರ್ಯಕ್ಕಾಗಿ ಬಲಿಪುರದಿಂದ ಸೊಸೆವೂರಿಗೆ ಬರಬೇಕಾದ ಸಂದರ್ಭದಲ್ಲಿ ಶಾಂತಲೆ ತನ್ನೊಡನೆ ಸಂಗೀತ, ನಾಟ್ಯ, ಸಾಹಿತ್ಯಗಳನ್ನು ಬೋಧಿಸುತ್ತಿದ್ದ ಬೋಧಕರನ್ನು ಜೊತೆಯಲ್ಲಿ ಕರೆತರುತ್ತಾಳೆ. ರಾಜಕುಮಾರರು ಅಧ್ಯಯನಕ್ಕಾಗಿ ಪಟ್ಟಸಾಲೆಗೆ ಹೋದಾಗ, ಅನುಮತಿ ಪಡೆದು ಅವಳು ಹೋಗುತ್ತಾಳೆ. ಪಾಠ ಕೇಳುವುದರೊಂದಿಗೆ ತನಗೆ ಸಂದೇಹ ಬಂದಾಗ ಪ್ರಶ್ನಿಸುತ್ತಾಳೆ. ತನ್ನ ಜ್ಞಾನದ ಅರಿವನ್ನು ಸಹ ಹೆಚ್ಚಿಸಿಕೊಳ್ಳುತ್ತಾಳೆ. ಶಾಂತಲೆ ಪಟ್ಟಮಹಾದೇವಿಯಾದಾಗ ಬಾಲಕಿಯರ ಶಿಕ್ಷಣಕ್ಕಾಗಿ ಯೋಜನೆಯೊಂದನ್ನು ರೂಪಿಸುತ್ತಾಳಲ್ಲದೆ, ತಾನೇ ಶಿಕ್ಷಕಿಯಾಗಿ ದುಡಿಯುತ್ತಾಳೆ. ಕಲ್ಯಾಣ ರಾಜ್ಯದಲ್ಲಿ ಸ್ತ್ರೀ ಶಿಕ್ಷಣ ಎಷ್ಟು ಅಗತ್ಯವೆಂಬುದನ್ನು ಶಾಂತಲೆಯ ಪಾತ್ರದೊಂದಿಗೆ ಈ ಪ್ರಸಂಗವನ್ನು ಲೇಖಕರು ನಿರೂಪಿಸಿದ್ದಾರೆ.

ಅರಮನೆಯಿಂದ ರೇವಿಮಯ್ಯ, ಗೊಂಕ ಎಂಬ ಇಬ್ಬರು ರಾಜಭಟರು ಹೆಗ್ಗಡೆ ಮಾರಸಿಂಗಯ್ಯನ ಕುಟುಂಬವನ್ನು ಕುಮಾರಬಲ್ಲಾಳನ ಉಪನಯನ ಸಮಾರಂಭಕ್ಕೆ ಕರೆ ಬರುವ ಕಾಲಕ್ಕೆ, ಹೆಗ್ಗಡೆಯ ಮಗಳು ಶಾಂತಲೆ ತನ್ನ ಗೆಳತಿಯರೊಂದಿಗೆ ಹೊರ ಕೈಸಾಲೆಯಲ್ಲಿ ಆಡುತ್ತಿರುವ ಸನ್ನಿವೇಶದೊಂದಿಗೆ ಶಾಂತಲೆಯ ಪಾತ್ರಚಿತ್ರಣ ಪ್ರಾರಂಭವಾಗುತ್ತದೆ. ಮಾರಸಿಂಗಮಯ್ಯ ಹಾಗೂ ಮಾಚಿಕಬ್ಬೆಯ ಮಗಳಾದ ಶಾಂತಲೆ 'ಧರ್ಮೇಶ್ವರ ದೇವನ ವರ ಕೃಪೆಯಿಂದ ಹುಟ್ಟಿ, ಬಲಿಪುರದಲ್ಲಿ ತನ್ನ ಬಾಲ್ಯವನ್ನು ಕಳೆದವಳು. ಏಳು-ಎಂಟು ವರುಷದ ಚಿಕ್ಕ ಬಾಲಕಿಯಾಗಿದ್ದ ಶಾಂತಲೆ ತನ್ನ ವಯಸ್ಸಿಗೆ ಮೀರಿದ ದಿಟ್ಟ ನಿಲುವನ್ನು ಹೊಂದಿದ್ದಳು. ಶಾಂತಲೆಯು ಮೊಟ್ಟಮೊದಲ ಬಾರಿಗೆ ಅರಮನೆಗೆ ಬಂದಾಗ ಅವಳ ನೃತ್ಯವನ್ನು ನೋಡಿದ ರಾಜಮಾತೆ ಏಚಲಾದೇವಿ ನವರತ್ನಖಚಿತ ಪದಕ ನೀಡಲು ಬಂದಾಗ "ವಿದ್ಯೆಪೂರ್ತಿ ಕಲಿತಾಗದೆ, ಗುರುದಕ್ಷಿಣೆ ಕೊಟ್ಟುದಲ್ಲದೆ, ಶಾಸ್ತ್ರೋಕ್ತವಾಗಿ ಸಾರ್ವಜನಿಕರ ಎದುರಿಗೆ ಅವರ ಅಪ್ಪಣೆ, ಆಶೀರ್ವಾದ ಪಡೆದು ಹಾಡಿದ ನಂತರ, ನೃತ್ಯಗೈದ ನಂತರ ಈ ಬಗೆಯ ಮೆಚ್ಚನ್ನು ಸ್ವೀಕರಿಸಬೇಕು" (ಅದೇ; ೩೬) ಎಂದು ನುಡಿಯುವ ಶಾಂತಲೆಯ ದಿಟ್ಟತನಕ್ಕೆ ಇದು ಒಂದು ಉತ್ತಮ ನಿದರ್ಶನವಾಗಿದೆ.

ತಂದೆ - ತಾಯಿಯರಿಗೆ ಶಾಂತಲೆ ಕುಡಿಯಾಗಿ, ಅವರ ಕಣ್ಣಾಗಿ ಬೆಳೆದು ಮುದ್ದಿನ 'ಅಮ್ಮಾಜಿ' ಆಗಿದ್ದಳು. ಅವಳ ಶಿಸ್ತು, ಸಂಯಮ, ಗಾಂಭೀರ್ಯ, ಧೈರ್ಯ, ಸೂಕ್ಷ್ಮಮತಿ ಇತ್ಯಾದಿ ಗುಣಗಳನ್ನು ಆಕೆಯಲ್ಲಿ ಕಾಣಬಹುದಾಗಿದೆ. ವಿದ್ಯೆ, ವಿನಯ, ನಡೆ-ನುಡಿಗೆಲ್ಲ ಅವಳು ಬೆಳೆದು ಬಂದ ಪರಿಸರ ಮುಖ್ಯವಾಗುತ್ತದೆ. ಬಲಿಪುರದಲ್ಲಿ ಬೌದ್ಧವಿಹಾರವು ಜ್ಞಾನ ಹಾಗೂ ಧರ್ಮದ ಪ್ರಸಾರ ಕೇಂದ್ರವಾಗಿರುವುದು. ರಾಜನಾದ ಬಿಟ್ಟಿದೇವನು ವೈಷ್ಣವ ಧರ್ಮಕ್ಕೆ ಮತಾಂತರ ಹೊಂದುತ್ತಾನಲ್ಲದೆ, ವೈಷ್ಣವ ಪಂಥದ ಲಕ್ಷ್ಮಿದೇವಿಯನ್ನು ಮದುವೆಯಾಗುತ್ತಾನೆ. ಆಕೆ ಶಾಂತಲೆಯ ಮೇಲೆ ಯಾವಾಗಲೂ ಸವತಿಮತ್ಸರವನ್ನು ತೋರುತ್ತಿದ್ದಳು. ತಪ್ಪು ಮಾಡಿದವರನ್ನು ನಯವಾಗಿ ತಿದ್ದುವ ಕಾರ್ಯದಲ್ಲಿ ಏಚಲಾದೇವಿಯಂತೆ ಶಾನ್ತಲಾದೇವಿಯೂ ಬುದ್ಧಿವಂತಳು. ರಾಣಿ ಲಕ್ಷ್ಮಿದೇವಿಯಲ್ಲಿ ಸಂದೇಹ ಮೂಡಿದೆ ಎಂಬ ಸೂಚನೆ ಪತಿಯಿಂದ ತಿಳಿದೊಡನೆಯೇ, ಉಪಾಯವಾಗಿ ಲಕ್ಷ್ಮಿಯನ್ನು ಮಂದಿರ ನಿರ್ಮಾಣದ ಸ್ಥಳಕ್ಕೆ ಕರೆದೊಯ್ದು, ಪತಿಯೊಡನೆ ಒಂದು ಪ್ರಹರಕ್ಕೂ ಹೆಚ್ಚು ಕಾಲ ಏಕಾಂತದಲ್ಲಿ ವಾಸ್ತುಶಿಲ್ಪದ ವಿವರಣೆಯಲ್ಲಿ ತಲ್ಲೀನಗೊಳಿಸಿ, ಅವಳಿಗೆ ಪತಿಯ ಸ್ವಭಾವವನ್ನು ಮನವರಿಕೆ ಮಾಡಿಸಿ, ಅವಳಲ್ಲಿ ಇದ್ದ ಅನುಮಾನವನ್ನು ಹೋಗಲಾಡಿಸುತ್ತಾಳೆ. ಅಲ್ಲದೆ ಲಕ್ಷ್ಮಿದೇವಿಗೆ ಸುಬುದ್ಧಿ ಬರಲಿ ಎಂದು ಬೆಳಗ್ಗೊಳದ ಚಿಕ್ಕ ಬೆಟ್ಟದಲ್ಲಿ 'ಶಾಂತಿನಾಥ ಬಸದಿಯನ್ನು ಕಟ್ಟಿಸಿ ಮನಸ್ಸಿಗೆ ಶಾಂತಿಯನ್ನು ತಂದುಕೊಳ್ಳುವ ಸಂದರ್ಭ ಹೃದಯಸ್ಪರ್ಶಿಯಾಗಿ ಮೂಡಿಬಂದಿದೆ.

ಶಾಂತಲೆಗೆ ಬಾಲ್ಯದಲ್ಲಿಯೇ ಧರ್ಮದ ಬಗೆಗೆ ಪೂರ್ಣ ತಿಳುವಳಿಕೆ ಇತ್ತು. ಅವಳು ಜೈನ ಧರ್ಮದವಳಾಗಿದ್ದರೂ ಕೂಡ ಅನ್ಯ ಧರ್ಮಗಳನ್ನು ಗೌರವದಿಂದ ಕಾಣುತ್ತಿದ್ದಳು. "ಎಲ್ಲ ಧರ್ಮದ ಗುರಿಯೂ ಒಂದೇ ಆದರೆ ಮಾರ್ಗ ಭಿನ್ನ; ಮಾನವ ಧರ್ಮವೆಂಬುದು ಎಲ್ಲ ಧರ್ಮಕ್ಕೂ ಆಧಾರ" (ಅದೇ; ಪು. ೬೮-೬೯) ಎಂದು ತಿಳಿದವಳಾಗಿದ್ದಳು. ವೈಷ್ಣವ ದೇವಸ್ಥಾನದ ನಿರ್ಮಾಣ ಕಾರ್ಯದಲ್ಲಿ ಕಾರ್ಯಶುದ್ಧಿಗಾಗಿ ಆಸಕ್ತಿಯಿಂದ ಸೇವೆಗೈದಳು. ಚೆನ್ನಕೇಶವಮೂರ್ತಿ

ಸ್ಥಾಪನೆಯ ಸಂದರ್ಭದಲ್ಲಿ ನೃತ್ಯಸೇವೆ, ಸಂಗೀತ ಸೇವೆಗೈದಳು. ಅನೇಕ ದೇವಾಲಯಗಳಿಗೆ ದಾನ - ಧರ್ಮವನ್ನು ಮಾಡಿದ ಸನ್ನಿವೇಶ ಕಾದಂಬರಿಯಲ್ಲಿ ಬಹು ಸೊಗಸಾಗಿ ಮೂಡಿಬಂದಿದೆ.

ಪಟ್ಟಮಹಾದೇವಿ ಶಾಂತಲಾದೇವಿ ಕಾದಂಬರಿಯಲ್ಲಿ ಶಾಂತಲೆಗೆ ಇದ್ದ ಬಿರುದುಗಳನ್ನು ದೃಷ್ಟಿಯಲ್ಲಿಟ್ಟುಕೊಂಡೇ ಅವಳ ಭವ್ಯ "ಕಲಾ ಜೀವನವನ್ನು ಶಿಲ್ಪಕಾರನೊಬ್ಬ ತದೇಕಚಿತ್ತನಾಗಿ ಸುಂದರ ಮೂರ್ತಿಯೊಂದನ್ನು ಕಟೆದಂತೆ ಶಾಂತಲೆಯ ಕಲಾ ಜೀವವನ್ನು ಕಂಡರಿಸಿದ್ದಾನೆ'. ಕಲೆ ಸುಲಭವಾಗಿ ಒಲಿಯುವುದಿಲ್ಲ. ಕಠಿಣ ಪರಿಶ್ರಮ ಪಡಬೇಕಾಗುತ್ತದೆ. ಶಾಂತಲೆ ಬಾಲ್ಯದಿಂದಲೂ ಕಲೆಯ ಆರಾಧಕಿ ಮತ್ತು ಸಾಧಕಿ. ಏಳು-ಎಂಟು ವರ್ಷದವಳಿದ್ದಾಗಲೇ ನೃತ್ಯ, ಸಂಗೀತ, ಶಿಲ್ಪಶಾಸ್ತ್ರ ಕಲೆಗಳಲ್ಲಿ ತನ್ನನ್ನು ತೊಡಗಿಸಿಕೊಂಡು ಬಂದಿದ್ದಳು. ಮದುವೆಯಾದ ನಂತರದಲ್ಲೂ ಕಲಾ ಜೀವನಕ್ಕೆ ತನ್ನನ್ನು ತಾನು ಮೀಸಲಾಗಿಸಿಕೊಂಡಿದ್ದಳು. ಇದಕ್ಕೆ ನಿದರ್ಶನ ಮೊಟ್ಟಮೊದಲ ಬಾರಿಗೆ ಅರಮನೆಗೆ ಮಂಗಳಕಾರ್ಯಕ್ಕೆ ಬಂದಿದ್ದ ಶಾಂತಲೆ ದಿಟ್ಟತನದಿಂದ ನಿರ್ಭಯವಾಗಿ ನೃತ್ಯ ಪ್ರದರ್ಶಿಸಿ ಎಲ್ಲರ ಮನಸೆಳೆದಿದ್ದನ್ನು ಕಾಣಬಹುದು.

ಶಿಲ್ಪ, ಸಂಗೀತ, ನೃತ್ಯಗಳಲ್ಲಿ ಶಾಂತಲೆ ಪಾರಂಗತಳಾಗಿದ್ದಳು ಎನ್ನುವುದಕ್ಕೆ ಶಾಂತಲೆ ಧರಿಸಿದ ಬಿರುದುಗಳೇ ಸಾಕ್ಷಿಯಾಗಿ ನಿಂತಿವೆ. ಈಕೆಯ ಮೇಲ್ವಿಚಾರಣೆಯಲ್ಲಿಯೇ ರೂಪುಗೊಂಡ ಬೇಲೂರಿನ ಚೆನ್ನಕೇಶವ ದೇವಾಲಯ. ಆದ್ದರಿಂದಲೇ ಅವಳು 'ಪಂಚಲಕಾರ ಪಂಚರತ್ನಯುಕ್ತ' ಎನ್ನಿಸಿಕೊಂಡಳು. ರಾಜನೊಂದಿಗೆ ಯುದ್ಧರಂಗಕ್ಕೆ ಹೋಗುತ್ತಿದ್ದಳು. ಮುಂದೆ ರಾಜ ಹೆಚ್ಚು ಹೆಚ್ಚಾಗಿ ಯುದ್ಧದಲ್ಲೇ ನಿರತನಾದಾಗ ರಾಜ್ಯಾಡಳಿತವನ್ನೆಲ್ಲ ಹೆಚ್ಚು ಕಡಿಮೆ ಶಾಂತಲೆಯೇ ನಿರ್ವಹಿಸುತ್ತಿದ್ದಳು. ನ್ಯಾಯ ವಿಚಾರಣೆಯಲ್ಲಿ, ಆಡಳಿತ ಸಂಬಂಧದಲ್ಲಿ ಅವಳು ಕೈಗೊಳ್ಳುತ್ತಿದ್ದ ತೀರ್ಮಾನಗಳಿಂದಾಗಿ ಅವಳಿಗೆ 'ವಿವೇಕೈಕ ಬೃಹಸ್ಪತಿ', 'ಪ್ರತ್ಯುತ್ಪನ್ನವಾಚಸ್ಪತಿ' ಎನ್ನಿಸಿಕೊಂಡಳು. ಸ್ವತಃ ಜೈನ ಮತದಲ್ಲಿ ನಂಬಿಕೆಯುಳ್ಳವಳಾದರೂ ವೈಷ್ಣವ ದೇವಾಲಯಗಳನ್ನು, ಹಳೆಬೀಡಿನ ಶೈವ ದೇವಾಲಯವನ್ನು ನಿರ್ಮಿಸಿದಳು. ಜೊತೆಗೆ ಬೌದ್ಧ ಧರ್ಮಕ್ಕೂ ವಿಶೇಷವಾಗಿ ಆಶ್ರಯ ಕೊಟ್ಟಳು. ಹೀಗಾಗಿ 'ಚತುಸ್ಸಮಯ ಸಮುದ್ದರಣ ಕಾರಣಿ' ಎನಿಸಿಕೊಂಡಳು. 'ಸಕಳ ಕಾರ್ಯೋದ್ಯೋಗದೊಳ್ ಮಂತ್ರ ದೇವತೆ' ಎಂಬ ಬಿರುದಿಗೆ ತಕ್ಕಂತೆ ಬಿಟ್ಟಿದೇವನ ಪ್ರತಿಯೊಂದು ರಾಜ್ಯಕಾರ್ಯದ ಆರಂಭದಲ್ಲಿ ನಡೆಯುವ ಮಂತ್ರಾಲೋಚನಾ ಸಭೆಗಳಲ್ಲಿ ಪಟ್ಟಮಹಾದೇವಿಯಾಗಿ ಶಾಂತಲೆ ಭಾಗವಹಿಸಿ, ಯೋಗ್ಯ ರೀತಿಯಲ್ಲಿ ಸಾಧನೆಯನ್ನು ನಡೆಸಿ, ಸೂಕ್ತ ಮಾರ್ಗದರ್ಶನವನ್ನು ನೀಡುತ್ತಿದ್ದಳು. ಮೇಲಾಪುರಿಯ ಶ್ರೀ ಚೆನ್ನಕೇಶವ ದೇವಾಲಯ ಹಾಗೂ ದೋರಸಮುದ್ರದ ಯವಳ ಶಿವಾಲಯದ ನಿರ್ಮಾಣದಲ್ಲಿ ತನ್ನನ್ನು ಸಂಪೂರ್ಣವಾಗಿ ತೊಡಗಿಸಿಕೊಳ್ಳುವ ಶಾಸ್ತಲದೇವಿಗೆ 'ಸಕಳ ಸಮಯ ರಕ್ಷಾಣಮಣಿ' ಎಂಬ ಬಿರುದನ್ನು ಪಡೆದಿದ್ದಳು. ಇವು ಈಕೆಯ ಶ್ರೇಷ್ಠಮಟ್ಟದ ವಾಸ್ತುಶಿಲ್ಪದ ಆಸಕ್ತಿಗೆ ನಿದರ್ಶನಗಳಾಗಿವೆ.

ಬಿಟ್ಟಿದೇವ - ಶಾಂತಲೆಯರ ಏಕಮಾತ್ರ ಪುತ್ರಿಯಾದ ಹರಿಯಲದೇವಿ ಒಮ್ಮೆ ಅನಾರೋಗ್ಯ ಪೀಡಿತಳಾಗುತ್ತಾಳೆ. ಯಾವ ಔಷಧೋಪಚಾರಗಳಿಂದ ಗುಣವಾಗದೇ ಹೋದಾಗ ವೈಷ್ಣವ ಗುರು ಶ್ರೀರಾಮಾನುಜಾಚಾರ್ಯರು ರಾಜಕುಮಾರಿಯ ರೋಗವನ್ನು ಗುಣಪಡಿಸುತ್ತಾರೆ. ಮಗಳು ಗುಣ ಹೊಂದಿದ್ದನ್ನು ಕಂಡ ಬಿಟ್ಟಿದೇವ ಉತ್ಸಾಹಭರದಲ್ಲಿ ಶ್ರೀರಾಮನುಜಾಚಾರ್ಯರ ಶಿಷ್ಯನಾಗಿ

ವೈಷ್ಣವ ಮತವನ್ನು ಸ್ವೀಕರಿಸುವುದಾಗಿ ಪ್ರಕಟಪಡಿಸುತ್ತಾನೆ. ರಾಜನ ಮತಾಂತರದ ದೆಸೆಯಿಂದ ಬಹು ಶ್ರಮದಿಂದ ಕಟ್ಟಿದ ನಾಡಿನ ಒಗ್ಗಟ್ಟು ಹಾಳಾಗದಂತೆ ರಕ್ಷಿಸಿಕೊಳ್ಳಲು ಪಟ್ಟಮಹಾದೇವಿ ಹೆಣಗುವ ಪರಿಯನ್ನು ಕಾಣಬಹುದು. ಅಂತಃಪುರದ ಮೇಲೆ, ರಾಜ್ಯದ ಮೇಲೆ ಯಾವ ಪರಿಣಾಮ ಬೀರಬಹುದೆಂಬುದನ್ನು ತಿಳಿದ ಶಾಂತಲೆಯು ಜಾಣ್ಮೆಯಿಂದ ಪರಿಸ್ಥಿತಿಯನ್ನು ನಿಯಂತ್ರಿಸುವ ಚಿತ್ರಣವು ಬಹಳ ತರ್ಕಬದ್ಧವಾಗಿದೆ.

"ಅರಸ ಮತಾಂತರಗೊಳ್ಳುವ ವಿಚಾರ ಜನತೆಗೆ ತಿಳಿದರೆ ಅವರಲ್ಲಿ ಅಪನಂಬಿಕೆವುಂಟಾಗುತ್ತದೆ. ಮಹಾರಾಜರು ಇನ್ನು ಮುಂದೆ ಅಂಕಿತ ಹಾಕುವಾಗ "ವಿಷ್ಣುವರ್ಧನನೆಂದು ಅಂಕಿತ ಹಾಕಬೇಕು, ಆ ಹೆಸರು ಆ ಚಂದ್ರಾರ್ಕವಾಗಿ ಇರಬೇಕು" (ಅದೇ; ಪು. ೬೮-೬೯) ಎನ್ನುವಲ್ಲಿ ವೈಯಕ್ತಿಕ ಜೀವನಕ್ಕಾಗಿ ಒಂದು ಧರ್ಮವನ್ನು ಸಾಮಾಜಿಕ ಹಾಗೂ ಆಡಳಿತಕ್ಕಾಗಿ ಇನ್ನೊಂದು ಧರ್ಮವನ್ನು ಅನುಸರಿಸಿರುವುದು ಕಂಡುಬರುತ್ತದೆ. ಹೀಗೆ ಕಾದಂಬರಿಯಲ್ಲಿ ಧರ್ಮಾಂತರದ ಗೊಂದಲ ತುಂಬಾ ಚರ್ಚೆಗೆ ಒಳಪಟ್ಟು, ಮತಾಂತರ ಎನ್ನುವುದು ವೈಯಕ್ತಿಕ ವಿಷಯ; 'ಪತಿ ಮತಾಂತರಗೊಂಡರೆ ಪತ್ನಿಯೂ ಮತಾಂತರಗೊಳ್ಳಬೇಕಿಲ್ಲ' ಎಂಬ ಇತ್ಯರ್ಥಕ್ಕೆ ಬಂದು ಬಿಟ್ಟಿದೇವನ ಪಟ್ಟದರಸಿ ಅಲ್ಲದೆ ಉಳಿದ ರಾಣಿಯರೂ ತಾವು ಆಚರಿಸಿಕೊಂಡು ಬಂದ ಧರ್ಮದಲ್ಲಿಯೇ ಉಳಿಯುತ್ತಾರೆ. ಶಾಂತಲೆಯು ಎಲ್ಲ ಧರ್ಮಗಳಿಗೂ ದಾನ - ದತ್ತಿಯನ್ನು ನೀಡುತ್ತಾಳೆ.

"ಸಂಪತ್ತು ಹೋದರೆ ಮತ್ತೆ ಗಳಿಸಬಹುದು, ರಾಜ್ಯ ಕಳೆದುಕೊಂಡರೆ ಮತ್ತೆ ಮರಳಿ ರಾಜ್ಯ ಪಡೆಯಬಹುದು. ಆದರೆ ಕಳೆದುಹೋದ ಸಮಯವನ್ನು ತುಂಬುವುದಕ್ಕೆ ಸಾಧ್ಯವೇ ಇಲ್ಲ" (ಅದೇ; ಪು. ೧೫೫) ಎಂಬ ಉಲ್ಲೇಖವು ಪ್ರಸ್ತುತ ಸಂದರ್ಭದಲ್ಲೂ ಮುಖ್ಯವಾಗುತ್ತದೆ.

ಶಾಂತಲೆಗೆ ಬಾಲ್ಯದಲ್ಲಿ ಸಂಗೀತ, ನೃತ್ಯ, ಸಾಹಿತ್ಯದ ಪಾಠ ಕ್ರಮಗಳ ಜೊತೆಗೆ ಕುದುರೆ ಸವಾರಿ, ಕತ್ತಿವರಸೆ, ಬಿಲ್ಲು ಬಾಣಗಳ ಸಮರಾಭ್ಯಾಸಗಳ ಶಿಕ್ಷಣವನ್ನು ನೀಡಿ ಅವಳ ವ್ಯಕ್ತಿತ್ವವನ್ನು ಪ್ರಭಾವಶಾಲಿಯಾಗಿ ರೂಪಿಸಲಾಗಿದೆ. ಶಾಂತಲೆ ವೀರಗಚ್ಚೆ ಹಾಕಿ ಕುದುರೆ ಸವಾರಿ ಮಾಡುವುದನ್ನು ನೋಡಿದ ರಾಜಭಟ ರೇವಿಮಯ್ಯ ಆಶ್ಚರ್ಯಪಟ್ಟು ಅರಮನೆಯಲ್ಲಿ ಕುದುರೆಯ ಬಳಿ ಸುಳಿಯಲು ಅಂಜುವ ರಾಜಕುಮಾರರು ಎಲ್ಲಿ? ಒಬ್ಬ ಹೆಗ್ಗಡೆಯ ಮನೆಯಲ್ಲಿ ಧೈರ್ಯೋತ್ಸಾಹಗಳ ಖಣಿಯೆನಿಸುವ ಈ ಪುಟಾಣಿ ಹೆಣ್ಣು ಎಲ್ಲಿ ಎಂದು ಚಕಿತನಾಗುತ್ತಾನೆ. ಶಾಂತಲಾ ಕುದುರೆ ಸವಾರಿ ಮಾಡುವ ವೈಖರಿ, ಅಸ್ತ್ರ ಹಿಡಿದು ಹೋರಾಡಬೇಕೆಂಬ ಅವಳ ಬಯಕೆ ನೋಡಿದರೆ ಸಾಮಾನ್ಯ ಹೆಗ್ಗಡೆಯ ಮನೆಯಲ್ಲಿ ಏಕೆ ಹುಟ್ಟಿದಳು ಎಂಬಂತೆ ಇತ್ತು. ಶಾಂತಲೆಯ ಶೈಕ್ಷಣಿಕ ಜೀವನವು ಸಾಮಾನ್ಯರಿಗಿಂತ ವಿಭಿನ್ನವಾಗಿ ರೂಪುಗೊಳ್ಳುತ್ತಿತ್ತು. ಅಲ್ಲದೆ ಅರಮನೆಯ ಸೊಸೆಯಾಗಲು ಯೋಗ್ಯವಾಗುವಂತೆ ಅವಳ ವ್ಯಕ್ತಿತ್ವ ರೂಪುಗೊಳ್ಳುತ್ತಿತ್ತು. ಇದಕ್ಕೆ ಕಾರಣ ಅವಳು ಬೆಳೆದ ಪರಿಸರ, ಪರಿವಾರ, ಅರಮನೆಯ ನಿಕಟ ಸಂಪರ್ಕ ಜೊತೆಗೆ ಗುರುಗಳ ಮಾರ್ಗದರ್ಶನ ಸಿಕ್ಕಿದ್ದರಿಂದ ಶಾಂತಲೆಯ ವ್ಯಕ್ತಿತ್ವ ಉನ್ನತ ಮಟ್ಟದ್ದಾಗಿರುವಂತೆ ಚಿತ್ರಿತವಾಗಿದೆ.

ಶಾಂತಲೆಯ ದಾಂಪತ್ಯ ಹಾಲುಜೇನಿನಂತಹದು. ಇವಳು ಗಂಡನಿಗೆ ಸಕಲ ರೀತಿಯಲ್ಲಿ ಸಹಾಯಕಳಾಗಿದ್ದಳು. ರಾಜಮನೆತನಕ್ಕೆ ಸೊಸೆಯಾಗಿ, ವಿಷ್ಣುವರ್ಧನನ ಪಟ್ಟದ ರಾಣಿಯಾಗಿ,

ತಾಯಿಯಾಗಿ, ಸಂಸಾರದ ಹಿತಕ್ಕಾಗಿ ತ್ಯಾಗಿಯಾಗಿದ್ದಳು. ಆದರ್ಶ ಗೃಹಿಣಿಯಾದ ಶಾಂತಲಾದೇವಿ ಎಲ್ಲವನ್ನು ಸೂಕ್ಷ್ಮವಾಗಿ ಗ್ರಹಿಸುತ್ತಿದ್ದಳು, ಎಲ್ಲರನ್ನು ಪ್ರೀತಿಸುತ್ತಿದ್ದಳು. ತನ್ನ ಕುಟುಂಬದ ಏಕತೆಗಾಗಿ ಮಾತ್ರವಲ್ಲ ಒಡೆದ ಕುಟುಂಬಗಳನ್ನು ಸರಿಪಡಿಸುವಲ್ಲಿ ಪರಿಶ್ರಮಪಡುವವಳಾಗಿದ್ದಳು. ಹೀಗೆ ಶಾಂತಲೆಯ ದಾಂಪತ್ಯ ಜೀವನ ಕಾದಂಬರಿಯಲ್ಲಿ ಮಾರ್ಮಿಕವಾಗಿ ಮೂಡಿಬಂದಿದೆ.

ಬಿಟ್ಟಿದೇವ ದೊಡ್ಡ ರಾಜ್ಯವೊಂದರ ಮಹಾರಾಜನಾಗಿದ್ದರಿಂದ ಅನೇಕ ಜನ ರಾಜಕುಮಾರಿಯರ ಗಮನ ಇವನ ಕಡೆ ಹರಿಯಿತು. ಹೀಗೆ ರಾಜನಿಂದ ಆಕರ್ಷಿತರಾದವರಲ್ಲಿ ಪಲ್ಲವ ರಾಜಕುಮಾರಿ ಬಮ್ಮಲೆಯೂ ಒಬ್ಬಳು. ಅಶ್ವವಿದ್ಯಾ ಪಾರಂಗತಳಾದ ಇವಳು ಮದುವೆಯಾದರೆ ಬಿಟ್ಟಿದೇವನನ್ನೇ ಆಗುತ್ತೇನೆ. ಇಲ್ಲದಿದ್ದರೆ ಮದುವೆಯೇ ಬೇಡ ಎಂದು ಹಠ ಹಿಡಿಯುತ್ತಾಳೆ. ಸವತಿಯರೇ ಬೇಡ ಎನ್ನುವಂತಹ ಪರಿಸ್ಥಿತಿಯಲ್ಲಿ ಶಾಂತಲೆಯೇ ಬಿಟ್ಟದೇವನನ್ನು ಮದುವೆಗೆ ಒಪ್ಪಿಸುತ್ತಾಳೆ. ಬಮ್ಮಲಾದೇವಿಯನ್ನು ನೆರಳಿನಂತೆ ಅನುಸರಿಸುತ್ತಿದ್ದ ರಾಜಲೆಯನ್ನು ಸಹ ರಾಜ ವಿವಾಹವಾಗುತ್ತಾನೆ. ಕಾದಂಬರಿಯಲ್ಲಿ ಬಿಟ್ಟಿದೇವ ಐದು ಜನ ಕನ್ಯೆಯರನ್ನು ಒಟ್ಟಿಗೆ ಮದುವೆಯಾಗುವುದಿಲ್ಲ. ಇದು ಲೇಖಕರು ಮಾಡಿಕೊಂಡಿರುವ ಬದಲಾವಣೆಯಾಗಿದೆ.

ಶಾಂತಲೆ ತನ್ನ ಅತ್ತೆಗೆ ಕೊಟ್ಟ ಮಾತಿನಂತೆ ಅವಳೆಂದೂ ಬಿಟ್ಟಿದೇವನ ಮನಸ್ಸಿನ ವಿರುದ್ಧವಾಗಿ ನಡೆದುಕೊಂಡು ಅವನ ಮನಸ್ಸನ್ನು ನೋಯಿಸಲಿಲ್ಲ. ಅವನ ಇಚ್ಛೆಗಳನ್ನು ಸೂಕ್ಷ್ಮವಾಗಿ ಅರಿತು ಅದನ್ನು ಪೂರೈಸುತ್ತಿದ್ದಳು. ಅವಳೆಂಥ ಮನೋವೈಶಾಲ್ಯದವಳೆಂದರೆ ತನ್ನ ಪತಿಯ ಬಹುಪತ್ನಿತ್ವಕ್ಕೆ ಮನಃಪೂರ್ವಕವಾಗಿ ಒಪ್ಪಿಗೆ ನೀಡುತ್ತಾಳೆ. ಪಲ್ಲವ ರಾಜಕುಮಾರಿಯರಾದ 'ಬಮ್ಮಲದೇವಿ' ರಾಜಲಾದೇವಿಯರನ್ನು ರಾಜ್ಯದ ಹಿತದೃಷ್ಟಿಯಿಂದ ಬಿಟ್ಟಿದೇವನೊಂದಿಗೆ ವಿವಾಹ ಮಾಡಲು ಮುಂದಾದಾಗ ಮೇಲ್ನೋಟಕ್ಕೆ ನಿರಾಕರಿಸಿದಂತೆ ಕಂಡರೂ ಅವನ ಮನಸ್ಸನ್ನು ಸೂಕ್ಷ್ಮವಾಗಿ ಅರಿತ ಶಾಂತಲಾ ರಾಜಕೀಯ ಸುಭದ್ರತೆಯ ಕಾರಣ ಮುಂದಿಟ್ಟು ಆತನೊಂದಿಗೆ ವಿವಾಹ ಮಾಡಿಸುತ್ತಾಳೆ. ದಾಂಪತ್ಯ ಬರೀ ಆಕರ್ಷಣೆ ಅಲ್ಲ. ಬಾಲ್ಯದಲ್ಲಿ ಪರಸ್ಪರ ಅರಿತು ಬೆಳೆದ ಅವರಿಬ್ಬರ ಪ್ರೇಮ ನಿಶ್ಚಲವಾದುದು. ತನ್ನ ಸವತಿಯರನ್ನು ಸಹೋದರಿಯಂತೆ ಕಾಣುತ್ತಾಳೆ. ಬಿಟ್ಟಿದೇವನನ್ನು ಬಿಟ್ಟುಕೊಟ್ಟಳು. ತನ್ನನ್ನು ಕಲೆಗಾಗಿ, ರಾಜ್ಯದ ಹಿತಕ್ಕಾಗಿ, ಸ್ತ್ರೀ ಶಿಕ್ಷಣಕ್ಕಾಗಿ ಸಮರ್ಪಿಸಿಕೊಂಡಳು. ಶಾಂತಲೆಯೂ ಏಚಲಾದೇವಿಯಂತೆ ಆದರ್ಶಮಾತೆಯೂ ವಾತ್ಸಲ್ಯಮಯಿ ತಾಯಿಯೂ, ಉದಯಾದಿತ್ಯನ ಹಿರಿಯ ಅಕ್ಕಳಾಗಿಯೂ, ತಬ್ಬಲಿಯಾದ ಬಿಟ್ಟಿಗನಿಗೆ ತಾಯಿ ಯಾಗಿಯೂ ಆರೈಕೆ ಮಾಡಿದಳು. ಅಲ್ಲದೇ ತನ್ನ ಮಕ್ಕಳಾದ ವಿನಯಾದಿತ್ಯ ಮತ್ತು ಹರಿಯಾಲದೇವಿಯನ್ನು ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದಳು. ತನ್ನ ಜೀವನದ ಕೊನೆಯುಸಿರಿರು ವವರೆಗೂ ಯಾರಿಗೂ ತೊಂದರೆ ಕೊಡದೆ ಎಲ್ಲರ ಪ್ರೀತಿಗೆ ಪಾತ್ರಳಾಗಿದ್ದಳು.

ಕೆ.ವಿ. ಅಯ್ಯರ್ ಅವರ 'ಶಾಂತಲಾ' ಕಾದಂಬರಿಯು ಶಾಂತಲದೇವಿಯನ್ನು ಕುರಿತ ಕನ್ನಡದಲ್ಲಿಯೇ ಅಪೂರ್ವವಾದ ಐತಿಹಾಸಿಕ ಕಾದಂಬರಿಯಾಗಿದೆ. ಇತಿಹಾಸ ಘಟನೆಗಳಿಗೆ ಲೋಪ ಬಾರದಂತೆ, ಆ ಕಾಲದ ಜೀವನವನ್ನು ಹೃದಯಂಗಮವಾಗಿ ಚಿತ್ರಿಸಿದ್ದಾರೆ. ವಿಷ್ಣುವರ್ಧನನ ಕಾಲದ ಜೀವನ, ದೈವಭಕ್ತಿಯೂ, ಕಲಾಪ್ರೇಮಗಳು ಈ ಕಾದಂಬರಿಯ ರಚನೆಯಲ್ಲಿ ಪುನರ್ಜನ್ಮ ಪಡೆದಿವೆ. ಸಾಮ್ರಾಜ್ಯ ಮತ್ತು ಸಂಸಾರದ ಏಳುಬೀಳುಗಳ ನಡುವೆ ರಾಜಮಾತೆಯ, ರಾಜ

ಪತ್ನಿಯರ ಗೃಹಜೀವನದ ಸಂಕಟ ಸಮಸ್ಯೆಗಳೂ, ಸುಖ - ದುಃಖಗಳೂ, ಆಶೆ - ನಿರಾಶೆಗಳು ಕಾದಂಬರಿಯಲ್ಲಿ ಚಿತ್ರಿತಗೊಂಡಿವೆ.

ಶಾಂತಲೆಯ ಬಾಲ್ಯ, ವಿದ್ಯಾಭ್ಯಾಸ, ಸಂಸ್ಕೃತಿ, ಶಿಕ್ಷಣ, ಶಾರದಾ ಪೂಜೆಯಲ್ಲಿ ಅವಳ ಅತೀವ ಆಸಕ್ತಿ, ಎಳೆಯ ವಯಸ್ಸಿನಿಂದಲೇ ಅವಳಲ್ಲಿ ಮೂಡಿದ ಸರ್ವಸಹಿಷ್ಣು ಮನೋಭಾವ ಮುಂತಾದವುಗಳ ಸ್ಪಷ್ಟ ಚಿತ್ರಣವಿದೆ. ಹೆಗ್ಗಡೆಯ ಮಗಳಾಗಿ ಕಾಣಿಸಿಕೊಂಡ ಶಾಂತಲೆ ಪಟ್ಟದ ರಾಣಿಯಾಗಿ ಕ್ರಮೇಣ ಬೆಳೆದು, ಕಥೆಯ ಕೇಂದ್ರವಾಗಿ ಅವಳ ವ್ಯಕ್ತಿತ್ವ ತುಂಬಿಕೊಳ್ಳುತ್ತದೆ. ಶಾಂತಲೆ, ಲಕ್ಷ್ಮಿ ಬಾಲ್ಯದ ಗೆಳೆತಿಯರು, ಜೀವದ ಗೆಳತಿಯರು, ತಾಯಿಯಿಲ್ಲದ ಲಕ್ಷ್ಮಿಯನ್ನು ಮಾಚಿಕಬ್ಬೆ ತನ್ನ ಮಗಳು ಶಾಂತಲೆಯಂತೆ ನೋಡಿಕೊಂಡಿರುತ್ತಾಳೆ. ಹಿರಿಯರಾಣಿ ಶಾಂತಲೆಯನ್ನು ತನ್ನ ಸೊಸೆಯೆಂದು ಒಪ್ಪಿದಾಗ ಶಾಂತಲೆಯ ಅಗಲುವಿಕೆಯನ್ನು ಸಹಿಸಲಾರದ ಲಕ್ಷ್ಮಿ ಮೂರ್ಛೆ ಹೋಗುತ್ತಾಳೆ. ದೇಹವೆರಡು ಆತ್ಮ ಒಂದೇ ಎನ್ನುವ ರೀತಿಯಲ್ಲಿ ಇಬ್ಬರೂ ಒಬ್ಬರನ್ನೊಬ್ಬರು ಬಿಟ್ಟು ಇರುತ್ತಿರಲಿಲ್ಲ.

ಶಾಂತಲೆಗೆ ಏಳು - ಎಂಟನೆಯ ವಯಸ್ಸಿಗೆ ವಿದ್ಯೆ ಕಲಿಸಲು ಮಾರಸಿಂಗಮಯ್ಯ ಪ್ರಭಾಚಂದ್ರ ಸಿದ್ಧಾಂತ ದೇವರನ್ನು ಮನೆಗೆ ಕರೆತಂದು ವಿದ್ಯಾಗುರುಗಳನ್ನಾಗಿ ಮಾಡಿದರು. ಗುರುಗಳು ಶಾಂತಲೆಯ ನಡೆ, ನುಡಿ, ಗುಣ, ನಿಷ್ಠೆಗಳನ್ನು ಕಂಡು ಶಿಷ್ಯಳನ್ನಾಗಿ ಸ್ವೀಕರಿಸಿ ವಿದ್ಯಾವತಿಯನ್ನಾಗಿ ಮಾಡಿದರು. ಶಾಂತಲೆಯಲ್ಲಿದ್ದ ಗುಣವನ್ನು ಕಂಡ ಹೊಯ್ಸಳ ರಾಜಮಾತೆ ಶಾಂತಲೆಯ ಕುರಿತು "ನೀನು ಯಾರ ಮಗಳವ್ವ' ಎಂದು ಕೇಳಿದ್ದಕ್ಕೆ ಅವಳು ಮಾಚಿಕಬ್ಬೆಯರ ಮಗಳು, ನನ್ನ ಅಯ್ಯಾ ದಂಡಣಾಯಕ-ಮಾರಸಿಂಗಮಯ್ಯ ಎಂದು ಹೇಳಿದಳು. ಶಾಂತಲೆಯ ದಿಟ್ಟ ನಿಲುವನ್ನು ಕಂಡು ರಾಜಮಾತೆ ಅವರು ಶಾಂತಲೆ "ನಿನ್ನ ಮುಖ ಸೊಂಪರೆಯುತ್ತದೆ. ಪದ್ಮೆ-ಉಮೆ-ವಾಣಿ, ಈ ಮೂವರ ಕಳೆಗಳು ನಿನ್ನ ಮುಖದಲ್ಲಿವೆ. ಸೊಬಗಿನೀ ಹೊಕ್ಕ ಮನೆಯಲ್ಲಿ ಹೊನ್ನು ಉಕ್ಕಿ ಹರಿದೀತು" (ಅಯ್ಯರ್ ಕೆ.ವಿ.; ೧೯೫೫; ಪು. ೬) ಎಂದು ಹರಸುತ್ತಾರೆ. ಅಷ್ಟೇ ಅಲ್ಲದೇ ಶಾಂತಲೆಯ ವಿದ್ಯೆ, ವಿನಯ ಗುಣ, ನಡೆ-ನುಡಿ, ನೃತ್ಯವನ್ನು ನೋಡಿ ಮೆಚ್ಚಿಕೊಂಡ ಏಚಲಾದೇವಿ ಶಾಂತಲೆಯ ಗುಣಗಾನ ಮಾಡುತ್ತಾರೆ.

ಮಾರಸಿಂಗಮಯ್ಯ ಶಾಂತಲೆಯ ವಿದ್ಯಾಭ್ಯಾಸಕ್ಕೆ, ನೃತ್ಯಕ್ಕೆ, ಗಾಯನ ಅಭ್ಯಾಸಗಳಿಗೆ, ಶಾರದೆಯ ಪೂಜೆಗೆ, ಭವ್ಯವಾದ ಪೂಜಾಗೃಹವನ್ನು ಕಟ್ಟಿಸಿದ್ದನು. ಶಾಂತಲೆ ಗಾಯನ, ನರ್ತನ ಕಲೆಗಳನ್ನು ಅಭ್ಯಾಸದಿಂದ, ಕಠಿಣವಾದ ದೇಹ ಶ್ರಮದಿಂದ ಸಾಧಿಸಿಕೊಳ್ಳುತ್ತಾಳೆ. ಆತ್ಮ ಸಂತೋಷಕ್ಕಾಗಿ ಹಾಡಿ ನರ್ತಿಸುತ್ತಿದ್ದಳು.

ರುಮಾರಿ ಮಲ್ಲಿ - ತಮ್ಮ ಶಾರದಾಂಬೆಯ ವಿಗ್ರಹವನ್ನು ಕಲ್ಲಿನಲ್ಲಿ ಬಹು ಸುಂದರವಾಗಿ ಕಡೆದಿದ್ದ ಶಾರದಾದೇವಿಯ ಸನ್ನಿಧಿಯಲ್ಲಿ ಶಾಂತಲೆ ಪ್ರತಿದಿನವೂ ಧ್ಯಾನಕ್ಕೆ ಕುಳಿತುಕೊಳ್ಳುತ್ತಿದ್ದಳು. ರೂವಾರಿಗಳಾದ ದೇವೋಜ, ನಾಗೋಜ, ಪದ್ಮೋಜ, ಕೇತೋಜ, ಬಮ್ಮೋಜ ಅವರು ಸ್ವರ್ಗ, ಕೈಲಾಸ, ಅಮರಾವತಿ, ಅಲಕಾಪುರಿಗಳ ದೇವತಾ ವಿಗ್ರಹಗಳನ್ನು, ಗಂಧರ್ವರ, ವಿದ್ಯಾಧರರ, ಅಪ್ಸರೆಯರ, ಯಕ್ಷ-ಯಕ್ಷಿಯರ ವಿಗ್ರಹಗಳನ್ನು ಸುಂದರವಾಗಿ ಕೆತ್ತನೆ ಮಾಡಿದರು.

ಶಾಂತಲೆ ಲಕ್ಷ್ಮಿಯರು ಮನಸ್ಸಿನಲ್ಲಿ ಶಾರದದೇವಿಯನ್ನು ಪ್ರಾರ್ಥಿಸಿ, ವೀಣೆಯ ತಂತಿಗಳನ್ನು ಮೀಟುತ್ತಾ, ಗಾಯನವನ್ನು ಪ್ರಾರಂಭಿಸುತ್ತಾರೆ. "ವಿಘ್ನೇಶ್ವರ ಸ್ತವ, ಶಾರದಾಸ್ತವಗಳಿಂದ ಮೊದಲಿಟ್ಟು ಶಿವಸ್ತುತಿ, ವಿಷ್ಣುಸ್ತುತಿಗಳನ್ನೂ ವೈಣಿಕೆಯರು ನುಡಿಸಿದರು, ಹಾಡಿದರು. ಶ್ಲೋಕ, ವೃತ್ತ, ಗೀತೆ, ನೃತ್ಯ ಸಾಹಿತ್ಯಗಳನ್ನು ಮನೋಹರವಾಗಿ ಹಾಡಿ ನುಡಿಸಿದರು. ಸಮವಯಸ್ಸಿನ, ಅತುಳ ರೂಪ ಸಂಪತ್ತಿಯುಳ್ಳ ಗಂಧರ್ವ ಕನ್ನಿಕೆಯರಂತಿದ್ದ ಆ ಹೆಣ್ಣು ಮಕ್ಕಳು, ಅನೇಕ ವರ್ಷಗಳು ಸಹಪಾಠಿಗಳಾಗಿ ಶ್ರಮ ಸಾಧ್ಯವಾದ ವಿದ್ಯೆಯನ್ನು ಅಭ್ಯಸಿಸಿ, ದೇವದತ್ತವಾದ ಕೋಮಲ ಕಂಠಶ್ರೀಗಳನ್ನು ವೀಣಾ ಝೇಂಕೃತಿಯೊಂದಿಗೆ ಮೇಳಿಸಿ ಹಾಡಿದಾಗ ಅಂಬರದಲ್ಲಿ ದೇವತೆಗಳೂ ನಿಂತು ಕೇಳಿಯಾರು ಇನ್ನು ಮಾನವರು ನಾದ ಪರವಶರಾಗದಿರಲು ಸಾಧ್ಯವೇ! ಹಾಗೆ ಆ ಸಭೆಯಲ್ಲಿದ್ದವರನ್ನೆಲ್ಲ ಮೋಹಗೊಳಿಸಿತು. ಶಾಂತಲೆ ಲಕ್ಷ್ಮಿರ ಗಾಂಧರ್ವವಿದ್ಯೆ, ಮಕ್ಕಳಿಬ್ಬರ ಅನೇಕ ವರ್ಷಗಳ ಸಾಧನ ತಪಸ್ಸು ಒಂದು ರೂಪದಲ್ಲಿ ಅಂದು ಸಿದ್ಧಿಸಿತು" (ಅದೇ; ಪು. ೫೬). ಬಾಲ್ಯದಲ್ಲಿಯೇ ಶಾಂತಲೆ ಮತ್ತು ಲಕ್ಷ್ಮಿಯರು ಕಠಿಣ ಅಭ್ಯಾಸದಿಂದ ಕಲಿತ ಅವರ ಗಾಯನ ನೆರೆದಿದ್ದ ಜನರು ನಾದಪರವಶರಾಗುವಂತೆ ಹಾಡುತ್ತಾರೆ. ಈ ಸನ್ನಿವೇಶವನ್ನು ಲೇಖಕರು ಬಹು ಸೊಗಸಾಗಿ ವರ್ಣಿಸಿದ್ದಾರೆ.

ಶಾಂತಲಾದೇವಿ ಹವನ ಹೋಮಾದಿ ಕೈಂಕರ್ಯಗಳನ್ನು ಮುಗಿಸಿ, ಅತಿಶಯ ಶ್ರದ್ಧಾಭಕ್ತಿಗಳಿಂದ ಚೆನ್ನಕೇಶವಸ್ವಾಮಿಯ ಪ್ರತಿಷ್ಠಾಪನೆಗೈದಳು. ಶಾಂತಲೆಯ ಹೃದಯ ಆನಂದದಿಂದ ಉಕ್ಕುವುದರೊಂದಿಗೆ ಆಕೆಯಲ್ಲಿ ಭಕ್ತಿಯ ಆವೇಶವುಂಟಾಗುತ್ತದೆ. ಲಕ್ಷ್ಮಿಯನ್ನು ನೋಡಿ ವೀಣೆ ತೆಗೆದುಕೊಂಡು ಬಾ ನಾನು ಇಂದು ದೇವನಿಗಾಗಿ ನರ್ತಿಸುತ್ತೇನೆ ಎಂದು ವೀಣೆ ಮತ್ತು ಗೆಜ್ಜೆಸರಗಳನ್ನು ತರಿಸಿಕೊಳ್ಳುತ್ತಾಳೆ. ಚೆನ್ನಕೇಶವ ದೇವಸ್ಥಾನದಲ್ಲಿ ಆನಂದದಿಂದ ನರ್ತಿಸಲು ಸಕಲ ರೀತಿಯಲ್ಲಿ ತಯಾರಾಗುತ್ತಾಳೆ. ಲಕ್ಷ್ಮಿ ವೀಣೆಯ ನಿನಾದಕ್ಕೆ ತನ್ನ ಮಧುರ ಧ್ವನಿಯನ್ನು ಸೇರಿಸುತ್ತಾಳೆ. ದೇವರ ಸಮ್ಮುಖದಲ್ಲಿ, ಭಕ್ತಿಯ ತುಂಬಲು ಆವೇಶದಲ್ಲಿ ಶಾಂತಲೆಯ ಆನಂದ ನರ್ತನವನ್ನು ಮಾಡುವ ವರ್ಣನೆ ಕಾದಂಬರಿಯಲ್ಲಿ ಈ ರೀತಿಯಾಗಿ ಮೂಡಿಬಂದಿದೆ. "ಸ್ವರ್ಣಲತೆಯಂತಿರುವ ದೇವಿಯ ದೇಹ ತೂಗುತಿದೆ, ಬಳುಕುತಿದೆ. ಹಕ್ಕಿಗಿಂತ ಹಗುರವಾಗಿದೆ. ದೇವನ ಪ್ರಾತಃಪೂಜೆಗಾಗಿ ಶಾಂತಲೆ ಪುಷ್ಪೋದ್ಯಾನಕ್ಕೆ ಬಂದಿದ್ದಾಳೆ. ನವ ವಿಕಸಿತ ಕುಸುಮಗಳನ್ನು ಆಯ್ದು ಸಂಗ್ರಹಿಸುತ್ತಾಳೆ. ವಿಕಸಿಸುತ್ತಿರುವ ಕಮಲಗಳನ್ನು ಸಂಗ್ರಹಿಸುತ್ತ, ಭೃಂಗಗಳು ಬಂದು ಎರಗಿದರೆ, ತಾನೂ ಅವುಗಳಲ್ಲಿ ಒಂದು ಭೃಂಗಿಯಾಗಿ, ಹೂವಿಂದ ಹೂವಿಗೆ ಅವುಗಳೊಂದಿಗೆ ಹಾರಿ, ಹೂಗಳನ್ನು ಇತರ ದುಂಬಿಗಳು ಮುಟ್ಟದಂತೆ ನಿವಾರಿಸುತ್ತ ಮಕರಂದಪೂರ್ಣ ಸುಗಂಧಪೂರ್ಣ ಕುಸುಮಗಳನ್ನೇ ಹುಡುಕಿ ಹುಡುಕಿ ಶೇಖರಿಸುತ್ತಾಳೆ, ಶೇಖರಿಸಿ ಪುಷ್ಪಗಳನ್ನು ದೇವಾಲಯಕ್ಕೆ ತರುತ್ತಾಳೆ. ಪರಮಭಕ್ತಿಯಿಂದ ದೇವನನ್ನು ಪುಷ್ಪಗಳಿಂದ ಅರ್ಚಿಸುತ್ತಾಳೆ. ಧೂಪದೀಪವನ್ನು ಬೆಳಗುತ್ತಾಳೆ. ಆರತಿ ಬೆಳಗುತ್ತಾಳೆ, ಆನಂದ ನರ್ತನ ಮಾಡುತ್ತಾಳೆ. ಪ್ರಸನ್ನನಾಗೆಂದು ದೀನತೆಯಿಂದ ಬೇಡುತ್ತಾಳೆ. ಕಣ್ಣೀರು ಮಿಡಿದು ಬೇಡುತ್ತಾಳೆ. ತನ್ನ ಆತ್ಮವನ್ನೇ ನಿವೇದಿಸಿಕೊಳ್ಳುತ್ತಾಳೆ, ದೇವನು ಪ್ರತ್ಯಕ್ಷನಾಗುತ್ತಾನೆ. ಶಾಂತಲೆಯನ್ನು ಹರಸುತ್ತಾನೆ, ಆಕೆಯನ್ನು ತನ್ನಲ್ಲಿ ಐಕ್ಯ ಮಾಡಿಕೊಳ್ಳುತ್ತಾನೆ" (ಅದೇ; ಪು. ೧೦೦). ಶಾಂತಲೆಯ ನೃತ್ಯವನ್ನು ನೋಡಲು

ಅಲ್ಲಿ ನೆರೆದಿದ್ದ ಭಕ್ತಾದಿಗಳೂ ಇಷ್ಟು ಭಾವಪೂರ್ಣವೂ, ಸುಂದರವೂ, ಭಕ್ತಿ ಪರವಶತೆಯಿಂದ ಕೂಡಿದ್ದದಂತಹ ನೃತ್ಯವನ್ನು ತಾವು ಎಂದೂ, ತಮ್ಮ ಕಣ್ಣುಗಳಿಂದ ಎಂದು ಎಲ್ಲಿಯೂ ನೋಡಿರಲಿಲ್ಲ. ಇಂದು ಸಾರ್ಥಕವಾಯಿತು ಎಂದು ಭಾವಿಸುತ್ತಾರೆ. ಅಲ್ಲದೆ ಜನರೆಲ್ಲ 'ಉಘೇ! ಉಘೇ! ತಾಯಿ ಶಾಂತಲದೇವಿ! ಮಹಾರಾಣಿ ಉಘೇ! ನೃತ್ಯಸರಸ್ವತಿ ಉಘೇ!' ಎಂದು ಮೇರೆ ಮೀರಿದ ಹರ್ಷಾನಂದಗಳಿಂದ ಕೂಗಿದರು.

ವಿಜಯನಾರಾಯಣ ದೇವರ ಉತ್ಸವದ ಕೊನೆಯ ದಿನದಂದು ಶಾಂತಲೆ ಲಕ್ಷ್ಮಿಯರು ವೀಣೆ ನುಡಿಸಿ ಹಾಡಿದರು. ಶಾಂತಲೆ ಚೆನ್ನಕೇಶವ ದೇವರ ಪ್ರತಿಷ್ಠಾಪನೆಯಂದು ಎಷ್ಟು ಆನಂದದಿಂದ ನರ್ತಿಸಿದ್ದಳೋ ಅಷ್ಟೇ ಆನಂದ ಉತ್ಸಾಹಗಳಿಂದ ವಿಜಯನಾರಾಯಣನ ಸಮ್ಮುಖದಲ್ಲಿ ನರ್ತಿಸುತ್ತಾಳೆ. ಮಹಾಜನರೂ, ಭಗವದ್ಭಕ್ತರು ಶಾಂತಲೆ ಮತ್ತು ಲಕ್ಷ್ಮಿದೇವಿಯನ್ನು 'ನಾಟ್ಯಸರಸ್ವತಿ', 'ಗಾನಸರಸ್ವತಿ', 'ವಿದ್ಯಾಭರಣೆ', 'ಗಾನ ಕಲಾನಿಧಿ' ಎಂದೂ ಮುಕ್ತಕಂಠದಿಂದ ಹೊಗಳುತ್ತಾರೆ. ಶಾಂತಲೆ ಮತ್ತು ಲಕ್ಷ್ಮಿದೇವಿಯರು ಬಡವರಿಗೆ, ಅಂಗವಿಕಲರಿಗೆ, ಅನಾಥ ಮಕ್ಕಳಿಗೆ, ಅನ್ನದಾನ, ವಸ್ತ್ರದಾನ ದ್ರವ್ಯದಾನಗಳನ್ನು ಮಾಡುತ್ತಾರೆ. ಶಾಂತಲೆಯ ನೃತ್ಯವನ್ನು ನೋಡಿದ ಕುಶಲ ರೂವಾರಿಗಳು ಆಕೆಯ ಒಂದೊಂದು ಭಾವವನ್ನು ಆರಿಸಿಕೊಂಡು ಶಿಲಾಬಾಲಿಕೆಯನ್ನು ಕಡೆದು ದೇವಾಲಯಕ್ಕೆ ಅಲಂಕರಿಸಿದರು. ಶಾಂತಲೆಯ ಆಸೆಯಂತೆ ದ್ವಾರಮತೀಯಲ್ಲಿ ಜೋಡಿ ದೇವಾಲಯಗಳನ್ನು ನಿರ್ಮಿಸಿ ಶ್ರೀ ಮಹಾದೇವನಿಗೆ ವಿಷ್ಣುವರ್ಧನ ಅರ್ಪಿಸುತ್ತಾನೆ.

ಶಾಂತಲೆ ಸದಾ ಪತಿಹಿತವನ್ನು ಬಯಸುವವಳಾಗಿದ್ದಳು. ಅವನ ಇಚ್ಛಾನುವರ್ತಿನಿಯಾಗಿ ಅವಳ ಬಾಳನ್ನು ಹಾಲ್ಜೇನಿನ ಹೊಳೆಯಾಗಿ, ಉಲ್ಲಾಸಭರಿತವಾಗಿ ಮಾಡುತ್ತಾಳೆ. ಪತಿ ವಿಜಯ ಯಾತ್ರೆಯಲ್ಲಿ ತೊಡಗಿದ್ದಾಗ ಅರಮನೆಯಲ್ಲಿ ಶಾಂತಲೆ ರಾಜಭೋಗವನ್ನು ತ್ಯಜಿಸಿ, ಚಾಪೆಯ ಮೇಲೆ ಒಬ್ಬ ಸಾಮಾನ್ಯ ಮಹಿಳೆಯಾಗಿ ಮಲಗಿ, ಪತಿಯ ಕ್ಷೇಮಕ್ಕಾಗಿ ತಪಸ್ಸು ಮಾಡುತ್ತಾಳೆ. ಪಟ್ಟಮಹಾದೇವಿ ಎಂಬ ಅಹಂಕಾರ, ಗರ್ವ ಸ್ವಲ್ಪವೂ ಇಲ್ಲದೆ ಎಲ್ಲರ ಹಿತಕ್ಕಾಗಿ ಸರ್ವವನ್ನು ತ್ಯಾಗ ಮಾಡುವ ಮನೋಭಾವವನ್ನು ಕಾದಂಬರಿಯುದ್ದಕ್ಕೂ ಕಾಣಬಹುದು. ರಾಜಕೀಯ ಅವಶ್ಯಕತೆಗಳಿಗಾಗಿ ತನ್ನ ಪತಿಯು ಇನ್ನು ಐವರು ಹೆಂಡಿರ ಕೈಹಿಡಿಯಬೇಕಾಗಿ ಬಂದರೂ, ಶಾಂತಲೆ ಸ್ವಲ್ಪವೂ ಸವತಿಮತ್ಸರವನ್ನು ತೋರಿಸದೆ, ಅರಮನೆಯಲ್ಲಿ ಶಾಂತಿ ನೆಲೆಸುವಂತೆ ನಡೆದುಕೊಳ್ಳುತ್ತಾಳೆ.

ಶಾಂತಲೆ ಲಕ್ಷ್ಮಿಯರ ನಡುವೆ ಗಾಢವೂ, ದೈವಿಕವೂ, ಎಲ್ಲೂ ಕಂಡು ಕೇಳರಿಯದುದೂ ಆದ ಸಖ್ಯವನ್ನು ಚಿತ್ರಿಸಿದ್ದಾರೆ ಲೇಖಕರು. ಗೆಳತಿಗೆ ನೋವಾದೀತೆಂದು ಆಳುಕಿ ಮಹಾರಾಣಿ ಯಾಗುವುದೇ ಬೇಡವೆಂದು ಶಾಂತಲೆ ಒಮ್ಮೆ ನಿರ್ಧರಿಸಿದುದುಂಟು. ಗೆಳತಿಯಿಂದ ಆಗಲಿ ದೂರ ಹೋಗುವುದು ಸಾಧ್ಯವಿಲ್ಲವಾದ್ದರಿಂದ ಮದುವೆಯನ್ನೇ ಮಾಡಿಕೊಳ್ಳದೆ ಅಖಂಡ ಬ್ರಹ್ಮಚರ್ಯೆಯಲ್ಲಿದ್ದುಬಿಡುವನೆಂದು ಲಕ್ಷ್ಮಿ ನಿರ್ಧರಿಸಿದುದುಂಟು. ಇಬ್ಬರನ್ನೂ ಮದುವೆ ಯಾಗುವನೆಂದು ಹೇಳಿ ವಿಷ್ಣುವರ್ಧನ ಸಮಸ್ಯೆಯನ್ನು ಬಿಡಿಸುತ್ತಾನೆ. ಈ ಬಗೆಯ ಅಲೌಕಿಕ

ಸಾಮರಸ್ಯ. ಸ್ನೇಹಗಳನ್ನು ಕಾದಂಬರಿಕಾರರು ಆರಂಭದಿಂದಲೂ ಪೋಷಿಸಿಕೊಂಡು ಬಂದಿರುವುದನ್ನು ಕೊನೆಯಲ್ಲಿ ಬರುವ ಪರಕಾಯ ಪ್ರವೇಶ ಘಟನೆಗೆ ನಂಬುಗೆಯ ರಕ್ಷೆಯನ್ನೊದಗಿಸುತ್ತದೆ.

ಲಕ್ಷ್ಮಿ-ಶಾಂತಲೆಯ ಪಾಲಿಗೆ ಗೆಳತಿ ಮಾತ್ರವಾಗಿರದೇ ಬಾಳಿನ ಸರ್ವಸ್ವವೂ ಆಗಿದ್ದಾಳೆ. ಆಟ-ಪಾಠ ವಿನೋದ, ವ್ಯಾಸಂಗ, ದಾಂಪತ್ಯ ಎಲ್ಲದರಲ್ಲೂ ಅವಳು ಎಡೆಬಿಡದ ಸಂಗಾತಿ. ಸಾಂಪ್ರದಾಯಿಕ ಸವತಿ ಮತ್ಸರ್ಯಕ್ಕೆ ಇವರಿಬ್ಬರೂ ಅಪವಾದ. ಇವರು ದಾಂಪತ್ಯ ಜೀವನದಲ್ಲಿ ಸವತಿಯರು ಎಂದು ಎನಿಸಿಕೊಳ್ಳಲೇ ಇಲ್ಲ. ಹೀಗೆ ಜೀವಕ್ಕೆ ಜೀವ ಬೆಸೆದವರಾದುದರಿಂದಲೇ ಕೊನೆಯಲ್ಲಿ ಶಾಂತಲೆಯ ಜೀವ ಲಕ್ಷ್ಮಿಯಲ್ಲಿ ಆಸರೆ ಪಡೆಯುವಂಥ ಪಾತ್ರವನ್ನು ಲೇಖಕರು ಸೃಷ್ಟಿಸಿದ್ದಾರೆ.

ಶಾಂತಲೆ ಪಾತ್ರ ಕಾದಂಬರಿಯ ಜೀವ. ಎಲ್ಲ ಪಾತ್ರಗಳು ಅವಳಿಗೆ ಸಂಬಂಧಿಸಿಯೇ ಬೆಳೆಯುತ್ತವೆ. ಅವಳು ವಿದ್ಯಾವತಿ, ವಿನಯವತಿ, ಶಾಸ್ತ್ರ, ಸಂಗೀತ, ಸಾಹಿತ್ಯ, ನೃತ್ಯಕಲಾ ಪರಿಣತೆ, ನಾಟ್ಯಸರಸ್ವತಿ, ಉದಾತ್ತ ತಾಯ್ತಂದೆಯರ ಉದಾತ್ತ ಪುತ್ರಿ, ಬಾಲ್ಯದಿಂದಲೇ ವಯಸ್ಸಿಗೆ ಮೀರಿದ ಬುದ್ಧಿಶಕ್ತಿ ಹೊಂದಿದವಳು. ಶಾರದೆಯ ಧ್ಯಾನದಲ್ಲಿ ಕುಳಿತಾಗ ಅವಿಚಲಿತ ದೃಢಮನಸ್ಕತೆ, ನಾಟ್ಯವಾಡುವಾಗ ಅಪೂರ್ವ ತಲ್ಲೀನತೆ, ಮಹಾರಾಣಿಯಾಗಿ ವರ್ತಿಸುವಾಗ ಆದರ್ಶ ರೀತಿಯ ಧರ್ಮಶೀಲತೆ ಅವಳಲ್ಲಿ ಮೈದೋರುತ್ತವೆ. ಸಾಮಾನ್ಯವಾದ ಒಬ್ಬ ಹೆಗ್ಗಡೆಯ ಮಗಳಾದರೂ ಬಾಲ್ಯದಲ್ಲೇ ವಿವಿಧ ರೀತಿಯ ಶಿಕ್ಷಣವನ್ನು ಪಡೆದಿದ್ದಳು. ಸರ್ವ ಧರ್ಮ ಸಹಿಷ್ಣುತೆಯಾಗಿ ಬೆಳೆದ, ಶಾಂತಲೆ 'ಕಪ್ಪೆಚೆನ್ನಿಗರಾಯನ ದೇವಸ್ಥಾನ'ವನ್ನು ನಿರ್ಮಿಸಿದಳು. ಶಿವಗಂಗೆಯಲ್ಲಿ ಶಾರದ ಪೀಠವನ್ನು ಸ್ಥಾಪಿಸಿದಳು. ಜನರಲ್ಲಿ ಧಾರ್ಮಿಕ ಸಹಿಷ್ಣುತೆಯನ್ನು ಬಿತ್ತಲು ಹಾಗೂ ಕಾಪಾಡಿಕೊಂಡು ಹೋಗಲು ಶಾಂತಲೆ ತುಂಬಾ ಹೆಣಗಿದ್ದಳು. ಜನತೆಯಲ್ಲಿ ಮತ ಸೌಹಾರ್ದತೆ ಕಾಪಾಡಲು ದೋರಸಮುದ್ರದ ಅರಮನೆಯಲ್ಲಿ ಧರ್ಮಗೋಷ್ಠಿಯೊಂದನ್ನು ಕೇಳಲು ವ್ಯವಸ್ಥೆ ಮಾಡುತ್ತಾಳೆ. ಜೈನ ಧರ್ಮ ಉದ್ದೀಪನ ಕಾರ್ಯದಲ್ಲಿ, ಜೈನ ಧರ್ಮವನ್ನು ಬೆಳಗಿಸುವಲ್ಲಿ ತುಂಬು ಹೃದಯದಿಂದ ದಾನ-ದತ್ತಿಗಳನ್ನು ಸಲ್ಲಿಸುತ್ತಾಳೆ. ವಿಷ್ಣುವರ್ಧನನ ಕೈ ಹಿಡಿದ ನಂತರದಲ್ಲೂ ತನ್ನ ಬದುಕಿನುದ್ದಕ್ಕೂ ಜೈನ ಧರ್ಮ ಪರಿಪಾಲಕಲಾಗಿದ್ದಳು. 'ಶ್ರವಣಬೆಳ್ಗೊಳ ತೀರ್ಥದಲ್ಲಿ' ಸವತಿಗಂಧ ವಾರಣ ಬಸದಿ ನಿರ್ಮಿಸಿ ಅಲ್ಲಿಯ ದೇವತಾ ಪೂಜೆ, ಜಿನಮುನಿಗಳ ಆಹಾರ ದಾನಕ್ಕೆ ಕಲ್ಕನಾಡ, ಮೊಟ್ಟೆನವಿಲೆ ಗ್ರಾಮವನ್ನು ತನ್ನ ಗುರುಗಳಾದ ಪ್ರಭಾಚಂದ್ರ ಸಿದ್ಧಾಂತ ದೇವರಿಗೆ ಬಿಟ್ಟುಕೊಟ್ಟಿದ್ದಳು.

"ಶಾಂತಲಾದೇವಿ ಪ್ರತಿ ಶುಕ್ರವಾರ ಓಲಗದಲ್ಲಿ ಸಿಂಹಾಸನದ ಮೇಲೆ ಕುಳಿತು, ರಾಜ್ಯದ ಆಡಳಿತಗಳನ್ನೆಲ್ಲ ವಿಚಾರಿಸಿ ವಿಮರ್ಶಿಸಿ, ಉತ್ತಮವಾದ ಸಲಹೆಗಳನ್ನು ಕೊಡುತ್ತಿದ್ದಳು. ಹೇಮಾದ್ರಿಗಳು ಆಕೆಯ ಆಲೋಚನೆ, ಅಭಿಪ್ರಾಯಗಳನ್ನು ಮನಸಾರೆ ಗೌರವಿಸುತ್ತಿದ್ದರು. ಅನೇಕ ವೇಳೆಗಳಲ್ಲಿ ಶಾಂತಲಾದೇವಿ ಬಹು ತೊಡಕಿನ ನ್ಯಾಯಗಳನ್ನು ಬಿಡಿಸಿ ವ್ಯಾಜ್ಯಗಳ ತೀರ್ಪನ್ನೂ ಕೊಡುತ್ತಿದ್ದಳು. ಲೌಕಿಕವನ್ನೂ ಧರ್ಮದೃಷ್ಟಿಯಿಂದಲೇ ಅಳೆಯುತ್ತಿದ್ದ ಆಕೆಗೆ ತೀರ್ಪುಗಳನ್ನು ಕೊಡಲು ಕಷ್ಟವಾಗುತ್ತಿರಲಿಲ್ಲ. ತಪ್ಪು ಮಾಡಿದವರಿಗೆ ಶಿಕ್ಷೆಯನ್ನು ವಿಧಿಸುವುದಕ್ಕಿಂತ ಅಂತಹವರಲ್ಲಿ

ವಿವೇಚನೆಯನ್ನೂ, ಧರ್ಮದೃಷ್ಟಿಯನ್ನೂ ಉತ್ಪಾದನೆ ಮಾಡಿ ಅವರನ್ನೂ ಉತ್ತಮ ಪ್ರಜೆಗಳನ್ನಾಗಿ ಪರಿವರ್ತಿಸಲು ಆಕೆ ಸರ್ವಪ್ರಯತ್ನ ಪಡುತ್ತಿದ್ದಳು" (ಅದೇ; ಪು. ೧೧೮). ಈ ಕಾರಣ ಗಳಿಂದಾಗಿಯೇ ಪ್ರಜೆಗಳು ಶಾಂತಲೆಯನ್ನು ಗೌರವದಿಂದ ಕಾಣುತ್ತಿದ್ದರು.

ಶಾಂತಲಾದೇವಿಯನ್ನು ಕುರಿತು ರಚನೆಯಾದ ಮೂರನೇ ಕಾದಂಬರಿಯೆಂದರೆ ಸಮೇತನಹಳ್ಳಿ ರಾಮರಾಯರ 'ಸವತಿ ಗಂಧಾವಾರಣೆ'. ಶಾಂತಲೆ ಮತ್ತು ಆಕೆಯ ಸವತಿ ಬಮ್ಮಲದೇವಿಯವರ ಸರಸ - ವಿರಸದ ಚಿತ್ರಣವೇ ಕಾದಂಬರಿಯ ಪ್ರಧಾನ ವಸ್ತು. ಈ ದೃಷ್ಟಿಯಿಂದ ಲೇಖಕರ ಕಾದಂಬರಿಯ ಶೀರ್ಷಿಕೆ ಅರ್ಥಪೂರ್ಣವಾಗಿದೆ. ಕಾದಂಬರಿಕಾರರು ಶಾಸನಗಳ ಆಧಾರದ ಮೇಲೆ ಕಾದಂಬರಿಯನ್ನು ರಚಿಸಿದ್ದಾರೆ.

ಕಾದಂಬರಿಯಲ್ಲಿ ಶಾಂತಲೆ ಪಟ್ಟದರಸಿ, ಪ್ರೌಢ, ಬಂಜೆ, ಹೊಯ್ಸಳ ವಂಶವನ್ನು ಮುಂದುವರಿಸುವುದಕ್ಕೋಸ್ಕರ ವಿಷ್ಣುವರ್ಧನನಿಗೆ ಪಲ್ಲವ ರಾಜಕುಮಾರಿ ಬಮ್ಮಲದೇವಿಯೊಂದಿಗೆ ಮದುವೆ ಮಾಡಿಸುತ್ತಾಳೆ. ತಂಗಿಯ ಸುಖಕ್ಕಾಗಿ ತನ್ನ ಬುದ್ಧಿಯನ್ನು ಖರ್ಚು ಮಾಡುತ್ತಾಳೆ. ಆಕೆಯಲ್ಲಿ ಕುಮಾರ ಬಲ್ಲಾಳ ಜನಿಸಿದಾಗ ಎಲ್ಲರಿಗಿಂತ ಹೆಚ್ಚು ಸಂತೋಷಪಡುತ್ತಾಳೆ. ಆದರೆ ರಾಜ್ಯದ ಉತ್ತರಾಧಿಕಾರಿ ತಾಯಿ ತಾನೆಂಬ ಭಾವನೆ ಚಿಗುರಿದೊಡನೆಯೇ ಬಮ್ಮಲೆಯ ವರ್ತನೆ ಬೇರೆಯಾಗುತ್ತದೆ. ಮಗನು ದುರ್ಮರಣಕ್ಕೆ ಈಡಾದ ಮೇಲೂ ಸಹ ಆಕೆ 'ಪಟ್ಟದರಾಣಿಯಾಗುವ' ಕನಸು ಕಾಣುತ್ತಾಳೆ. ಬಮ್ಮಲೆಯ ಕನಸನ್ನು ನನಸು ಮಾಡಲು ಶಾಂತಲೆ ಶಿವಗಂಗೆಯಲ್ಲಿ ಪ್ರಾಣತ್ಯಾಗ ಮಾಡುತ್ತಾಳೆ. ಶಾಂತಲೆಯ ತ್ಯಾಗವನ್ನು, ಆಕೆಯ ಗುಣವನ್ನು, ಮುಗ್ಧತೆಯನ್ನು ಲೇಖಕರು ಹೃದಯಸ್ಪರ್ಶಿಯಾಗಿ ಚಿತ್ರಿಸಿದ್ದಾರೆ. ಶಾಂತಲೆ ಮತ್ತು ಬಮ್ಮಲದೇವಿಯರ ಸಂಬಂಧವನ್ನು ಚಿತ್ರಿಸುವುದೇ ಕಾದಂಬರಿಕಾರರ ಮುಖ್ಯ ಆಶಯವಾಗಿದೆ.

ನೃತ್ಯ ಪ್ರದರ್ಶನದ ಮೂಲಕ ಶಾಂತಲೆಯ ಪಾತ್ರಚಿತ್ರಣವು ಕಾದಂಬರಿಯಲ್ಲಿ ಪ್ರವೇಶವಾಗುತ್ತದೆ. ಈಕೆಯ ಅಮೋಘವಾದ ನೃತ್ಯವೂ ನೋಡುಗರ ಕಣ್ಣುಗಳನ್ನು ಸೆಳೆದವು. ಯಾರಿಗೂ ಸಮಯದ ಅರಿವು ಆಗಲೇ ಇಲ್ಲ. ಒಂದೊಂದು ರಸಭಾವದಲ್ಲಿ ಮುಳುಗೆಂದಾಗ ಹೊಸರತಿಯಂತೆ ಕಾಣಿಸುತ್ತಿದ್ದಳು. "ಮೈಯ ನುಲಿವು, ಹೆಜ್ಜೆಯ ಲಘವು, ಕೈಯ ತಿರುವು, ಕಣ್ಣಿನ ನೋಟ, ಮುಖದ ಮಾಟ ಎಲ್ಲವೂ ಒಂದೊಂದು ಕವನದಂತೆ ಸ್ಫುಟವಾಗಿ, ಅರ್ಥವಾಗಿ ಜನ ಕುಣಿತದ ಸಾರ್ಥಕ್ಯವನ್ನು ಕಂಡರು. ಭಾವದ ಒಂದೊಂದು ಸುಳಿವು ಎಳೆ ಎಳೆಯಾಗಿ ಬಿಡಿಸಿ ಒಂದು ಹಾಸುಹೊಕ್ಕಾಗಿ ಹೆಣೆದು, ಹೊನ್ನ ಪೊರೆಯಾಗಿ ಕಣ್ಣನ್ನು, ಮನಸ್ಸನ್ನು, ಮುತ್ತುತ್ತಿದ್ದಿತು. ಇನ್ನೂ ನೂರು ರಸಗಳನ್ನು ಹರಿಯಿಸಬಲ್ಲಳು, ಭಾವಗಳನ್ನು ಬಿಡಿಸಬಲ್ಲಳು ಅಂತೆಯೇ ಹೊಸ ಹೊಸದಾಗಿ ಕಾಣುವಳು" (ಸಮೇತನಹಳ್ಳಿ ರಾಮರಾಯ; ೧೯೬೮; ಪು. ೨೩) ಎಂಬ ಮೆಚ್ಚುಗೆಯನ್ನು ಪಡೆದಿದ್ದಳು.

ಅಮೋಘವಾದ ನೃತ್ಯ ಪ್ರದರ್ಶನದ ನಂತರ ಶಾಂತಲೆಯು ತನ್ನ ನೃತ್ಯದ ಬಗ್ಗೆ ತಾನೇ ವಿಮರ್ಶಿಸಿಕೊಳ್ಳುತ್ತಾಳೆ. "ಆಸ್ಥಾನದ ರೂವಾರಿ ದಾಸೋಜನು ಒಪ್ಪಬೇಕು. ಅವನ ಮಗ ಚಾವಣನೂ 'ಕುಣಿತ ಒಪ್ಪಿತು' ಎಂದನ್ನಬೇಕು. ನಾಟ್ಯಶಾಸ್ತ್ರದಲ್ಲಿ ಪರಿಣತರು ಅದೆಷ್ಟು ಮಂದಿ

ಅಲ್ಲಿ? ಯಾವ ನದಿಗೆ ಎಲ್ಲಿ ಕುಂಟಿತೋ, ಯಾವ ಮುದ್ರೆ ಎಲ್ಲಿ ತಪ್ಪಿತೋ, ಉದ್ವೇಗದ ಭರದಲ್ಲಿ ಏನೆಲ್ಲ ಆಯಿತೋ (ಅದೇ; ಪು. ೨೫) ಎಂದು ಅಲ್ಲಿನ ಕುಣಿತವನ್ನೆಲ್ಲ ಮತ್ತೊಮ್ಮೆ ಮೆಲುಕು ಹಾಕಿದಳು. ಕಾದಂಬರಿಕಾರರು ಶಾಂತಲೆಯ ಗುಣವನ್ನು ಹೀಗೆ ವರ್ಣಿಸಿದ್ದಾರೆ. "ಶಾಂತಲಾದೇವಿಯ ವ್ಯಕ್ತಿತ್ವ ರಾಜಗಾಂಭೀರ್ಯದಿಂದ ಕೂಡಿದ್ದು ಎತ್ತರವಾದ ನಿಲುವು, ಸೌಮ್ಯವೂ ಸುಂದರವೂ ಆದ ಚೆಲುವು, ವಿದ್ಯೆಯನ್ನು ತುಂಬಿಕೊಂಡ ತುಂಬು, ಅರಿವನ್ನು ಮೈಗೂಡಿಸಿಕೊಂಡ ಧೈರ್ಯಗಳು, ಮುಖದಲ್ಲಿ ಕನ್ನಡಿಸಿದ್ದವು. ಅದರಲ್ಲಿ ಅಹಂಕಾರದ ಸುಳಿವು ಇರಲಿಲ್ಲ. ರಾಜ ಗಾಂಭೀರ್ಯಕ್ಕೆ ತಕ್ಕಂತೆ ಒಪ್ಪುವ ಸಾಧಾರಣ ಜರಿಯಂಚಿನ ರೇಶ್ಮೆಯನ್ನು ಉಟ್ಟು, ಮೇಲುದವನ್ನು ತಲೆಯ ಸುತ್ತ ಬಳಸಿ ಎರಡೂ ಅಂಗೈಗಳಲ್ಲಿರಿಸಿಕೊಂಡು, ಪಿಡಿಯಂತೆ ನಡೆದು ಬಂದಳು. ಅವಳು ನಡೆದಂತೆಲ್ಲ ಅವಳ ಬೊಗಸೆಗಣ್ಣಿನ ಬೆಳದಿಂಗಳು ಮುಂದೆ ಹರಡುತ್ತಾ ನಡೆಮಡಿಯನ್ನು ಹಾಸಿದಂತಿತ್ತು" (ಅದೇ; ಪು. ೩೨).

ಶಾಂತಲೆ ಹೊಯ್ಸಳ ವಂಶವು ಬೆಳೆಯುವುದಕ್ಕಾಗಿ ರಾಜ ವಿಷ್ಣುವರ್ಧನಿಗೆ ಮತ್ತೊಂದು ಮದುವೆ ಮಾಡಲು ಪಲ್ಲವ ವಂಶದ ರಾಜಕುಮಾರಿ ಬಮ್ಮಲೆಯನ್ನು ಆಯ್ಕೆ ಮಾಡುತ್ತಾಳೆ. ಶಾಂತಲೆಗೆ ಸಾಹಿತ್ಯ, ಸಂಗೀತ, ನೃತ್ಯಗಳಲ್ಲಿ ಹೆಚ್ಚಿನ ಆಸಕ್ತಿಯಿತ್ತು.

ಬೇಲೂರಿನ ವೀರನಾರಾಯಣ ಮತ್ತು ತಲಕಾಡಿನ ಕೀರ್ತಿನಾರಾಯಣ ದೇಗುಲಗಳ ನಿರ್ಮಾಣ ಮುಗಿದ ಮೇಲೆಯೂ ನಾಡಿನಲ್ಲಿ ವಾಸುಶಿಲ್ಪದ ನಿರ್ಮಾಣ ಕಾರ್ಯಕ್ಕೆ ವಿಷ್ಣುವರ್ಧನ ಮುಂದಾಗುತ್ತಾನೆ. ಬೇಲೂರಿನಲ್ಲಿ, ಜಿನಾಥಪುರದಲ್ಲಿ, ಶ್ರವಣಬೆಳಗೊಳದಲ್ಲಿ ದೇವಾಲಯದ ನಿರ್ಮಾಣ ಕಾರ್ಯಗಳು ಸತತವಾಗಿ ನಡೆಯುತ್ತಲೇ ಇದ್ದವು. ರಾಜಧಾನಿಯಲ್ಲಿ ಮತ್ತೊಂದು ದೇಗುಲವನ್ನು ವಿಷ್ಣುವರ್ಧನನು ಕಟ್ಟಿಸುವ ಸಲುವಾಗಿ ರೂವಾರಿ, ದಾಸೋಜ, ಚಾವಣ, ರಾಯಶಿಲ್ಪ, ಕೇದಾರೋಜ ಮುಂತಾದ ರೂವಾರಿಗಳಿಗೆ ಆ ದೇಗುಲದ ಬಗ್ಗೆ ವಿವರಣೆಯನ್ನು ನೀಡುತ್ತಾನೆ. ಶಾಂತಲೆಯೂ ಸಹ ರೂವಾರಿಗಳಿಗೆ ದೇವಾಲಯ ನಿರ್ಮಾಣಕ್ಕೆ ಬೇಕಾದ ಸಹಾಯ ಸಲಹೆಯನ್ನು ನೀಡುತ್ತಾಳೆ. ರೂವಾರಿಗಳ ನೃತ್ಯ ಭಂಗಿಯನ್ನು ವೀಕ್ಷಿಸಿ, ನಂತರ ಕೆತ್ತನೆಯನ್ನು ಮಾಡುತ್ತಿದ್ದರು. ಇದಕ್ಕಾಗಿ ರೂವಾರಿಗಳು ಗೊತ್ತುಪಡಿಸಿದ ದಿನದಂದು ಅರಮನೆಯಲ್ಲಿ ನೃತ್ಯ ಪ್ರದರ್ಶನಕ್ಕೆ ವೇದಿಕೆಯನ್ನು ಸಿದ್ಧಗೊಳಿಸುತ್ತಿದ್ದರು.

ಸರ್ವಕಾಲಕ್ಕೂ ನಿಲ್ಲಬಹುದಂತಹ ಕಲೆಗಳನ್ನು ನಿರ್ಮಾಣ ಮಾಡಬೇಕೆಂಬ ಹಂಬಲದಿಂದ ಶಾಂತಲೆಯು ಬಹುವಾಗಿ ಶ್ರಮಿಸುತ್ತಿದ್ದಳು. ಭರತಾಗಮದ ಅಭಿನಯಗಳ ತಿರುಳನ್ನು, ಭರತನ ನಾಟ್ಯವನ್ನು ಸಾಮಾನ್ಯ ಜನರಿಗೂ ಕಲಿಯಲು ಅನುಕೂಲವಾಗುವಾಗ ರೀತಿಯಲ್ಲಿ ರೂವಾರಿಗಳು ಕೆತ್ತನೆ ಮಾಡಲು ಅವುಗಳನ್ನು ಬಿಡಿಸಿ ಹೇಳುತ್ತಿದ್ದಳು. ರೂವಾರಿಗಳ ಮನಸ್ಸಿನಲ್ಲಿ ಸ್ಫುಟವಾದ ಮೂರ್ತಿ ಮೂಡಬೇಕಾದರೆ ಸಜೀವವಾಗಿ ಚೆಲುವೆಯರು ನೃತ್ಯ ಮಾಡಬೇಕು. ಇದನ್ನು ನೋಡಿದ ರೂವಾರಿಗಳು ಅವರ ನೃತ್ಯದ ಭಂಗಿಯನ್ನು ಮನಸ್ಸಿನಲ್ಲಿ ಎರಕ ಹೊಯ್ದುಕೊಂಡು ಕಲ್ಲಿನಲ್ಲಿ ಅದನ್ನು ಮೂಡಿಸಬೇಕೆಂದು ಅರಮನೆಯಲ್ಲಿ ಶಾಂತಲೆ ಕುಣಿತದ ಒಂದು ಹೆಣ್ಣ ಪಡೆಯನ್ನೇ ನಿರ್ಮಿಸಿದ್ದಳು. ಗೀತ, ವಾದ್ಯ, ನೃತ್ಯಗಳ ಮುಖ್ಯ ಸೂತ್ರಧಾರಣೆಯಾಗಿದ್ದಳು.

ಶಾಂತಲೆ ರಂಗಸಜ್ಜಿಕೆಯ ಸಕಲವನ್ನೂ ಒಂದೊಂದನ್ನಾಗಿ ನೋಡಿದಳು. ಸಜ್ಜು ಮಾಡುವ ಕೆಲಸಗಾರರು ಪರಿಣತರಾಗಿದರೂ ಸಹ ಆ ಕೆಲಸ ಕಾರ್ಯಗಳನ್ನು ಅವಳೊಂದು ಸಾರಿ ನೋಡುತ್ತಿದ್ದಳು. ವಾದ್ಯದವರನ್ನು ನೋಡಿದ ಶಾಂತಲೆ 'ಏನಾದರೂ ಕೊರತೆ ಉಂಟೆ' ಎಂದು ಹೇಳಿ, ವಾದ್ಯದವಳು ಎಲ್ಲಿ ಇರಬೇಕು, ಹಿಮ್ಮೇಳದವಳೆಲ್ಲಿ ಹಾಡಬೇಕು, ಕಂಸಾಳದ ಕನ್ನೆ ಎಲ್ಲಿ ಕುಳಿತುಕೊಳ್ಳಬೇಕು. ಯಾವ ದೀವಟಿಗೆ ಎಷ್ಟು ದೂರದಲ್ಲಿ ಹೇಗೆ ನಿಲ್ಲಬೇಕು ಎಂಬುದನ್ನು ಸೂಚಿಸುತ್ತಿದ್ದಳು. ಅಷ್ಟೇ ಅಲ್ಲದೆ ರಂಗಮಂಟಪದಲ್ಲಿ ಸಾಲಾಗಿ ಇರಿಸಿದ್ದ ಮೃದಂಗ ಭೇರಿ, ನಗಾರಿಗಳ ಕುರುಹುಗಳನ್ನು ಹಿಡಿದು ನೋಡಿ, ಮೆಲ್ಲಗೆ ಬಿಡದೇ ಆಲಿಸಿ ಕೇಳುತ್ತಿದ್ದಳು. ನೃತ್ಯ ಮಾಡಲು ತಯಾರಾದ ಹೆಣ್ಣುಗಳನ್ನು ಶಾಂತಲೆಯು ತನ್ನ ಆಸನದಲ್ಲಿ ಕುಳಿತು ಅವರ ಅಲಂಕಾರವನ್ನು ವೀಕ್ಷಿಸುತ್ತಿದ್ದಳು. ಅಲಂಕಾರಗೊಂಡ ಹೆಣ್ಣುಗಳು ಒಬ್ಬರಾಗಿ ರಾಣಿಯ ಎದುರು ಬಂದು ನಿಲ್ಲುತ್ತಿದ್ದರು. "ರಾಣಿ ಏನಾದರೂ ಊನ ಇದ್ದರೆ 'ಹಾಗಲ್ಲ'. ಹೀಗೆ ಎನ್ನುವಳು. ಇಲ್ಲ, ತಾನೇ ಎದ್ದು ಮುಡಿಯನ್ನು, ಚೊಲ್ಲೆಯನ್ನು ಸರಿ ಮಾಡುವಳು. ತಗದ ಪಸದನ ಏನಾದರೂ ಕಂಡರೆ ತೆಗೆಸುವಳು. ಕಂಚುಕದ ಬಿಗಿತದ ಹದವನ್ನು ಮುಟ್ಟಿ ನೋಡುವಳು ಕುರುಳನ್ನು ತಿದ್ದುವಳು. ಇಲ್ಲ, ಕಣ್ಣಿಗೆ ಕಜ್ಜಳಿಯನ್ನು ತಿದ್ದುವಳು. ಇಲ್ಲ, ಕಣ್ಣಿಗೆ ಕಜ್ಜಳಿಯನ್ನು ತೊಡೆಯುವಳು" (ಅದೇ; ಪು. ೧೦೨). ಹೀಗೆ ಎಲ್ಲವೂ ಸರಿಯಾಗಿವೆ ಎಂದು ತಿಳಿದ ಮೇಲೆ, ಶಾಂತಲೆಯು ನೃತ್ಯ ಮಾಡಲು ಶೃಂಗರಿಸಿಕೊಳ್ಳುತ್ತಿದ್ದಳು.

ರೂವಾರಿಗಳಿಗೆ ತಮ್ಮ ಕೆತ್ತನೆಗೆ ಬೇಕಾದ ಭಂಗಿಗಳನ್ನು ನೋಡಲು ಅವರಿಗೆ ಅನುಕೂಲ ವಾಗುವಂಥ ಸ್ಥಳಗಳ ವ್ಯವಸ್ಥೆಯನ್ನು ಸಿದ್ಧಪಡಿಸಲಾಗಿತ್ತು. ಅಲ್ಲದೆ ಅವರಿಗೆ ಎಲ್ಲಿ ಬೇಕೆಂದರೆ ಅಲ್ಲಿ ಕುಳಿತುಕೊಳ್ಳುವ ವಿಶೇಷ ಅನುಕೂಲವಿತ್ತು. "ಒಂದು ಕುಣಿತವನ್ನು ಹತ್ತು ಸಾರಿ ಬೇಕಾದರೂ 'ಬೇಕು' ಎಂದು ಅವರು ಕೇಳಬಹುದಾಗಿತ್ತು. ಕುಣಿಯುವರೆಂದು ಅವರಾದರೂ ನಚ್ಚಣಿಯರನ್ನು ಸುಮ್ಮನೆ ಕಾಡುತ್ತಿರಲಿಲ್ಲ. ಕಡತ ಬಳಪಗಳನ್ನು ಹಿಡಿದು ಅವರು ತಮ್ಮ ಧ್ಯಾನದಲ್ಲಿ ಕುಳಿತು ಬಿಡುತ್ತಿದ್ದರು. ಕೆಲವಾರು ಮಂದಿ ಒಂದೊಂದು ಸಾರಿ ಏನನ್ನಾದರೂ ಗುರುತು ಹಾಕಿಕೊಳ್ಳುವುದು ಕಾಣುತ್ತಿತ್ತು (ಅದೇ; ಪು. ೧೦೪).

ಶಾಂತಲೆ ಸಂಗೀತ, ನೃತ್ಯ, ಸಾಹಿತ್ಯಗಳಲ್ಲಷ್ಟೇ ಚತುರೆಯಾಗಿರಲಿಲ್ಲ. ರಾಜಕೀಯದಲ್ಲಿಯೂ ತನ್ನನ್ನು ತಾನು ಸಕ್ರಿಯವಾಗಿ ತೊಡಗಿಸಿಕೊಂಡಿದ್ದಳು. ವಿಷ್ಣುವರ್ಧನನು ಯುದ್ಧಕ್ಕೆಂದು ಹೋದ ಸಂದರ್ಭದಲ್ಲಿ ಸಭೆ ನಿರ್ಣಯಿಸಿದಂತೆ ಶಾಂತಲೆಯು ಆಡಳಿತದ ಜವಾಬ್ದಾರಿಯನ್ನು, ಅಧಿಕಾರವನ್ನು ವಹಿಸಿಕೊಳ್ಳುತ್ತಿದ್ದನು. "ಮಹಾರಾಣಿಯಾದ ಶಾಂತಲೆ, ಯಾವುದಕ್ಕಾದರೂ ಒಪ್ಪಿಗೆಯನ್ನು ಕೊಡುವ ಮುಂಚೆ ಹತ್ತು ಮಾತನ್ನಾಡುತ್ತಿದ್ದಳು. "ಅದು ಏಕೆ ಹಾಗೆ?" "ಇದು ಏಕೆ ಹೀಗೆ?" ಎಂದು ಕೇಳಿ ಎರಡೂ ಕಡೆಯ ವಾದವನ್ನು ಕೇಳುವಳು. ಒಂದೇ ಕಡೆಯದಾದರೆ ತನ್ನ ಮನಸ್ಸಿನಲ್ಲಿ ತಾನೇ ಎರಡನೆಯ ಪಕ್ಷವಾಗಿ ನಿಲ್ಲುವಳು; ಚಿಂತಿಸುವಳು ಮಹಾರಾಣಿ ಹಾಗೆಲ್ಲ ಕೇಳುವಾಗ ನಾಗಯ್ಯನಾದರೂ ಯಾವುದೇ ಬೇಸರಪಡುತ್ತಿರಲಿಲ್ಲ. ಕಡೆಯಲ್ಲಿ ಶಾಂತಲಾದೇವಿಯೇ "ಅಯ್ಯನವರೆ, ನಾವು ಕೇಳಿದೆವು ಎಂದು ನೀವು ಮನಸ್ಸಿಗೆ ಬೇಸರವನ್ನು ತಂದುಕೊಳ್ಳಬಾರದಲ್ಲ? ಏನಾದರೂ

ಒಂದು ಮಾತನ್ನು ಹೆಚ್ಚಾಗಿ ಆಡಿದೆವೆನ್ನಿ. ಅದನ್ನು ನಾವು ಸರಿಯಾಗಿ ತಿಳಿದುಕೊಳ್ಳದೆ ಮಾಡಬಹುದಾದ ಕೆಲಸ ಹಿತವಾಗುವುದಕ್ಕಿಂತ ಅಹಿತವಾದೀತೇನೋ ಎಂಬ ಹೆದರಿಕೆ ನಮ್ಮದು" (ಅದೇ; ಪು. ೧೭೪) ಎನ್ನುತ್ತಾಳೆ. ನಾಗಯ್ಯನು ಶಾಂತಲೆಯಲ್ಲಿದ್ದ ತರ್ಕಬುದ್ಧಿಯನ್ನು ಮೆಚ್ಚಿಕೊಳ್ಳುತ್ತಾನೆ. ಅಲ್ಲದೆ ಆಕೆಯಲ್ಲಿದ್ದ ಪ್ರಜಾಪ್ರೀತಿ, ಮಮತೆ, ಗೌರವ ಭಾವನೆ, ನಯವಿನಯ, ರಾಣಿಯೆಂಬ ಅಹಂ ಇಲ್ಲದಿರುವುದನ್ನು ಕಂಡು ಬಹುವಾಗಿ ಹೊಗಳುತ್ತಾನೆ.

ಯುದ್ಧ ಸಂದರ್ಭದಲ್ಲಿ ಶತ್ರುಗಳೆಂದು ಗುರುತಿಸಿಕೊಳ್ಳುವ ವ್ಯಕ್ತಿಗಳ ಬಗ್ಗೆಯೂ ಸಹ ಶಾಂತಲೆ ತನ್ನ ಅನುಕಂಪವನ್ನು ವ್ಯಕ್ತಪಡಿಸುತ್ತಾಳೆ. ಮಾನವ ಸಹಜವಾದ ಕರುಣೆ, ಅನುಕಂಪಕ್ಕೆ ಶಾಂತಲೆ ಕೊಡುತ್ತಿದ್ದ ಬೆಲೆ ಎಂಥದ್ದು ಎಂದು ಲೇಖಕರು ಈ ನಿದರ್ಶನದ ಮೂಲಕ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ.

"ಏನು ಅಮಾತ್ಯರೆ, ಇಷ್ಟೊಂದು ಅವಸರದ ಬರವು?"

"ಇತ್ತು ತಾಯಿ"

"ಮೂಡಲ ರಂಗದ ಮಾತು ಏನು?"

"ಅಲ್ಲಿಂದ ಕೆಟ್ಟ ಸುದ್ದಿ ಏನೂ ಬಂದಿಲ್ಲ. ಹೊಯ್ಸಳ ಸೇನೆ ದಿನದಿನವೂ ವಿಜಯೋತ್ಸವದಲ್ಲಿ ಮುನ್ನುಗ್ಗುತ್ತಿದೆ. ಮುಂಚೂಣಿಯಲ್ಲಿ ರಾಜ ಸಹೋದರರ ಕೈ ಕತ್ತಿಯಿಂದಾದ ಮಿಂಚು ಹಿಂದಣ ಪಡೆಗೆ ಬೆಳಕಾಗಿ ದಾರಿಯನ್ನು ನಡೆಯಿಸುತ್ತಿದೆ. ನಂಗಲಿ ಕೊಯಮತ್ತೂರುಗಳು ಕೈವಶವಾದ ಮೇಲೆ ಪ್ರಭುವು ಕಂಚಿಯತ್ತ ಹೊರಟಿರುವ ಸಂಗತಿ ಇದೇ ತಾನೆ ಬಂದಿದೆ. ಡಣಾಯಕ ಪೆರ್ಗಡೆಯ ವಾಸುದೇವನು ಮೂಡಲು ಕೆರೆಯನ್ನು ಮೆಟ್ಟಿ ಮಹಾಬಲಿ ಪುರವನ್ನು ಹೊಕ್ಕನಂತೆ".

"ಸಾವು? ನೋವು?"

"ಯಾವ ಕಡೆಯದೆಂದು ಹೇಳಲಿ?"

"ಸೋತವರದು ಹೇಳಿ."

"ಮನಸ್ಸಿಗೆ ಆಯಾಸಬೇಡಿ ತಾಯಿ. ಇದು ರಾಜಕೀಯ. ಇಲ್ಲಿ ಕೇವಲ ವ್ಯವಹಾರ ಆಳುತ್ತಿರುತ್ತದೆ".

"ರಾಜಕೀಯವೆಂದು ಮಾನವ ಸಹಜವಾದ ಅದರ ಅನುಕಂಪಗಳನ್ನು ಕಳೆದುಕೊಳ್ಳಬೇಕೆ? ಸಮಾಜದ ಹಿತಕ್ಕಾಗಿ ಹುಟ್ಟಿದ್ದು ರಾಜಕೀಯ, ಅದರಲ್ಲಿ ಕೊಂಕು ಇದ್ದೀತು ನಿಜ. ಆದರೆ ಬಹುಮತದಿಂದ ಕಲ್ಯಾಣಕ್ಕಾಗಿ ಆಗುವುದಾದರೆ ಮಾತ್ರ ನಿಮ್ಮಂಥವರು ಅದನ್ನು "ಇರಬೇಕು' ಎನ್ನುವಿರಿ. ಅಲ್ಲಿ ಪಡೆವಳ ಪಡೆವಳರಿಗೆ, ಸೇನಾನಿ ಸೇನಾನಿಗೆ ಶತ್ರುತ್ವವಿಲ್ಲ. ಇದ್ದರೂ ಅದು ಸ್ವಂತದ್ದಲ್ಲ. ಆದರೂ ತಮ್ಮ ನೆತ್ತರನ್ನು ನೆಲದ ಮೇಲೆ ಹರಿಯಿಸುತ್ತಾರೆ"(ಅದೇ; ಪು. ೧೮೩) ಎಂದು ಮರಗುತ್ತಾಳೆ.

ಬಮ್ಮಲದೇವಿ ಬಾಲಕ ರಾಜಕುಮಾರನ ಮನಸ್ಸನ್ನು ಕೆಡಿಸುತ್ತಿದ್ದಾಳೆ ಎಂಬುದು ಶಾಂತಲೆಗೆ ಅರಿವಾದೊಡನೆಯೇ ಅವನಿಗೆ ಯೋಗ್ಯ ಶಿಕ್ಷಣ ಕೊಡಬೇಕು ಎಂದು ನಿಶ್ಚಯಿಸುತ್ತಾಳೆ. ಸೂಕ್ತ

ಸಂದರ್ಭ ಒದಗಿಬಂದಾಗ, ಅವರಿಬ್ಬರ ನಡುವೆ ನಡೆಯುವ ಸಂಭಾಷಣೆಯನ್ನು ಕಾದಂಬರಿಕಾರರು ಸೊಗಸಾಗಿ ಚಿತ್ರಿಸಿದ್ದಾರೆ. ಇಲ್ಲಿ ರಾಜಕುಮಾರನಿಗೆ ಶಾಂತಲೆ ನೀಡುವ ತಿಳುವಳಿಕೆ ಇಂದಿನ ರಾಜಕೀಯವನ್ನು ಪ್ರವೇಶಿಸುವ ಯುವಕರಿಗೂ ಪ್ರಸ್ತುತವಾಗಿದೆ.

ಧರ್ಮದ ವಿಚಾರವಾಗಿ ಜೈನ ಮತ್ತು ಹಿಂದೂ ಧರ್ಮದವರು ಶಾಂತಲೆಯ ಹತ್ತಿರ ದೇವಾಲಯದ ಕುರಿತು ನಿರ್ಣಯ ಕೇಳುತ್ತಾರೆ. ಚತುರೆಯಾದ ಶಾಂತಲೆಯು ಪರಿಸ್ಥಿತಿಗೆ ತಕ್ಕಂಥ ನಿರ್ಣಯವನ್ನು ನೀಡುತ್ತಾಳೆ. ಬಮ್ಮಲದೇವಿ ಶಾಂತಲೆಯೊಂದಿಗೆ ಮಾತನಾಡುವಾಗ ಅಕ್ಕ ನೀವು ಜೈನ ಧರ್ಮವನ್ನು ಅನುಸರಿಸುವವರು. ಅದರ ಪರ ವಹಿಸಲಿಲ್ಲ ಎಂದು ಜನ ಹೇಳುತ್ತಾರಲ್ಲ ಎಂದಾಗ ಶಾಂತಲೆಯು "ಅದು ನಿಜ. ಆದರೆ ಒಂದು ನಾಡನ್ನು ನಡೆಸುತ್ತೇನೆ ಎಂದೆನ್ನುವ ವ್ಯಕ್ತಿ ಎಲ್ಲ ಧರ್ಮಗಳ ಒಂದು ಕೂಡಲಾಗಿರಬೇಕು. ಅವನು ಯಾವುದೇ ಒಂದು ನಿರ್ದಿಷ್ಟವಾದ ಧರ್ಮದ ದಾಸನಾಗಿರಬಾರದು. ನಾಡಿನ ಎಲ್ಲ ಧರ್ಮಗಳನ್ನೂ ಬಳಸಬೇಕು ಎಂಬುದೇ ಅವನ ಹಿರಿಯ ಧರ್ಮವಾಗಿರಬೇಕು. ಸನ್ಯಾಸಿ ಲೋಕದ ಪಾಲಿಗೆ ತಾನು ಇನ್ನಿಲ್ಲ ಎಂದುಕೊಳ್ಳುತ್ತಾನೆ. ಮತ, ಕುಲಗಳ ಸೋಂಕು ಅವನನ್ನು ಬಂಧಿಸದು. ಆದರೂ ಲೋಕ ಅವನಿಂದ ಒಳಿತನ್ನು ಬಯಸುತ್ತದೆ. ರಾಜನಾದರೂ ಒಬ್ಬ ಸನ್ಯಾಸಿಯೇ. ಹಾಗಿದ್ದರೆ ಮಾತ್ರ ಅವನು ಎಲ್ಲ ಧರ್ಮಗಳನ್ನು ತೊಡಕಿಲ್ಲದೆ ನಡೆಸಬಲ್ಲನು. ಇಲ್ಲವಾದರೆ ಒಂದರ ನಡುವೆ ಇನ್ನೊಂದು ಸಿಕ್ಕು ಕಾದಾಡಿಯಾವು. ಅವುಗಳ ತಿಕ್ಕಾಟದಲ್ಲಿ ನಾಡಿನ ಕ್ಷೋಭೆ ಕಂಡಿತು; ಮಂದಿ ಕಂಗಾಲಾದಾರು"(ಅದೇ; ಪು. ೧೯೦) ಎನ್ನುತ್ತಾಳೆ. ಶಾಂತಲೆಯಲ್ಲಿದ್ದ ಧರ್ಮಸಹಿಷ್ಣುತೆಯನ್ನು ಲೇಖಕರು ಬಹಳ ಸೊಗಸಾಗಿ ಚಿತ್ರಿಸಿದ್ದಾರೆ.

ವಿಷ್ಣುವರ್ಧನ 'ತೆಂಕಲ ರಣರಂಗದಲ್ಲಿ ಜಯ ಗಳಿಸಿದ ಸುದ್ದಿಯನ್ನು ತಿಳಿದ ಶಾಂತಲೆ, ಬೇಲುಹೂರಿನ ವಿಜಯನಾರಾಯಣನಿಗೆ, ತಲವನಪುರದ ಕೀರ್ತಿನಾರಾಯಣನಿಗೆ, ವೈದ್ಯೇಶ್ವರನಿಗೆ, ಶ್ರೀರಂಗಪಟ್ಟಣದ ರಂಗನಾಥನಿಗೆ, ಬೆಳಗೊಳ್ಳದ ಕುಕ್ಕುಟೇಶ್ವರನಿಗೆ, ವಾಸಂತಿಕಾದೇವಿ, ಮಾಣಿಕ್ಯೇಶ್ವರ ದೇವಾಲಯಗಳಿಗೆ ವಿಶೇಷ ಪೂಜೆಯನ್ನು ಮಾಡುತ್ತಾಳೆ.

ಜೈನ, ಶೈವ, ವೈಷ್ಣವ ಹಾಗೂ ಬೌದ್ಧ ಧರ್ಮಗಳಿಗೆ ದಾನ-ದತ್ತಿಗಳನ್ನು ನೀಡುತ್ತಿದ್ದ ಕಾರಣ ಆಕೆಗೆ 'ಚತುಸ್ಸಮಯ ಸಮುದ್ಧರಿಗೆ' ಎಂಬ ಬಿರುದನ್ನು ನೀಡಲಾಗಿತ್ತು. ಬಮ್ಮಲೆಗೆ ಪಟ್ಟವಣೆಯನ್ನಾಗಿ ಮಾಡಲು ಶಾಂತಲೆಯು ಶಿವಗಂಗೆಗೆ ಹೋಗುತ್ತಾಳೆ. ತನ್ನ ತಂದೆ ತಾಯಿಯರ ಜೊತೆಯಲ್ಲೇ ಸಾಮಾನ್ಯ ಹೆಣ್ಣುಮಗಳಂತೆ ನಿಲ್ಲುತ್ತಾಳೆ. ಬಾಲ್ಯದಲ್ಲಿದ್ದ ತನ್ನ ಸಂಗಾತಿಯರನ್ನು ಕರೆಸಿಕೊಂಡು 'ತೊರೆಬಿಟ್ಟ ಕಾಮಧೇನುವಿನಂತೆ' ದಾನ-ಧರ್ಮವನ್ನು ಮಾಡುತ್ತಾಳೆ. ಸೇವಕಿ ನಾಗವ್ವೆಯನ್ನು ತಾಯಿಯೆಂದು ಕರೆದು ತನ್ನ ಪಚ್ಚೆಹಾರವನ್ನು ಆಕೆಗೆ ಕೊಡುತ್ತಾಳೆ. ತಂದೆ ತಾಯಿಗಳಿಗೆ ಪಾದಪೂಜೆ ಮಾಡಿ ಅರಳಿದ ಹೂಗಳನ್ನು ಅರ್ಪಿಸುತ್ತಾಳೆ. ಗಂಗಾಧರೇಶ್ವರನಿಗೆ ಪೂಜೆ ಮಾಡಿಸಿ ಅನ್ನ ಸಂತರ್ಪಣೆ ಮಾಡುತ್ತಾಳೆ. ಅಲ್ಲದೇ ಗಂಗಾಧರೇಶ್ವರನಿಗೆ ಸಂಗೀತ ಸೇವೆ ಮಾಡಿ, ನೆರೆದ ಜನರಿಗೆ ಸಂಗೀತದ ರಸಸಿದ್ಧಿಯ ಆನಂದವನ್ನು ಕೊಡುತ್ತಾಳೆ.

ಪಾತಾಳಗಂಗೆಯಲ್ಲಿ ಮಿಂದು ತಾಯಿಯನ್ನು ಏಕಾಂತವಾಗಿ ಪೂಜಿಸಿ, ಅದರಲ್ಲಿಯೇ ತನ್ನ ಕೊನೆಯುಸಿರನ್ನು ಬಿಡುತ್ತಾಳೆ. ಬಿಟ್ಟಿಯಣ್ಣ ನೀರಿಗೆ ಧುಮುಕಿದನು. ಶಾಂತಲೆಯ ಸೆರಗು

ತೇಲಿ ಬರುತ್ತದೆ. ಅದನ್ನು ಹಿಡಿದು ಎಳೆದಾಗ ಕಳೇಬರ ಮೇಲೆ ಬರುತ್ತದೆ. ಬಮ್ಮಲೆಗೆ ಪಿರಿಯರಸಿ ಪಟ್ಟ ಕಟ್ಟಲು ಶಾಂತಲೆ ಮರಣವನ್ನು ಹೊಂದುತ್ತಾಳೆ. ಇದರಿಂದ ಕ್ಷಣಿಕ ಸುಖವನ್ನು ಪಡೆದ ಬಮ್ಮಲೆ ಭೂಮಿ ಮೇಲೆ ಇದ್ದೂ ಯಾರಿಗೂ ಬೇಡವಾಗುತ್ತಾಳೆ. ಹೀಗೆ ಶಾಂತಲೆ ತನ್ನ ಜೀವನವನ್ನೇ ಬೇರೆಯವರ ಸುಖಕ್ಕಾಗಿ ಧಾರೆಯೆರೆಯುತ್ತಾಳೆ.

'ನಾಟ್ಯರಾಣಿ ಶಾಂತಲಾ' ಕಾದಂಬರಿ ಉಳಿದ ಕಾದಂಬರಿಗಳಿಗಿಂತ ಭಿನ್ನವಾಗಿದೆ. ಕಾದಂಬರಿಯಲ್ಲಿ ಶಾಂತಲೆಯ ಹುಟ್ಟಿಗೆ ಸಂಬಂಧಿಸಿದಂತೆ ಐತಿಹಾಸಿಕವಲ್ಲದ ನೂತನ ದೃಷ್ಟಿಯಿದೆ. ಶಾಸನಗಳಲ್ಲಿ ಶಾಂತಲೆ ಹೆಗ್ಗಡೆ ಮನೆತನದವಳೆಂದು ಉಲ್ಲೇಖಗಳಿವೆ. ಆದರೆ ಲೇಖಕರು ಕಾದಂಬರಿಯಲ್ಲಿ ಮಾತ್ರ ಶಾಂತಲೆ ನರ್ತಕಿಯರ ವಂಶದವಳೆಂದು ಚಿತ್ರಿಸಿದ್ದಾರೆ. ನಾಟ್ಯರಾಣಿ ಶಾಂತಲಾ ಕಾದಂಬರಿಯು ೫೮೩ ಪುಟಗಳಲ್ಲಿ ೬೦ ಅಧ್ಯಾಯಗಳನ್ನು ಒಳಗೊಂಡಿದೆ. ಹೊಯ್ಸಳ ರಾಜಮನೆತನದ ಒಂದು ತಲೆಮಾರಿನ ಕತೆಯನ್ನು ಕಾದಂಬರಿಯು ಬಿಚ್ಚಿ ತೋರಿಸುತ್ತದೆ. ಅಷ್ಟೇ ಅಲ್ಲದೆ ಕಲ್ಪನೆಗಳ ಮೂಲಕ ಕಥೆಯನ್ನು ಹೆಣೆಯಾಗಿದೆ.

ಶಾಂತಲೆಯು ಭರತನಾಟ್ಯ ಅಭ್ಯಾಸ ಮಾಡುತ್ತಿರುವಾಗ ಹೊಯ್ಸಳ ರಾಜ ಬಿಟ್ಟಿದೇವ ಮತ್ತು ಆತನ ಗೆಳೆಯನಾದ ಬಪ್ಪರಸರು ಪ್ರಕೃತಿ ವರ್ಣನೆ, ಶಾಂತಲೆಯ ನೃತ್ಯದ ಕುರಿತು ಮಾತನಾಡುತ್ತಾರೆ. "ಅಸಾಧಾರಣ ರೂಪವತಿ, ಆಕೆಯ ದೇವತಾ ಸೌಂದರ್ಯ, ಉಭಯ ನಾಟ್ಯ ಪ್ರವೀಣೆ, ಸಂಗೀತ ಸಂಗತ ಸರಸ್ವತಿ, ಪ್ರತ್ಯುತ್ಪನ್ನವಾಚಸ್ಪತಿ, ವಿವೇಕೈಕ ಬ್ರಹ್ಮಸ್ಪತಿ, ಭಗವದ್ಭಕ್ತೆ" (ಮೂರ್ತಿ ಮ.ನ.; ೨೦೦೮; ಪು. ೪೯) ಎಂದು ಅವಳ ವರ್ಣನೆಯನ್ನು ಲೇಖಕರು ಬಿಟ್ಟಿದೇವನ ಗೆಳೆಯ ಬಪ್ಪರಸನ ಬಾಯಿಯಿಂದ ಹೊಗಳಿಸುತ್ತಾರೆ.

ಶಾಂತಲೆ ಕಲೆಗಾಗಿ ತನ್ನ ಜೀವನವನ್ನೇ ಮುಡಿಪಿಟ್ಟಳು ಅಜ್ಜಿಯು ಮದುವೆ ವಿಚಾರವಾಗಿ ಮಾತನಾಡುವಾಗ ಶಾಂತಲೆ "ನಾನು ಮದುವೆಯಾಗುವುದರಿಂದ ಆತನು ಎಂಥ ಕಲಾಪ್ರೇಮಿಯೇ ಆದರೂ - ನನ್ನ ನರ್ತನಾಭ್ಯಾಸಕ್ಕೆ, ನೃತ್ಯದ ಆರಾಧನೆಗೆ ಭಂಗ ಬರುತ್ತದೆಂದು ನನ್ನ ಮನಸ್ಸು ಹೇಳುತ್ತದೆ. ಮದುವೆಯಾಗಿ ಆನಂತರ ಪಶ್ಚಾತ್ತಾಪ ಪಡುವುದಕ್ಕೆ ಬದಲಾಗಿ ಮದುವೆಯಾಗುವುದೇ ಬೇಡ" (ಅದೇ; ಪು. ೯) ಎನ್ನುತ್ತಾಳೆ.

ಮನೆತನದ ಸಂಪ್ರದಾಯದಂತೆ ಚೈತ್ರ ಶುದ್ಧ ಪಂಚಮಿಯ ದಿನ ಹೊನ್ನಾದೇವಿಯ ಸನ್ನಿಧಾನದಲ್ಲಿ ನೃತ್ಯ ಮಾಡಲು ಶಾಂತಲೆಯು ಸಕಲ ತಯಾರಿಯನ್ನು ಮಾಡಿಕೊಳ್ಳುತ್ತಾಳೆ. ದೇವಾಲಯದಲ್ಲಿ ಶಾಂತಲೆಯ ನೃತ್ಯ ಕಾರ್ಯಕ್ರಮವಿರುವ ಕಾರಣ ದೇವಾಲಯದ ಪ್ರತಿ ಕಂಬಗಳನ್ನು ಹೂಬಳ್ಳಿ, ತಳಿರು ತೋರಣಗಳಿಂದ ಶೃಂಗರಿಸಲಾಗಿತ್ತು. ಮೇನೆಯಲ್ಲಿ ಹೊರಟ ಶಾಂತಲೆ, ಚಂದವ್ವೆ, ಚೌಗಲೆ, ಸೋವಲೆಯರು ರಂಗಕಲೆಯ ಬಗ್ಗೆ ಚರ್ಚಿಸುತ್ತಾ ದೇವಾಲಯವನ್ನು ತಲುಪುತ್ತಾರೆ. 'ಕಲೆಯ ಬೆಲೆಯನ್ನು ಅರಿತ' ವಿಷ್ಣುವರ್ಧನ ಮೆಚ್ಚುವಂತೆ ನೃತ್ಯ ಮಾಡಬೇಕೆಂಬುದು ಮಾವಯ್ಯ ಹೇಳುವಾಗ ಶಾಂತಲೆಯು "ನಾನು ಅವರಿಗಾಗಿ ನೃತ್ಯ ಮಾಡುವುದಿಲ್ಲ ಅವ್ವೆ, ದೇವಿಯನ್ನು ಮೆಚ್ಚಿಸುವ ಸಲುವಾಗಿ, ಅವಳು ಮೆಚ್ಚುವಂತೆ ಏಕಚಿತ್ತ ಮನೋಭಾವದಿಂದ ನೃತ್ಯ ಮಾಡುತ್ತೇನೆ. ಸರಸ್ವತಿಯಾಗಿ ನನ್ನ ದೇಹದಲ್ಲಿ ನೆಲೆಸಿ ಸೇವೆ ನಡೆಸುವವಳೂ, ಪಾರ್ವತಿಯಾಗಿ

ಎದುರಿನಲ್ಲಿ ಕುಳಿತು ಸೇವೆಯನ್ನು ಕೈಗೊಳ್ಳುವವಳೂ ಅವಳೇ. ಅವಳಿಂದ ಅನುಗ್ರಹಿತವಾದ ವಿದ್ಯೆಯನ್ನು ಅವಳಿಗೆ ಒಪ್ಪಿಸುವ ಪ್ರಯತ್ನ ನನ್ನದು. ಅದನ್ನು ಫಲಪ್ರದವಾಗಿ ಮಾಡುವ ಕರುಣೆ ಅವಳದೇ. ದೇವಿ ಮೆಚ್ಚಿದ ನೃತ್ಯ ಮನುಷ್ಯರಿಗೆ ಮೆಚ್ಚಿಕೆಯಾಗಬೇಕು" (ಅದೇ; ಪು. ೨೮) ಎಂದು ಧೈರ್ಯವಾಗಿ ಮಾತನಾಡುತ್ತಾಳೆ.

ಶಾಂತಲೆಯು ಸಂಪ್ರದಾಯನುಸಾರವಾಗಿ ರಂಗಸ್ಥಳಕ್ಕೂ, ಸಭಿಕರಿಗೂ ಅಭಿನಂದಿಸಿ, ರಂಗಪೂಜೆಯನ್ನು ಮಾಡಿ, ನೃತ್ಯವನ್ನು ಆರಂಭಿಸುತ್ತಾಳೆ. "ಭರತ ನೃತ್ಯ ಭಂಗಿಯಲ್ಲಿ ದೇಹದ ಭಾರವನ್ನು ಮುಂಗಾಲುಗಳ ಮೇಲೆ ನಿಲ್ಲಿಸಿ, ಸಿಂಹದ ಕಟಿಯನ್ನು ನಾಚಿಸುವಂತಿದ್ದ ಪುಟ್ಟ ನಡುವಿನ ಮೇಲೆ ಎರಡು ಕೈಗಳನ್ನು, ಬಾಗಿಸಿದ ಕಾಲುಗಳ ಆಳವಿಗೆ ಸರಿಸಮನಾಗಿರುವಂತೆ ಸೇರಿಸಿ, ಮುಖದಲ್ಲಿ ಮಂದಹಾಸ ಬೀರುತ್ತ, ನಿಂತ ಅವಳ ನಿಲುವು ಮರೆಯಲಾಗದ ದೃಶ್ಯವಾಗಿತ್ತು. ನರ್ತಕಿಗೆ ತನ್ನ ದೇಹದಲ್ಲಿನ ಅಂಗಾಂಗಗಳ ಮೇಲೆ ಎಂಥ ಅಧಿಕಾರವಿದೆಯೆಂಬುದು ನರ್ತನದ ಆದಿಯಲ್ಲಿ ಅವಳು ತನ್ನ ಕುತ್ತಿಗೆಯ ಭುಜವನ್ನು ಪ್ರದೇಶದ ಒಂದು ಅಂಚಿನಿಂದ ಮತ್ತೊಂದು ಅಂಚಿಗೆ ಮತ್ತೆ ಹಿಂದಕ್ಕೆ ಲಯಬದ್ಧವಾಗಿ ಮಂದ, ಮಧ್ಯ, ತೀವ್ರಗತಿಗಳಿಗೆ ಅನುಸಾರವಾಗಿ ಸರಿಸುತ್ತಿದ್ದುದರಿಂದಲೇ ಅರ್ಥವಾಯಿತು. ಮುಖದಲ್ಲಿ ಮಿನುಗುತ್ತಿದ್ದ ಮುಗುಳ್ನಗೆಯಲ್ಲಿ ಕೊಂಚವೂ ಕುಂದುಗಳಿಲ್ಲದೆ ಲೀಲಾಜಾಲವಾಗಿ ನರ್ತಿಸುತ್ತಾಳೆ" (ಅದೇ; ಪು. ೩೩). ಇದನ್ನು ಕಂಡ ಬಿಟ್ಟಿದೇವನು ಅವಳ ಕಲಾನೈಪುಣ್ಯಕ್ಕೆ ಮಾರುಹೋಗುತ್ತಾನೆ. ಅಲ್ಲದೆ 'ಸೃಷ್ಟಿಕರ್ತನು ತನ್ನ ಎಲ್ಲ ಕಲಾ ಪ್ರತಿಭೆಯನ್ನು ಕ್ರೋಢೀಕರಿಸಿ ಇವಳನ್ನು ಸೃಷ್ಟಿ ಮಾಡಿ ಅದಕ್ಕೆ ತಕ್ಕ ರೂಪರಾಶಿಯನ್ನು ಕೊಟ್ಟಿದ್ದಾನೆಂದೂ, ಆಕೆಯ ಕಲಾ ವೈಭವವನ್ನು ವರ್ಣಿಸುತ್ತಾನೆ.

ನೃತ್ಯದ ಕೊನೆಯಲ್ಲಿ ಮಾಚಿಕಬ್ಬೆ ದೇವಿಸುತ್ತಿಯೊಂದನ್ನು ಹಾಡತೊಡಗಿದಳು. ಸಂಸ್ಕೃತ ಭಾಷೆಯಲ್ಲಿದ್ದ ಆ ಕವಿತೆಯಲ್ಲಿನ ಪದಗಳ ಭಾವಗಳನ್ನು ಅಭಿನಯಿಸತೊಡಗಿದಳು. ಅದೇ ಸಾಲನ್ನು ಮತ್ತೆ ಮತ್ತೆ ಮಾಚಿಕಬ್ಬೆ ಹಾಡಿದರು. ಶಾಂತಲೆಯು ಒಂದೊಂದು ಸಲಕ್ಕೂ ಒಂದೊಂದು ಹೊಸ ಮುದ್ರೆಯನ್ನು ಅಭಿನಯಿಸಿ ತೋರಿಸುತ್ತಾಳೆ. ಇದನ್ನು ಕಂಡ ಸಭಿಕರು ಅವಳ ವಿದ್ವತ್ತಿಗೆ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತಾರೆ.

ಶಾಂತಲೆಯ ನೃತ್ಯವನ್ನು ಮೆಚ್ಚಿದ ವಿಷ್ಣುವರ್ಧನನು ತನ್ನ ಕೊರಳಲ್ಲಿದ್ದ ಮುತ್ತಿನಹಾರವನ್ನು ಆಕೆಗೆ ಕೊಡುವುದರೊಂದಿಗೆ 'ನೃತ್ಯ ಸರಸ್ವತಿ' ಎಂದು ಬಿರುದನ್ನು ನೀಡುತ್ತಾನೆ. ಅವಳ ರೂಪಲಾವಣ್ಯಕ್ಕೆ ಮನಸೋತ ಬಿಟ್ಟಿದೇವ ಶಾಂತಲೆಯನ್ನು ಮದುವೆಯಾಗಲು ಬಯಸುತ್ತಾನೆ. ನೃತ್ಯ ಕುಲದವಳಾದ ಕಾರಣ ರಾಜಮಾತೆ ಏಚಲಾದೇವಿ ಮೊದಲು ಮದುವೆಗೆ ಒಪ್ಪಿಗೆ ನೀಡುವುದಿಲ್ಲವಾದರೂ ಆಕೆಯ ನಯ-ವಿನಯ ಗುಣ, ಚೆಲುವನ್ನು ನೋಡಿ ಬಿಟ್ಟಿದೇವನೊಂದಿಗೆ ಮದುವೆ ಮಾಡಿಸಲು ಒಪ್ಪುತ್ತಾಳೆ.

ಶಾಂತಲೆ ಚಿಕ್ಕವಯಸ್ಸಿನಲ್ಲಿಯೇ ವೀಣೆ ನುಡಿಸುವುದನ್ನು, ಹಾಡುವುದನ್ನು, ಸಂಸ್ಕೃತದಲ್ಲಿ ವಾಕ್ಯಾರ್ಥ ಮಾಡುವುದನ್ನು, ಅಲಂಕಾರಶಾಸ್ತ್ರವನ್ನು, ನಾಟಕಾಂತ ಸಾಹಿತ್ಯದ ಪಾಠವನ್ನು ಕಲಿತಿದ್ದಳು. ವಿಷ್ಣುವರ್ಧನನನ್ನು ಮದುವೆ ಆಗಲು ಒಪ್ಪಿದ್ದಾನೆಂದು ಶಾಂತಲೆಗೆ ತಿಳಿದಾಗ,

ನೃತ್ಯದ ಕುರಿತು ಅವನೊಂದಿಗೆ ಚರ್ಚಿಸುತ್ತಾಳೆ. "ನಾನು ಕಲಾಜೀವಿ; ನೃತ್ಯವೇ ನನ್ನ ಉಸಿರು. ಮಹಾರಾಣಿ ಪದವಿಗಾಗಿ ನೃತ್ಯಕಲೆಯನ್ನು ಮಾರುಗೊಡುವುದು ಸರಿಯೆ ಎಂದು ಮನಸ್ಸು ಯೋಚಿಸುತ್ತಿದೆ" (ಅದೇ; ಪು. ೧೧೦) ಎನ್ನುವಾಗ ವಿಷ್ಣುವರ್ಧನ ನಿನಗೆ ಇಷ್ಟ ಬಂದಾಗ ಎಲ್ಲಿಯಾದರೂ ನೃತ್ಯ ಮಾಡಲು ನಾನು ಸಂಪೂರ್ಣ ಒಪ್ಪಿಗೆಯನ್ನು ಕೊಡುತ್ತೇನೆಂಬ ವಚನವನ್ನು ನೀಡುತ್ತಾನೆ. ತನ್ನ ಮನಸ್ಸಿನ ದುಗುಡ ಪರಿಹಾರವಾದ ಮೇಲೆ, ವಿಷ್ಣುವರ್ಧನೊಂದಿಗೆ ಮದುವೆಯಾಗುತ್ತಾಳೆ. ಹಾಲುಜೇನಿನಂತೆ ಕೂಡಿದ ತನ್ನ ದಾಂಪತ್ಯ ಜೀವನದಲ್ಲಿ ಪತಿಗೆ ಸಕಲ ರೀತಿಯಲ್ಲಿ ಸಹಾಯಕಳಾಗಿದ್ದಳು. ರಾಜಮನೆತನಕ್ಕೆ ಸೊಸೆಯಾಗಿ, ವಿಷ್ಣುವರ್ಧನನ ಪಟ್ಟದ ರಾಣಿಯಾಗಿ, ತಾಯಿಯಾಗಿ, ಸಂಸಾರದ ಹಿತಕ್ಕಾಗಿ ತ್ಯಾಗಿಯಾಗಿದ್ದಳು. ಈಕೆ ನಡೆಸಿದ ದಾಂಪತ್ಯ ಜೀವನ ಕಾದಂಬರಿಯಲ್ಲಿ ಮತ್ತೊಬ್ಬರಿಗೆ ಆದರ್ಶವಾಗುವ ರೀತಿಯಲ್ಲಿ ಬಹು ಸೊಗಸಾಗಿ ಮೂಡಿಬಂದಿದೆ.

ಶಾಂತಲೆ ತನ್ನ ಮನಸ್ಸಿಗೆ ಉಲ್ಲಾಸವಾದಾಗ ವಿಷ್ಣುವರ್ಧನನ ಮುಂದೆ ನೃತ್ಯ ಮಾಡುತ್ತಾಳೆ. 'ಜಲೆ'ಯೊಂದನ್ನು ಸ್ವಲ್ಪ ಹೊತ್ತು ನರ್ತಿಸಿದ ನಂತರ ಸಂಸ್ಕೃತದ ಕವಿತೆಯೊಂದಕ್ಕೆ ಅಭಿನಯಿಸುತ್ತಾಳೆ. ಶ್ರೀಕೃಷ್ಣನಲ್ಲಿ ರಾಧೆಯು ತನ್ನ ಪ್ರೇಮವನ್ನು ಸಮರ್ಪಣೆ ಮಾಡುವಲ್ಲಿ ತಾನೇ ರಾಧೆಯೆಂಬಂತೆ, ವಿಷ್ಣುವರ್ಧನನೇ ಶ್ರೀಕೃಷ್ಣನೆಂಬಂತೆ ಭಾಸವಾಗಿ, ತನ್ಮಯಳಾಗಿ ಅಭಿನಯಿಸುತ್ತಾಳೆ. ಸಮಯ ಮತ್ತು ದೇಹಾಯಾಸದ ಅರಿವಿಲ್ಲದೆ ತನಗೆ ಸಾಕೆಂದು ಅನ್ನಿಸುವರಿಗೂ ನೃತ್ಯ ಮಾಡುತ್ತಾಳೆ.

ನೃತ್ಯ ಮತ್ತು ಅಭಿನಯ ಮುಗಿದ ಮೇಲೆ ವಿಷ್ಣುವರ್ಧನ ಶಾಂತಲೆಯನ್ನು ಕುರಿತು, ಶಾಂತಲೆ ನೀನು ಮೊದಲ ಬಾರಿಗೆ ಶಿವಗಂಗೆಯಲ್ಲಿ ದೇವಿಯ ಮುಂದೆ ನರ್ತಿಸಿದ್ದು ಮತ್ತು ಈಗ ನೃತ್ಯ ಮಾಡಿದರ ಬಗ್ಗೆ ಏನು ವ್ಯತ್ಯಾಸ ಇದೆ ಎಂದು ಕೇಳುತ್ತಾನೆ. ಪ್ರಭು "ಅಲ್ಲಿ ನಾನು ದೇವಿಯ ಸನ್ನಿಧಿಯಲ್ಲಿ ನೃತ್ಯ ಮಾಡಿದೆ. ಅವಳ ಅನುಗ್ರಹದಿಂದ ಕಲಿತ ವಿದ್ಯೆಯನ್ನು ಅವಳಿಗೆ ಒಪ್ಪಿಸಿದೆ, ಅದು 'ಭಕ್ತಿಭಾವ'. ಇಂದು ನಾನು ನರ್ತಿಸಿದುದು ನನ್ನ ಸ್ವಾಮಿಯ ಮುಂದೆ; ಮಾತಾಡುವ ನನ್ನ ದೇವರ ಮುಂದೆ. ಇದು 'ಶೃಂಗಾರಭಾವ' (ಅದೇ; ಪು. ೨೦೩) ಎನ್ನುತ್ತಾಳೆ.

ವಿಷ್ಣುವರ್ಧನ ಶಾಂತಲೆಯ ನೃತ್ಯ ನೋಡಿ ಮೆಚ್ಚುಗೆ ವ್ಯಕ್ತಪಡಿಸಿದಾಗ, ಅವಳು ನನ್ನ ನೃತ್ಯಕಲೆಗೆ ಒಂದು ಶಾಶ್ವತ ರೂಪ ಕೊಡಬೇಕೆಂದು ತನ್ನ ಮನದ ಆಸೆಯನ್ನು ವ್ಯಕ್ತಪಡಿಸುತ್ತಾಳೆ. "ಶಿಲ್ಪದಲ್ಲಿ ನೃತ್ಯಕಲೆಯು ಒಂದು ಸಾಕಾರ ವಿಶ್ವವಿದ್ಯಾನಿಲಯದ ನಿರ್ಮಾಣವಾಗಬೇಕು. ಶಿಲ್ಪಕಲೆ, ನೃತ್ಯಕಲೆಗಳ ಸಮ್ಮಿಲನವಾಗಿ ಶತಶತಮಾನಗಳವರೆಗೆ ಹೊಯ್ಸಳ ವಿಷ್ಣುವರ್ಧನ ದೇವರ ಕೊಡುಗೆಯಾಗಿ ಅದು ಕನ್ನಡ ನಾಡಿನಲ್ಲಿ ಇಡೀ ವಿಶ್ವವನ್ನೇ ಬೆರಗುಗೊಳಿಸಬಲ್ಲ ಭವ್ಯ ಕೃತಿಯಾಗಬೇಕು. ಗುರುಗಳು ಅಪ್ಪಣೆ ಕೊಡಿಸಿರುವ ದೇವಾಲಯಗಳ ನಿರ್ಮಾಣದೊಂದಿಗೆ ಈ ಕೆಲಸವನ್ನೂ ಸೇರಿಸಿದರೆ ಗುರುಗಳ ಅನುಗ್ರಹ, ದೈವಸೇವೆ, ಕಲಾಭಿಮಾನ ಈ ಮೂರನ್ನೂ ಒಂದೇ ಕೆಲಸದಲ್ಲಿ ಸಾಧಿಸಿದಂತಾಗುತ್ತದೆ (ಅದೇ; ಪು. ೨೦೪) ಎನ್ನುತ್ತಾಳೆ. ಶಾಂತಲೆಯ ಕೋರಿಕೆಯಂತೆ ರಾಜನು ತನ್ನ ಪಟ್ಟದರಾಣಿ ಗೀತ, ವಾದ್ಯ, ನೃತ್ಯ, ಸೂತ್ರಧಾರೆಯೂ ಎಚಿತ್ರ

ನರ್ತನ ಪ್ರವರ್ತನ ಪಾತ್ರ ಶಿಖಾಮಣಿಯೂ ಆದ ಶಾಂತಲಾದೇವಿಯ ಮೇಲಿರುವ ಪ್ರೇಮದ ಸಂಕೇತವಾಗಿ ಭವ್ಯ ಕಲಾಕೃತಿಯನ್ನು ದೇವಮಂದಿರವಾಗಿ ನಿರ್ಮಿಸುತ್ತಾನೆ".

ರೂವಾರಿಗಳು ದೇವರು ಮತ್ತು ವಿಗ್ರಹಗಳ ಲಕ್ಷಣವನ್ನು ಬಲ್ಲವರಾಗಿದ್ದರು. ಅದಕ್ಕೆ ನಿರ್ದಿಷ್ಟವಾದ ಶಾಸ್ತ್ರ ಮತ್ತು ಸಂಪ್ರದಾಯವಿತ್ತು. ಆದರೆ ನೃತ್ಯ ಭಾವ ಭಂಗಿಗಳು, ನೃತ್ಯ ವಿಗ್ರಹದಲ್ಲಿ ರಸೋತ್ಪಾದನೆ ಪಾಠಗಳಲ್ಲ ಎಂದು ತಿಳಿದ ಅವರು ನೃತ್ಯಕಲೆಯ ವಿಶ್ವವಿದ್ಯಾನಿಲಯವನ್ನು ರೂಪಿಸಬಲ್ಲ ಶಕ್ತಿ ಸಾಮಾನ್ಯ ರೂವಾರಿಯಲ್ಲಿ ನಿರೀಕ್ಷಿಸಲಾಗದು ಎಂದು ವಿಷ್ಣುವರ್ಧನ ಶಾಂತಲೆಯ ಮುಂದೆ ಹೇಳುತ್ತಾನೆ. ಅದಕ್ಕೆ ಶಾಂತಲೆಯು ರೂವಾರಿಗಳೆ, ವಿಗ್ರಹಗಳನ್ನು ಬಿಡಿಸುವುದರಲ್ಲಿ ನಿಮಗೆ ಮಾದರಿಗಳನ್ನು ಚೌಗಲೆ, ಸೋವಲೆಯರೊಂದಿಗೆ ಸ್ವತಃ ನಾನೇ ನಿಲ್ಲುತ್ತೇನೆಂದು ಹೇಳುತ್ತಾಳೆ. ಇದನ್ನು ಕೇಳಿದ ವಿಷ್ಣುವರ್ಧನ, ಶಾಂತಲೆ ನಿನ್ನದು ಎಂಥ ಕಲಾಪ್ರೇಮ? ನೃತ್ಯಕಲೆಗೆ ಶಾಶ್ವತವಾದ ಸೇವೆ ಸಲ್ಲಿಸಲು ಎಂಥ ತ್ಯಾಗ ಮಾಡುತ್ತಿರುವೆ ಎಂದು ಹೊಗಳುತ್ತಾನೆ. ಶಾಂತಲಾದೇವಿ ನೃತ್ಯ ಭಂಗಿಗಳನ್ನು ನೋಡಿದ ರೂವಾರಿಗಳು "ತಮ್ಮ ಮಹಾರಾಣಿಯು ನೃತ್ಯಕಲಾ ಪ್ರವೀಣೆಯೆಂದು ಕೇಳಿ ತಿಳಿದಿದ್ದೆವು; ಇಂದು ಆಕೆಯು ನೃತ್ಯಭಂಗಿಯಲ್ಲಿ ನಿಂತದುದನ್ನು, ಅದರಲ್ಲಿ ತಾವು ಕಂಡ ಪರಿಪೂರ್ಣತೆಯನ್ನು ನೋಡಿ ಸಾಕ್ಷಾತ್ ಸರಸ್ವತೀ ದೇವಿಯೇ ಈ ರೂಪದಿಂದ ತಮ್ಮ ಮುಂದೆ ನಿಂತಿರುವಳೋ ಎಂಬಂತೆ ಅವಳಿಗೆ ದೀರ್ಘದಂಡ ಪ್ರಣಾಮ ಮಾಡುತ್ತಾರೆ (ಅದೇ; ಪು. ೨೩೩).

ಚೆಲುವನಾರಾಯಣ ವಿಗ್ರಹವನ್ನು ನಿರ್ಮಿಸುವ ಕೆಲಸವನ್ನು ರೂವಾರಿ ಚೌವಣನಿಗೆ, ವಿಜಯನಾರಾಯಣ ವಿಗ್ರಹವನ್ನು ರೂವಾರಿ ಕುಮಾರ ರಮಾಚಾರಿಗೆ ಮತ್ತು ನೃತ್ಯ ಸರಸ್ವತಿಯ ಕೆಲಸ ರೂವಾರಿ ಮಲ್ಲಯಣ್ಣನಿಗೆ ವಹಿಸಲಾಗಿತ್ತು. ಇವರಗಳು ಆಸಕ್ತಿ ವಹಿಸಿ ಕೆಲಸ ಮಾಡುವಂತೆ ಉತ್ಸಾಹ ಹೆಚ್ಚಲು ಶಾಂತಲೆ ಈ ರೀತಿ ಹೇಳುತ್ತಾಳೆ.

"ನೀವು ನಿರ್ಮಿಸುವ ವಿಗ್ರಹಗಳ ಕೆಳಗೆ ನಿಮ್ಮ ಹೆಸರನ್ನು ಕೆತ್ತಿಸುತ್ತೇವೆ. ಅದರಿಂದ ನಿಮ್ಮ ಹೆಸರು ಶಾಶ್ವತವಾಗಿ ನಿಲ್ಲುತ್ತದೆ. ವಿಗ್ರಹವನ್ನು ನೋಡಿ ಮೆಚ್ಚುವ ಜನರಿಗೆ ನಿಮ್ಮ ಕಲಾ ಪ್ರತಿಭೆ ತಿಳಿಯುತ್ತದೆ" (ಅದೇ; ಪು. ೨೩೫) ಎನ್ನುತ್ತಾಳೆ.

ವಿಷ್ಣುವರ್ಧನನ ದೀಕ್ಷಾ ಸ್ವೀಕಾರದ ಸಮಯದಲ್ಲಿ ಶಾಂತಲೆಯು ಐವತ್ತು ವರ್ಷದ ಅನುಭವಿಯಂತೆ ರಾಜಕಾರಣದಲ್ಲಿ ತನ್ನನ್ನು ತಾನು ತೊಡಗಿಸಿಕೊಂಡು ಅರಮನೆಯ ಪ್ರವೇಶ ಮಹೋತ್ಸವದ ಕೆಲಸಗಳನ್ನು, ಪಟ್ಟಾಭಿಷೇಕದ ವ್ಯವಸ್ಥೆಯನ್ನೂ ನೋಡಿಕೊಳ್ಳುತ್ತಿದ್ದಳು. ಇದನ್ನು ಕಂಡ ರಾಜಮಾತೆಯು ಬೆರಗಾಗುತ್ತಾಳೆ. ಶಾಂತಲೆ ಕೇವಲ ನೃತ್ಯದಲ್ಲಿ ಮಾತ್ರ ಪರಿಪೂರ್ಣೆಯಲ್ಲ. ರಾಜಕೀಯದಲ್ಲಿಯೂ ಸಹ ಪರಿಣತಿಯನ್ನು ಹೊಂದಿದ್ದಳು.

"ನಾನು ಕಲಾವಿದೆಯೂ, ಶಾಂತಿಪ್ರಿಯಳೂ ಆಗಿರುವಂತೆ ಹೊಯ್ಸಳ ರಾಜ್ಯದ ಪಟ್ಟದ ರಾಣಿಯೂ ಆಗಿಲ್ಲವೆ ಸ್ವಾಮಿ? ಪ್ರಸಂಗ ಬಂದರೆ ಮಹಾರಾಜರ ಜೊತೆಯಲ್ಲಿ ನಿಂತು ನಿಮ್ಮ ರಾಜ್ಯದ ರಕ್ಷಣೆಗಾಗಿ ಶತ್ರುವಿನೊಡನೆ ಯುದ್ಧ ಮಾಡುವುದಕ್ಕೂ ಪಟ್ಟದರಾಣಿ ಸಿದ್ಧಳಾಗಿದ್ದಾಳೆ" ಎನ್ನುವಾಗ ವಿಷ್ಣುವರ್ಧನನೂ ಆಶ್ಚರ್ಯಪಟ್ಟು ಹೀಗೆ ನುಡಿಯುತ್ತಾನೆ. "ನನ್ನ ಶಾಂತಲೆಯು

ಯುದ್ಧವೆಂದರೆ ಹೆದರಿ ಅಳುತ್ತ ಕುಳಿತುಕೊಳ್ಳುವ ಹೆಣ್ಣಲ್ಲ. ಗೆಜ್ಜೆ ಕಟ್ಟುವ ಕೈಯಲ್ಲಿ ಅವಳು ರಣಗೀತೆಯನ್ನೂ ಹಾಡಬಲ್ಲಳು, ಸಿಂಹಾಸನದ ಮೇಲೆ ನನ್ನ ಪಕ್ಕದಲ್ಲಿ ಕುಳಿತುಕೊಳ್ಳುವಂತೆಯೇ, ರಣರಂಗದಲ್ಲೂ ಖಡ್ಗ ಧರಿಸಿ ಜೊತೆಯಲ್ಲಿ ನಿಲ್ಲಬಲ್ಲ ವೀರನಾರಿಯಾಗಿದ್ದಾಳೆ"(ಅದೇ; ಪು. ೨೪೪) ಎನ್ನುತ್ತಾನೆ. ಇದು ಶಾಂತಲೆಯು ಹೊಂದಿದ ಬಹುವ್ಯಕ್ತಿತ್ವಕ್ಕೆ ಉತ್ತಮ ನಿದರ್ಶನವಾಗಿದೆ.

ಒಟ್ಟನಲ್ಲಿ ಶಾಂತಲೆ ಪತಿ ಹಿತೈಷಿಯಾಗಿ, ರಾಷ್ಟ್ರಭಕ್ತಳಾಗಿ, ಧರ್ಮಸಹಿಷ್ಣುತೆಯ ಸಂಕೇತವಾಗಿ, ಕೊನೆಯಲ್ಲಿ ವಿಪರೀತ ಮನ ನೋಯಿಸಿದ ಸವತಿಯ ಬಗ್ಗೆಯೂ ಅಸಮಾಧಾನ ತಾಳದೆ, 'ಪಿರಿಯರಿಸಿ' ಆಗಬೇಕೆಂಬ ಬಮ್ಮಲೆಯ ಆಸೆಯನ್ನು ನೆರವೇರಿಸುವುದಕ್ಕಾಗಿಯೇ ಪ್ರಾಣತ್ಯಾಗ ಮಾಡಿದ ತ್ಯಾಗಮಯಿಯಾಗಿ ಕಾದಂಬರಿಯಲ್ಲಿ ಚಿತ್ರಿತಗೊಂಡಿದ್ದಾಳೆ.

ಮೃದು ಹೃದಯಿಯೂ, ದಯಾಮಯಿಯೂ ಆದ ಶಾಂತಲೆ ಕೆಲವೊಮ್ಮೆ ರಾಜ್ಯದ ಹಿತವನ್ನು ಕಾಪಾಡಲು ವಜ್ರದಂತೆ ಕಠೋರಳೂ ಆಗುವಳು. ನಿಸ್ವಾರ್ಥಿಯಾಗಿ ಒಳಗೂ, ಹೊರಗೂ ಶುಭ ಪರಿಣಾಮಿಯಾಗಿ ಬಾಳಿನುದ್ದಕ್ಕೂ ವರ್ತಿಸಿದ್ದರಿಂದಲೇ ಇತಿಹಾಸದಲ್ಲಿ ಆಕೆ ಅಜರಾಮರಳಾಗಿದ್ದಾಳೆ.

ಶಾಂತಲೆ ಕಲೆಯಲ್ಲಿ ಪರಿಪೂರ್ಣತೆಯನ್ನು ಹೊಂದಿದಂತೆ, ರಾಜಕೀಯದಲ್ಲೂ ಚತುರೆ ಯಾಗಿದ್ದಳು. ಇವಳ ಏಳಿಗೆಯನ್ನು ಸಹಿಸದ ಬಮ್ಮಲೆಯು ಸಾದಾ ಆಕೆಯನ್ನು ದ್ವೇಷಿಸುತ್ತಿದ್ದಳು. ಬಮ್ಮಲೆಯ ಅಸೂಯೆ, ದ್ವೇಷದಿಂದಾಗಿ ಉತ್ಸಾಹಭರಿತಳಾದ ಶಾಂತಲೆ ಜೀವನದಲ್ಲಿ ಜಿಗುಪ್ಸೆ ಹೊಂದಿ, ವಿಷ್ಣುವರ್ಧನನ ನೆನಪಿನಲ್ಲಿಯೇ ತನ್ನ ಕೊನೆಯುಸಿರನ್ನು ಬಿಡುತ್ತಾಳೆ.

ಶಾಂತಲೆಯನ್ನು ಕುರಿತು ರಚನೆಯಾದ ಈ ಎಲ್ಲ ಕಾದಂಬರಿಗಳಲ್ಲಿ ಶಾಂತಲೆಯ ಪ್ರವೇಶದಿಂದ ಪ್ರಾರಂಭವಾಗಿ, ಅವಳು ಮುಡುಪಿ ಸ್ವರ್ಗಸ್ಥಳಾಗುವ ಸಂದರ್ಭದಲ್ಲಿ ಮುಕ್ತಾಯ ವಾಗಿವೆ. ಇಡೀ ಕಾದಂಬರಿಗಳಲ್ಲಿ ವೈಭವಿಸಿದ ಪಾತ್ರ ಗಂಭೀರವಾಗಿ, ಉದಾತ್ತವಾಗಿ ಕಣ್ಮರೆಯಾಗುವ ದೃಶ್ಯ ಕಣ್ಣಿಗೆ ಕಟ್ಟುವಂತೆ ವರ್ಣಿತವಾಗಿವೆ. ಒಟ್ಟಿನಲ್ಲಿ ಕಾದಂಬರಿಯಲ್ಲಿ ಶಾಂತಲೆಯ ಬಹುಮುಖ ವ್ಯಕ್ತಿತ್ವ ಭವ್ಯವಾಗಿ ಮೂಡಿಬಂದಿದೆ.

**ಚಿನ್ನಾಸಾನಿ**

ದೇವುಡು ಅವರ 'ಚಿನ್ನಾ' ಕಾದಂಬರಿಯೂ ವಿಜಯನಗರ ಸಾಮ್ರಾಜ್ಯದ ಇತಿಹಾಸವನ್ನು ಹಿನ್ನೆಲೆಯಾಗುಳ್ಳ ಒಂದು ಕಾಲ್ಪನಿಕ ಕೃತಿಯಾಗಿದೆ. ವಿಜಯನಗರ ಗೋಲ್ಕೊಂಡಾ ರಾಜ್ಯಗಳ ನಡುವೆ ಸಂಗೀತ, ನೃತ್ಯ ಕಲೆಗಳು ಒಂದು ವಿಶಿಷ್ಟ ಸಂದರ್ಭದಲ್ಲಿ ಯುದ್ಧ ಸಾಧ್ಯತೆಯ ಅಪಾಯವನ್ನು ನಿವಾರಿಸಿ, ಮೈತ್ರಿ ಶಾಂತಿಗಳನ್ನು ಸ್ಥಾಪಿಸುವುದರಲ್ಲಿ ಯಶಸ್ವಿಯಾದ ಅಪೂರ್ವ ಸಾಧನೆಯನ್ನು ರಸಮಯವಾಗಿ ನಿರೂಪಿಸುತ್ತದೆ.

"ಇದು ವಿಜಯನಗರದ ಹಿನ್ನೆಲೆಯಲ್ಲಿ ರಚಿತವಾಗಿರುವ ಸ್ವತಂತ್ರ ಕಾದಂಬರಿ. ರಾಮರಾಯ ನೊಬ್ಬ ಐತಿಹಾಸಿಕ ವ್ಯಕ್ತಿ. ಆತನೇ ವಿಜಯನಗರದ ಕೊನೆಯ ಸಾಮ್ರಾಟ. ಕೃಷ್ಣದೇವರಾಯನು ರಾಮರಾಯನ ಹಿಂದಿನ ಸಾಮ್ರಾಟ. ಆತನ ಕಾಲದಲ್ಲಿ ಕುಹುಯೋಗ ಬಂದಿದ್ದಾಗ ಶ್ರೀ ವ್ಯಾಸರಾಯರು ಅದನ್ನು ಪರಿಹರಿಸಿದರೆಂಬದು ಐತಿಹಾಸಿಕ ಘಟನೆ. ವಿಜಯನಗರದಲ್ಲಿ

ಸಂಗೀತವು ಬಹಳ ಮುಂದುವರಿದಿತ್ತು ಎಂಬ ಚರಿತ್ರೆಯು ಹೇಳಿರುವ ವಿಷಯ. ಹಿಂದೂ ಸಾಮ್ರಾಜ್ಯವಾದ ವಿಜಯನಗರದಲ್ಲಿ ಜಯದೇವ, ಕಾಳಿದಾಸ ಇವರಿಗೆ ಅಪೂರ್ವವಾದ ಗೌರವವಿದ್ದೇ ಇರಬೇಕು ಎಂಬ ಸಂಭಾವನೆ. ಇವೆಲ್ಲ ಸೇರಿ, ಈ ಕಾದಂಬರಿಯು ಹುಟ್ಟಿದೆ. ಆದರೂ ಒಂದು ಮಾತು. ಇದು 'ಚೆನ್ನಳ ಕತೆ' ವಿಜಯನಗರದ ಕಥೆಯಲ್ಲ" (ದೇವುಡು; ೨೦೦೨; ಪು. ಮುನ್ನುಡಿ) ಎಂದು ದೇವುಡು ಅವರು ತಿಳಿಸಿದ್ದಾರೆ. ಈ ಕಾದಂಬರಿಯು ದುರಂತ ಕಥೆ, ಪವಿತ್ರ ಪ್ರೇಮ ಹಾಗೂ ತ್ಯಾಗ ಸಂಪನ್ನತೆಯನ್ನು ಸಾರುತ್ತದೆ.

ಕಥೆಯ ಕಾಲ ತಾಳಿಕೋಟೆ ಯುದ್ಧಕ್ಕೆ ಹತ್ತು ವರ್ಷಗಳ ಹಿಂದಿನ ಕಾಲ. ಈ ಕಥೆ ವಿಜಯನಗರ ಸಾಮ್ರಾಜ್ಯಕ್ಕೆ ಒದಗಿದ ಗಂಡಾಂತರವೊಂದು ತಪ್ಪಿದ ಸುಸಂದರ್ಭದ ಸ್ವಾರಸ್ಯಪೂರ್ಣ ವಿವರಗಳನ್ನು ಚಿತ್ರಿಸುತ್ತದೆ. ಈ ಸಾಧನೆಯಲ್ಲಿ ಮುಖ್ಯ ಪಾತ್ರ ವಹಿಸುವವರು ವಿಜಯನಗರದ ಪ್ರಸಿದ್ಧ ನರ್ತಕಿ ಚೆನ್ನಸಾನಿ ಮತ್ತು ವೀರಪ್ಪ ಶೆಟ್ಟಿ. ಕಥೆ ಆರಂಭವಾಗುವುದೇ ಉತ್ಥಾನ ದ್ವಾದಶಿಯಂದು ವಿಜಯವಿಠ್ಠಲ ದೇವಸ್ಥಾನದಲ್ಲಿ ನಡೆಯುವ ಚೆನ್ನಾಳ ಅಮೋಘ ನೃತ್ಯ ಸೇವೆಯಿಂದ. ಚೆನ್ನಸಾನಿ ಆಸ್ಥಾನದ ನರ್ತಕಿ. ಅವಳು ಹುಟ್ಟಿನಿಂದ ವೇಶ್ಯೆಯಾದರೂ ಪರಿಪೂರ್ಣ ಕಲಾವಿದೆ. ಅಪ್ರತಿಮ ಸುಂದರಿ, ಅಪೂರ್ವ ಕಲಾವಿದೆ, ಚೆನ್ನಾ ಒಬ್ಬ ಗಂಧರ್ವಾಂಗನೆ ಎಂದೇ ಜನರ ಭಾವನೆ. ಅವಳ ನೃತ್ಯಸೇವೆ ವಿಜಯನಗರದ ದೇವಾಲಯಗಳಿಗೆ ಮಾತ್ರ ಮೀಸಲು, ತನ್ನ ಗುರು ಭರತಾಚಾರ್ಯರಿಗೆ, ವಿಜಯನಗರದ ಚಕ್ರವರ್ತಿಗೆ, ದೇವರಿಗೆ ಮಾತ್ರ ಅವಳು ಕೈಮುಗಿಯುವವಳು. ಪ್ರಸಿದ್ಧ ನಟ ಗೋಪಾಲರಾಯನಿಗೆ ತನ್ನ ಜೀವನವನ್ನು ಮೀಸಲು ಇಟ್ಟವಳು.

ರಾಮರಾಯನ ಕಾಲದಲ್ಲಿ ರಾಜ್ಯವ್ಯವಸ್ಥೆ ಪೂರ್ಣವಾಗಿ ಸಡಿಲಗೊಂಡಿರುವ ಪರಿಣಾಮವಾಗಿ ವಿಜಯನಗರದ ಮೇಲೆ ಸುಲ್ತಾನರು ದಂಡೆತ್ತಿ ಬರಬಹುದು ಎಂಬ ವಿಚಾರ ಪ್ರಾಸಂಗಿಕವಾಗಿ ಬರುತ್ತದೆ. ಈ ಸಂಗತಿಗಳನ್ನು ಹೊರತುಪಡಿಸಿದರೆ ಮುಖ್ಯಕಥೆ ಚೆನ್ನಸಾನಿಯನ್ನು ಕುರಿತದ್ದಾಗಿದೆ. ಆ ಕಾಲದ ರಸಿಕ ಜೀವನ, ಓಲಗಗಳ ವೈಭವ, ಸಾಹುಕಾರರ ದರ್ಪ - ಇವು ಕಾದಂಬರಿಯೊಳಗಿನ ಆವರಣಗಳನ್ನು ಚಿತ್ರಿಸುತ್ತದೆ. ಗುರುಗಳಾದ ಭರತಾಚಾರ್ಯ, ನಟ ಗೋಪಾಲರಾಯ, ಸಾಹುಕಾರ ವೀರಪ್ಪ ಶೆಟ್ಟಿ, ಶಾಂಭವಾನಂದ ಮೊದಲಾದ ಪಾತ್ರಗಳು ಮನೋಜ್ಞವಾಗಿವೆ. ರಾಮರಾಯ ಕೇವಲ ನಾಮಮಾತ್ರ ವ್ಯಕ್ತಿಯಾಗಿ ಕಾಣಿಸುತ್ತಾನೆ.

ಕಲೆಯಿಂದಾಗಿ ಚೆನ್ನಸಾನಿ ನೆರೆ ರಾಜ್ಯಗಳಲ್ಲಿಯೂ ಹೆಸರುವಾಸಿಯಾಗಿದ್ದಳು. ಇಂತಹ ವಿದ್ಯಾವಂತೆಯ ಮುಂದೆ ಹಾಡುವುದೇ ಸುಯೋಗವೆಂದುಕೊಂಡು ಆಂಧ್ರ, ಕರ್ನಾಟಕ, ಚೋಳ, ಕೇರಳ, ಮಹಾರಾಷ್ಟ್ರ ಪ್ರಾಂತ್ಯಗಳ ಹಿಂದೂ ವಿದ್ವಾಂಸರು, ಷಾಹಿ ಅರಸರ ಮೆಚ್ಚಿನ ಗವಾಯಿಗಳು ಬಂದು ಸೇರುತ್ತಾರೆ. ಕಾದಂಬರಿಕಾರರೇ ಹೇಳುವಂತೆ, "ಗೋಲ್ಕಂಡ ಬಿಜಾಪುರಗಳ ಸುಲ್ತಾನರೂ ಕೂಡ ವೇಷ ಮರೆಸಿಕೊಂಡು ಬಂದು ಆ ಉತ್ಸವು ಮುಗಿಯುವವರೆಗೂ ಅಲ್ಲಿ ಇದ್ದು ಹೋಗುವರು ಎಂದು ವದಂತಿ" (ದೇವುಡು; ೨೦೦೨; ಪು. ೪) ಚೆನ್ನಸಾನಿ - ರನ್ನಸಾನಿಯರ ಅಭಿನಯ ವಿಲಾಸವನ್ನು ಅಮೋಘವಾದ ರೀತಿಯಲ್ಲಿ ದೇವುಡು ಅವರು ಚಿತ್ರಿಸಿದ್ದಾರೆ.

ಚಿನ್ನಸಾನಿ ವಿದ್ಯಾವಂತೆ, ಭರತಶಾಸ್ತ್ರದಲ್ಲಿ, ವೀಣೆ ನುಡಿಸುವುದರಲ್ಲಿ, ಸಂಗೀತ, ನರ್ತನಗಳಲ್ಲಿ ಇವಳ ಸಮನಾಗಿ ಯಾರೂ ಇರುವುದಿಲ್ಲ. ಮಾರ್ಗ ಮತ್ತು ದೇಶಿಗಳೆರಡರಲ್ಲೂ ಪರಿಣಿತಿಯನ್ನು ಹೊಂದಿದ್ದಳು. ಅಕ್ಕ ರಾಧೆಯಾಗಿ ತಂದೆ, ಕೃಷ್ಣನಾಗಿ ಜಯದೇವನು ರಚಿಸಿದ 'ಅಷ್ಟಪದಿಗಳನ್ನು' ಅಭಿನಯಿಸುತ್ತಿದ್ದರು. ಚಕ್ರವರ್ತಿಗಳ ಆಹ್ವಾನವನ್ನು ತಿರಸ್ಕರಿಸಿದ ವಿದ್ವಾಂಸರು ಚಿನ್ನಸಾನಿಯ ಆಹ್ವಾನವನ್ನು ಎಂದೂ ತಿರಸ್ಕರಿಸುತ್ತಿರಲಿಲ್ಲ. ಚಿನ್ನಸಾನಿಯಂಥ ವಿದ್ಯಾವಂತೆಯ ಮುಂದೆ ಹಾಡಿದರೆ ವಿದ್ಯಾದೇವತೆ ಒಪ್ಪುತ್ತಾಳೆ ಎಂದು ನುಡಿಯುವ ವಿದ್ವಾಂಸರ ಮಾತುಗಳಿಂದ ಚಿನ್ನಸಾನಿ ಯಾವ ರೀತಿಯ ವ್ಯಕ್ತಿತ್ವವನ್ನು ಹೊಂದಿದ್ದಳೆಂದು ಊಹಿಸಬಹುದು. ಚಿನ್ನಸಾನಿ, ರನ್ನಸಾನಿಯರು ನಾಟೀ ರಾಗದಲ್ಲಿ ನಾಂದಿಯನ್ನು ಹಾಡಿ ಸಭಾಪತಿಗಳಿಗೆ ಕೈ ಮುಗಿದರು. ರಾಧೆ ವೇಷವನ್ನು ಧರಿಸಿದ್ದ ಚಿನ್ನಳ ವೇಷಭೂಷಣ, ಕೃಷ್ಣನಿಗಾಗಿ ಕಾಯುತ್ತಿರುವುದು. ಕೃಷ್ಣ ಬಂದೊಡನೆ ಆತನನ್ನು ಉಪಚರಿಸಿದ ರೀತಿ, ಗೋಪಾಲರಾಯನನ್ನು ಕಂಡೊಡನೆ, ಆತನೇ ಕೃಷ್ಣನೆಂದು ನೋಡುತ್ತಾ ಬಿಕ್ಕಿ ಬಿಕ್ಕಿ ಆಳುವ ದೃಶ್ಯ, ಕೃಷ್ಣನು ರಾಧೆಯನ್ನು ಸಂತೈಸಿ ಆಕೆಯನ್ನು ತಬ್ಬಿಕೊಂಡಾಗ, ಅವರ ಅಭಿನಯ ಮುಗಿಯುತ್ತದೆ. ಕಾದಂಬರಿಯಲ್ಲಿ ಇದರ ವರ್ಣನೆಯಂತೂ ಬಹು ಸೊಗಸಾಗಿ ಮೂಡಿಬಂದಿದೆ. ಇವರ ಅಭಿನಯವನ್ನು ನೋಡಿದ ಜನರೆಲ್ಲರು ಸಂತೋಷವನ್ನು ವ್ಯಕ್ತಪಡಿಸುತ್ತಾರೆ. ಅಭಿನಯದ ನಂತರ ಚಿನ್ನಸಾನಿ ಗೋಪಾಲರಾಯನೊಂದಿಗೆ ಸಂಭಾಷಣೆಯಲ್ಲಿ ತೊಡಗುತ್ತಾಳೆ. ಮಾರುವೇಷದಲ್ಲಿ ಬಂದ ಗೋಪಾಲರಾಯನನ್ನು ಕಂಡ ಚಿನ್ನಸಾನಿ ತನ್ನ ನಿಜವಾದ ಕೃಷ್ಣ ಬಂದನಲ್ಲ ಎಂದು ತನ್ನನ್ನು ತಾನು ಕಳೆದುಕೊಂಡು ಆಳುವ ಸನ್ನಿವೇಶದಿಂದ ಗೋಪಾಲರಾಯನಿಗೆ ಆಕೆ ತನ್ನ ಮೇಲೆ ಇಟ್ಟ ಪ್ರೀತಿ ಎಂತಹದೆಂದು ತಿಳಿಯುತ್ತದೆ.

ಅರಮನೆಯಲ್ಲಿ ನಡೆದ ಒಟ್ಟು ಐದು ನಾಟಕಗಳನ್ನು ನೋಡಿದ ಸ್ವಾಗತ ಸಮಿತಿಯವರು ಗೋಪಾಲರಾಯನಿಗೆ ಅಭಿನಂದನ ಸಭೆಯನ್ನು ಏರ್ಪಡಿಸುತ್ತಾರೆ. ಈ ಸಭೆಗೆ ವೀರಪ್ಪ ಶೆಟ್ಟರನ್ನು ಅಧ್ಯಕ್ಷನಾಗಲು ಹೇಳುತ್ತಾರೆ. ವೀರಪ್ಪ ಶೆಟ್ಟಿಯು ನಾನು ಅಧ್ಯಕ್ಷನಾಗಬೇಕಾದರೆ ಚಿನ್ನಸಾನಿ ಸಂಗೀತ ಕಛೇರಿಯನ್ನು ನಡೆಸಿಕೊಡಬೇಕೆಂದು ಹೇಳುತ್ತಾನೆ. ಅದರಂತೆ ಚಿನ್ನಸಾನಿ ಸಂಗೀತ ಕಛೇರಿಯನ್ನು ನಡೆಸಿಕೊಡುತ್ತಾಳೆ. ಚಿನ್ನಸಾನಿ ಅಭಿನಯ ಮಾಡಿಕೊಂಡು ಆಡಿದ ಮಾತುಗಳು, ಅವಳು ಅಭಿನಯಿಸಿದ ಭಂಗಿ, ಮುದ್ರೆಗಳೆಲ್ಲವು ಅವಳಿಗೆ ವಿಷ್ಣುವು ಸರ್ವವ್ಯಾಪಿಯಾಗಿದ್ದಾನೆನೂ ಎನ್ನುವ ಭಾವವನ್ನು ಅನುಭವಕ್ಕೆ ತಂದುಕೊಡುವಂತೆ ಅವಳು ಅಮೋಘವಾಗಿ ತನ್ನ ಹಾವಭಾವವನ್ನು ವ್ಯಕ್ತಪಡಿಸುತ್ತಾಳೆ.

ವೀರಪ್ಪ ಶೆಟ್ಟಿ - ಚಿನ್ನಸಾನಿಯನ್ನು ಭೇಟಿಯಾಗಲು ಅವಳ ಮನೆಗೆ ಹೋದಾಗ ಅವಳ ಸೌಂದರ್ಯಕ್ಕೆ ಕ್ಷಣಕಾಲ ಮಾರುಹೋಗುತ್ತಾನೆ. ಇವನ ಮನಸ್ಸಿನಲ್ಲಿ ಉಂಟಾದ ಅಲ್ಲೋಲ ಕಲ್ಲೋಲವನ್ನು ಚಿನ್ನಸಾನಿ ಗಮನಿಸುತ್ತಾಳೆ. ಚಿನ್ನಸಾನಿಯ ರೂಪ ಲ್ಯಾವಣದ ಬಗ್ಗೆ ವರ್ಣನೆಯಿದೆ.

ಕಲಾಪ್ರೇಮಿಯಾದ ಗೋಲ್ಕೊಂಡಾದ ಸುಲ್ತಾನ ತನ್ನ ದರ್ಬಾರಿಗೆ ಚಿನ್ನಸಾನಿಯನ್ನು ಕರೆಸಿಕೊಂಡು ಅವಳ ನೃತ್ಯ ಪ್ರದರ್ಶನವನ್ನು ಅಲ್ಲಿ ನಡೆಸಿಕೊಡಬೇಕೆಂದು ಆಸೆಪಡುತ್ತಾನೆ. ಚಿನ್ನಸಾನಿ ಓರ್ವ 'ವೇಶ್ಯೆ' ಎಂಬುದನ್ನು ಕ್ಷಣಕಾಲ ಮರೆಯಿಸುವಷ್ಟು ಅದ್ಭುತವಾದ ನೃತ್ಯ

ಪ್ರದರ್ಶನ ನೀಡುತ್ತಿದ್ದಳು. ಅಲ್ಲಿ ಸೇರಿದ್ದವರೆಲ್ಲಾ "ಇವಳು ಮಾನವಿಯಲ್ಲ, ಗಂಧರ್ವಳೂ ಅಲ್ಲ, ಯಾವಳೋ ವಿದ್ಯಾಧರಿ ಇರಬೇಕು. ನರ್ತನ ವಿದ್ಯಾದೇವಿಯಿರಬೇಕು. ಅವಳು ಸೂಳೆಯ ಜಾತಿ. ಇಲ್ಲದಿದ್ದರೆ ಅವಳ ವಿದ್ಯೆಗೆ ಅವಳ ಪಾದಪೂಜೆ ಮಾಡಬೇಕು" (ಅದೇ; ಪು. ೧) ಎನ್ನುವರು. ಚಿನ್ನಸಾನಿಯಂಥ ಪ್ರಬುದ್ಧ ಕಲಾವಿದೆ ರಾಜಕೀಯ ಕುಟಿಲೋಪಾಯಗಳಿಗೆ ಬಲಿಯಾಗುವ ವಿಪರ್ಯಾಸ ಒದಗಿ ಬರುತ್ತದೆ. ಇದಕ್ಕೆ ಮುಖ್ಯಕಾರಣ ವಜ್ರ ವ್ಯಾಪಾರಿ ವೀರಪ್ಪ ಶೆಟ್ಟಿ. ಇವನು ಸುಲ್ತಾನನ ಆಸೆಯನ್ನು ನೆರವೇರಿಸಲು ಮತ್ತು ಆತನಿಂದ ವಜ್ರದ ಗಣಿಯ ಗುತ್ತಿಗೆ ಪಡೆಯುವ ಹಂಬಲದಿಂದ ಚಿನ್ನಸಾನಿ ಗೋಲ್ಕೊಂಡಕ್ಕೆ ಹೋಗಲು ಒಪ್ಪುವಂತೆ ಹುನ್ನಾರ ನಡೆಸುತ್ತಾನೆ. ಗೋಲ್ಕೊಂಡ, ಬಿಜಾಪುರಗಳು ಅಷ್ಟಾಗಿ ವಿಜಯನಗರದ ವಿರುದ್ಧ ಯುದ್ಧ ಮಾಡುವ ಇರಾದೆಯಿಲ್ಲದಿದ್ದರೂ ಉಳಿದ ಬಹಮನೀ ರಾಜ್ಯಗಳು ಅತೀವ ಯುದ್ಧಾಕಾಂಕ್ಷಿಗಳಾಗಿದ್ದವು. ಸುಲ್ತಾನ ಶಾಂತಿಪ್ರಿಯನೂ, ಕಲಾಪ್ರೇಮಿಯೂ ಆಗಿದ್ದು, ವಿಜಯನಗರದೊಡನೆ ಶಾಂತಿ ಕಾಪಾಡುವ ಒಪ್ಪಂದಕ್ಕೆ ಬರಲು ಇಷ್ಟಪಡುತ್ತಿದ್ದ. ಇತ್ತ ವಿಜಯನಗರದ ಚಕ್ರವರ್ತಿ ರಾಮರಾಯನೂ ಈ ಸಂದರ್ಭದಲ್ಲಿ ಯುದ್ಧಕ್ಕೆ ಸಿದ್ಧನಿರಲಿಲ್ಲ, ಅವನಿಗೂ ಕಾಲಾವಕಾಶ ಬೇಕಿದ್ದಿತು. ಹಾಗಾಗಿ ವೀರಪ್ಪ ಶೆಟ್ಟಿ ಗೋಲ್ಕೊಂಡಾದೊಡನೆ ಶಾಂತಿ ಕರಾರಿಗಾಗಿ ಮಾತುಕತೆ ನಡೆಸುವಾಗ ಅವನ ಪ್ರಯತ್ನ ಫಲಕಾರಿಯಾಗುತ್ತದೆ. ಸುಲ್ತಾನ ಈ ಒಪ್ಪಂದದ ಹಿಂದೆ ಚಿನ್ನಸಾನಿಯ ನೃತ್ಯದ ಬಗ್ಗೆ ಅವನಿಗಿರುವ ಕಾಳಜಿಯೂ ಇದಕ್ಕೆ ಪ್ರೇರಕವಾಗುತ್ತದೆ. ವೀರಪ್ಪ ಶೆಟ್ಟಿಯ ಒಳಸಂಚಿಗೆ ಚಿನ್ನಸಾನಿ ಯಾವ ರೀತಿ ಬಲಿಯಾದಳು ಎಂಬುದನ್ನು ಲೇಖಕರು ಈ ಪಾತ್ರದ ಮೂಲಕ ಚಿತ್ರಿಸಿದ್ದಾರೆ.

ಹಿಂದೂಗಳಲ್ಲಿದ್ದ ಆಂತರಿಕ ಬಿರುಕುಗಳಿಂದಾಗಿ ಪರಕೀಯರ ದಾಳಿ ಸರಾಗವಾಗಿ ನಡೆಯಿತೆಂಬುದರ ಪರೋಕ್ಷ ಸೂಚನೆಗಳು ಕಾದಂಬರಿಯಲ್ಲಿ ಅನೇಕ ಕಡೆ ಇವೆ. ಹಾಗೆಯೇ ಐಕ್ಯತಾ ಭಾವನೆ ಸ್ಥಾಪನೆಯಾಗಬೇಕೆಂಬ ಆಶಯ ಕೂಡ ವ್ಯಕ್ತವಾಗಿದೆ. ಬೀದರ್, ಅಹಮ್ಮದ್‌ನಗರದ ರಾಯಭಾರಿಗಳು ಹಿಂದೂಸ್ಥಾನವನ್ನೆಲ್ಲಾ ವಶಪಡಿಸಿಕೊಳ್ಳುವ ಮಾರ್ಗೋಪಾಯಗಳನ್ನು ಸೂಚಿಸಿದಾಗ ಗೋಲ್ಕೊಂಡದ ಸುಲ್ತಾನ ಹಿಂದೂಗಳಲ್ಲಿ ಮೈತ್ರಿ ಸಾಧಿಸುವುದೇ ಸರಿಯಾದ ಕ್ರಮವೆಂದು ತಿಳಿಸುತ್ತಾನೆ. ವಿಜಯನಗರದ ಕೊನೆಯ ದೊರೆ ರಾಮರಾಯ ಬಿಜಾಪುರದ ಬಹುಮನಿ ಸುಲ್ತಾನರ ಅಪೇಕ್ಷೆಯಂತೆ ಒಮ್ಮೆ ಚಿನ್ನಸಾನಿಯ ನರ್ತನವನ್ನು ಗೋಲ್ಕೊಂಡದಲ್ಲಿ ನಡೆಸಲು ಒಪ್ಪುತ್ತಾನೆ. ಇದು ರಾಜತಾಂತ್ರಿಕ ಕಾರಣಕ್ಕಾಗಿ ನಡೆದ ಸಂಧಾನವಾಗಿರುತ್ತದೆ. ಚಿನ್ನಸಾನಿಗೆ ಇದು ಇಷ್ಟವಿಲ್ಲದಿದ್ದರೂ ರಾಜ್ಯಕ್ಕಾಗಿ ತನ್ನನ್ನು ಅರ್ಪಿಸಿಕೊಳ್ಳಲು ನಿರ್ಧರಿಸಿ ಗೋಲ್ಕೊಂಡಕ್ಕೆ ಹೋಗಲು ಒಪ್ಪುತ್ತಾಳೆ.

"ರಾಯರೂ ಯುದ್ಧೋತ್ಸಾಹವನ್ನು ಹಿಂದಿಟ್ಟು ಸಂಧಿಪತ್ರಕ್ಕೆ ಸಹಿ ಹಾಕಲು ಮಂತ್ರಿಗಳಿಗೆ ಅಪ್ಪಣೆಯಿತ್ತರು, ಯಜಮಾನ ವೀರಪ್ಪ ಶೆಟ್ಟರೂ, ನಟರಾಯ ಕಂಠೀರವ ಗೋಪಾಲರಾಯರೂ ಕೂಡಲೇ ಬರಬೇಕೆಂದು ನಿರೂಪವನ್ನು ಕಟ್ಟೆಗೆಯವರು ತೆಗೆದುಕೊಂಡು ಹೋದರು. ಭರತಾಚಾರ್ಯರೂ, ಚಿನ್ನಸಾನಿಯೂ ಬರಬೇಕೆಂದು ಅವರಿಗೆ ಅರಮನೆಯಿಂದ ಕರೆಯು

ಹೋಯಿತು" (ಅದೇ; ಪು. ೧೧೪). ಚಿನ್ನಸಾನಿಯನ್ನು ಗೋಲ್ಕೊಂಡಕ್ಕೆ ಕಳುಹಿಸುವುದೊಂದೇ ಉಳಿದಿರುವ ಏಕೈಕ ಗುರಿ. ಒಂದು ಯುದ್ಧವನ್ನು ತಪ್ಪಿಸಬೇಕಾದರೆ ಆಕೆ ಅಲ್ಲಿಗೆ ಹೋಗಿ ಸಂಗೀತ ಕಛೇರಿ ಮಾಡಬೇಕು ಎಂಬುದು ರಾಮರಾಯನ ಅಪೇಕ್ಷೆ. ಅದಕ್ಕಾಗಿ ಚಿನ್ನಸಾನಿಯನ್ನು ಒಪ್ಪಿಸಬೇಕೆಂದೂ, ಇಷ್ಟವಿಲ್ಲದ ಕೆಲಸವಾದರೂ ಅನಿವಾರ್ಯವಾಗಿ ಮಾಡಲೇಬೇಕೆಂದು ಗೋಪಾಲರಾಯ ಮತ್ತು ಭರತಾಚಾರ್ಯರನನ್ನು ಒತ್ತಾಯಿಸುತ್ತಾನೆ. ಚಿನ್ನಸಾನಿ ರಾಮರಾಯನನ್ನು ಭೇಟಿಯಾಗುವ ಪ್ರಸಂಗದಲ್ಲಿ ನರ್ತಕಿಯೊಬ್ಬಳು ಅರಸನ ನಿರ್ಬಂಧಗಳಿಗೆ ಕಟ್ಟುಬಿದ್ದು ಅನುಭವಿಸುವ ಯಾತನೆಗಳನ್ನು ಕಾದಂಬರಿಕಾರರು ಹೃದಯಸ್ಪರ್ಶಿಯಾಗಿ ಚಿತ್ರಿಸಿದ್ದಾರೆ. "ತಂತಿ ಕಿತ್ತು ಹೋದರೆ ವೀಣೆ ಬಾರಿಸುವುದಿಲ್ಲವಷ್ಟೇ? (ಅದೇ; ಪು. ೧೧೨) ಎಂದು ಅರಸನನ್ನು ಪ್ರಶ್ನಿಸಿ, ಸಂಬಂಧವೇ ಕಡಿದುಹೋದಷ್ಟು ವೇದನೆಯನ್ನು ಅನುಭವಿಸುತ್ತಾಳೆ. "ವಿಜಯನಗರದ ಒಂದೇ ಒಂದು ಅನಾಥ ಪ್ರಾಣಿಯು ಇಲ್ಲವಾದರೆ ರಾಜಧಾನಿಗೆ ಏನೂ ಹಾನಿಯಾಗುವುದಿಲ್ಲ. ಈ ಪ್ರಭುವಿಗೆ ಮುಗಿದ ಕೈಗಳು ಇನ್ನೊಬ್ಬ ಪ್ರಭುವೆನ್ನಿಸಿಕೊಂಡವನಿಗೆ ಮುಗಿಯುವುದಿಲ್ಲ. ಅದು ನನ್ನ ವ್ರತ. ಬಲವಂತ ಮಾಡಬೇಡಿ, ನನಗೆ ಆ ತೋಳಗಳ ಗುಂಪಿಗೆ ಹೋಗುವುದಕ್ಕೆ ಇಷ್ಟವಿಲ್ಲ. ಅಲ್ಲಿಗೆ ಹೋದರೇನೇ ನಾನು ಪ್ರಾಣ ಸಹಿತವಾಗಿ ಹಿಂದಿರುಗಿ ಬರುವ ಧೈರ್ಯ ನನಗಿಲ್ಲ" (ಅದೇ; ಪು. ೧೧೩) ಎನ್ನುತ್ತಾಳೆ.

ಚಕ್ರವರ್ತಿಗೆ ಮತ್ತು ತನ್ನ ಗುರುಗಳಾದ ಭರತಾಚಾರ್ಯರಿಗೆ ವಂದಿಸಿದ ಕೈಗಳು ಬೇರೆಯವರಿಗೆ ತಲೆಬಾಗುವುದಿಲ್ಲ ಎನ್ನುವ ಆಕೆ, ನಟರಾಯ ಕಂಠೀರವರಿಗೆ ಸನ್ಮಾನ ಸಭೆ ನಡೆದಾಗ ಆಕೆಯೇ ಸಂಗೀತ ಕಛೇರಿ ನಡೆಸಿಕೊಳ್ಳಲು ಒಪ್ಪಿಕೊಂಡಿದ್ದಳು. ವೀರಪ್ಪ ಶೆಟ್ಟಿ ಆ ದಿನ ಅಧ್ಯಕ್ಷನಾಗಬೇಕಿತ್ತು. ಬಲು ಬುದ್ಧಿವಂತಿಕೆಯಿಂದ ನನ್ನನ್ನು ನಾನಾಗಿ ಓಡಿ ಹೋಗುವಂತೆ ಮಾಡಿ, ಭರಾತಾರ್ಯರನ್ನು ಅಧ್ಯಕ್ಷ ಸ್ಥಾನದಲ್ಲಿ ಕುಳ್ಳಿರಿಸಿ, ಅವರೆದುರಿಗೆ ಹಾಡಿ ತನ್ನ ಪ್ರತಿಜ್ಞೆಯನ್ನು ಸಾಧಿಸಿಕೊಂಡ ಹಠದ ಹೆಣ್ಣು ಆಕೆ ಎಂದು ವೀರಪ್ಪಶೆಟ್ಟಿ ಅವಳಲ್ಲಿದ್ದ ಹಠ ಮಾರಿ ಗುಣವನ್ನು ಹೇಳುತ್ತಾನೆ.

'ಎಷ್ಟಾದರೂ ನೀನು ಹೆಂಗಸು, ಹಠ ಹಿಡಿಯಬಾರದು, ನಾನು ಇರುವುದಿಲ್ಲವೆ? ಬಾ ಹೋಗಿ ಬರೋಣ' ಎಂದು ಗೋಪಾಲರಾಯ ನುಡಿಯುವಲ್ಲಿ, ಗಂಡಸಿನ ದರ್ಪ ಅಧಿಕಾರ, ಹೆಣ್ಣು ಎಷ್ಟೇ ಉನ್ನತ ಸ್ಥಾನಕ್ಕೆ ಏರಿದರೂ ಅವನು ಹೇಳಿದಂತೆ ಕೇಳಬೇಕು ಎನ್ನುವ ನಿರ್ಬಂಧನೆಗಳನ್ನು ಕಾಣಬಹುದು. ಚಿನ್ನಸಾನಿ ಸಭೆಯಲ್ಲಿ ನಡೆದುದೆಲ್ಲವನ್ನೂ ನೆನಪಿಸಿಕೊಂಡು ಚಿಂತಿಸುತ್ತಾ, ಸರಿ ನಾನು ಮಹಾಸ್ವಾಮಿಯವರ ಅಪ್ಪಣೆಯಂತೆ ಗೋಲ್ಕಂಡದ ಆಸ್ಥಾನಕ್ಕೆ ಹೋಗಿಬರಲು ಒಪ್ಪಿಕೊಂಡಿದ್ದೇನೆ ಎನ್ನುವಲ್ಲಿ ಆಕೆ ಸಾಮಾನ್ಯ ಹೆಣ್ಣಾಗಿ ಈ ಸಂದರ್ಭದಲ್ಲಿ ಕಾಣಿಸಿಕೊಂಡು ತನ್ನ ಅಸಹಾಯಕತೆಯಿಂದ ಲಾಭ ಪಡೆದವರನ್ನು ಮನಸ್ಸಿನಲ್ಲಿ ಶಪಿಸುತ್ತಾ ಸುಮ್ಮನಾಗುತ್ತಾಳೆ. ಹೆಣ್ಣು ಎಷ್ಟೇ ಬುದ್ಧಿವಂತೆ, ರೂಪವತಿ, ಸಂಗೀತ, ನೃತ್ಯಗಳಲ್ಲಿ ಪ್ರವೀಣೆ ಯಾಗಿದ್ದರೂ ಸಹ ಅಧಿಕಾರಸ್ಥ ದೊರೆಗಳ ನಿರ್ಬಂಧನೆಗಳಿಗೆ ಬಲಿಯಾಗುವ ಈ ಸನ್ನಿವೇಶ ಇಂದಿಗೂ ಅನ್ವಯಿಸುತ್ತದೆ ಎಂದರೆ ತಪ್ಪಾಗಲಾರದು.

ಈ ರಾಜ್ಯದ ಉಪ್ಪು ತಿಂದ ದಾನಿ ನಾನು ರಾಜ್ಯದ ಹಿತಕ್ಕಾಗಿ ಗೋಲ್ಕೊಂಡಕ್ಕೆ ಹೋಗುವೆನೆಂದು, ಎಲ್ಲರ ಮಾತಿಗೆ ಮಣಿದು ಒಪ್ಪುತ್ತಾಳೆ. ರಾಜನ ಬಗ್ಗೆ ಅವಳಿಗಿದ್ದ ಅಭಿಮಾನ, ಬಿಂಕ, ಆಕೆಯಲ್ಲಿದ್ದ ಗತ್ತು ಎಲ್ಲವೂ ಚಕ್ರವರ್ತಿಗೆ ಮೆಚ್ಚುಗೆಯಾಗುತ್ತದೆ.

"ಚಿನ್ನಸಾನಿಯ ಗುರು ಭರತಾಚಾರ್ಯ, ಆಕೆಯ ಪ್ರೇಮಿ ಗೋಪಾಲರಾಯ, ತಂಗಿ ರನ್ನಸಾನಿ ಎಲ್ಲರೂ ಗೋಲ್ಕೊಂಡಕ್ಕೆ ಪ್ರಯಾಣ ಬೆಳೆಸುತ್ತಾರೆ. ಅಲ್ಲಿ ನಡೆದ ಸಂಗೀತ ಗೋಷ್ಠಿಗಳು, ಚಿನ್ನಸಾನಿಯ ಕಛೇರಿಗಳು, ಭರತಾಚಾರ್ಯ, ಗೋಪಾಲರಾಯ, ಚಿನ್ನಸಾನಿ, ರನ್ನಸಾನಿ ಒಟ್ಟುಗೂಡಿ ನಡೆಸಿಕೊಡುವ ಸಂಗೀತ ವೈವಿಧ್ಯವನ್ನು ಸವಿವರವಾಗಿ ನಿರೂಪಿಸಲಾಗಿದೆ. "ದೇವುಡು ತಮಗಿದ್ದ ಸಂಗೀತ ಜ್ಞಾನವನ್ನೆಲ್ಲಾ ಇಲ್ಲಿ ಪ್ರಕಟಿಸುತ್ತಾರೆ" (ಕುಮಾರಚಲ್ಯ; ೨೦೦೮; ಪು. ೧೪೧). ಚಿನ್ನಸಾನಿಯ ನೃತ್ಯ ವೈಭವವನ್ನು ವರ್ಣಿಸುವುದರ ಜೊತೆಗೆ ಜಯದೇವನ ಕೆಲವು ಅಷ್ಟಪದಿಗಳನ್ನು ಉಲ್ಲೇಖಿಸುತ್ತಾರೆ. ವಿಜಯನಗರದ ಅರಸರ ಕಾಲದಲ್ಲಿ ಸಂಗೀತ, ನೃತ್ಯ ಕಲೆಗಿದ್ದ ಮಾನ್ಯತೆ, ಪ್ರೋತ್ಸಾಹಗಳು ಎಷ್ಟು ಎಂಬುದನ್ನು ಪರಿಚಯಿಸುವುದೇ ಕಾದಂಬರಿಕಾರರ ಮುಖ್ಯ ಉದ್ದೇಶವಾಗಿದೆ.

ಶಾಂತಿ ಸ್ಥಾಪನೆಗಾಗಿ ಕಲೆ ಉಪಯೋಗವಾಗುವ ಈ ಸನ್ನಿವೇಶ ದೇವುಡು ಅವರ ಈ ಕಾದಂಬರಿಯ ಮುಖ್ಯ ಸ್ವಾರಸ್ಯ. ಜೊತೆಗೆ ಓದುಗನ ಮನಸ್ಸನ್ನು ಸೆಳೆಯುವ ಒಂದು ಆಕರ್ಷಕ ಕಾದಂಬರಿಯಾಗಿದೆ. ಲೇಖಕರು ಚಿನ್ನಾಳ ಪ್ರೇಮ ಕಥಾನಕಕ್ಕೆ ಹೆಚ್ಚು ಪ್ರಾಶಸ್ತ್ಯ ಕೊಡುತ್ತಾರೆ. ಮುನ್ನುಡಿಯಲ್ಲಿ ಅವರು ಹೇಳುವ ಈ ಮಾತು ಇದಕ್ಕೆ ಸಾಕ್ಷಿ. 'ಇದು ಚಿನ್ನಾಳ ಕಥೆ, ವಿಜಯನಗರದ ಕಥೆಯಲ್ಲ'.

ಕಾದಂಬರಿಯ ಪರ್ಯಾಯ ಶೀರ್ಷಿಕೆಯೂ 'ಅವಳ ಕಥೆ' ಎಂದಿರುವುದು ಗಮನಾರ್ಹ. ಜನ್ಮತಃ ಚಿನ್ನಾ ವೇಶ್ಯೆಯಾದರೂ ಅವಳು ನಟಶ್ರೇಷ್ಠ ಗೋಪಾಲರಾಯನಿಗೆ ಸದಾ ನಿಷ್ಠಳು. ಅವಳ ಜೀವನದ ತೀವ್ರವಾದ ಹಂಬಲವೆಂದರೆ, ತಾನು ಅವನ ಪತ್ನಿಯಾಗಬೇಕಿತ್ತೆಂಬುದು. ಅವನು ವಿವಾಹಿತ, ಅವಳು ವೇಶ್ಯೆ ಈ ಜನ್ಮದಲ್ಲಿ ಅವಳು ಗೋಪಾಲರಾಯ ಧರ್ಮಪತ್ನಿಯಾಗುವುದು ಸಾಧ್ಯವಿಲ್ಲವಾದರೂ ಮುಂದಿನ ಜನ್ಮದಲ್ಲಾದರೂ ಆ ಹಂಬಲ ಪೂರೈಸಲೆಂದು ಅವಳು ಹಪಹಪಿಸುತ್ತಾಳೆ. ಕಾದಂಬರಿಯಲ್ಲಿ ಆಕೆಯ ಮನೋವೇದನೆಯನ್ನು ಕಾಣಬಹುದು.

ಗೋಲ್ಕೊಂಡದಲ್ಲಿ ತಮ್ಮ ಕಛೇರಿ ಮುಗಿದ ಮೇಲೆ ಮೊದಲೇ ಯೋಜಿಸಿಕೊಂಡಂತೆ ಎಲ್ಲರೂ ಶ್ರೀಶೈಲಕ್ಕೆ ಪ್ರಯಾಣ ಬೆಳೆಸುತ್ತಾರೆ. ಇದು ಕಾದಂಬರಿಯ ಕೊನೆಯ ಘಟ್ಟ. ಇಲ್ಲಿನ ಒಂದು ಭಾಗದಲ್ಲಿ ಚಿನ್ನಸಾನಿ ಮತ್ತು ಗೋಪಾಲರಾಯನ ಮಧ್ಯೆ ಇದ್ದ ಗಾಢವಾದ ಪ್ರೇಮ ಸಂಬಂಧವನ್ನು ಕುರಿತ ಪ್ರಸ್ತಾಪವಿದೆ. ಚಿನ್ನಸಾನಿಯ ಮನೋಭಿಲಾಷೆಗಳು ಬಾಹ್ಯಸುಖವನ್ನು ಅಪೇಕ್ಷಿಸುವಂಥವಲ್ಲ, ಆಕೆಗೆ ಪವಿತ್ರ ಪ್ರೇಮದ ಕಲ್ಪನೆ, ಗೃಹಿಣಿಯಾಗುವ ಹಂಬಲಗಳಿವೆ. ಗೋಪಾಲರಾಯ ಸಂಸಾರಿಯಾಗಿದ್ದೂ, ಚಿನ್ನಸಾನಿಯಲ್ಲಿ ಅಗಾಧವಾದ ಪ್ರೀತಿ, ಅಭಿಮಾನವನ್ನು ಇಟ್ಟುಕೊಂಡಿದ್ದಾನೆ. ಇಬ್ಬರೂ ಪರಸ್ಪರ ಅಗಲಲಾರದ ಸಂದಿಗ್ಧಗಳಲ್ಲಿ ಪರಿತಪಿಸುತ್ತಾರೆ. ಗಂಡು-ಹೆಣ್ಣಿನ ಸಂಬಂಧವನ್ನು ಇಲ್ಲಿ ಕೇವಲ ಕಾಮಕೇಂದ್ರಿತ ದೃಷ್ಟಿಯಿಂದ ಲೇಖಕರು ಪರಿಭಾವಿಸದೇ

ತ್ಯಾಗದ ನೆಲೆಗೆ ಕೊಂಡೊಯ್ಯುತ್ತಾರೆ. ಶ್ರೀಶೈಲದ ಬೆಟ್ಟ ಗುಡ್ಡ, ಕಾಡುಗಳಲ್ಲಿ ಪ್ರೇಮಿಯೊಡನೆ ಅಲೆದಾಡುವಾಗ ಚಿನ್ನಸಾನಿಗೆ ಅಪಾರವಾದ ಆನಂದವಾಗುತ್ತದೆ. "ವಿಜಯನಗರದಲ್ಲಿ ಭಾರಿ ಭವನದಲ್ಲಿದ್ದರೂ ಪಂಜರದಲ್ಲಿನ ಹಕ್ಕಿಯಂತೆ ಮರೆಯಲ್ಲಿದ್ದವಳು ಇಂದು ಸ್ವೇಚ್ಛೆಯಾಗಿ ತಿರುಗುತ್ತಿದ್ದಾಳೆ. ಅಂಕೆಶಂಕೆಯಿಲ್ಲದೆ ತಾನೇ ತನ್ನ ಮನೋಹರನೊಡನೆ ಏಕಾಂಗಿಯಾಗಿ ತಿರುಗುತ್ತಿರುವುದೇ ಅವಳಿಗೆ ಸ್ವರ್ಗಕ್ಕೆ ಹೋಗಿ ಬಂದಷ್ಟು ಸಂತೋಷವಾಗುತ್ತದೆ" (ದೇವುಡು; ಪು. ೧೫೪).

ಗೋಲ್ಕಂಡದ ಸುಲ್ತಾನ ಚಿನ್ನಸಾನಿಯನ್ನು ತನ್ನ ಆಸ್ಥಾನಕ್ಕೆ ಕರೆಸಿಕೊಂಡು ಅವಳಿಂದ ನೃತ್ಯ ಸಂಗೀತ ಪ್ರದರ್ಶನದಿಂದಾಗಿ ಅವಳ ಅಮೋಘವಾದ ಅಭಿನಯವನ್ನು ಕಾಣಲು ಏನು ಮಾಡಲು ಸಿದ್ಧನಾದದ್ದನ್ನು ಕಲೆ ಹಾಗೂ ಈಕೆಯ ಮುಂದೆ ಹಾಡುವುದೇ ಸುಯೋಗ ಎನ್ನುವ ವಿದ್ವಾಂಸರ ಮಾತುಗಳಿಂದ ಚಿನ್ನಸಾನಿ ಕಲೆಗಾಗಿಯೇ ಜನಿಸಿದಳೇನೋ ಎನಿಸುತ್ತದೆ. ಚಿನ್ನಸಾನಿಯಲ್ಲಿದ್ದ ಬುದ್ಧಿವಂತಿಕೆ, ನಯ ನಾಜೂಕು, ತನ್ನ ರಾಜನ ಬಗ್ಗೆಯಿದ್ದ ಅಭಿಮಾನ, ಗುರುಗಳ ಬಗೆಗಿನ ಗೌರವ, ಗೋಪಾಲರಾಯನಲ್ಲಿನ ಪ್ರೀತಿ, ಅವಳ ಸ್ವ-ಸಾಮರ್ಥ್ಯದ ಸಂಗೀತ, ನೃತ್ಯ ಅಭಿನಯಗಳು ಓದುಗರನ್ನು ಆಕರ್ಷಿಸುತ್ತವೆ. ಒಟ್ಟಿನಲ್ಲಿ ಈ ಪಾತ್ರ ಸೃಷ್ಟಿ ಮತ್ತು ವರ್ಣನೆಯ ದೃಷ್ಟಿಯಿಂದ ಚಿನ್ನಾಸಾನಿಯ ಪಾತ್ರ ಸಹೃದಯರ ಗಮನ ಸೆಳೆಯುತ್ತದೆ.

ಒಟ್ಟಾರೆಯಾಗಿ 'ಶಾಂತಲೆ' ಮತ್ತು 'ಚಿನ್ನಸಾನಿ' ಇಬ್ಬರು ಕಲೆಗಾಗಿಯೇ ತಮ್ಮ ಜೀವನವನ್ನು ಮುಡಿಪಿಟ್ಟವರು. ಇತಿಹಾಸ ಪ್ರಸಿದ್ಧ ಶಾಂತಲಾ ವಿಷ್ಣುವರ್ಧನನ ಪಟ್ಟದರಿಸಿ, ಅವಳ ಪತಿನಿಷ್ಠೆ, ಕಲಾವಂತಿಕೆ, ಜೈನ ಧರ್ಮ ನಿಷ್ಠೆ, ರಾಜಕೀಯ ಚತುರತೆ, ಅನುಕಂಪ ತಾಯ್ತನದ ಪ್ರೀತಿ, ಪ್ರಜಾ ಪ್ರೀತಿ, ನಾಡ ಪ್ರೇಮ, ಔದಾರ್ಯತೆ, ದಿಟ್ಟ ನಿಲುವಿನ ಗುಣ ಮೌಲ್ಯಗಳಿಂದಾಗಿ ಇಂದಿಗೂ ಶಾಂತಲೆ ಚಿರಸ್ಮರಣೀಯಳಾಗಿದ್ದಾಳೆ. ಇನ್ನು ಕಲೆಗಾಗಿ ತನ್ನನು ತಾನು ಅರ್ಪಿಸಿಕೊಂಡ ಚಿನ್ನಾಸಾನಿಯು ರಾಜ್ಯ ರಾಜ್ಯಗಳ ನಡುವಿನ ಯುದ್ಧವನ್ನು ತಡೆಗಟ್ಟಿ ಶಾಂತಿಸ್ಥಾಪನೆಗಾಗಿ ತನ್ನ ನೃತ್ಯ, ಅಭಿನಯವನ್ನು ಪ್ರದರ್ಶಿಸಿ ಎಲ್ಲರ ಮೆಚ್ಚುಗೆಯನ್ನು ಗಳಿಸಿಕೊಂಡಿದ್ದಳು. ಚಿನ್ನಾಸಾನಿ, ಕಾಲ್ಪನಿಕ ಪಾತ್ರವಾದರೂ ಆಕೆಯಲ್ಲಿದ್ದ ಕಲಾಭಿಮಾನವೇ ಆಕೆಯನ್ನು ಪ್ರಸಿದ್ಧಳನ್ನಾಗಿ ಮಾಡುತ್ತದೆ.

### ೪.೧.೪. ದಾನಗುಣದ ಪಾತ್ರಗಳು

ಕರ್ನಾಟಕದ ಸುದೀರ್ಘ ಇತಿಹಾಸದಲ್ಲಿ ಹಲವಾರು ಮಹಾನ್ ವ್ಯಕ್ತಿಗಳು ವೈಭವದ ಬಾಳನ್ನು ಬೆಳಗಿ ಹೋಗಿದ್ದಾರೆ. ಅವರಲ್ಲಿ ಕೆಲವರ ಬಾಳಿನ ವಿವರಗಳು ಮಾತ್ರ ಇಂದಿಗೂ ಚಿರಸ್ಥಾಯಿಯಾಗಿವೆ. ಕನ್ನಡ ನಾಡಿನ ಕಲಾಕ್ಷೇತ್ರದಲ್ಲಿ ಶಾಂತಲೆ ಪ್ರಸಿದ್ಧಿಯಾಗಿರುವಂತೆ ಧಾರ್ಮಿಕ ಕ್ಷೇತ್ರದಲ್ಲಿ ಅತ್ತಿಮಬ್ಬೆಯು ಪ್ರಖ್ಯಾತಿ ಪಡೆದವಳಾಗಿದ್ದಾಳೆ. ಮಠಮಾನ್ಯಗಳನ್ನು ಕಟ್ಟಿಸುವುದು, ಛತ್ರ ಅರವಟ್ಟಿಗೆಗಳನ್ನು ಇಡುವುದು, ಧಾರ್ಮಿಕ ಕಾರ್ಯಚಟುವಟಿಕೆಗಳಿಗಾಗಿ, ವಿದ್ಯಾಭ್ಯಾಸಕ್ಕಾಗಿ ದಾನದತ್ತಿಗಳನ್ನು ಕೊಡುವುದು, ತಾವು ಸಂಪಾದಿಸಿರುವ ಸಂಪತ್ತನ್ನು ವಿನಿಯೋಗಿಸುವುದೇ ಸಂಪತ್ತಿನ ಸಾರ್ಥಕತೆಯೆಂದು ಕನ್ನಡಿಗರು ಭಾವಿಸಿದ್ದರು. ಕನ್ನಡಿಗರ ಸಂಸ್ಕೃತಿಯಲ್ಲಿ, ಸಮಾಜದಲ್ಲಿ, ವೀರರೂ, ಶೂರರೂ, ಪ್ರಜಾಹಿತ ಅರಸರೂ, ಚತುರ ಆಡಳಿತಗಾರರೂ, ಅದ್ಭುತ ತ್ಯಾಗಿಗಳಿರುವಂತೆ ದಾನಿಗಳು ಮನೆಮಾತಾಗಿದ್ದರು. ಅಂತಹ ಶ್ರೇಷ್ಠ ದಾನಿಗಳಲ್ಲಿ ಮೊದಲನೆಯವಳಾಗಿ ಅತ್ತಿಮಬ್ಬೆಯು

ಇದ್ದಾಳೆ. ಆದುದರಿಂದಲೇ ಸಾವಿರ ವರ್ಷಗಳ ತರುವಾಯವೂ ಅತ್ತಿಮಬ್ಬೆಯು ಕನ್ನಡಿಗರ ಮನಸ್ಸಿನಲ್ಲಿದ್ದಾಳೆ.

೨೧ನೆಯ ಶತಮಾನದ ಇಂದಿನ ವೈಜ್ಞಾನಿಕ ಯುಗದಲ್ಲಿ "ದಾನದಂತಹ" ಪ್ರಕ್ರಿಯೆ ಹೃದಯದಿಂದ, ಬುದ್ಧಿಯಿಂದ ಬರಲಾರದೇ ಕೇವಲ ವ್ಯವಹಾರಿಕವಾಗಿ ಬಂದಿರುವುದು ಮನುಕುಲದ ಒಂದು ದುರಂತವೇ ಸರಿ. ಅನ್ಯಾಯ ಅಪ್ರಾಮಾಣಿಕತನ, ಅಸತ್ಯ, ಅಕ್ರಮ, ಸ್ವಾರ್ಥಗಳೇ ತುಂಬಿರುವ ಈ ಕಾಲದಲ್ಲಿ ದಾನದಂತಹ ಮೌಲ್ಯ ನಶಿಸಿ ಹೋಗುತ್ತಿರುವ ಈ ಸಂದರ್ಭದಲ್ಲಿ ದಾನಚಿಂತಾಮಣಿ ಅತ್ತಿಮಬ್ಬೆಯ ಪಾತ್ರ ನಮಗೆ ಆದರ್ಶವಾದದ್ದು.

**ಅತ್ತಿಮಬ್ಬೆ**

೧೦ನೇ ಶತಮಾನದಲ್ಲಿ ದಾನಚಿಂತಾಮಣಿಯಾದ, ಜಿನಸಮಯ ದೀಪಕಳಾದ, ಚಾರಿತ್ರ್ಯ ಸಂಪನ್ನಳಾದ ಗುಣವಂತೆಯಾಗಿ ಕೀರ್ತಿ ಪಡೆದ ಶ್ರಾವಕ ಶಿರೋಮಣಿ ಅತ್ತಿಮಬ್ಬೆಯ ಜೀವನದ ಭವ್ಯತೆಯನ್ನು ಕುರಿತು ಜಿ. ಬ್ರಹ್ಮಪ್ಪನವರು 'ದಾನಚಿಂತಾಮಣಿ' ಎಂಬ ಐತಿಹಾಸಿಕ ಕಾದಂಬರಿಯನ್ನು ರಸವತ್ತಾಗಿ ರಚಿಸಿದ್ದಾರೆ. ಅತ್ತಿಮಬ್ಬೆಯ ಬದುಕಿನ ಕೆಲ ಚಾರಿತ್ರಿಕ ಸಂಗತಿಗಳಿಗೆ ರನ್ನನ 'ಅಜಿತ ಪುರಾಣ' ಲಕ್ಕುಂಡಿಯ ಶಾಸನ; ಬ್ರಹ್ಮಶಿವನ ಸಮಯ ಪರೀಕ್ಷೆ; ಇವು ಆಕರಗಳನ್ನು ಒದಗಿಸಿಕೊಡುತ್ತದೆ.

ಜಿ. ಬ್ರಹ್ಮಪ್ಪನವರು ಜೈನ ಧರ್ಮಕ್ಕೆ ಕಾದಂಬರಿಗಳನ್ನು ಬರೆದು ತಮ್ಮದೇ ಆದ ವಿಶಿಷ್ಟತೆಯನ್ನು ಮೆರೆದಿದ್ದಾರೆ. ಅವರು ಹೇಳುವ ಮಾತುಗಳು ಇಂತಿವೆ. "ಜೈನ ಇತಿಹಾಸವನ್ನು ಪ್ರಾಂತ ಪ್ರಾಂತದಲ್ಲೂ ನಾವು ಬೆದಕಿದ್ದಲ್ಲಿ ಸಾವಿರಾರು ಕಾದಂಬರಿಗಳಿಗೆ ರಸವಸ್ತು ಅಲ್ಲಿ ಅಡಗಿದೆ. ಮಾದರಿಗಾಗಿ ನಾನು ರತ್ನಾಕರ; ಚೇಳಿನಿ; ಚಕ್ರೇಶ್ವರಿ; ದಾನಚಿಂತಾಮಣಿ; ಸಾಮ್ರಾಟ್ ಖಾರವೇಲ ಕಾದಂಬರಿಗಳನ್ನು ರಚಿಸಿ ಜನತೆಯ ಮಡಿಲು ತುಂಬಿರುವೆನು. ಜೈನ ಪುರಾಣಗಳಲ್ಲಿ ಕಾದಂಬರಿಯಾಗುವಂಥ ರಸವಸ್ತು ಹೇರಳವಾಗಿದೆ. ಜೈನ ಕಥಾಕೋಶದಲ್ಲಿ ಕಾದಂಬರಿಗೆ ಅನುಕೂಲವಾದ ರಸವತ್ತಾದ ಕಥೆಗಳಿವೆ. ಇತ್ತ ಸಾಹಿತಿಗಳು ಗಮನಹರಿಸಬೇಕು. ಜನ ಸಾಮಾನ್ಯರನ್ನು ದೃಷ್ಟಿಯಲ್ಲಿಟ್ಟುಕೊಂಡು ನಮ್ಮ ಸಾಹಿತಿಗಳು ಆದಷ್ಟು ಕಾದಂಬರಿಗಳನ್ನು ಹೆಚ್ಚಾಗಿ ರಚಿಸಬೇಕು" (ಬ್ರಹ್ಮಪ್ಪ - ಸಮ್ಮೇಳನಾಧ್ಯಕ್ಷರು, ಅ.ಕ.ಜೈನ ಸಾ.ಸ. ಹುಬ್ಬಳ್ಳಿ, ಭಾಷಣ ಕೈಪಿಡಿ ಪು. ೩) ಎಂಬ ಕಿವಿಮಾತನ್ನು ಸಾಹಿತಿಗಳಿಗೆ ಹೇಳಿದ್ದಾರೆ. ಈ ಮಾತುಗಳು ಜಿ. ಬ್ರಹ್ಮಪ್ಪನವರ ಆಸಕ್ತಿ ಮತ್ತು ಕಾದಂಬರಿಗಳಿಗೆ ವಸ್ತುವಿನ ಆಯ್ಕೆಯ ಕುರಿತಾದ ನಿರ್ದಿಷ್ಟ ನಿಲುವೂ ಆಗಿದೆ.

ಬ್ರಹ್ಮಪ್ಪ ಅವರು 'ದಾನಚಿಂತಾಮಣಿ' ಅತ್ತಿಮಬ್ಬೆಯನ್ನು ಕಥಾನಾಯಕಿಯನ್ನಾಗಿಸಿಕೊಂಡು ರನ್ನ - ಪಂಪ - ಪೊನ್ನರನ್ನು ಪಾತ್ರವಾಗಿಸಿಕೊಂಡಿದ್ದಾರೆ. ಇವರ ಕೃತಿಯಲ್ಲಿ ಕಾಳವದೇವಿಯ ಕೋರಿಕೆಯಂತೆ ಗೊಮ್ಮಟ ವಿಗ್ರಹವನ್ನು ಚಾವುಂಡರಾಯ ಶ್ರವಣಬೆಳಗೊಳದಲ್ಲಿ ಪ್ರತಿಷ್ಠಾಪಿಸುವ ಸನ್ನಿವೇಶ ಬರುತ್ತದೆ. ಅಲ್ಲಲ್ಲಿ ಕೃತಕವೆನಿಸುವ ಕಲ್ಪನೆ, ಶಿಥಿಲವೆನಿಸುವ ಶೈಲಿಯನ್ನು ಬಿಟ್ಟರೆ ಈ ಕಾದಂಬರಿಯಲ್ಲಿ ಅತ್ತಿಮಬ್ಬೆಯ ಉದಾತ್ತ ಚಿತ್ರಣ ಸಾಫಲ್ಯತೆ ಪಡೆದಿದೆ.

ಹತ್ತನೇ ಶತಮಾನವು ಜೈನ ಧರ್ಮದ ಸುವರ್ಣಯುಗ, ಅಂದಿನ ರಾಜರೂ, ಮಂತ್ರಿಮಾನ್ಯರೂ, ಸೇನಾಧಿಪತಿಗಳೂ ಜೈನ ಧರ್ಮದ ಪ್ರಸಾರಕ್ಕೆ ತಮ್ಮ ಬಾಳಿನ ಬಹು

ಭಾಗವನ್ನು ಮೀಸಲಾಗಿಟ್ಟಿದ್ದರು. ಇವರೆಲ್ಲರೂ ಜೈನ ಧರ್ಮಕ್ಕಾಗಿ ಹಲವು ಧಾರ್ಮಿಕ ಕಾರ್ಯಗಳನ್ನು ಮಾಡಿ ಧರ್ಮಾನುರಾಗಿಗಳೂ, ಸಮ್ಯಕ್ತ್ವ ಚೂಡಾಮಣಿಗಳೂ ಆಗಿದ್ದರು. ಇವರೆಲ್ಲರೂ ಒಟ್ಟಾಗಿ ಮಾಡಿದ ಧಾರ್ಮಿಕ ಕಾರ್ಯವನ್ನು ಅಂದಿನ ಅತ್ತಿಮಬ್ಬೆ ಒಬ್ಬಳೇ ಮಾಡಿ ದಾನಚಿಂತಾಮಣಿ ಎಂಬ ಹೆಸರನ್ನು ಪಡೆದುಕೊಂಡಳು. ಇವಳ ಧಾರ್ಮಿಕ ಕಾರ್ಯಕ್ಕೆ ರನ್ನಕವಿ ಕಿರೀಟ ತೊಡಿಸಿರುವನು. ಅತ್ತಿಮಬ್ಬೆ ತೀರ್ಥಂಕರನ ನಿರ್ವಾಣೋತ್ಸವ ನೆನಪಿಗಾಗಿ ೧೫೦೦ ಜಿನಾಲಯ ಕಟ್ಟಿಸಿದಳು. ತನ್ನ ಕಣ್ಣಿಗೆ ಬಿದ್ದ ಜೈನ ಕಾವ್ಯವನ್ನು ಸಹಸ್ರ ಪ್ರತಿ ಮಾಡಿಸಿದಳು. ೧೫೦೦ ಬಂಗಾರದ ಜಿನಬಿಂಬಗಳನ್ನು ಮಾಡಿಸಿ ಜನಭಕ್ತರಿಗೆ ದಾನ ಮಾಡಿದಳು. ರನ್ನ ಕವಿಯನ್ನು ಸಾಕಿ ಸಲುಹಿ ಕವಿಚಕ್ರವರ್ತಿಯಾಗುವಂತೆ ನೋಡಿಕೊಂಡಳು ರನ್ನ ಈಕೆಯ ಭವ್ಯ ತಮ್ಮ ಚಾರಿತ್ರೆಯನ್ನು ಇತಿಹಾಸವನ್ನು ಅಜಿತ ಪುರಾಣಕ್ಕೆ ಮುನ್ನುಡಿಯಾಗಿ ಬೆಸೆದನು. ಈ ಕಾದಂಬರಿಯಲ್ಲಿ ಲೇಖಕರು ಅತ್ತಿಮಬ್ಬೆಯ ಧಾರ್ಮಿಕ ಕಾರ್ಯವನ್ನು ಕುರಿತು ಬಹು ಸೊಗಸಾಗಿ ಚಿತ್ರಿಸಿದ್ದಾರೆ.

ಅತ್ತಿಮಬ್ಬೆ ಚಾರಿತ್ರಿಕ ವ್ಯಕ್ತಿಯಾಗಿದ್ದಳು. ಚರಿತ್ರೆಯಲ್ಲಿ ಅವಳ ಬಗ್ಗೆ ಪ್ರಸ್ತಾಪ ಬರುತ್ತದೆ. "ಈಕೆಯ ಮಾತಾಪಿತರು ವೆಂಗಿಮಂಡಳದ ಕಮ್ಮ ದೇಶದ ಪುಂಗನೂರಿನವರು (ಚಿತ್ತೂರು ಜಿಲ್ಲೆ ಆಂಧ್ರಪ್ರದೇಶ) ಈಕೆಯ ತಂದೆ ಮಲ್ಲಪ್ಪ. ಚಿಕ್ಕಪ್ಪ ಪುನ್ನಮಯ್ಯ ಇವರು ರಾಷ್ಟ್ರಕೂಟರ ಮಹಾಸಮಾಂತನಾಗಿದ್ದ ತೈಲಪನ ಬಳಿ ದಂಡನಾಯಕನಾಗಿದ್ದರು. ಕೆಲವು ದಿನಗಳಲ್ಲಿ ತೈಲಪನು ಚಾಲುಕ್ಯ ಚಕ್ರವರ್ತಿಯಾದನು. ಈತನ ಮಹಾಮಂತ್ರಿ ದಲ್ಲಪ್ಪ ಈ ದಲ್ಲಪ್ಪನ ಮಗ ನಾಗದೇವ, ಇವನನ್ನು ಅವಳಿ-ಜವಳಿಗಳಾಗಿದ್ದ ಅತ್ತಿಮಬ್ಬೆ ಮತ್ತು ಗುಂಡ ಮಬ್ಬೆಯರು ವರಿಸಿ ದಲ್ಲಪ್ಪನ ಮನೆಗೆ ನಂದಾದೀಪಗಳಾದರು" (ಬ್ರಹ್ಮಪ್ಪ ಜಿ.; ೧೯೯೯; ಪು. ೪) ಎಂದು ಕಾದಂಬರಿಕಾರರು ತಮ್ಮ ಕಾದಂಬರಿಯ ಮುನ್ನುಡಿಯಲ್ಲಿ ಹೇಳಿದ್ದಾರೆ, ಅವಳು ಪುಂಗನೂರಿನಲ್ಲಿ ಹುಟ್ಟಿ ಮುಂದೆ ತನ್ನ ಬದುಕಿನ ಹೆಚ್ಚು ಆಯುಷ್ಯವನ್ನು ಲಕ್ಕುಂಡಿಯಲ್ಲಿ ಕಳೆದಳು.

ಈ ರೀತಿಯಾಗಿ ಜಿ.ಬ್ರಹ್ಮಪ್ಪನವರು ಇವೆಲ್ಲವುಗಳನ್ನು ಆಕರಗಳನ್ನಾಗಿ ಸ್ವೀಕರಿಸಿ, ಕಲ್ಪನಾ ವಿಲಾಸದಿಂದ ಅತ್ತಿಮಬ್ಬೆಯ ಪಾತ್ರವನ್ನು ಚಿತ್ರಿಸಿದ್ದಾರೆ.

ಕಾದಂಬರಿಯ ಕಥಾವಸ್ತು ೧೦ನೇ ಶತಮಾನದ್ದು. ಅದು ಕನ್ನಡ ಸಾಹಿತ್ಯದಲ್ಲಿ ಸುವರ್ಣಯುಗ, ಕ್ಷಾತ್ರ ತೇಜಸ್ವಿನಿಂದ ಕೂಡಿದ ಅತ್ತಿಮಬ್ಬೆಯ ಪೂರ್ವಜರು, ಪಂಪನಂತೆ ಬ್ರಾಹ್ಮಣರು. ಪಂಪ, ಪೊನ್ನ, ರನ್ನ ರತ್ನತ್ರಯರನ್ನು ಈ ಕೃತಿಯಲ್ಲಿ ಸಮಗಮ ಮಾಡಿದ್ದು ಲೇಖಕರ ಶ್ರೇಯಸ್ಸಾಗಿದೆ. ಜಿನಚಂದ್ರ ಮುನಿಗಳ ಸಮ್ಮುಖದಲ್ಲಿ ಕಾದಂಬರಿ ಪ್ರಾರಂಭವಾಗುತ್ತದೆ. ಕಾದಂಬರಿಯು ಚರಿತ್ರೆಗೆ ಸಂಬಂಧಿಸಿದ ಹಲವು ಸಂಗತಿಗಳನ್ನು ಒಳಗೊಂಡಿದೆ.

ಅತ್ತಿಮಬ್ಬೆ-ಗುಂಡಮಬ್ಬೆಯರು ಅವಳಿ-ಜವಳಿ ಸಹೋದರಿಯರಾದುದರಿಂದ ಚಾಲುಕ್ಯ ಮಹಾಮಂತ್ರಿ ದಲ್ಲಪನ ಏಕಮೇವಾದ್ವಿತೀಯ ಮಗನಾದ ನಾಗದೇವನ ಜೊತೆ ಮದುವೆಯಾಯಿತು. ಇವರಿಬ್ಬರು ಸಹೋದರಿಯರು ಕನ್ನಡಾಂಬೆಯ ಎರಡು ಕಣ್ಣುಗಳಂತೆ ಪ್ರಜ್ವಲಿಸುತ್ತಿದ್ದರು. ಇಂಥ ನಾರಿಮಣಿಗಳ "ವಿವಾಹ ಮಹೋತ್ಸವದ ಅಂಗವಾಗಿ ಶಾಂತಿ ಪುರಾಣದ ಪ್ರಕಾಶನವಾಯಿತು.

ಮದುವೆಗೆ ಬಂದಿದ್ದ ಹೆಣ್ಣುಮಕ್ಕಳಿಗೆ ಶಾಂತಿಪುರಾಣವನ್ನು ಬಾಗಿನವಾಗಿ ಸಹಸ್ರ ಪ್ರತಿಗಳನ್ನು ಅತ್ತಿಮಬ್ಬೆ ಮತ್ತು ಗುಂಡಮಬ್ಬೆ ಹಂಚಿದರು" (ಅದೇ ಪು. ೨೦) ಕೃತಿಯ ಮುದ್ರಣ, ಪ್ರಕಟಣ ಹಾಗೂ ಪ್ರಕಾಶನ ಕಾರ್ಯಗಳು ಇಂದಿನ ಮುಂದುವರೆದ ಕಾಲದಲ್ಲಿ ಬಹು ಕ್ಲಿಷ್ಟವಾಗಿದೆ. ಆದರೆ ಚಾಲುಕ್ಯರ ಕಾಲದಲ್ಲಿ ಮುದ್ರಣ ಹಾಗೂ ಪ್ರಕಾಶನ ಕಾರ್ಯವನ್ನು ಬಹುಯಶಸ್ವಿಯಾಗಿ ಮಾಡಿದ್ದ ಉಲ್ಲೇಖವಿದೆ.

ಕಾದಂಬರಿಯಲ್ಲಿ ಕಥಾವಸ್ತು ವರ್ಣನೆಯನ್ನು ಒಳಗೊಂಡು ಮುಂದೆ ಸಾಗುತ್ತದೆ. ಮಧ್ಯದಲ್ಲಿ ರನ್ನ ಕವಿಯ ತಂದೆಯಾದ 'ಜಿನವಲ್ಲಭ'ನ ಹಾಗೂ ರನ್ನನ ಪರಿಚಯವಾಗುತ್ತದೆ. ರನ್ನನನ್ನು ಕಂಡು ಅತ್ತಿಮಬ್ಬೆ ಅವನಿಗೆ ಪೋಷಕಳಾಗಿ ನಿಲ್ಲುತ್ತಾಳೆ. ಅವನ ವಿದ್ಯಾರ್ಜನೆಯ ಸಲುವಾಗಿ ಬಂಕಾಪುರದ ಆಶ್ರಮಕ್ಕೆ ಧನವನ್ನು ಹೇರಳವಾಗಿ ದಾನವಾಗಿ ನೀಡಿದಳು. ರನ್ನನು ಶಾಸ್ತ್ರಪಾರಂಗತವಾಗಿ ಬಂದ ಮೇಲೆ ಶ್ರೇಷ್ಠ ಕೃತಿಗಳು ಅವನಿಂದ ಮೂಡಿಬರುವಂತೆ ಪ್ರೋತ್ಸಾಹಿಸಿದಳು. ಅತ್ತಿಮಬ್ಬೆಯು ಕವಿ ರನ್ನನನ್ನು ನಿರ್ಮಿಸಿದ ಶಿಲ್ಪಿಯಾಗಿರುವಳು" ಅವಳ ಉದಾರ ವ್ಯಕ್ತಿತ್ವಕ್ಕೆ ರನ್ನನು ಜೀವಂತ ಪತಾಕೆಯಂತಿದ್ದಾನೆ. ಲೇಖಕರು ರನ್ನನ ಬಾಯಿಂದ ಹೊಗಳಿದ್ದು ಒಳ್ಳೆಯ ಶೈಲಿಗೆ ಮಾದರಿಯಾಗಿದೆ. "ಅಮ್ಮಾಜಿ ನಮ್ಮ ನಾಡಿನ ಶಾರದಾಮಾತೆ. ತಾವು ನಮ್ಮಂತೆ ಮಹಾತ್ವಾಕಾಂಕ್ಷೆಯುಳ್ಳವರು ಯುಗಕ್ಕೆ ಒಬ್ಬರಿದ್ದರೂ ಸಾಕು. ಕನ್ನಡ ನಾಡು ಉದ್ಧಾರವಾಗದಿರದು! ಕನ್ನಡ ಭಾಷೆ ಮುತ್ತೈದೆಯಾಗಿ ಬಾಳಬೇಕಾದರೆ ಅತ್ತಿಮಬ್ಬೆಯರ ಅವತಾರದಿಂದಲೇ ಸಾಧ್ಯ!" (ಅದೇ; ಪು. ೮೯) ಅವಳ ಬಹುಶ್ರುತ ಭಕ್ತಿಗೆ ಇದು ಕನ್ನಡಿಯಂತಿದೆ.

ಅತ್ತಿಮಬ್ಬೆಯು ದಾನಗುಣದ ಮೂರ್ತಿಯಾಗಿದ್ದಳು ಬಡಬಗ್ಗರಿಗೆ ಅವಳು ಮಾಡಿದ ಭೂದಾನ - ಗೋದಾನಗಳಿಗೆ ಲೆಕ್ಕವಿಲ್ಲ ಹಾಗಿದೆ. ಅವಳು ಗರ್ಭಿಣಿಯರಿಗೆ ದಾನ ಮಾಡಿದ ರೀತಿಯನ್ನು ಲೇಖಕರು ಈ ರೀತಿ ವರ್ಣಿಸಿದ್ದಾರೆ.

೧. ಗಬ್ಬಾದ ಸಹಸ್ರ ಹಸುಗಳನ್ನು ಸಹಸ್ರಮಂದಿ ಬಡಬಸುರಿಯವರಿಗೆ ದಾನ ಮಾಡಬೇಕೆಂಬ ಬಯಕೆ.

೨. ಸಹಸ್ರ ಮಂದಿ ಜಿನಮತಿಗಳಿಗೆ ಆಹಾರ ದಾನ ಮಾಡಬೇಕೆಂಬ ಬಯಕೆ.

೩. ಬಾಣಂತಿಯರಿಗೆಲ್ಲ ರಸದೌತಣ! ಅನಂತರ ಒಂದೊಂದು ಮಗುವಿಗೂ ಬೆತ್ತದ ತೊಟ್ಟಿಲು, ಬಂಗಾರದ ಬಳೆ, ಬೆಳ್ಳಿಯ ಬಟ್ಟಲು ಚಿನ್ನದ ಚಮಚ, ಮಕಮಲ್ಲಿನ ಹಾಸು ಹೊದಿಕೆ ಇವುಗಳನ್ನು ದಾನವಾಗಿ ಕೊಟ್ಟಳು.

ಅತ್ತಿಮಬ್ಬೆಗೆ ಮಗು ಜನಿಸಿದಾಗ– "ಜಿನಾಲಯದಲ್ಲಿ ವಿಶೇಷ ಪೂಜೆ ಉತ್ಸವಗಳಾದವು. ಮಗು ಹುಟ್ಟಿದನಿಂದ ಜಿನಮೂರ್ತಿಗಳ ಪಂಚಕಲ್ಯಾಣಕ್ಕಾಗಿ ಪ್ರತಿಷ್ಠಾಪನೆಯಾಯಿತು. ಹತ್ತಾರು ದೇಗುಲಗಳಿಗೆ ಅಣ್ಣಿಗ ದೇವನ ತೂಕಕ್ಕೆ ಸಮನಾಗಿ ಬಂಗಾರದ ತುಲಾಭಾರ ಮಾಡಿಸಿದಳು" (ಅದೇ; ಪು. ೧೨೪–೧೩೬). ಅತ್ತಿಮಬ್ಬೆಯು ಗರ್ಭಿಣಿಯಾಗಿದ್ದ ಪ್ರಸಂಗ ಮಗುವಿನ ಜನನ ನಾಮಕರಣ ಹಾಗೂ ಬಡಬಗ್ಗರಿಗೆ ದಾನ ಮಾಡಿದ ದೃಶ್ಯಗಳು ಮನಸೆಳೆಯುತ್ತವೆ.

ದಾನ ಚಿಂತಾಮಣಿ ಎಂದು ಕೀರ್ತಿವೆತ್ತಿದ್ದ ಅತ್ತಿಮಬ್ಬೆಯು ಪುರುಷರಿಗೆ ಸರಿಸಮಾನವಾಗಿ ಹಲವಾರು ಜಿನಾಲಯಗಳನ್ನು ನಿರ್ಮಿಸಿದಳು. "ಎಲ್ಲೆಲ್ಲಿ ಶ್ರಾವಕರು ಹೆಚ್ಚಾಗಿದ್ದು ಜಿನಾಲಯವಿಲ್ಲದೆ ಇತ್ತೋ ಅಲ್ಲೆಲ್ಲ ಜಿನಾಲಯ ನಿರ್ಮಿಸಲು ತನ್ನ ಹಣಕೊಟ್ಟಳು. ಲಕ್ಕುಂಡಿಯ ಜಿನಾಲಯವನ್ನು ತ್ರಿಭುವನ ಚೂಡಾಮಣಿಯಾಗುವಂತೆ ಅಪೂರ್ವಶಿಲ್ಪಗಳಿಂದ ಕಟ್ಟಿಸಿದಳು. ಅಗ್ರಹಾರಗಳನ್ನು ದತ್ತಿಯಾಗಿ ಬಿಟ್ಟಳು. ಈಕೆಯ ನೇತೃತ್ವದಲ್ಲಿ ಸಹಸ್ರಾರು ಜಿನಾಲಯಗಳು ನಿರ್ಮಾಣವಾಗಿದ್ದವು. ಈಕೆಯ ದಾನ - ಧರ್ಮದಿಂದಾಗಿ ದಿನವೂ ಸಹಸ್ರಾರು ಜಿನಬಿಂಬಗಳಿಗೆ ಪಂಚಾಮೃತ ಅಭಿಷೇಕವಾಗುತ್ತಿತ್ತು" (ಅದೇ; ಪು. ೧೭೫). ಅಷ್ಟೇ ಅಲ್ಲದೆ ಈಕೆಯ ನೇತೃತ್ವದಲ್ಲಿ ಕೋಟೆ, ಕೊತ್ತಲ, ಅರಮನೆ, ಗುರುಮನೆಗಳು ನಿರ್ಮಾಣದ ಜೊತೆಗೆ ಜಿನಾಲಯಗಳ ಜೀರ್ಣೋದ್ಧಾರಕ್ಕಾಗಿ ಹೇರಳವಾದ ಧನವನ್ನು ಧಾರಾಳವಾಗಿ ಖರ್ಚು ಮಾಡಿದಳು.

ರಾಷ್ಟ್ರಕೂಟರಿಗೂ ಚಾಲುಕ್ಯರಿಗೂ ಪರಸ್ಪರ ಯುದ್ಧವಾಗಿ ಕೊನೆಗೆ ನಾಗದೇವ ಹೋರಾಡಿ ವೀರ ಸ್ವರ್ಗವನ್ನೇರಿದನು. ಆಗ ಗುಂಡಮಬ್ಬೆ ಮಹಾಭಾರತದ ಮಾದ್ರಿಯಂತೆ ಪತಿಯ ಜೊತೆ ಚಿತೆಯೇರಿ ಸಹಗಮನ ಮಾಡಿದಳು. "ಗುಂಡಮಬ್ಬೆ ಮದುವಣಗಿತ್ತಿಯಂತೆ ಸಿಂಗರಿಸಿಕೊಂಡಳು. ತಲೆಹಿಡಿಯುವಷ್ಟು ಹೂವನ್ನು ಹೇರಿಕೊಂಡಳು. ಎಲ್ಲೆಲ್ಲಿ ಸಾಧ್ಯವೋ ಅಲ್ಲೆಲ್ಲಾ ಆಭರಣವನ್ನು ಹಾಕಿಕೊಂಡಳು. ಹಿರಿಯರಿಗೆಲ್ಲ ನಮಸ್ಕರಿಸಿ ಆಶೀರ್ವಾದ ಪಡೆದಳು. ಅಣ್ಣಿಗನನ್ನು ಎತ್ತಿ ಮುದ್ದಾಡಿದಳು. ಅತ್ತಿಮಬ್ಬೆಯನ್ನು ತಬ್ಬಿಕೊಂಡು ಕಂಬನಿಗೆರೆದಳು. ಶ್ರೀ ಗಂಧದರಾಶಿ ದಗದಹಿಸಿತು. ಮೂರುಬಾರಿ ಗುಂಡಮಬ್ಬೆ ಬಲವಂದಳು. ಜಿನಗಂಗೋಧಕವನ್ನು ತಲೆಗೆ ಹಾಕಿಕೊಂಡಳು. ಪಂಚಪರ ಮೇಷ್ಠಿಗಳನ್ನು ಜಪಿಸುತ್ತಾ ಲತಾಕುಂಜವನ್ನು ಪ್ರವೇಶಿಸುವಂತೆ ನಗುನಗುತ್ತಾ ಚಿತೆಯೇರಿದಳು! ಅಡ್ಡ ಬಂದ ಚಿಗುರನ್ನು ನಿವಾರಿಸಿಕೊಂಡು ಮುನ್ನುಗ್ಗುವಂತೆ ಜ್ವಾಲೆಯನ್ನು ಅತ್ತ ಇತ್ತ ತಳ್ಳಿ ಗಂಡನನ್ನು ಅಪ್ಪಿಕೊಂಡು ಮಲಗಿದಳು! ಕಳೇಬರವನ್ನು ತಬ್ಬಿಕೊಂಡು ಜ್ವಾಲೆಯ ಸುಪ್ಪತ್ತಿಗೆಯ ಮೇಲೆ ಹಾಯಾಗಿ ಒರಗಿದಳು" (ಅದೇ; ಪು. ೧೪೫). ಜೈನ ಧರ್ಮದ ಪ್ರಕಾರ ಇದು ಹಿಂಸಾತ್ಮಕ. ಆದರೆ ಅಂದು ಸಹಗಮನ ಪದ್ಧತಿ ಪ್ರಚಲಿತವಿತ್ತೆಂದು ತಿಳಿದುಬರುತ್ತದೆ.

ಅತ್ತಿಮಬ್ಬೆಯು ಪತಿ ವಿರಹದ ದುಃಖವನ್ನು ಸಹಿಸಿಕೊಂಡು ಶ್ರಾವಕಿಯಾಗಿ ತಾಪಸ ಜೀವನವನ್ನು ಕೈಕೊಂಡಳು. ದೇಗುಲ ಹಾಗೂ ಸತ್ರಗಳ ನಿರ್ಮಾಣ ಮಾಡಿದಳು. ಹಲವು ಜಿನಾಲಯಗಳನ್ನು ಕಟ್ಟಿಸಿದಳು. ಅದರಲ್ಲಿ ಲಕ್ಕುಂಡಿಯ ಜಿನಾಲಯ ತ್ರಿಭುವನ ಚುಡಾಮಣಿಯೆಂದು ಖ್ಯಾತಿ ಪಡೆಯಿತು. ಅಗ್ರಹಾರಗಳನ್ನು ದತ್ತಿಯಾಗಿ ಬಿಟ್ಟುಳು. ಸಾವಿರಾರು ಧರ್ಮ ಗ್ರಂಥಗಳನ್ನು ಪ್ರತಿ ಮಾಡಿಸಿದಳು. ಇಂತಹ ದಾನ ಚಿಂತಾಮಣಿ ಅತ್ತಿಮಬ್ಬೆ ಕವಿ ವರ ಕಾಮದೇನುವಾಗಿದ್ದಳು. ಅತ್ತಿಮಬ್ಬೆಯ ಬದುಕು ನಿಜವಾಗಿಯೂ ಅದ್ಭುತವಾದುದು.

ಅತ್ತಿಮಬ್ಬೆಯು ಬಾಹುಬಲಿಯ ದರ್ಶನಕ್ಕಾಗಿ ಶ್ರವಣಬೆಳಗೊಳಕ್ಕೆ ಹೋದ ಸಂದರ್ಭವನ್ನು ಲೇಖಕರು ಚಿತ್ರಿಸಿದ್ದಾರೆ. ಅದು ಅವಳ ಅಸಾಧಾರಣ ವ್ರತ–ನಿಯಮಗಳಿಗೆ ಸಾಕ್ಷಿಯಾಯಿತು. ಅತ್ತಿಮಬ್ಬೆ ಗಂಡುಗಲಿ ವೀರಳೂ ಆಗಿದ್ದಳು. ಇರಿವಬೆಡಂಗ 'ಅಣ್ಣಿಗದೇವ' ರಂತಹ ವೀರರಿಗೆ

ರಣಭೂಮಿಯಲ್ಲಿ ಉತ್ಸಾಹ ತುಂಬುವ ಸಂದರ್ಭಗಳು ಚಿತ್ರತವಾಗಿವೆ. ಜಿ ಬ್ರಹ್ಮಪ್ಪನವರು ಅತ್ತಿಮಬ್ಬೆ ಮಾಡಿದಳೆಂಬ ಪವಾಡಗಳನ್ನು ಚಿತ್ರಿಸಿದ್ದಾರೆ. ಅಷ್ಟೊಂದು ಅದ್ಭುತ ಶಕ್ತಿ ಅವಳಲ್ಲಿತ್ತೆಂಬ ಅಂಶ ಗೋಚರಿಸುತ್ತದೆ. ಅತ್ತಿಮಬ್ಬೆ ತನ್ನ ಬದುಕಿನ ಕೊನೆಗೆ ಕೆಲವು ಚಾರಿತ್ರಿಕ ಮಹಾತ್ಮರು ಮುಕ್ತಿ ಹೊಂದಿದನ್ನು ಕಾಣುತ್ತಾಳೆ. ಅಷ್ಟರಲ್ಲಿ ಅವಳ ಮನಸ್ಸು ಪರಿಪಕ್ವವಾಗಿ ಸಂಸಾರದಿಂದ ವಿಮುಕ್ತಿ ಹೊಂದಲು ತವಕಿಸುತ್ತಿತ್ತು.

ಕಾದಂಬರಿಯ ಕೊನೆಯಲ್ಲಿ ಇರಿವಬೆಡಂಗ, ರನ್ನ ಮುಂತಾದವರು ಅತ್ತಿಮಬ್ಬೆಯ ಪ್ರತಿಮೆಗೆ ಪೂಜೆ ಮಾಡುವ ಸನ್ನಿವೇಶ ಅದ್ಭುತವಾದುದು. ಅವಳು ಎಲ್ಲರ ಆರಾಧನೆಗೆ ಪೂಜ್ಯಳಾಗಿದ್ದಾಳೆ. ಇಲ್ಲಿ ಕ್ಷಾತ್ರ ತೇಜಸ್ಸು ಧಾರ್ಮಿಕ ತೇಜಸ್ಸಿಗೆ ನಮಿಸಿರುವುದು ಗೋಚರಿಸುತ್ತದೆ. ಅವಳ ಬಾಳೇ ಧರ್ಮ ಧರ್ಮವೇ ಅವಳ ಬಾಳಿನ ಉಸಿರಾಗಿತ್ತು ಎಂಬುದು ಅನುಭವ ವೇದ್ಯವಾಗುತ್ತದೆ. ಸಾಮಾನ್ಯವಾಗಿ ಜೈನ ಸಮಾಜದಲ್ಲಿ ಸ್ತ್ರೀಗೆ ಮೊದಲಿನಿಂದಲೂ ಇದ್ದಂಥ ಸ್ವಾತಂತ್ರ್ಯ ಮತ್ತು ಅವಕಾಶ ಪ್ರಾಧಾನ್ಯತೆಗಳು ಅತ್ತಿಮಬ್ಬೆಗೆ ನಿರಂತರವಾಗಿ ಒದಗಿ ಬಂದಿದವು. ಇಂತಹ ಅತ್ತಿಮಬ್ಬೆಯು ಹೊಸ ಯುಗವವನ್ನೇ ಪ್ರಾರಂಭಿಸಿದಳು.

ಒಂದು ಸಾವಿರ ವರ್ಷಗಳ ಹಿಂದಿನ ಅತ್ತಿಮಬ್ಬೆಯ ಪಾತ್ರವು ಇಪ್ಪತ್ತನೇ ಶತಮಾನದ ಉತ್ತರಾರ್ಧದಲ್ಲಿ ಜಿ. ಬ್ರಹ್ಮಪ್ಪನವರ ದಾನ ಚಿಂತಾಮಣಿ ಕಾದಂಬರಿಯಲ್ಲಿ ಮರುಜನ್ಮ ಪಡೆದಿದೆ. ಅತ್ತಿಮಬ್ಬೆಯ ಹೆಸರು ಇಂದಿಗೂ ಚಿರಸ್ಥಾಯಿಯಾಗಿ ಉಳಿದಿದೆ.

ಗಂಡಸರು ಬರೆದಿರುವುದನ್ನು ಮತ್ತು ಸಾಹಿತ್ಯದಲ್ಲೂ ಶಾಸನಗಳಲ್ಲು ಚರಿತ್ರೆಯಲ್ಲೂ ಮಹಿಳೆಯಾದ ಅತ್ತಿಮಬ್ಬೆ ಗಳಿಸಿರುವ ಉನ್ನತೋನ್ನತ ಸ್ಥಾನವನ್ನು ಸ್ತ್ರೀವಾದಿ ಚಿಂತಕರು ಪರಿಗಣಿಸಬೇಕು. ಏಕೆಂದರೆ ಚರಿತ್ರೆಯ ಪುಟಗಳಲ್ಲಿ ಸ್ತ್ರೀ ಕಾಣಿಸುವುದೇ ಇಲ್ಲವೆಂಬ (ಆರೋಪವಲ್ಲದೆ) ವಾಸ್ತವ ಮಾತಿದೆ. ಈ ಮಾತು ಬಹಳಮಟ್ಟಿಗೆ ದಿಟವೂ ಹೌದು. ಅಬ್ಬಕ್ಕ ರಾಣಿ, ಝಾನ್ಸಿರಾಣಿ ಲಕ್ಷ್ಮೀಬಾಯಿ, ಕಿತ್ತೂರು ಚೆನ್ನಮ್ಮ, ರಾಣಿ ಎಲಿಜಬೆತ್ ಮುಂತಾದವರಿಗಿಂತ ಹಲವು ನೂರು ವರ್ಷಗಳ ಹಿಂದೆ ಇತಿಹಾಸದಲ್ಲಿ ಗೋಚರಿಸುವ ಧೀಮಂತ ಮಹಿಳೆ ಅತ್ತಿಮಬ್ಬೆ ಸ್ತ್ರೀವಾದಿ ಅಧ್ಯಯನಕ್ಕೆ ಆಕರ ಸ್ವರೂಪಿಯಾಗಿದ್ದಾಳೆ(ಚಂದ್ರಕೋಟೆ; ೧೯೯೯; ಪು. ೫೩೦) ಎಂದ ಹಂಪನಾಗರಾಜಯ್ಯ ಅವರ ಮಾತು ದಾನಚಿಂತಾಮಣಿ ಕಾದಂಬರಿಯ ಸಂದರ್ಭದಲ್ಲೂ ಪ್ರಸ್ತುತವೆನಿಸುತ್ತದೆ.

ಕಾದಂಬರಿಯ ನಾಯಕಿ ಅತ್ತಿಮಬ್ಬೆ ಅಲ್ಲದೆ ಇನ್ನು ಅನೇಕ ಪಾತ್ರಗಳು ಸಜೀವವಾಗಿದ್ದು ಸರಳ ಹಾಗೂ ಉದಾತ್ತ ಗುಣಗಳಿಂದ ಕೂಡಿದೆ. ಈ ಕಾದಂಬರಿಯಲ್ಲಿ ಜೈನ ಧರ್ಮಕ್ಕೆ ಸಂಬಂಧಿಸಿದ ತಾತ್ವಿಕ ವಿಚಾರಗಳಿವೆ. ಜೈನ ಸಮಾಜವು ೧೧ನೇ ಶತಮಾನದಲ್ಲಿ ಕನ್ನಡ ಸಾಹಿತ್ಯ, ಸಂಸ್ಕೃತಿಗಳಿಗೆ ಸಲ್ಲಿಸಿದ ಕಾಣಿಕೆಯು ಸ್ಪಷ್ಟವಾಗಿ ಬಿಂಬಿತವಾಗಿದೆ. ಲೇಖಕರ ಐತಿಹಾಸಿಕ ಕಾಲ್ಪನಿಕ ಸಂಗತಿಗಳ ಬಳಕೆ ಹಿತ-ಮಿತವಾಗಿದೆ. ಅಲ್ಲಲ್ಲಿ ಹಾಸ್ಯದ ಇಣುಕು ನೋಟವಿದೆ.

ಕಾದಂಬರಿಯಲ್ಲಿ ಚಿತ್ರತವಾದಂತೆ ಅತ್ತಿಮಬ್ಬೆಯ ಜೀವನದ ಮಾದರಿ ಇಂದಿನ ಪೀಳಿಗೆಗೆ ಅತ್ಯವಶ್ಯಕವಾಗಿದೆ. ಅದರಲ್ಲೂ ಮಹಿಳೆಯರಿಗೆ ಹೆಚ್ಚು ಆದರ್ಶವಾದುದು. ಜ್ಯೋತಿಯಂತೆ

ಬೆಳಗಿ ಪ್ರಕಾಶವನ್ನು ಕಾಂತಿಯಂತೆ ನೀಡಿರುವಳು. ಹುಟ್ಟಿದ ಮನೆ, ಕೊಟ್ಟ ಮನೆ ಎರಡನ್ನು ಬೆಳಗಿದ ಸ್ತ್ರೀರತ್ನವಾಗಿದ್ದಾಳೆ. ಸ್ತ್ರೀ ಸ್ವಾರ್ಥ, ಅಹಂಕಾರ, ಸ್ವೇಚ್ಛಾಚಾರ ತುಂಬಿದ ಇಂದಿನ ಸಮಾಜದಲ್ಲಿ ಇವಳ ಬಾಳು ಮಾರ್ಗದರ್ಶಿಯಾಗಿದೆ. ನಮ್ಮ ಮಾತೃಭೂಮಿಗೆ ಸಲ್ಲಿಸಬೇಕಾದ ಕರ್ತವ್ಯಗಳನ್ನು ಅತ್ತಿಮಬ್ಬೆಯ ಪಾತ್ರದಿಂದ ಕಂಡುಕೊಳ್ಳಬಹುದಾಗಿದೆ. ಒಟ್ಟಾರೆಯಾಗಿ ಚರಿತ್ರೆ ಮತ್ತು ಸಾಹಿತ್ಯ ಸಂದರ್ಭದಲ್ಲಿ ಬಿಡಿ ಬಿಡಿಯಾಗಿ ಲಭ್ಯವಾಗುವ ಅತ್ತಿಮಬ್ಬೆಯ ಜೀವನ ವಿವರಗಳನ್ನು ಒಂದೆಡೆ ಕಲೆಹಾಕಿ ಅವುಗಳಿಗೆ ಕಲ್ಪನೆ ಮತ್ತು ಕಲಾವಂತಿಕೆಯ ಒಂದು ಪರಿಪೂರ್ಣ ಪಾತ್ರವನ್ನು ಕಾದಂಬರಿಕಾರರು ಈ ಕಾದಂಬರಿ ಮೂಲಕ ಸೃಷ್ಟಿಸಿದ್ದಾರೆ.

### ೪.೨. ಪೋಷಕ ಪಾತ್ರಗಳು

ಕನ್ನಡ ಐತಿಹಾಸಿಕ ಕಾದಂಬರಿಗಳಲ್ಲಿ ಅಪಾರ ಸಂಖ್ಯೆಯ ಪೋಷಕ ಪಾತ್ರಗಳಿವೆ. ಅವುಗಳಲ್ಲಿ ಸ್ತ್ರೀ ಪಾತ್ರಗಳ ಸಂಖ್ಯೆಯೂ ಬಹಳಷ್ಟು ಇವೆ. ಕಾದಂಬರಿಗಳಲ್ಲಿನ ಕೇಂದ್ರಪಾತ್ರಗಳು ಪರಿಪುಷ್ಟವಾಗಿ ಬೆಳೆದು ನಿಲ್ಲಬೇಕಾದರೆ ಇಂಥ ಪೋಷಕ ಪಾತ್ರಗಳು ಅನಿವಾರ್ಯವಾಗಿದೆ. ಕಮಲಾಂಬಿಕೆ ರಸವಂತಿ, ಶಿವಕಾಮಿನಿ, ಯಶೋಮತಿ, ಶಿರಸಮ್ಮ, ಮಾಚಿಕಬ್ಬೆ ಲಕ್ಷ್ಮೀದೇವಿ ಬಮ್ಮಲೆ, ಪಾರ್ವತಿ, ಚಂದ್ರಮ್ಮಾಜಿ, ಬಸವಲಿಂಗಮ್ಮಾಜಿ, ಶಾಂತವ್ವ, ವೀರಮ್ಮಾಜಿ, ಹೆಗ್ಗಡತಿ, ಮಲ್ಲಿಗೆ, ಗೌರವ್ವನಾಗತಿ, ಓಬವ್ವನಾಗತಿ, ಗಿರಿಜೆ, ಮಲ್ಲವ್ವನಾಗತಿ, ಕಾಮೇಶ್ವರಿ, ನಾಗಲಾಂಬಿಕೆ, ಗಂಗಾಂಬಿಕೆ, ನೀಲಲೋಚನೆ, ಬಕುಳೆ, ಮಾನವತಿ ಇವುಗಳಲ್ಲಿ ಬಹುಪಾಲು ಪಾತ್ರಗಳು ಇತಿಹಾಸದಲ್ಲಿ ಆಗಿಹೋದ ವ್ಯಕ್ತಿಗಳಾದರೆ ಕೆಲವು ಕಾಲ್ಪನಿಕವಾದ ಪಾತ್ರಗಳಾಗಿರುತ್ತವೆ.

ಕಾದಂಬರಿಗಳಲ್ಲಿ ಒಟ್ಟಾರೆ ಪಾತ್ರಗಳನ್ನು ಗಮನಿಸಿದರೆ ವಿಭಿನ್ನ ವ್ಯಕ್ತಿತ್ವ ಗುಣಸ್ವಾಭಾವಗಳ, ಅದೇ ರೀತಿ ವಿಭಿನ್ನ ಬಾಂಧವ್ಯದ ಪಾತ್ರಗಳನ್ನು ಗುರುತಿಸಬಹುದಾಗಿದೆ. ವ್ಯಕ್ತಿತ್ವ ಕುರಿತು ಹೇಳುವುದಾದರೆ ಕೆಲವು ಇತ್ಯಾತ್ಮಕ ಗುಣಸ್ವಭಾವದ ಪಾತ್ರಗಳಾದರೆ, ಇನ್ನು ಕೆಲವು ನೇತ್ಯಾತ್ಮಕ ಗುಣಸ್ವಾಭಾವದ ಪಾತ್ರಗಳಾಗಿರುತ್ತವೆ. ಪಾತ್ರಗಳ ಬಾಂಧವ್ಯದ ಕುರಿತು ಹೇಳುವುದಾದರೆ ಕೌಟುಂಬಿಕ ಸಂಬಂಧದ ಪಾತ್ರಗಳು, ವ್ಯವಹಾರ ಅಥವಾ ಆಡಳಿತ್ಮಾತ್ಮಕ ಸಂಬಂಧಗಳು ಗಣಿಕ ಸ್ತ್ರೀಯರ ಪಾತ್ರಗಳು ಎಂದು ಮುಂತಾಗಿ ವರ್ಗೀಕರಿಸಬಹುದಾಗಿವೆ. ಈ ಎಲ್ಲ ಬಗೆಯ ಪಾತ್ರಗಳ ಸೃಷ್ಟಿ ಮತ್ತು ಪೋಷಣೆಯು ಕಾದಂಬರಿಯ ಕೇಂದ್ರಪಾತ್ರ, ಸನ್ನಿವೇಶ ಆಶಯಕ್ಕೆ ಪೂರಕವಾಗಿರುತ್ತದೆ. ಹಾಗಾಗಿಯೇ ಇವುಗಳನ್ನು ಪೋಷಕ ಪಾತ್ರಗಳೆಂದು ಪರಿಗಣಿಸಲಾಗುತ್ತದೆ. ಇಂಥಹ ಪೋಷಕ ಪಾತ್ರಗಳಲ್ಲಿ ನೇತ್ಯಾತ್ಮಕ ಪಾತ್ರಗಳು ಮಹತ್ವವನ್ನು ಪಡೆದುಕೊಳ್ಳುತ್ತವೆ.

**ಕಮಲಾಂಬಿಕೆ - ರಸವಂತಿ - ಶಿವಕಾಮಿನಿ**

ಕಟ್ಟೀಮನಿ ಅವರ ಗಿರಿಯ ನವಿಲು ಕಾದಂಬರಿಯ ಕಮಲಾಂಬಿಕೆಯು ಅಕ್ಕಮಹಾದೇವಿಯ ಬಾಲ್ಯ ಸ್ನೇಹಿತೆ. ಲೌಕಿಕ ಜೀವನದ ಆಸಕ್ತಿಯಿಂದ ಸಂಸಾರದಲ್ಲಿ ತೊಡಗಿ ವೈವಾಹಿಕ ಜೀವನದಿಂದ ವಂಚಿತವಾದ ಪಾತ್ರ, ಆದರೂ ಆ ಬಂಧನಗಳಿಂದ ಹೊರ ಬರಲು ಸಾಧ್ಯವಾಗದೆ ಸಂಕಟಪಡುವ ಪಾತ್ರ ಕಮಲಾಂಬಿಕೆಯದು. ತನ್ನ ಅವನತಿಯ ನಿರ್ದೇಶನದಿಂದ ಅಕ್ಕಮಹಾದೇವಿ ಲೌಕಿಕ ಜೀವನದಿಂದ ಜಿಗುಪ್ಸೆ ಹೊಂದುವಂತೆ ಮಾಡುತ್ತದೆ. ಸಮಾಜದ ಕೆಟ್ಟ ವ್ಯವಸ್ಥೆಯ ವಿರುದ್ಧ ಪ್ರತಿಬಿಂಬಿಸುವಂತೆ ಪ್ರಚೋದಿಸುತ್ತದೆ. ಈ ಪಾತ್ರ ಲೇಖಕರ ಹೊಸ ಸೃಷ್ಟಿಯಾಗಿದೆ.

ತಿಪ್ಪೇರುದ್ರಸ್ವಾಮಿ ಅವರ 'ಕದಳಿಯ ಕರ್ಪೂರ' ಕಾದಂಬರಿಯಲ್ಲಿ ಬರುವ 'ರಸವಂತಿ'ಯ ಪಾತ್ರವು ನಮ್ಮ ಅಂತಃಕರಣವನ್ನು ಗೆಲ್ಲುವ ಪಾತ್ರ. ಇದು ಲೇಖಕರ ಹೊಸಸೃಷ್ಟಿ. ಕೌಶಿಕನ ಅರಮನೆಯ ದಾಸಿಯಾದರೂ ಮಹಾದೇವಿಯ ಪ್ರೇಮದ ಗೆಳತಿ, ರಾಜನ ಬಗ್ಗೆ ಅಷ್ಟೇ ಗೌರವ, ಪೂಜ್ಯ ಭಾವನೆಗಳನ್ನು ಹೊಂದಿದ್ದಳು. ಅವಳ ಸುಸಂಸ್ಕೃತ ಹೃದಯದಿಂದ ಅದು ಪ್ರಕಟವಾಗುತ್ತವೆ. ಮೂಲತಃ ಬಡಕುಟುಂಬದಲ್ಲಿ ಜನಿಸಿದ ರಸವಂತಿ ತಕ್ಕಮಟ್ಟಿಗೆ ಸುಂದರಿ ಆದರೆ ಜನ್ಮತ: ಈಕೆಯ ಹೆಸರು ಕಾಳಿ. ಕೌಶಿಕ ಆ ಹೆಸರು ಆಕೆಗೆ ಹೊಂದಲಾರದೆಂದು ರಸವಂತಿ ಎಂದು ಕರೆಯುತ್ತಾನೆ. ಈ ಸನ್ನಿವೇಶದಲ್ಲಿ ಕೌಶಿಕನ ರಸಿಕ ಪ್ರಜ್ಞೆಯ ಜೊತೆ ಜೊತೆಗೆ ಕಾಳಿಯ ಸೌಂದರ್ಯದ ಕಲ್ಪನೆ ಮೂಡುತ್ತದೆ.

ವಿಲಾಸ ವೈಭವಗಳಿಂದ ತುಂಬಿದ ಅರಮನೆಯಲ್ಲಿದ್ದರೂ ಅಕ್ಕನ ವ್ಯಕ್ತಿತ್ವಕ್ಕೆ ಮನಸೋತ ರಸವಂತಿ, ತಾನು ಆಧ್ಯಾತ್ಮಕ ಸಾಧನೆಗೆ ತೊಡಗಿ ಅಕ್ಕಮಹಾದೇವಿಯನ್ನು ತನ್ನ ಗುರು ಎಂದೇ ಭಾವಿಸುತ್ತಾಳೆ. ಮಹಾದೇವಿ ಉಡುತಡಿಯನ್ನು ಬಿಟ್ಟು ಹೊರಡುವಾಗ ತಾನು ಕೂಡ ಅಕ್ಕನೊಂದಿಗೆ ಕಲ್ಯಾಣಕ್ಕೆ ಬರುತ್ತೇನೆಂದು ಹಠ ಹಿಡಿಯುತ್ತಾಳೆ. ಆದರೆ ಅಕ್ಕ ತನ್ನನ್ನು ಪ್ರೀತಿಸಿ ದುಃಖಕ್ಕೆ ಗುರಿಯಾದ ಕೌಶಿಕನ ಸೇವೆ ಮಾಡಿಕೊಂಡು ಇರಲು ಹೇಳಿದಾಗ ಅದನ್ನೇ ಆಜ್ಞೆ ಎಂಬಂತೆ ಪೂರೈಸುತ್ತಾಳೆ. ಕೊನೆಗೆ ಕದಳಿಯವರೆಗೂ ಕೌಶಿಕನೊಂದಿಗೆ ಹೋಗಿ ಮಹಾದೇವಿಯನ್ನು ಪುನಃ ಸಂದರ್ಶಿಸಿ ಶ್ರೀಶೈಲದಲ್ಲಿಯೇ ಇದ್ದು ಅಕ್ಕನ ಆದರ್ಶನಗಳನ್ನು ಜನರಿಗೆ ಸಾರುವ ಸಂಕಲ್ಪ ಮಾಡುತ್ತಾಳೆ. ಈ ರೀತಿ ರಸವಂತಿಯ ಪಾತ್ರವೂ ಲೌಕಿಕ ಸ್ಥರದಿಂದ ಆಧ್ಯಾತ್ಮಿಕ ಸ್ಥರಕ್ಕೇರುತ್ತದೆ. ಈ ಪಾತ್ರ ಸೃಷ್ಟಿಯಲ್ಲಿ ಲೇಖಕರ ಕಲಾವಂತಿಕೆಯನ್ನು ಗುರುತಿಸಬಹುದಾಗಿದೆ. ಕಾದಂಬರಿಯಲ್ಲಿ ಇದೊಂದು ಚಿಕ್ಕ ಪಾತ್ರವಾದರೂ ಓದುಗರ ಸಂಪೂರ್ಣ ಮನಸ್ಸನ್ನು ಗೆಲ್ಲುತ್ತದೆ. ತನ್ನ ವ್ಯಕ್ತಿತ್ವದ ಬೆಳವಣಿಗೆಯಿಂದ 'ತರಂಗಿಣಿ' ಕಾದಂಬರಿಯಲ್ಲಿ ಬರುವ ಶಿವಕಾಮಿನಿಯ ಪಾತ್ರವು ರಸವಂತಿಕೆಯ ಪಾತ್ರಕ್ಕೆ ಸಮನಾಗಿದೆ.

'ಗಿರಿಯ ನವಿಲು' ಕಾದಂಬರಿಯಲ್ಲಿ ರುದ್ರಾಂಬಿಕೆ, ಕಮಲಾಂಬಿಕೆ ಪಾತ್ರಗಳು ಸಂದರ್ಭಕ್ಕನು ಗುಣವಾಗಿ ಸೃಷ್ಟಿಯಾಗಿವೆ. ಕದಳಿಯ ಕರ್ಪೂರದಲ್ಲಿ ಯಶೋಮತಿಯ ಪಾತ್ರದ ಪ್ರಸ್ತಾಪವಿಲ್ಲ. ಕಾತ್ಯಾಯಿನಿ, ಶಂಕರಿ, ದ್ರಾಕ್ಷಾಯಣಿ ಗಿರಿಯ ನವಿಲಿನ ಕಮಲಾಂಬಿಕೆ, ತರಂಗಿಣಿಯ ರುದ್ರಾಣಿ ಇವರೆಲ್ಲರೂ ಮಹಾದೇವಿಯ ಲೌಕಿಕ ಶಕ್ತಿಯ ಗೆಳತಿಯರು. ಗಿರಿಯ ನವಿಲು ಕಾದಂಬರಿಯಲ್ಲಿ ಅಕ್ಕನನ್ನು ಸಂತೋಷಪಡಿಸಲು 'ಮಧುಕರಿಕೆ', 'ಮಾಯವಿನಿ', 'ಸುಹಾಸಿನಿ' ಪಾತ್ರಗಳ ಸೃಷ್ಟಿಯನ್ನು ಲೇಖಕರು ಮಾಡಿದ್ದಾರೆ.

ನಾಗಾಯಿ, ಅಕ್ಕನ ಜೊತೆಯಲ್ಲಿ ಅರಮನೆಗೆ ಬಂದಂತಹ ಅಕ್ಕನ ಹಿತೈಷಿ ಮತ್ತು ಸೇವಕಿ. 'ಸಿಂಗಾರಿಕೆ' ಅರಮನೆಯ ದಾಸಿಯರಲ್ಲಿ ಒಬ್ಬಳು. ಹೀಗೆ ಲೇಖಕರು ತಮ್ಮ ಕಾದಂಬರಿಗಳಲ್ಲಿ ಮಹಿಳಾ ಪಾತ್ರಗಳನ್ನು ಸೃಷ್ಟಿಮಾಡಿದ್ದಾರೆ. ಕೆಲವೊಂದು ಪಾತ್ರಗಳು ಒಂದೇ ರೀತಿಯಾಗಿದ್ದರೂ ಕೆಲವೊಂದು ಪಾತ್ರಗಳು ಲೇಖಕನ ಕಲ್ಪನೆಯಲ್ಲಿ ಬದಲಾವಣೆಯಾಗಿದೆ. ಅರಮನೆಯಲ್ಲಿರುವ ಸೇವಕಿಯರ ಪಾತ್ರ ನಾಟಕೀಯವಾಗಿ ಕಲ್ಪನೆಯಂತೆ ಮೂಡಿಬಂದಿದೆ.

**ಯಶೋಮತಿ**

ಬಸವರಾಜ ಕಟ್ಟೀಮನಿ ಅವರ ಗಿರಿಯ ನವಿಲು ಕಾದಂಬರಿಯಲ್ಲಿ ಬರುವ ಯಶೋಮತಿ ಪಾತ್ರದ ಕಲ್ಪನೆ ಹೊಸದು. ಇವಳು ಕೌಶಿಕನ ಮೊದಲನೆಯ ಧರ್ಮಪತ್ನಿ; ಸ್ವಭಾವದಲ್ಲಿ ಒಳ್ಳೆಯವಳು. ಕೌಶಿಕ ಮಹಾದೇವಿಯನ್ನು ಅರಮನೆಗೆ ಕರೆದುಕೊಂಡು ಬಂದಾಗ ಆರತಿ ಬೆಳಗಿ "ನಿನಗೆ ಯಾವುದರ ಕೊರತೆಯೂ ಅನ್ನಿಸದಂತೆ ಎಲ್ಲಾ ವ್ಯವಸ್ಥೆಯಾಗಿದೆ. ಅಂತಃಪುರಕ್ಕೆ ಹೊಂದಿಕೊಂಡ ಹಾಗಿದ್ದರೂ ಪ್ರತ್ಯೇಕವಾಗಿರುವ ಭವನವೊಂದನ್ನು ನಿನಗಾಗಿಯೇ ಅಲಂಕರಿಸಿ ಸಿದ್ಧಗೊಳಿಸಿದೆ. ಅಲ್ಲಿ ನಡೆತಾಯಿ" (ಬಸವರಾಜ ಕಟ್ಟೀಮನಿ; ೧೯೫೬; ಪು. ೧೩೩) ಎಂದು ಸ್ವಾಗತಿಸುತ್ತಾಳೆ. ಈ ರೀತಿ ಮಹಾದೇವಿಗೆ ತಾಯಿಯ ಸ್ಥಾನ ಕೊಟ್ಟರೂ "ನೂರುಮಂದಿ ಸ್ತ್ರೀಯರ ಜೊತೆಯಲ್ಲಿ ಇವಳು ಒಬ್ಬಳು ಅಂತಃಪುರದಲ್ಲಿರೆ ನಾನೇನೂ ಬೇಡವೆನ್ನುವುದಿಲ್ಲ. ಮಂತ್ರಿವರ್ಯರೆ, ಇವಳ ಬಗ್ಗೆ ನನಗೆ ಅಸೂಯೆಯೆಂದು ನೀವು ತಪ್ಪು ಭಾವಿಸಬಾರದು" (ಅದೇ; ಪು. ೧೧೪) ಎನ್ನುವ ನುಡಿಗಳಲ್ಲಿ ತನ್ನ ಸ್ಥಾನವನ್ನು ಮಹಾದೇವಿ ಕಸಿದುಕೊಳ್ಳುವಳೇನೋ ಎಂಬ ಭಯವಿದೆ ಎಂದು ತೋರುತ್ತದೆ. ಆದರೂ ಕೌಶಿಕ ತನ್ನಲ್ಲಿ ಸಂಪೂರ್ಣ ಆಸಕ್ತಿಯನ್ನು ಕಳೆದುಕೊಂಡು ಮಹಾದೇವಿಗಾಗಿ ಹಂಬಲಿಸುವುದನ್ನು ತಿಳಿದು ಮಾನಸಿಕ ತಳಮಳಕ್ಕೆ ಈಡಾಗುತ್ತಾಳೆ. ತನ್ನ ರಾಜ್ಯದ ಬೊಕ್ಕಸವನ್ನು ರಕ್ಷಿಸುವಂತೆ ಮುರಾರಿಗೆ ಹೇಳುತ್ತಾಳೆ. ಮಹಾದೇವಿ ಕೊನೆಗೆ ದಿಗಂಬರರೆಯಾಗಿ ಅರಮನೆಯನ್ನು ಬಿಟ್ಟು ಹೊರಗೆ ಬಂದಾಗ 'ಅಯ್ಯೋ ಪಾಪ ಇಂಥ ಸ್ಥಿತಿ ವೈರಿಗೂ ಬರಬಾರದೆಂದು' ಅಂದುಕೊಂಡು ಅಕ್ಕನಿಗಾಗಿ ಮರಗುತ್ತಾಳೆ.

ಈ ರೀತಿ ಕಾದಂಬರಿಯಲ್ಲಿ ಯಶೋಮತಿಯ ಪಾತ್ರದಲ್ಲಿ ಸಂಕೀರ್ಣ ಸ್ವಭಾವಗಳನ್ನು, ಭಾರತೀಯ ಸ್ತ್ರೀಸಂವೇದನೆಗಳನ್ನು ಗುರುತಿಸಬಹುದು. ಆದರೂ ಅಕ್ಕಮಹಾದೇವಿಗಾಗಿ ಹಂಬಲಿಸಿ ಬಂದ ಕೌಶಿಕನ ಜೊತೆ ಯಶೋಮತಿ ಬರುವುದಿಲ್ಲ. ಅರಮನೆಯಲ್ಲಿ ಮಾತ್ರ ಕಂಡು ಬರುತ್ತದೆ.

**ಶಿರಸಮ್ಮ**

ಶಾಂತಾದೇವಿ ಮಾಳವಾಡರ 'ದಾನ ದಾಸೋಹಿ ದಾನಮ್ಮ' ಕಾದಂಬರಿಯಲ್ಲಿನ ಶಿರಸಮ್ಮನ ಪಾತ್ರಚಿತ್ರಣ ಅತ್ಯಲ್ಪವಾಗಿದ್ದರೂ ಸ್ಫುಟವಾಗಿ ಮೂಡಿಬಂದಿದೆ. ವಿಜಾಪುರ ಜಿಲ್ಲೆಯ ಇಂಡಿ ತಾಲೂಕಿನ ಉಮಾರಾಣಿ ಎಂಬ ಹಳ್ಳಿಯಲ್ಲಿ ವಾಸವಾಗಿದ್ದ, ಅಕ್ಕಸಾಲಿಗ ಅನಂತರಾಯನ ಮಡದಿ. ಇದ್ದುದರಲ್ಲಿಯೇ ಸಂತೃಪ್ತ ಜೀವನ ನಡೆಸಿದಲ್ಲದೇ ಅಲ್ಲಿನ ಜನರ ಪ್ರೀತಿಗೆ ಪಾತ್ರಳಾಗಿದ್ದಳು. ಈಕೆಗೆ ಮಕ್ಕಳಿಲ್ಲದ ಕೊರಗು ಸಾಕಷ್ಟು ನೋವನ್ನುಂಟುಮಾಡಿತ್ತಲ್ಲದೆ ಸಮಾಜದ ಜನತೆಯ ಕುಹಕ ನುಡಿಗಳು ಶಿರಸವ್ವನ ಮನವನ್ನು ಜರ್ಜರಿತವನ್ನಾಗಿಸಿತ್ತು.

ವೀರಮಲ್ಲಯ್ಯನ ಪರಮಭಕ್ತಳಾದ ಇವಳು ನಿತ್ಯವೂ ದೇವಸ್ಥಾನಕ್ಕೆ ಹೋಗಿ ತನಗೊಂದು ಮಗುವನ್ನು ದಯಪಾಲಿಸು ಎಂದು ಏಕಾಗ್ರತೆಯಿಂದ ಪ್ರಾರ್ಥಿಸುತ್ತಿದ್ದಳು. ಕಾದಂಬರಿಯಲ್ಲಿ ಲೇಖಕಿ ದೈವೀಶಕ್ತಿಗೆ ಸಾಕಷ್ಟು ಪ್ರಾಶಸ್ತ್ಯವನ್ನು ಕೊಟ್ಟಿದ್ದಾರೆ. ಇವಳ ಮೊರೆಯನ್ನು ಆಲಿಸಿದ ವೀರಮಲ್ಲಯ್ಯ ಇವಳಿಗೆ ಹೆಣ್ಣುಮಗುವೊಂದನ್ನು ದಯಪಾಲಿಸುತ್ತಾನೆ. ಆ ಮಗುವೇ ಲಿಂಗಮ್ಮ.

ಮುದ್ದುಮಗಳು ಲಿಂಗಮ್ಮ ಹೆತ್ತವರ ಮಡಿಲನ್ನು, ಮನೆಯನ್ನು ತುಂಬಿದ್ದಳು. ಬಿದಿಗೆಯ ಚಂದಿರನಂತೆ ಬೆಳೆಯುತ್ತಿದ್ದ ಅವಳು ತನ್ನ ನಡೆ-ನುಡಿ, ವರ್ತನೆಯಿಂದ ಹೆತ್ತವರ ಜೀವಾಳವಾದಳು.

ಬಾಲ್ಯದಿಂದಲೂ ಲಿಂಗಮ್ಮನಲ್ಲಿ ಆಧ್ಯಾತ್ಮಿಕ ಮನೋಭಾವನೆಯನ್ನು ಬೆಳೆಸುವಲ್ಲಿ ತಾಯಿಯ ಪಾತ್ರ ಹಿರಿದಾದದು. ಪ್ರತಿನಿತ್ಯ ಬೆಳಗ್ಗೆ ಮಗುವಿಗೆ ಸ್ನಾನ ಮಾಡಿಸಿದ ನಂತರ ಪಂಚಾಕ್ಷರಿ ಮಂತ್ರ ಜಪಿಸುತ್ತ ಭಸ್ಮ ಲೇಪಿಸುತ್ತಿದ್ದಳು. ನಂತರ ಹಾಲುಡಿಸುತ್ತಿದ್ದಳಲ್ಲದೆ ತಾನು ದೇವಸ್ಥಾನಕ್ಕೆ ಹೋಗಬೇಕಾದಾಗಲೆಲ್ಲ ಮಗಳನ್ನು ಜೊತೆಯಲ್ಲಿಯೇ ಕರೆದುಕೊಂಡು ಹೋಗುತ್ತಿದ್ದಳು. ತಂದೆ ಮಗಳನ್ನು ಕೂಡಿಸಿಕೊಂಡು ಶಿವಪುರಾಣ ಓದುತ್ತಿದ್ದ. ಇದರಿಂದ ಲಿಂಗಮ್ಮ ಬೆಳೆದಂತೆ ಅವಳೊಡನೆ ಭಕ್ತಿಯೂ ಬೆಳೆಯಿತು. ಲಿಂಗಮ್ಮನಿಗೆ ದೇವರ ಬಗ್ಗೆ ಶ್ರದ್ಧೆ, ಓದುವುದರಲ್ಲಿ ಆಸಕ್ತಿಯಿರುವುದನ್ನು ಕಂಡು ಕಲ್ಯಾಣದಿಂದ ಬಂದ ವೀರಯ್ಯನವರ ಬಳಿಗೆ ವಿದ್ಯೆ ಕಲಿಯಲು ಕಳುಹಿಸುತ್ತಾರೆ. ಲಿಂಗಮ್ಮನ ಮನದಲ್ಲಿರುವ ಭಕ್ತಿಯ ಭಾವನೆಗೆ ನೀರೆರೆದು ಪೋಷಿಸಿ ಬೆಳೆಯಲು ಸಹಾಯಕರಾದರಲ್ಲಿ ಹೆತ್ತವರ ಪಾಲು ಇದೆ.

ಕಾದಂಬರಿಯಲ್ಲಿ ನಾಯಕಿಯಾದ ದಾನಮ್ಮನ ಪಾತ್ರವನ್ನು ಹೊರತುಪಡಿಸಿದರೆ ಉಳಿದೆಲ್ಲ ದಾನಮ್ಮನ ಬೆಳವಣಿಗೆಗೆ ಪೋಷಕ ಪಾತ್ರಳಾಗಿ ಮೂಡಿ ಬಂದಿರುವುದನ್ನು ಕಾಣಬಹುದು.

**ನಾಗಲಾಂಬಿಕೆ–ನೀಲಲೋಚನೆ–ಗಂಗಾಂಬಿಕೆ**

ಬಿ. ಪುಟ್ಟಸ್ವಾಮಯ್ಯ ಅವರ ಕಾಂತ್ರಿಕಲ್ಯಾಣ ಕಾದಂಬರಿಯಲ್ಲಿ ಮೂಡಿಬಂದ ನಾಗಲಾಂಬಿಕೆ–ನೀಲಲೋಚನೆ, ಗಂಗಾಂಬಿಕೆಯರದು ಗಮನಾರ್ಹ ಪಾತ್ರ ವೈವಿಧ್ಯಗಳು. ಆಚಾರ–ನಡೆ, ನುಡಿ, ಗುಣ ಜೀವನ ಸಂಸ್ಕಾರ ಸಂದರ್ಭಗಳಲ್ಲಿ ಈ ಮೂರು ಪಾತ್ರಗಳು ವಿಶಿಷ್ಟತೆಯನ್ನು ಕಾಪಾಡಿಕೊಂಡು ಬಂದಿದೆ.

**ನಾಗಲಾಂಬಿಕೆ**

ನಾಗಲಾಂಬಿಕೆಯ ಪಾತ್ರ ತನ್ನ ಜೀವನದ ನಿಲುವು ವ್ಯಕ್ತಿತ್ವದಿಂದ ಹೆಚ್ಚು ಸತ್ತ್ವಪೂರ್ಣವಾದದ್ದು. ಯೌವನದಲ್ಲಿಯೇ ಮದುವೆಯಾಗದೆ ಸನ್ಯಾಸಿನಿಯಾಗುತ್ತೇನೆಂಬ ನುಡಿಯಾಡುತ್ತಿದ್ದ ನಾಗಲಾಂಬಿಕೆ, ಸಮಾಜದ ಕೊಂಕುಗಳಿಗೆ ಕಿವಿಗೊಡದೆ ಅನಾಥ ಬಾಲಕನನ್ನು ಸಲಹಿ ಹಾಲುಣಿಸಿದ ತಾಯಿಯಾಗಿ ಬಸವಣ್ಣನನ್ನು ಸಾಕಿದವಳು. ಬಸವಣ್ಣನ ಪ್ರತಿಯೊಂದು ಕಾರ್ಯದಲ್ಲಿಯೂ ಹೆಗಲೆಣೆಯಾಗಿ ದುಡಿಯುವ ನಾಗಲಾಂಬಿಕೆ ಬಸವಣ್ಣನ ಅನುಪಸ್ಥಿತಿಯಲ್ಲಿ ಯಾವುದೇ ಸಂಕಟ ಪರಿಸ್ಥಿತಿಗಳಲ್ಲಿ ವರ್ತಿಸುವ ರೀತಿ ಆ ಪಾತ್ರವನ್ನು ಗಟ್ಟಿಗೊಳಿಸುತ್ತದೆ.

ಕಾದಂಬರಿಯಲ್ಲಿ ನಾಗಲಾಂಬಿಕೆ ದಿಟ್ಟ ತರುಣಿಯಾಗಿಯೇ ಚಿತ್ರತಳಾಗಿದ್ದಾಳೆ. ಅವಳ ಪಾತ್ರದ ಈ ದಿಟ್ಟತನವೇ ಮುಂದೆ ಅವಳ ಬದುಕನ್ನು ನಿರ್ದೇಶಿಸುವ ಅಂಶಗಳೂ ಸಹ ಆಗುತ್ತವೆ. ವಿವಾಹದ ಪ್ರಸ್ತಾಪ ಬಂದಾಗ ತಂದೆಯೊಡನೆ ಅವಳು ನುಡಿಯುವುದು ಹೀಗಿ "ನೀವೆ ಹೇಳಿಲ್ಲವೆ ಅಣ್ಣ. ನಮ್ಮ ಮನೆತನದಲ್ಲಿ, ತಲೆಮಾರಿಗೊಬ್ಬರು ಸನ್ಯಾಸಿಯಾಗಲೇಬೇಕು ಎಂದು. ಈ ತಲೆಮಾರಿಗೆ ಆ ಸನ್ಯಾಸ ದೀಕ್ಷೆಯನ್ನು ನನಗೆ ನೀಡಿರಿ" (ಪುಟ್ಟಸ್ವಾಮಿಯ್ಯ ಬಿ.;

೧೯೬೨; ಪು, ೩೪೯) ಎಂಬ ಮಾತುಗಳು ಅವಳ ದಿಟ್ಟತನದೊಂದಿಗೆ, ಮುಂದೆ ಅವಳು ಮದುವೆಯಾಗಿಯೂ ಅನತಿ ಕಾಲದಲ್ಲಿಯೇ ಗಂಡನನ್ನು ಕಳೆದುಕೊಂಡು ಸನ್ಯಾಸಿನಿಯ ಬದುಕನ್ನೇ ಬಾಳುವುದು ಆ ಮಾತುಗಳಿಗೆ ಹೆಚ್ಚು ಧ್ವನಿಪರಂಪರೆಯನ್ನು ಒದಗಿಸಿಕೊಡುತ್ತದೆ. ಇಂತಹ ದಿಟ್ಟ ತರುಣಿಯ ಆಶ್ರಯಕ್ಕೆ ಅನಾಥ ಬಾಲಕ ಬಸವಣ್ಣನ ಬದುಕು ಬಂದು ಸೇರುತ್ತದೆ.

ಅನಾಥ ಬಾಲಕನಿಗೆ ಹೆಸರಿಟ್ಟು ತಾಯಿಯಾದ ನಾಗಲಾಂಬಿಕೆ ಮದುವೆ ಸಂಪ್ರದಾಯ, ಕಟ್ಟುಪಾಡುಗಳನ್ನೆಲ್ಲಾ ಮುರಿದು ಬಸವೇಶ್ವರನ ವಿದ್ಯಾಭ್ಯಾಸಕ್ಕಾಗಿ ಜೊತೆಯಾಗಿಯೇ ಗುರುಕುಲಕ್ಕೂ ಹೊರಟುಬಿಡುತ್ತಾಳೆ. ಮಾನವ ಸಹಜ ಆಸೆ-ಆಕಾಂಕ್ಷೆಗಳನ್ನು ತೊರೆದು ತನ್ನೆಲ್ಲಾ ಬದುಕನ್ನು ಬಸವಣ್ಣನ ಭವಿಷ್ಯಕ್ಕಾಗಿ ತ್ಯಾಗ ಮಾಡುವ ರೀತಿಯಲ್ಲಿ ನಡೆದುಕೊಳ್ಳುವ ನಾಗಲಾಂಬಿಕೆಯ ಪಾತ್ರ ಎತ್ತರಕ್ಕೇರುವುದು ಬಸವಣ್ಣ ತನ್ನ ಅಕ್ಕನ ಬಗೆಗೆ ಹೊಂದಿದ ಪೂಜ್ಯಭಾವನೆಯಿಂದಲೇ. ಒಂದರ್ಥದಲ್ಲಿ ಬಸವಣ್ಣನ ಆದರ್ಶ, ಹಂಬಲಗಳ ಆಸೆಯ ಲತೆ ನಾಗಲಾಂಬೆಯ ಆಸರೆಯನ್ನೇ ಬಯಸಿ ಚಿಗುರಿದಂತಹ ಭಾವನೆ ಕೆಲವು ಸಂದರ್ಭಗಳಲ್ಲಿ ಮೂಡುತ್ತದೆ. ಅದಕ್ಕೆ ಉದಾಹರಣೆಯಾಗಿ ಬಸವಣ್ಣ ರಾಜಕಾರಣದಿಂದ ದೂರಾಗಿ ಬಿಜ್ಜಳನ ರಾಜ್ಯಪಹಾರಕ್ಕೆ ಪ್ರತಿಭಟನೆ ವ್ಯಕ್ತಪಡಿಸಿ ಹೊರಬಂದ ಸಂದರ್ಭವನ್ನೇ ನೋಡಬಹುದು.

"ಸಮೀಪದ ಗ್ರಾಮವೊಂದರಲ್ಲಿ ಯಾವುದೋ ಸಾಂಕ್ರಾಮಿಕ ರೋಗ ಹರಡಿ ಅರ್ಧ ಜನರು ಹಾಸಿಗೆ ಹಿಡಿದಿದ್ದಾರೆ. ವೈದ್ಯರ ಸಹಾಯವಿಲ್ಲ. ಶುಶ್ರೂಷೆಗೆ ಜನರಿಲ್ಲ. ಅದಕ್ಕಾಗಿ ಏರ್ಪಡಿಸಲು ಹೋಗಿದ್ದೆ. ಪುನಃ ನಾಳೆ ಹೋಗಬೇಕಾಗಿದೆ.

ನಿನ್ನ ಆದರ್ಶನ ನೀನು ರಕ್ಷಿಸಿಕೊಂಡೆ, ಅಕ್ಕ ನೀನು ಬನವಾಸಿಯಿಂದ ಇಲ್ಲಿಗೆ ಬಂದ ಒಂದು ವರ್ಷದಲ್ಲಿ ದೀನದರಿದ್ರ ಹೆಂಗಸರಿಗಾಗಿ, ಮಕ್ಕಳಿಗಾಗಿ, ರೋಗ ಪೀಡಿತರಿಗಾಗಿ ನೀನು ಮಾಡುತ್ತಿರುವ ಸೇವಾ ಕಾರ್ಯಗಳ ಪ್ರಶಂಸೆ ಎಲ್ಲ ಕಡೆ ಕೇಳಿ ಬರುತ್ತಿದೆ. ಧನ್ಯಳು ನೀನು.

ಪ್ರಶಂಸೆಗಾಗಿ ನಾನೇನೂ ಮಾಡುತ್ತಿಲ್ಲ ಬಸವಣ್ಣ. ದೀನ ಸೇವೆಯೇ ಈಶ ಸೇವೆಯೆಂದು ನಾನು ತಿಳಿದಿದ್ದೇನೆ. ಮುಂದೆ ಏನು ಮಾಡಬೇಕೆಂದು ನಿನ್ನ ಉದ್ದೇಶ? ಬಸವಣ್ಣ 'ನಾನು ಅದನ್ನೇ ಯೋಚಿಸುತ್ತಿದ್ದಾಗ ಕೈಯಲ್ಲಿ ದೀಪ ಹಿಡಿದು ನೀನು ಬಂದೆ ಅಕ್ಕ! ಮಾರ್ಗದರ್ಶಿನಿ ನೀನು ತೋರಿದ ಮಾರ್ಗದಲ್ಲಿ ನಾನು ನಡೆಯುವುದು' (ಅದೇ; ಪು. ೩೫೦) ಎನ್ನುತ್ತಾನೆ.

ಈ ಸನ್ನಿವೇಶವು ರಾಜಕಾರಣದಿಂದ ಹೊರಬಂದ ಬಸವಣ್ಣನ ಬಾಳಿನ ನಿರ್ಣಯ ಘಟ್ಟವಾಗಿದೆ. ಅವನ ಬದುಕಿನ ಸಂಕ್ರಮಣ ಕಾಲದಲ್ಲಿ ತನ್ನ ಮಾರ್ಗದರ್ಶಕ ವ್ಯಕ್ತಿಯಾಗಿ ಬಸವಣ್ಣ ನಾಗಲಾಂಬೆಯನ್ನು ಒಪ್ಪಿಕೊಳ್ಳುತ್ತಾನೆ. ಆ ಸ್ಥಾನವೇ ನಾಗಲಾಂಬೆಯ ಪಾತ್ರಕ್ಕೆ ಸಲ್ಲುವಂತಹ ವಿಶೇಷತೆಗಳನ್ನು ಪ್ರತಿಬಿಂಬಿಸುತ್ತದೆ. ಬಸವಣ್ಣನ ಭವಿಷ್ಯವನ್ನು ರೂಪಿಸಿದ ಪ್ರಮುಖ ವ್ಯಕ್ತಿಯಾದ ನಾಗಲಾಂಬೆ, ಅವನು ತನ್ನ ಬದುಕನ್ನು ಸಮಷ್ಟಿಯ ಕಲ್ಯಾಣಕ್ಕಾಗಿ ಅರ್ಪಿಸಿಕೊಳ್ಳುವ ಕಾರ್ಯದಲ್ಲಿಯೂ ಪ್ರಮುಖ ಪಾತ್ರ ವಹಿಸುತ್ತಾಳೆ. ಬಸವಣ್ಣನಂತಹ ವ್ಯಕ್ತಿಯ ಹಿನ್ನೆಲೆಯಲ್ಲಿ ಇರುವ ಬಸವಣ್ಣನೇ ಮಾರುಹೋಗಿ, ಹಿಂಬಾಲಿಸುವಂತಹ ವ್ಯಕ್ತಿತ್ವ ಹೊಂದಿದ ನಾಗಲಾಂಬೆಯನ್ನು

ಕಾದಂಬರಿಕಾರರು ದಿಟ್ಟ ಆದರ್ಶಮಯ, ನಿರ್ಲಿಪ್ತ ಮನೋಭಾವದ ಪರಿಮಾವಧಿ ಮಟ್ಟ ಮುಟ್ಟುವ ಸ್ಥಿತಿಯಲ್ಲಿ ಚಿತ್ರಿಸುತ್ತಾರೆ.

**ನೀಲಲೋಚನೆ**

ಬಿಜ್ಜಳನ ಸಹೋದರಿಯಾಗಿ, ಕಲಚುರ್ಯರಾಜನಂದಿನಿಯಾಗಿ ಬಸವಣ್ಣನ ಮಡದಿಯಾಗಿ ನೀಲಲೋಚನೆಯ ವ್ಯಕ್ತಿತ್ವ ನಾಗಲಾಂಬಿಕೆ, ಗಂಗಾಂಬಿಕೆಯ ಪಾತ್ರಕ್ಕಿಂತ ವಿಭಿನ್ನವಾಗುತ್ತದೆ. ನೀಲಲೋಚನೆ ಕ್ಷತ್ರಿಯ ಕನ್ಯೆಯಾಗಿ ಅದಕ್ಕೆ ಸಹಜವಾದ ಧೈರ್ಯ, ಕಾಠಿಣ್ಯ, ಛಲ, ಪಾಂಡಿತ್ಯ, ಪ್ರತಿಭೆ ಉಳ್ಳವಳು, ಅವಳ ಪಾತ್ರದ ಈ ಎಲ್ಲ ಗುಣಗಳನ್ನು ಗುರುಕುಲದಲ್ಲಿ ಪ್ರಥಮ ಬಾರಿಗೆ ಬಸವಣ್ಣನನ್ನು ಭೇಟಿಯಾದ ಸಂದರ್ಭದಲ್ಲಿಯೇ ಲೇಖಕರು ಅನಾವರಣಗೊಳಿಸುತ್ತಾರೆ. ಅಪರಿಚಿತ ತರುಣನ ಗಮನ ಸೆಳೆಯಲು ಅವಳು ವಹಿಸುವ ಧೈರ್ಯ ಬಸವಣ್ಣನನ್ನು ಮಾತನಾಡಿಸಿ ಗಮನ ಸೆಳೆಯಲೇಬೇಕೆಂಬ ಛಲ ಅದು ಈಡೇರದಿದ್ದಾಗ ಅವಳು ಪಡುವ ವೇದನೆ, ನಾಗಲಾಂಬಿಕೆಯೊಡನೆಯ ಮಾತುಕತೆಗಳಲ್ಲಿ ವ್ಯಕ್ತಗೊಳ್ಳುವ ಸಾಹಿತ್ಯ ವಿಚಾರಗಳು ಅವಳ ಪ್ರತಿಭೆ ಪಾಂಡಿತ್ಯ ಎಲ್ಲವೂ ಇಲ್ಲಿಯೇ ಅನಾವರಣವಾಗುತ್ತವೆ.

ಕ್ಷತ್ರಿಯ ಕನ್ಯೆಯ ದಿಟ್ಟತನ ಛಲಗಳು ನೀಲಲೋಚನೆಯಲ್ಲಿ ಬಸವಣ್ಣನನ್ನು ಒಲಿದು ಅವನನ್ನು ತನ್ನ ಪತಿಯನ್ನಾಗಿ ಮಾಡಿಕೊಳ್ಳುವ ವಿಚಾರದಲ್ಲಿ ಸಕ್ರಿಯವಾಗಿ ದುಡಿಯುತ್ತವೆ. ಬಸವೇಶನ ಮೇಲಿನ ತನ್ನ ಪ್ರೀತಿ ಆಕರ್ಷಣೆಗಳನ್ನು ಗಂಗಾಂಬಿಕೆಯೊಡನೆ ಆತನ ಮದುವೆಯ ನಂತರವೂ ಉಳಿಸಿಕೊಂಡೇ ಬರುವ ನೀಲಲೋಚನೆ ಬಹುಕಾಲ ವ್ಯಥೆಯಲ್ಲಿಯೇ ಮುಳುಗಿ ಸುಮ್ಮನಿರುವುದಿಲ್ಲ. ಕ್ಷತ್ರಿಯ ಕನ್ಯೆಯ ಗುಣವಿಶೇಷಗಳಿಗೆ ತಕ್ಕಂತಹ ನಿಲುವನ್ನು ತಾಳಿ "ಕಲಚುರ್ಯ ರಾಜ ನಂದಿನಿಯಾಗಿ ನಿನಗೀ ಅವಸ್ಥೆಯೇ? ನಿನ್ನ ಬುದ್ಧಿ ಚಾತುರ್ಯಗಳೇನಾದುವು? ನಿನ್ನ ಭವಿಷ್ಯವನ್ನು ನೀನೇ ನಿರ್ಧರಿಸಿಕೊಳ್ಳಬಲ್ಲ ಶಕ್ತಿಯಿಲ್ಲವೆ ನಿನಗೆ? (ಅದೇ: ೩೫೨) ಎಂದು ತನ್ನನ್ನು ತಾನೇ ಪ್ರಶ್ನಿಸಿಕೊಂಡು ಆಲೋಚನೆ, ಲಾವಣ್ಯವತಿಯ ಭವಿಷ್ಯವನ್ನು ನಿಜಮಾಡುವಂತೆ ತನ್ನ ವರನನ್ನು ತಾನೇ ಹುಡುಕಿಕೊಂಡು ಹೊರಟು ಬಿಡುವುದು ಅವಳ ಕ್ಷತ್ರಿಯ ಕುಲದ ರಾಜಸ, ದಿಟ್ಟ ಗುಣಗಳನ್ನು ಚಿತ್ರಿಸಲಾಗಿದೆ.

ಕ್ಷತ್ರಿಯ ಕನ್ಯೆಯಾದ ಕಾರಣದಿಂದಲೇ ಪುಟ್ಟಸ್ವಾಮಯ್ಯನವರು ನೀಲಲೋಚನೆಯ ಪಾತ್ರದಲ್ಲಿ ದಿಟ್ಟತನವನ್ನು, ಬೇರೆಯವರನ್ನು ಲೇವಡಿ ಮಾಡುವ ಗುಣ, ಮುನ್ನುಗ್ಗುವ ಎದೆಗಾರಿಕೆಯ ಸ್ವಭಾವವನ್ನು ಚಿತ್ರಿಸಿದ್ದಾರೆ. ಬಸವಣ್ಣನ ಮಡದಿಯಾಗಿ ಶರಣೆಯಾಗಿ ಪರಿಪಕ್ವಗೊಳ್ಳುತ್ತಾ ಸಾಗುವ ನೀಲಲೋಚನೆಯ ಪಾತ್ರ ಅಂತ್ಯದ ತನಕ ತನ್ನ ಸ್ವಭಾವದ ಮೂಲ ಗುಣಗಳನ್ನು ಸಂಪೂರ್ಣ ಮರೆಯದೇ ಇರುವುದರಿಂದಾಗಿಯೇ ಸಂಕೀರ್ಣವಾಗುತ್ತದೆ.

ಹೋರಾಟದ ಮುಖಾಂತರ ನೀಲಲೋಚನೆಯ ಪಾತ್ರ ಆಧ್ಯಾತ್ಮಿಕವಾಗಿ ಏರುವ ಎತ್ತರ ಉನ್ನತ ಮಟ್ಟದಲ್ಲಿ ನಿಲ್ಲಿಸುತ್ತದೆ. "ಅಲ್ಲಿ ಇರುವ ಸಂಗ ಇಲ್ಲಿ ಇರನೆ" ಎಂದು ಬಸವಣ್ಣನನ್ನೇ ಪ್ರಶ್ನೆ ಮಾಡಿ, ಬಸವಣ್ಣನ ಆಧ್ಯಾತ್ಮಿಕ ಸಾಧನೆಗೆ ಒರೆಗಲ್ಲಾಗುವ ನೀಲಲೋಚನೆಯ ಪಾತ್ರ ಮನೋಜ್ಞವಾಗಿ ಮೂಡಿಬಂದಿದೆ.

**ಗಂಗಾಂಬಿಕೆ**

ನೀಲಲೋಚನೆ ಲಾವಣ್ಯವತಿಯರೊಡನೆಯೇ ಪ್ರವೇಶವಾಗುವ ಪಾತ್ರ ಗಂಗಾಂಬಿಕೆಯದು. "ಸೌಜನ್ಯ ಸುಗಂಧಗಳಿಂದ ಸಕಲರನ್ನು ನಲಿಸುವ ಮಲ್ಲಿಗೆಯಂತೆ ಮೃದು ಪ್ರಕೃತಿಯ ಸರಳ ಸೌಮ್ಯ ರೂಪಗಳಿಂದ ಪಾರಿವಾಳದಂತೆ ಪ್ರೇಮಶೀಲೆಯಾದ ಹೆಣ್ಣು" (ಅದೇ: ಪು. ೩೫೩) ಗಂಗಾಂಬಿಕೆಯ ಪಾತ್ರದ ಗುಣ ವಿಶೇಷ ತಿಳಿಸುವ ಮಾತುಗಳಿವು. ಈ ಮಾತುಗಳೇ ರೂಪ ತಾಳಿದಂತೆ ಗಂಗಾಂಬಿಕೆಯ ಪಾತ್ರ ಸರಳ, ಸುಂದರ, ಸ್ನಿಗ್ಧ ರೀತಿಯಲ್ಲಿ ಬೆಳವಣಿಗೆ ಹೊಂದುತ್ತದೆ. ಬಲದೇವರಸರ ಮಗಳಾಗಿ ಬಸವಣ್ಣನ ಪತ್ನಿಯಾಗಿ ಗಂಗಾಂಬಿಕೆಯಲ್ಲಿ ಸ್ಥಾಯಿಯಾಗಿಯೇ ಉಳಿಯುವ ಒಂದೇ ಒಂದು ವಿಶೇಷ ಗುಣವೆಂದರೆ ಮುಗ್ಧತೆ. ಮುಗ್ಧತೆಯ ಮೂಲಕವೇ ಅವಳ ಸರಳ ವ್ಯಕ್ತಿತ್ವ ವಿಶೇಷತೆ ಗಳಿಸಿಕೊಳ್ಳುತ್ತದೆ.

"ಬಲದೇವರಸರು ಹಿಟ್ಟಿನಲ್ಲಿ ಪುರುಷ ಕೃತಿಯನ್ನು ಮಾಡಿ ಎದುರಿಗೆ ನಿಲ್ಲಿಸಿದರೂ ಒಪ್ಪುವಂತಹ ಸರಳ ಹೃದಯದ ಹೆಣ್ಣು ಈ ಗಂಗಾಂಬಿಕೆ" (ಅದೇ; ೩೫೩) ಎಂದು ಹೇಳುವ ನೀಲಲೋಚನೆಯ ವಿನೋದದ ಮಾತು ಗಂಗಾಂಬಿಕೆಯ ವ್ಯಕ್ತಿತ್ವದ ಸಂದರ್ಭದಲ್ಲಿ ಅದರ ವ್ಯಾಖ್ಯಾನವೇ ಆಗುತ್ತದೆ. ಈ ಮುಗ್ಧತೆ ಹಾಗೂ ಸರಳತೆಯಿಂದಲೇ ಗಂಗಾಂಬಿಕೆಯ ಪಾತ್ರ ತನ್ನ ಆತ್ಮೋನ್ನತಿಯ ಮಾರ್ಗವನ್ನು ಅರಸುತ್ತದೆ. ಒಟ್ಟಿನಲ್ಲಿ ಗಂಗಾಂಬಿಕೆಯ ಪಾತ್ರ ಚಿತ್ರಣ ಆರಂಭದಿಂದ ಅಂತ್ಯದ ತನಕವೂ ಸರಳವಾದುದು ಮತ್ತು ಮುಗ್ಧಮಯವಾದುದು.

**ಕಾಮೇಶ್ವರಿ**

ಬಿ. ಪುಟ್ಟಸ್ವಾಮಯ್ಯನವರ ಕಾಂತ್ರಿಕಲ್ಯಾಣ ಕಾದಂಬರಿಯಲ್ಲಿ ಬರುವ ಕಾಮೇಶ್ವರಿಯ ಪಾತ್ರ ಕಾಲ್ಪನಿಕವಾದದ್ದು. ಬಿಜ್ಜಳನಷ್ಟೆ ಆಕರ್ಷಕ, ಸತ್ತ್ವಪೂರ್ಣ ಹಾಗೂ ಮಹತ್ತ್ವದ ಪಾತ್ರ ಚಾಲುಕ್ಯರಾಣಿ ಕಾಮೇಶ್ವರಿಯದು. ಈಕೆಯ ಪಾತ್ರಸೃಷ್ಟಿ ವೈಯಕ್ತಿಕವಾಗಿ ಮಾತ್ರವಲ್ಲದೆ ಕಾದಂಬರಿ ಕ್ರಿಯೆಯ ದೃಷ್ಟಿಯಿಂದಲೂ ಮಹತ್ವ ಹೊಂದಿದೆ. ಕೃತಿಯ ಇತಿಹಾಸದ ಸಂದರ್ಭದಲ್ಲಿ ಬಿಜ್ಜಳನಿಗೆ, ಕಾಮೇಶ್ವರಿ ರಾಜಕೀಯ ಪ್ರತಿಸ್ಪರ್ಧಿ ಹಾಗೂ ಬಿಜ್ಜಳನಷ್ಟೇ ರಾಜಕೀಯದಲ್ಲಿ ನಿರ್ಣಾಯಕ ಪಾತ್ರವಾಗಿ ಚಿತ್ರಿತಳಾಗಿದ್ದಾಳೆ. ಕಾಮೇಶ್ವರಿಯ ಪಾತ್ರ ನಿರ್ಮಾಣದಲ್ಲಿ ಪುಟ್ಟಸ್ವಾಮಯ್ಯನವರು ಬಳಸಿಕೊಳ್ಳುವ ಎರಡು ಪರಿಕರಗಳೆಂದರೆ, ಒಂದು ಆ ಸಾಮಾನ್ಯ ರೂಪವಂತಿಕೆ ಅದರಿಂದ ಹುಟ್ಟಿಕೊಂಡ ಅವಳ ಅಹಂಕಾರ, ವಿಲಾಸ ವಿಭ್ರಮಗಳು. ಮತ್ತೊಂದು ಬಿಜ್ಜಳನಂತಹ ರಾಜಕಾರಣಿಗೂ ತಿರುಗೇಟು ಹಾಕುವಂತಹ ರಾಜಕೀಯ ಕೌಶಲ ಇವೆರಡೂ ಗುಣಗಳು ಅವಳ ಪಾತ್ರ ನಿರ್ಮಾಣದಲ್ಲಿ ಪರಸ್ಪರ ಪೋಷಕ ಅಂಶಗಳಾಗಿ ಕಾರ್ಯ ನಿರ್ವಹಿಸಿರುವುದನ್ನು ಕಾಣಬಹುದು. ಉಳಿದ ಗುಣಗಳು ಈ ಎರಡು ಮೂಲಭೂತ ಪರಿಕರಗಳಿಗೆ ಪೂರಕವಾಗಿ ಬರುತ್ತವೆ.

ಕಾಮೇಶ್ವರಿಯ ಗುಣ ಸ್ವಭಾವಗಳನ್ನು ಸಂಪೂರ್ಣವಾಗಿ ಅರ್ಥೈಸಲು ಕಾಮೇಶ್ವರಿಯ ಪಾತ್ರ ಪ್ರವೇಶದ ಹಿನ್ನೆಲೆಯ ಸಂದರ್ಭವನ್ನು ಪರಿಭಾವಿಸಬೇಕು. ಅಂದೇ ತಾನೆ ತೈಲಪ ಅಪ್ರೊಡೈಟಳನ್ನು ಕಂಡುಕೊಂಡ್ಡಿದ್ದಾನೆ. ಆ ವಿಷಯದ ಅರಿವು ಕಾಮೇಶ್ವರಿಗಿದೆ. ಅವರು

ಶಯ್ಯಗೃಹದಲ್ಲಿರಬೇಕೆಂಬ ಸಂದೇಹದಿಂದಾಗಿ ಅವಳು ಅರಮನೆಗೆ ಬಂದಿದ್ದಾಳೆ. ತನ್ನ ಪ್ರತಿಸ್ಪರ್ಧಿಗಳಾಗಿರುವ ಪಾಟಲಿಕೆ, ಅಪ್ರೊಡೈಟರನ್ನು ಮುಖಾಮುಖಿಯಾಗಲು ಬಂದಂತಹ ಸಂದರ್ಭ ಇದಾಗಿದೆ. ಕಾಮೇಶ್ವರಿಯ ಆಗಮನ ಅರಮನೆಯ ಆಳುಕಾಳುಗಳಲಿ ತಂದ ಬದಲಾವಣೆಗಳಾಗಲಿ, ಪಾಟಲಿಕೆಯ ಬಳಿ ಅವಳು ವರ್ತಿಸುವ ರೀತಿಯಾಗಲಿ, ತೈಲಪನನ್ನು ಆತನ ಹೆಣ್ಣನ್ನು ಕುರಿತಾಗಿ ನುಡಿಯುವ ವ್ಯಂಗ್ಯದ ಮಾತುಗಳಾಗಲಿ, ಅಪ್ರೊಡೈಟಳ ಕೈಯಲ್ಲಿ ಮಾಡಿಕೊಳ್ಳುವ ಸೇವೆಯಾಗಲಿ, ಪಾಟಲಿಕೆಗೆ ಪರಿಪೂರ್ಣ ಪರಾಭವವನ್ನು ಉಂಟು ಮಾಡುವುದಾಗಲಿ ಕಾಮೇಶ್ವರಿ ತಾನು ಚಾಲುಕ್ಯರಾಣಿ, ಅರಮನೆಯ ಯಜಮಾನತಿ ಎಲ್ಲರಿಗೂ ಎಲ್ಲರಲ್ಲಿಯೂ ತಾನೇ ಮುಖ್ಯಳು ಎಂಬ ಭಾವನೆಯನ್ನು ಎಲ್ಲರಲ್ಲೂ ಜಾಗೃತಗೊಳಿಸುವ ರೀತಿಯಲ್ಲಿಯೇ ನಡೆದುಕೊಳ್ಳುತ್ತಾಳೆ.

ಪಾಟಲಿಕೆ ಅಪ್ರೊಡೈಟರಿಗೆ ತೇಜೋವಧೆಯನ್ನು ಮಾಡುವ ಕಾಮೇಶ್ವರಿ ಅದರ ಜೊತೆ ಜೊತೆಯಲ್ಲಿಯೇ 'ಒರ್ವ ಕಾಮೋದಿಪ್ತ, ಅತಿಕಾಮಿ ಹೆಣ್ಣಿನಂತೆ ವರ್ತಿಸುವುದನ್ನು ಸಹ ಇಲ್ಲಿ ಪ್ರಮುಖವಾಗಿ ಗಮನಿಸಬೇಕು. ಕಾಮೇಶ್ವರಿ ಸೌಂದರ್ಯದಿಂದಷ್ಟೇ ಪ್ರಖ್ಯಾತಿ ಹೊಂದಿದವಳಲ್ಲ, ರಾಜಕೀಯ ಚತುರೆಯಾಗಿಯೂ ಸಹ ಪ್ರಸಿದ್ಧಳಾದವಳು.

ತನ್ನ ಕುಮಾರ ಕೀರ್ತಿವರ್ಮನ ಉತ್ತರಾಧಿಕಾರವನ್ನು ಊರ್ಜಿತಗೊಳಿಸಿಕೊಳ್ಳುವ ಮೂಲಕ ಅವಳು ತನ್ನ ತಾಯ್ತನದ ಕರ್ತವ್ಯವನ್ನೂ ನಿರ್ವಹಿಸಿಕೊಳ್ಳಲು ಉತ್ಸುಕಳಾಗಿದ್ದಾಳೆ. ಕಾಮೇಶ್ವರಿ, ಬಿಜ್ಜಳನ ಮೇಲಿನ ತೈಲಪನ ನಿಷ್ಠೆಯೇ ತೈಲಪನ ಪತನಕ್ಕೆ ಕಾರಣವಾಗುವುದನ್ನು ಭವಿಷ್ಯ ನುಡಿಯುವುದು, ಕುಮಾರನಿಗೆ ಅಧಿಕಾರ ಸಿಗದಿದ್ದರೆ ಅದಕ್ಕಾಗಿ ಬೇರೆ ರೀತಿಯಲ್ಲಿ ಪ್ರಯತ್ನಿಸುವುದಾಗಿ ನುಡಿಯುವುದು ಅವಳ ರಾಜಕೀಯ ಚಾಣಾಕ್ಷತನವನ್ನು ತಿಳಿಸುತ್ತದೆ. ಅಲ್ಲದೆ ಬಿಜ್ಜಳನಿಗೆ ಎದಿರೇಟು ಹಾಕುವಂತಹ ಗುಣಗಳು ಈ ಹಂತದಲ್ಲಿಯೇ ಕಾಮೇಶ್ವರಿಯ ಪಾತ್ರದಲ್ಲಿ ಮೈಗೊಂಡಿರುವುದನ್ನು ಕಾಣಬಹುದು.

ಕಾಮೇಶ್ವರಿಯ ಪಾತ್ರದ ಗುಣಗಳನ್ನು ಅನಾವರಣಗೊಳಿಸುವುದು ಲೇಖಕರ ಕಲಾಕೌಶಲ್ಯಕ್ಕೆ ಉದಾಹರಣೆಯಾಗುತ್ತದೆ. ಆರಂಭದಲ್ಲಿಯೇ ವರ್ಣನೆಗೊಳ್ಳುವ ಅವಳ ಸೌಂದರ್ಯದ ಮೋಹಕತೆ, ಕಾಮ, ಅಧಿಕಾರ ಸ್ಥಾಪನೆಯ ಷರತ್ತು, ರಾಜಕೀಯ ಪ್ರಜ್ಞೆ ತೈಲಪದಲ್ಲಿ ತೋರುವ ಪ್ರೀತಿ ಅವನು ಪತನದತ್ತ ನಡೆಯುತ್ತಿದ್ದನೆಂಬ ಅನುಕಂಪ ಸಹಾನುಭೂತಿ, ತಾಯ್ತನದ ಪ್ರೀತಿ ಈ ಮುಂತಾದ ಮಾನವೀಯವೆನ್ನಬಹುದಾದ ಗುಣಗಳೆಲ್ಲಾ ಕಾಮೇಶ್ವರಿ ಪಾತ್ರ ರಚನೆಯಲ್ಲಿ ಕಾಣಿಸುತ್ತದೆ. ಕಾಮೇಶ್ವರಿ ಬಿಜ್ಜಳರ ನಡುವೆ ಲೆತ್ತದಾಟ ಆರಂಭವಾಗುವ ಬಗೆಯನ್ನು ಪುಟ್ಟಸ್ವಾಮಯ್ಯನವರು ಮನೋಜ್ಞವಾಗಿ ಚಿತ್ರಿಸುತ್ತಾರೆ. ಈ ಹಂತದಲ್ಲಿ ಕಾಮೇಶ್ವರಿಯ ಮೇರೆ ಮೀರಿದ ಸ್ವಚ್ಛಂದತೆ, ದರ್ಪ ಅಧಿಕಾರಗಳು ಪರಮಾವಧಿಯ ಮಟ್ಟ ಮುಟ್ಟುತ್ತವೆ. ಆ ಪರಮಾವಧಿ ಮಟ್ಟವೇ ಬಿಜ್ಜಳನಂತಹ ಸಂಕೀರ್ಣ ಶಕ್ತಿಯನ್ನು ಆಕರ್ಷಿಸುವ ಸಾಧನವಾಗುತ್ತದೆ. ಬಿಜ್ಜಳ, ಕಾಮೇಶ್ವರಿಯ ಮೇಲೆ ಬಲಾತ್ಕಾರ ಕಾಣುವ ಕಾರ್ಯದಲ್ಲಿ ಆ ಆಕರ್ಷಣೆ ಅಂತ್ಯಗೊಳ್ಳುತ್ತದೆ. ಬಿಜ್ಜಳನ ಆಕ್ರಮಣಕ್ಕೆ ಒಳಗಾದಾಗಲೂ ಬಿಜ್ಜಳ ಮತ್ತು ಕಾಮೇಶ್ವರಿಯರ ನಡುವೆ ನಡೆಯುವ ಮಾತುಕತೆಗಳು

ಮತ್ತೆ ಕಾಮೇಶ್ವರಿಯ ಕಾಮಕತೆ ಸ್ವೇಚ್ಛಚಾರಗಳನ್ನೇ ಆ ಪಾತ್ರಕ್ಕೆ ಆರೋಪಿಸುತ್ತವೆ. ಬಿಜ್ಜಳನ ಆಕ್ರಮಣಕ್ಕೆ ಒಳಗಾಗಿ ಮರುಕ್ಷಣಗಳಲ್ಲಿಯೇ ಬಿಜ್ಜಳನೊಂದಿಗೆ ಕಾಮೇಶ್ವರಿ ನುಡಿಯುವ; "ಯುದ್ಧ ರಾಜಿಕಗಳಂತೆಯೇ ಭೋಗದಲ್ಲಿಯೂ ಚತುರರು ನೀವು. ನಿಮ್ಮ ತೋಳ ತೆಕ್ಕೆಯಲ್ಲಿ ನಾನು ಪರವಶೆಯಾದೆ. ಮಾನವಲೋಕದ ದ್ವಂದ್ವಗಳೆಲ್ಲ ಅಳಿದು ನಿರ್ದೇಹಿಯಾಗಿದ್ದೆ" (ವೇದಾ ಎಂ.ಎಸ್.; ೧೯೯೨; ಪು. ३೪೭) ಎಂಬ ಮಾತುಗಳು ಅದನ್ನು ಪ್ರತಿಬಿಂಬಿಸುತ್ತವೆ.

ಕಾದಂಬರಿ ಕ್ರಿಯೆಯ ಸಂದರ್ಭದಲ್ಲಿ ನಿರ್ಣಾಯಕವಾದುದು ಅವಳ ರಾಜಕಾರಣ ಕೌಶಲದ ಮುಖ. ಬಿಜ್ಜಳನ ಏಟಿಗೆ ಎದಿರೇಟು ಹಾಕುವ ವ್ಯಕ್ತಿ ಕಾಮೇಶ್ವರಿ ಒಬ್ಬಳೆ. ಹಾಗಾಗಿ ಅವಳು ಬಿಜ್ಜಳನ ವಿರುದ್ಧವಾಗಿ ಕಾದಂಬರಿ ಕ್ರಿಯೆಯ ಆರಂಭದಿಂದ ಮುಕ್ತಾಯದವರೆಗೂ ಸದಾ ಕಾರ್ಯಪ್ರವೃತ್ತಳಾಗಿಯೇ ಇದ್ದಾಳೆ. ಕಲ್ಯಾಣಕ್ಕೆ ಬಂದು ಕಾಮೇಶ್ವರಿ ಕರ್ಹಾಡಕ್ಕೆ ಮರಳಿದಾಗ ಮಂಚಣನ ಜೊತೆ ಬಿಜ್ಜಳನಾಡುವ ಮಾತುಗಳನ್ನು ನೋಡಬೇಕು. "ಈಗಲೇ ಕರೆಸಿ ಮಂಚಣನವರೆ, ಆ ಮಾಟಗಾತಿ ಗಡಿದಾಟಿದ ಸುದ್ದಿ ಕೇಳಿದರೆ ಮನಸ್ಸಿಗೆ ಸಮಾಧಾನವಾಗುವುದು" (ಅದೇ; ಪು. ३೪೮). ಕಾಮೇಶ್ವರಿಯ ಸಂಚು, ಸಂಧಾನ, ರಾಜಕೀಯ ಕೌಶಲಗಳ ಬಗೆಗೆ ಬಿಜ್ಜಳನಿಗಿರುವ ಆತಂಕ ಮೇಲಿನ ಒಂದೇ ಒಂದು ಮಾತನಲ್ಲಿ ಗಾಢವಾಗಿ ವ್ಯಕ್ತವಾಗುತ್ತದೆ. "ರಾಜ್ಯದ ಆಡಳಿತ ಸೂತ್ರಗಳನ್ನು ಕೈಯಲ್ಲಿ ಹಿಡಿದು ಭುಜಬಲ ಚಕ್ರವರ್ತಿಯೆಂದು ಹೊಗಳಿಸಿಕೊಳ್ಳುವ ನೀವು ಈ ಹೆಣ್ಣಿಗೆ ಹೆದರುವುದೇ ಮಹಾಪ್ರಭು? (ಅದೇ; ३೪೮) ಮಂಚಣನ ಪ್ರಶ್ನೆ ಸಹ ಕಾಮೇಶ್ವರಿಯ ಸಾಮರ್ಥ್ಯವನ್ನು ಪರೋಕ್ಷವಾಗಿ ಪ್ರತಿಬಿಂಬಿಸುತ್ತದೆ. ಬಿಜ್ಜಳನಂತಹ ವ್ಯಕ್ತಿಯೇ ಕಾಮೇಶ್ವರಿಯಂತಹ ಪತಿ-ಪುತ್ರರನ್ನು ಏಕಕಾಲದಲ್ಲಿ ಕಳೆದುಕೊಂಡ ಹೆಣ್ಣಿಗೆ, ಹೆದರುವುದರಲ್ಲಿ ಕಾಮೇಶ್ವರಿಯ ಪಾತ್ರದ ಅಂತಸ್ಸತ್ತ್ವವನ್ನು ಅರಿಯಬಹುದು.

ಚಾಲುಕ್ಯ ಸಾಮ್ರಾಜ್ಯದಲ್ಲಿ, ರಾಜಕಾರಣದಲ್ಲಿ ಕಾಮೇಶ್ವರಿಯ ರಾಜಕೀಯ ಕೌಶಲಕ್ಕಿಂತ, ಅವಳ ರೂಪ, ಸೌಂದರ್ಯ, ಸ್ವಚ್ಛಂದತೆ, ಸ್ವೇಚ್ಛಾಚಾರಗಳ ಮುಖವೇ ಬಹುತೇಕ ನಿರ್ಣಾಯಕ ಪಾತ್ರವಹಿಸಿ ಬಿಡುವುದು. ಕಾಮೇಶ್ವರಿ ಪಾತ್ರಕ್ಕೆ ಒಂದು ದುರಂತ ಅಂತ್ಯವನ್ನು ತರುವುದಲ್ಲದೆ ಇತಿಹಾಸವನ್ನು ದುರಂತದತ್ತ ಒಯ್ಯುತ್ತದೆ. ಪ್ರಾಯಶಃ ಕಾಮೇಶ್ವರಿಯ ಸ್ಥಾನದಲ್ಲಿ ತೈಲಪದೇವನೋ, ಜಗದೇಕಮಲ್ಲನೋ ಇದ್ದಿದ್ದರೆ ಬಿಜ್ಜಳ ತಾನು ಚಾಲುಕ್ಯರ ಮಾಂಡಲಿಕನೆಂದು ಖಂಡಿತ ಒಪ್ಪಿಕೊಳ್ಳುತ್ತಿರಲಿಲ್ಲ. ಹಾಗೆಯೇ ಕಾಮೇಶ್ವರಿಯಂತಹ ಹೆಣ್ಣು ತನ್ನ ಬಯಕೆಗೆ ಬಲಾತ್ಕಾರವಾಗಿ ಯಾದರೂ ಕೈಗೂಡದೆ ಹೋಗಿದ್ದರೆ, ಬಹು ವರ್ಷಗಳ ನಿರಂತರ ಪರಿಶ್ರಮದಿಂದ ಗಳಿಸಿದ ಚಾಲುಕ್ಯ ರಾಜ್ಯಪಹಾರದ ಕೈಗೂಡಿದ ವಾಸ್ತವವನ್ನು ಬಿಟ್ಟು, ಚಾಲುಕ್ಯ ರಾಜ್ಯದ ಪುನರ್ ಸಂಘಟನೆಯ ಕಾರ್ಯವನ್ನು ಕೈಗೊಳ್ಳುವ ನಿರ್ಧಾರ ಮಾಡುತ್ತಿರಲಿಲ್ಲ. ಹಾಗೆಯೇ ಆ ಕಾರ್ಯನಿಷ್ಠೆ ಶರಣರು, ಶರಣಧರ್ಮ ಕಂಟಕಪ್ರಾಯವೆಂದು ನಿರ್ಧರಿಸಿ, ಕ್ರೂರ ನಿರ್ಣಯಗಳನ್ನು ಕೈಗೊಂಡು ರಾಜಕೀಯ ಕ್ರಾಂತಿಗೆ ಅನುವು ಮಾಡಿಕೊಡುತ್ತಿರಲೂ ಇಲ್ಲ ಎಂದು ಊಹಿಸಲು ಇಲ್ಲಿ ಅವಕಾಶವಾಗುತ್ತದೆ. ಕಾಮೇಶ್ವರಿಯ ಪಾತ್ರದ ವೈಯುಕ್ತಿಕ ದುರಂತ ಅವಳ ಮರಣದಿಂದ ದಿಗ್ಮೂಢನಾದ ಬಿಜ್ಜನ ಅನಿಯಂತ್ರಿತ ಮನೋಕಾರಗಳಿಂದ ಚಾಲುಕ್ಯ ರಾಜ್ಯದ ದುರಂತವೂ ಆಗುತ್ತದೆ.

ಗಂಡನ ಕಣ್ಣಿನಲ್ಲಿ ಗಣಿಕೆಯಾಗಿ ಕಾಣುವ, ಬಿಜ್ಜಳನ ಕಣ್ಣಿನಲ್ಲಿ ಮಾಟಗಾತಿಯಾಗಿ ತೋರುವ ಸಾಮಾನ್ಯರ ನೋಟಕ್ಕೆ ಸ್ವಚ್ಛಂದಗಾರ್ತಿ ಕಾಮುಕ ಹೆಣ್ಣಾಗಿ, ಹಲವು ಅನೀತಿಯುತ ಸಂಬಂಧಗಳಲ್ಲಿ ತೊಡಗಿಕೊಂಡಂತೆ ಕಂಡುಬರುವ ಕಾಮೇಶ್ವರಿಯ ಪಾತ್ರ ಸಂಕೀರ್ಣತೆಯನ್ನು ಹೊಂದಿದ, ಜೀವನ ಸಂದರ್ಭಗಳು ಸಂಕ್ರಮಣದಲ್ಲಿ ವಿಕಾಸ ಹೊಂದುತ್ತಾ ಬೆಳವಣಿಗೆ ಕಾಣುವ ಒಂದು ಸತ್ತ್ವ ಪೂರ್ಣಪಾತ್ರವಾಗುತ್ತದೆ. ಜೀವನವನ್ನು ಬಿಚ್ಚುಮನಸ್ಸಿನಿಂದ ಪರಿಭಾವಿಸುವ ಅವಳ ಗುಣ ಆ ಚಿತ್ರವನ್ನು ಬೆಳೆಸುತ್ತಾ ಹೋಗಿ ಒಂದು ಪ್ರಬುದ್ಧತೆಯನ್ನು, ಪರಿಪಕ್ವತೆಯನ್ನು ತಂದು ಕೊಡುತ್ತದೆ. ಪರಿಪಕ್ವತೆ, ಪ್ರಬುದ್ಧತೆಗಳು ಅವಳ ಆತ್ಮಹತ್ಯೆಯಲ್ಲಿಯೂ ಗೋಚರವಾಗುತ್ತದೆ.

"ಗಗನದ ಜೋತಿರ್ಮಯ ನಕ್ಷತ್ರವನ್ನು ಭೂಮಿಗುರಳಿಸಿ ಆಟಿಕೆಯ ಹರಳಂತೆ ತಿರುಕಲ್ಲಾಡಲು ಹವಣಿಸಿದ್ದು ನನ್ನ ಅವಿವೇಕ ಅದರ ಫಲವೇ ಈ ದುರಂತ (ಅದೇ; ಪು. ೩೪೯). ಕಾಮೇಶ್ವರಿಯ ಮರಣದ ಅನಂತರ ಬಿಜ್ಜಳನಾಡುವ ಮಾತುಗಳು ಕಾಮೇಶ್ವರಿಯ ಸಂಕೀರ್ಣ ವ್ಯಕ್ತಿತ್ವಕ್ಕೆ ವ್ಯಾಖ್ಯಾನವಾಗುತ್ತದೆ. ಕೃತಿಯಲ್ಲಿ ಕಾಮೇಶ್ವರಿ ನಕ್ಷತ್ರದಂತೆಯೇ ಒಂದು ಉಜ್ವಲ ಪಾತ್ರವಾಗುತ್ತಾಳೆ.

ಆ ಯುಗದ ವಿಲಾಸ ರಾಜಾಂತ;ಪುರಗಳ ವೈಭೋಗ ಜೀವನದ ನೈತಿಕ ಆಕರ್ಷಣೆ, ಅದರ ಅಸಂಗತಿಗಳು. ವೈರುಧ್ಯಗಳು ಇವುಗಳ ಫಲವಾಗಿಯೇ ದುರಂತಕ್ಕೊಳಗಾಗುವ ವ್ಯಕ್ತಿಗಳು ಹಾಗೂ ಜೀವನಗಳ ಸ್ಪಷ್ಟ, ಜೀವಂತ ಉದಾಹರಣೆಯಾಗಿ ನಿಲ್ಲುವ ಕಾಮೇಶ್ವರಿಯ ಪಾತ್ರ ಚಿತ್ರಣದಲ್ಲಿ ಲೇಖಕರು ತೋರಿರುವ ಕಲಾಚಾತುರ್ಯ, ಪಾತ್ರನಿರ್ಮಾಣ ಕೌಶಲ ಅನನ್ಯ ವಾದುದಾಗಿದೆ. ಕಾಮೇಶ್ವರಿಯ ಪಾತ್ರ ಗ್ರೀಕ್ ಮಾದರಿಯ ದುರಂತ ಪಾತ್ರವಾಗಿ ಸಂಕೀರ್ಣತೆ ಜಟಿಲತೆಗಳನ್ನು ಮೈಗೂಡಿಸಿಕೊಂಡಿವೆ.

**ಮಾಚಿಕಬ್ಬೆ**

ಕೆ.ವಿ. ಅಯ್ಯರ್ ಅವರ 'ಶಾಂತಲಾ', ಸಿ.ಕೆ. ನಾಗರಾಜರಾವ್ ಅವರ 'ಪಟ್ಟಮಹಾದೇವಿ ಶಾಂತಲಾದೇವಿ', ಸಮೇತನಹಳ್ಳಿ ರಾಮಯರ 'ಸವತಿ ಗಂಧವರಣೆ' ಕಾದಂಬರಿಗಳಲ್ಲಿ ಮಾಚಿಕಬ್ಬೆಯ ಪಾತ್ರಚಿತ್ರಣ ಅತ್ಯಲ್ಪವಾಗಿದ್ದರೂ ಸ್ಫುಟವಾಗಿ ಮೂಡಿಬಂದಿದೆ. ಜೈನ ಧರ್ಮದವಳಾದ ಮಾಚಿಕಬ್ಬೆ ಶೈವ ಮತೀಯನಾದ ಮಾರಸಿಂಗಮಯ್ಯನೊಂದಿಗೆ ವಿವಾಹವಾಗುತ್ತಾಳೆ. ಮಾಚಿಕಬ್ಬೆ ಪತಿಗೆ ತಕ್ಕ ಆದರ್ಶ ಸತಿಯಾಗಿದ್ದಳು. ಸರಳ ನಡೆ-ನುಡಿ ಹಾಗೂ ವಿನಯದ ಮೂರ್ತಿಯಾಗಿದ್ದಳು. ಶಾಂತಲೆಯ ತಂದೆ - ತಾಯಿಗಳಿಬ್ಬರೂ ಬೇರೆ ಬೇರೆ ಧರ್ಮದವರಾಗಿದ್ದರೂ ಅವರಿಬ್ಬರ ದಾಂಪತ್ಯ ಜೀವನ ಆದರ್ಶಮಯವಾಗಿತ್ತು. ಇಂಥ ಧರ್ಮ ಸಮನ್ವಯದ ಬೆಳಕಿನಲ್ಲಿ ಜನಿಸಿದ ಶಾಂತಲೆ ಬೆಳೆದು ದೊಡ್ಡವಳಾಗಿ ಆದರ್ಶ ವ್ಯಕ್ತಿತ್ವವನ್ನು ಹೊಂದಿದ್ದಳು. ಶಾಂತಲೆ ಸಲ್ಲೇಖನ ವ್ರತವನ್ನು ಆಚರಣೆ ಮಾಡಿದ ಸುದ್ಧಿ ತಿಳಿದ ಮಾಚಿಕಬ್ಬೆ ಮಗಳಿಗೋಸ್ಕರ ತನ್ನ ಪ್ರಾಣವನ್ನೇ ಧಾರೆಯೆರೆದ ಮಹಾನುಭಾವೆ ಕಾದಂಬರಿಗಳಲ್ಲಿ ಮಾಚಿಕಬ್ಬೆಯ ಪಾತ್ರ ಆರಂಭದಿಂದ ಅಂತ್ಯದವರೆಗೆ ಕಾಣಿಸಿಕೊಳ್ಳುವುದೊಂದು ವಿಶೇಷವಾಗಿದೆ.

ಸಿ.ಕೆ. ನಾಗರಾಜರಾವ್ ಅವರ ಕಲಾಕುಲಮೆಯಲ್ಲಿ ಅರಳಿದ ಶಾಂತಲೆಯ ಪಾತ್ರದೊಂದಿಗೆ ಲೇಖಕರು ಐತಿಹಾಸಿಕ ವ್ಯಕ್ತಿ ಮತ್ತು ಕಾಲ್ಪನಿಕ ವ್ಯಕ್ತಿಗಳನ್ನು ಸೃಷ್ಟಿಸಿ ಅವುಗಳನ್ನು ಕೇಂದ್ರ

ಪಾತ್ರದೊಂದಿಗೆ ಬೆಳೆಯುವಂತೆ ಚಿತ್ರಿಸಿದ್ದಾರೆ. ಚಾಮವ್ವೆ ತನ್ನ ಹೆಣ್ಣುಮಕ್ಕಳೇ ಹೊಯ್ಸಳ ವಂಶದ ಸೊಸೆಯರಾಗಬೇಕೆಂಬ ದುರಾಸೆಯಿಂದ ಮಾಟಾದಿ ಮಂತ್ರ ಪ್ರಯೋಗಗಳಲಿ ನಿರತಳಾಗಲೂ ಹೇಸದ ಡಣ್ಣಯತಿ ಚಾಮವ್ವೆಯ ಕತೆ. ತನ್ನ ಸ್ವಂತ ಜೀವನ ನಾಶವಾದರೂ ಸರಿ. ಹೊಯ್ಸಳ ರಾಜವಂಶಕ್ಕಾಗಿ ಎಂತಹ ಕಷ್ಟಗಳನ್ನಾದರೂ ಎದುರಿಸುತ್ತಿದ್ದ ಗೂಢಚಾರಣೆ ಚಟ್ಟಲೆಯ ಪ್ರಸಂಗ, ಸದಾ ವಾತ್ಸಲ್ಯಮಯ ಏಚಲಾದೇವಿ ಮೊದಲಾದ ಪಾತ್ರಗಳು ಹಾಗೂ ಪ್ರಸಂಗಗಳು ಬಹುಕಾಲ ಓದುಗರ ಮನದಲ್ಲಿ ನೆಲೆ ನಿಲ್ಲುತ್ತದೆ.

### ಲಕ್ಷ್ಮೀದೇವಿ

ಕೆ. ವಿ. ಅಯ್ಯರ್ ಅವರ 'ಶಾಂತಲಾ' ಕಾದಂಬರಿಯಲ್ಲಿ ಮೂಡಿಬರುವ ಲಕ್ಷ್ಮೀದೇವಿಯ ಪಾತ್ರವು ಕಾದಂಬರಿಯ ಆರಂಭದಿಂದ ಹಿಡಿದು ಕೊನೆಯವರೆಗೂ ಕಾಣಿಸಿಕೊಳ್ಳುತ್ತದೆ. ಲಕ್ಷ್ಮೀದೇವಿ ಶಾಂತಲೆಯ ಪಡಿನೆರಳು. ನಡೆನುಡಿಗಳಲ್ಲಿ ಸದಾ ಅಕ್ಕನ ಅನುವರ್ತಿಸಿ, ಸದಾ ಶಾಂತಲೆಯ ಶ್ರೇಯಸ್ಸನ್ನೇ ಬಯಸುವವಳು. ವಿದ್ಯಾಪಾರಂಗತೆ, ವಿನಯಶಾಲಿ, ಮದುವೆಯಾದರೆ ಅಕ್ಕನಿರುವ ಊರು ಬಿಟ್ಟು ಹೋಗಬೇಕಾಗುತ್ತದೆ ಎಂದು ಮದುವೆಯೇ ಬೇಡ ಎಂದು ನಿರ್ಧರಿಸುವಷ್ಟು ಕೋಮಲ ಹೃದಯ ಅವಳದು. ಸರಳ ನಡೆ, ನುಡಿ, ನಡತೆಯಿಂದಾಗಿ ಎಲ್ಲರಿಗೂ ಮೆಚ್ಚುಗೆಯಾಗುವಂಥವಳು.

### ಪಾರ್ವತಿ

ಕೆಳದಿ ಚೆನ್ನಮ್ಮನನ್ನು ಕೇಂದ್ರಪಾತ್ರವನ್ನಾಗಿಸಿಕೊಂಡು ರಚನೆಯಾದ ಲಕ್ಕಪ್ಪ ಶಿರಹಟ್ಟಿ ಅವರ 'ವೀರರಾಣಿ ಮಹಾಮುತ್ಸದ್ಧಿ ಕೆಳದಿಯ ಚೆನ್ನಮ್ಮಾ', ಶಾಂತಾದೇವಿ ಮಾಳವಾಡರ 'ಶೂರರಾಣಿ ಕೆಳದಿಯ ಚೆನ್ನಮ್ಮ', ನಾ. ಡಿಸೋಜ ಅವರ 'ಚೆನ್ನಿ ಚೆನ್ನಮ್ಮ ಚೆನ್ನಮ್ಮಾಜಿ' ಕಾದಂಬರಿಗಳು ಪ್ರಮುಖವಾಗಿವೆ.

ಕಾದಂಬರಿಯಲ್ಲಿ ಬರುವ ಪ್ರಮುಖ ಪಾತ್ರಗಳು ಕೆಲವೇ ಕೆಲವಾದರೂ ಆ ಪಾತ್ರಗಳೆಲ್ಲ ಒಂದು ಆದರ್ಶಕ್ಕನುಗುಣವಾಗಿಯೇ ವರ್ತಿಸುತ್ತವೆ. ಶೂರ ರಾಣಿ ಕೆಳದಿಯ 'ಚೆನ್ನಮ್ಮಾಜಿ'ಯು ಕೇಂದ್ರಪಾತ್ರವಾದರೆ ಉಳಿದೆಲ್ಲ ಪಾತ್ರಗಳು ಅವಳಿಗೆ ಸಂಬಂಧಿಸಿಯೇ ಸುತ್ತುತ್ತವೆ ಎನ್ನಬಹುದು.

'ಪಾರ್ವತಿ' ಪಾತ್ರವು ಶಾಂತಾದೇವಿ ಮಾಳವಾಡರ ಶೂರರಾಣಿ ಕೆಳದಿಯ ಚೆನ್ನಮ್ಮಾಜಿ ಕಾದಂಬರಿಯಲ್ಲಿ ಮಾತ್ರ ಕಾಣಿಸುತ್ತದೆ. ಅರಮನೆಯಲ್ಲಿದ್ದೂ ಎಂದೂ ಏನನ್ನು ಆಸೆ ಪಡದ ಈಕೆ ಚೆನ್ನಮ್ಮಾಜಿಯ ಸ್ನೇಹಿತೆ ಹಾಗೂ ಸೇವಕಿಯಾಗಿದ್ದಳು. ಕೋಟೆಪುರದಲ್ಲಿ ಬಾಲ್ಯದಿಂದಲೂ ಚೆನ್ನಮ್ಮನ ಜೊತೆಯಲ್ಲಿಯೇ ಬೆಳೆದ ಪಾರ್ವತಿ ಮುಂದೆ ಚೆನ್ನಮ್ಮ ಸೋಮಶೇಖರ ನಾಯಕನನ್ನು ಮದುವೆಯಾಗಿ ಬಿದನೂರಿಗೆ ಹೊರಟಾಗ ಅವಳ ಜೊತೆಯಲ್ಲಿಯೇ ಆಕೆಯ ಸೇವಕಿಯಾಗಿ ಹೋದವಳು. ಚೆನ್ನಮ್ಮನನ್ನು ಬಾಲ್ಯದಿಂದಲೂ ಕಂಡ ಆಕೆಯು ಚೆನ್ನಮ್ಮನ ಬೇಕುಬೇಡಗಳಿಗೆ ಸ್ಪಂದಿಸುತ್ತಿದ್ದಳು. ಚೆನ್ನಮ್ಮಾಜಿಯು ಯಾವ ಸಂದರ್ಭದಲ್ಲಿ ಎಂತಹ ಆಹಾರವನ್ನು ಊಟ ಮಾಡಬೇಕು ಎಂಬುದನ್ನು ಚೆನ್ನಾಗಿ ಅರಿತವಳು ಪಾರ್ವತಿ. ಒಮ್ಮೆ ಶಿವಪ್ಪನ ದೂರದ

ಸಂಬಂಧಿಯೊಬ್ಬಳು ಚೆನ್ನಮ್ಮಾಜಿಗೆ ಆಹಾರದಲ್ಲಿ ವಿಷವಿಕ್ಕಿ ಕೊಲ್ಲಬೇಕೆಂದು ಪ್ರಯತ್ನಿಸಿದಾಗ, ಅದನ್ನರಿತ ಪಾರ್ವತಿ ಆ ಮಹಿಳೆಗೆ ತಕ್ಕ ಶಿಕ್ಷೆಯಾಗುವ ಹಾಗೆ ಮಾಡಿದಳು. ಒಟ್ಟಿನಲ್ಲಿ ಹೆತ್ತ ತಾಯಿಯ ಹಾಗೆ ಚೆನ್ನಮ್ಮಾಜಿಯನ್ನು ಕಣ್ಣಲ್ಲಿ ಕಣ್ಣಿಟ್ಟು ಆಕೆಯ ಕೊನೆಯುಸಿರುವವರೆಗೂ ನಿಷ್ಠೆಯಿಂದ ಸೇವೆ ಮಾಡಿದವಳು ಪಾರ್ವತಿ ಎಂದು ಹೇಳಬಹುದು. ಇಂಥ ನಿಷ್ಠಾವಂತೆ ಸೇವಕಿಯು ರಾಣಿಯ ಬಗೆಗೆ ಹೊಂದಿದಂತಹ ನಿಷ್ಠೆ, ತ್ಯಾಗ ಗುಣ, ಮಮತೆ, ವಾತ್ಸಲ್ಯ ಇತ್ಯಾದಿಗಳನ್ನು ಕಾದಂಬರಿಕಾರರು ಪಾರ್ವತಿ ಪಾತ್ರದ ಮೂಲಕ ಚಿತ್ರಿಸಿದ್ದಾರೆ.

**ಚಂದ್ರಮ್ಮಾಜಿ, ಬಸವಲಿಂಗಮ್ಮಾಜಿಯ**

ಹೆತ್ತವರು ಬೇರೆ ಬೇರೆಯಾಗಿದ್ದರೂ ಇವರು ಒಬ್ಬರನ್ನೊಬ್ಬರು ಆಗಲಿರದ ಅನ್ಯೋನ್ಯ ಸಂಬಂಧವನ್ನು ಹೊಂದಿದರು. ಬಾಲ್ಯದಿಂದಲೂ ಈರ್ವರು ಕೂಡಿ ಆಡಿ ಬೆಳೆದಿದ್ದರಿಂದ ಒಬ್ಬರು ಮದುವೆಯಾದರೆ ಇನ್ನೊಬ್ಬರು ಬೇರೆಯಾಗಿರಬೇಕಾಗುತ್ತದಲ್ಲ ಎಂದು ಒಬ್ಬರನ್ನೊಬ್ಬರು ಬಿಟ್ಟಿರಲಾರದೇ ಅಳುತ್ತಿದ್ದರು. ಕೊನೆಗೆ ಇಬ್ಬರೂ ಬಸವಪ್ಪನಾಯಕನನ್ನು ಮದುವೆಯಾಗಿ ಚೆನ್ನಮ್ಮಾಜಿಯ ಪ್ರೀತಿಯ ಸೊಸೆಯಂದಿರಾದರು. ಸಾಂಪ್ರದಾಯಿಕ ಸವತಿ ಮಾತ್ಸರ್ಯಕ್ಕೆ ಇವರಿಬ್ಬರೂ ಅಪವಾದ. ಮಾತ್ಸರ್ಯವಿರಲಿ ಇವರಿಬ್ಬರೂ ಸವತಿಯರು ಎನಿಸಿಕೊಳ್ಳಲೇಯಿಲ್ಲ. ಇಬ್ಬರೂ ಸದಾ ಪತಿಯ ಇಚ್ಛಾನುವರ್ತಿಯರಾಗಿ ಅವನ ಬಾಳನ್ನು ಹಾಲ್ಜೇನಿನ ಹೊಳೆಯಾಗಿ ಮಾಡಿದ್ದನ್ನು ಲೇಖಕರು ಸುಂದರವಾಗಿ ಚಿತ್ರಿಸಿದ್ದಾರೆ.

**ಶಾಂತವ್ವ**

ಮಾಸ್ತಿ ಅವರ 'ಚೆನ್ನಬಸವನಾಯಕ' ಕಾದಂಬರಿಯ ನಾಯಕ ಚೆನ್ನಬಸವನಾದರೆ ನಾಯಕಿ ಶಾಂತವ್ವ. ಒಂದು ಆಯಾಮದಿಂದ ನಾಯಕನ ಕತೆಯಾದರೆ, ಇನ್ನೊಂದು ಆಯಾಮದಿಂದ ಶಾಂತವ್ವನ ಕತೆಯಾಗಿ ನೋಡಬಹುದು. ಈ ಪಾತ್ರ ಸೃಷ್ಟಿಯಿಂದಾಗಿ ನಾಯಕನನ್ನು ಇನ್ನಷ್ಟು ನೆನೆಯುವಂತಾಗುತ್ತದೆ. ಶಾಂತವ್ವನ ಪಾತ್ರ ಕಾಲ್ಪನಿಕವಾದದ್ದು. ರಾಜಮನೆತನದ ಗಾಂಭೀರ್ಯ ವಿದ್ದರೂ ತನ್ನ ಸರಳ ಸ್ವಾಭಾವದಿಂದ ಎಲ್ಲರ ಮೆಚ್ಚುಗೆಗೆ ಪಾತ್ರಳಾಗಿದ್ದಾಳೆ. ಹುಟ್ಟಿದ ಮಗಳ ಮುಖವನ್ನು ನೋಡದೆ ಶಾಂತವ್ವನ ತಂದೆ ಸಿದ್ಧಿಗಾಗಿ ಕಾಡಿಗೆ ಹೋಗುತ್ತಾನೆ. ಎಳೆಯ ವಯಸ್ಸಿನ ಈಕೆ ತಾಯಿಯ ಪ್ರೀತಿ ಕಂಡವಳಲ್ಲ. ಶಾಂತವ್ವನನ್ನು ಸಾಕಿದವನು ದೊಡ್ಡಪ್ಪನಾದ ನೇಮಯ್ಯ. ಬಸಪ್ಪನಾಯಕನ ಒತ್ತಾಯದ ಮೇಲೆ ಶಾಂತವ್ವ ಚೆನ್ನಬಸವನಾಯಕರ ವಿವಾಹ ಜರುಗುತ್ತದೆ. ಈ ವಿವಾಹಕ್ಕೆ ವೀರಮ್ಮಾಜಿಯ ಮನಃಪೂರ್ವಕ ಒಪ್ಪಿಗೆಯಿಲ್ಲ. ಶಾಂತವ್ವನದು ಜೈನ ಸಂಪ್ರದಾಯ; ನಾಯಕರದು ಶೈವ; ಇದೊಂದು ಕುಂಟು ನೆಪದೊಂದಿಗೆ ವೀರಮ್ಮಾಜಿ ಮಗನಿಗೆ ಇನ್ನೊಂದು ಮದುವೆಯ ಬಗ್ಗೆ ದನಿ ಎತ್ತುತ್ತಾಳೆ.

'ಹೆಣ್ಣು ಹೆಣ್ಣಿಗೆ ಶತ್ರು' ಎಂಬ ನಾಣ್ಣುಡಿಯಂತೆ ವೀರಮ್ಮಾಜಿಗೆ ಶಾಂತವ್ವನ ಬಗ್ಗೆ ಯಾವ ಕಾಳಜಿಯೂ ಇಲ್ಲ. ಸೊಸೆ ಕೂತರೆ ತಪ್ಪು, ನಿಂತರೆ ತಪ್ಪು ಎನ್ನುವಷ್ಟರ ಮಟ್ಟಕ್ಕೆ ಆಕೆಯನ್ನು ವಿರೋಧಿಸುತ್ತಾಳೆ. ಒಮ್ಮೆ ಶಾಂತವ್ವ ಪ್ರಸಾದವೆಂದು 'ಮೃತ್ತಿಕೆ' (ಪವಿತ್ರವಾದ ಮಣ್ಣು) ಕಳುಹಿಸಿಕೊಟ್ಟರೆ ಅದು ತನ್ನನ್ನು ಅಪಹಾಸ್ಯ ಮಾಡಲು ಮಣ್ಣು ಕಳುಹಿಸಿದ್ದಾಳೆ ಎಂದು

ಅದನ್ನು ಎಸೆಯುತ್ತಾಳೆ. ವೀರಮ್ಮಾಜಿಯ ನಡತೆಯಿಂದಾಗಿ ನಾಯಕನಿಗೂ ಉಸಿರು ಕಟ್ಟಿಸುವ ವಾತಾವರಣ ಉಂಟಾಗುತ್ತದೆ. ಇದರಿಂದಾಗಿ ಶಾಂತವ್ವ–ಚೆನ್ನಬಸವ ನಾಯಕನ ನಡುವೆ ನವ-ವಧೂವರರ ಸರಸ ಸಲ್ಲಾಪಗಳಿಲ್ಲ ಮತ್ತು ರಸಿಕತೆಯ ಅಭಿವ್ಯಕ್ತಿಯೂ ಇಲ್ಲ. ಒಬ್ಬರ ಮೇಲೊಬ್ಬರಿಗೆ ಪ್ರೀತಿಯಿದ್ದರೂ ಪರಿಸ್ಥಿತಿ ತಡೆಯುತ್ತದೆ. ಹೀಗೆ ಶಾಂತವ್ವಳಿಗೆ ತನ್ನನ್ನು ಪ್ರೀತಿಸುವವರಿಂದಲೂ ಪ್ರೀತಿಸಿಗುವುದಿಲ್ಲ.

ಸರಳ ಸ್ವಭಾವದವಳಾದ ಶಾಂತವ್ವಳ ಮನಸ್ಸಿನೊಳಗೆ ಎಷ್ಟೇ ನೋವಿದ್ದರೂ ಒಂದು ತೆರನಾದ ಅಸಹಾಯಕ ಮೌನಿಯಾಗಿದ್ದಳು. ಹಿರಿಯರಿಗೆ ಎದುರಾಡುವವಳಲ್ಲ. ಗಂಡ ಬಯಸಿದರೆ ತಾಯಿಯ ಒತ್ತಾಯದಂತೆ ಇನ್ನೊಂದು ಮದುವೆಯಾಗಿ ಸುಖವಾಗಿರಲಿ ಎನ್ನುವ ಮನೋಭಾವ ಅವಳದು. ಹಾಗೆಂದು ಆಕೆ ವಿರಕ್ತಳಲ್ಲ. ಆತ ಸುಖವಾಗಿದ್ದರೆ ತಾನು ಸುಖಿ, ಆತನ ಬದುಕಿನೊಂದಿಗೆ ತನ್ನ ಬದುಕು ಹೊಂದಿಕೊಂಡಿದೆ ಎನ್ನುವ ಮನೋಧರ್ಮದವಳು. ಇತ್ತೀಚಿನ ದಿನಗಳಲ್ಲಿ ಬಹು ವಿರಳ ಎನಿಸುವಂತಹ ಸ್ವಭಾವದ ಹೆಣ್ಣಾಗಿದ್ದಾಳೆ.

ಆಕೆಗೆ ನಾಯಕನಲ್ಲಿ ಪ್ರೀತಿಯಿದೆ, ನಿಷ್ಠೆಯಿದೆ. ಚೆನ್ನಬಸವನಾಯಕನಿಗೆ ಎರಡನೆಯ ಮದುವೆ ಮಾಡಿಸಲು ತಾಯಿ ಪ್ರಯತ್ನಿಸುವಾಗ, ಶಾಂತವ್ವ ನಾಯಕರಿಗೆ ನನ್ನ ಮೇಲೆ ಪ್ರೀತಿಯಿದ್ದರೆ ಅವರು ಪ್ರತಿಭಟಿಸಬೇಕು ಎನ್ನುತ್ತಾಳೆ. ಪ್ರೀತಿ ಇಲ್ಲದಿದ್ದರೆ ಇನ್ನೊಬ್ಬಳನ್ನು ಮದುವೆಯಾಗಿ ಸುಖವಾಗಿರಲಿ; ತಾನು ಜಗಳ ತೆಗೆದರೂ ಆದರಿಂದ ಯಾವ ಪ್ರಯೋಜನವೂ ಇಲ್ಲ ಎಂಬುದನ್ನು ಅರಿತು ಸಣ್ಣವಳಾಗದೆ ಉಳಿಯುತ್ತಾಳೆ. "ಬೇಡ ಎಂದು ನಾನಲ್ಲ ನಾಯಕ ಹೇಳಬೇಕು" ಎನ್ನುವಲ್ಲಿ ಶಾಂತವ್ವನ ಪಾತ್ರವನ್ನು ಮೆಚ್ಚಿಕೊಳ್ಳಲು ಇದೊಂದು ಮಾತು ನಿರ್ದೇಶನವಾಗುತ್ತದೆ.

ಮೈಸೂರು ದಸರಾ ಉತ್ಸವದಲ್ಲಿ ಕೃಷ್ಣರಾಜ ಅರಸರ ಆಹ್ವಾನದ ಮೇರೆಗೆ ಅಲ್ಲಿ ಪಾಲ್ಗೊಳ್ಳಲು ಹೋದಾಗ ಶಾಂತವ್ವನಿಗೆ ಬದುಕು ಸ್ವಲ್ಪ ಹಗುರವಾಯಿತು ಎನಿಸುವಷ್ಟರಲ್ಲಿ ಹೈದಾರಾಲಿ ಪ್ರತ್ಯಕ್ಷನಾಗುತ್ತಾನೆ. ನಾಯಕ ಇದ್ದಕ್ಕಿದ್ದಂತೆ ಕಣ್ಮರೆಯಾದರೆ ರಾಣಿ ವೀರಮ್ಮಾಜಿ ಮತ್ತು ಶಾಂತವ್ವ ಚಿತ್ರದುರ್ಗಕ್ಕೆ ಹೋಗಿ ನೆಲೆಸುತ್ತಾರೆ. ಆಗ ಶಾಂತವ್ವ ನಾಲ್ಕು ತಿಂಗಳ ಬಸುರಿ. ಆ ಸಮಯದಲ್ಲಿ ಅವಳ ಜೊತೆಗಿದ್ದು ಆರೈಕೆ ಮಾಡಲು ಆರೋಗ್ಯದ ಬಗ್ಗೆ ಕಾಳಜಿವಹಿಸಲು ಪರಿಚಾರಿಕೆಯಾದ ಕೆಂಚವ್ವಳ ಹೊರತಾಗಿ ಯಾರು ಇರುವುದಿಲ್ಲ. ಮಾನಸಿಕವಾಗಿ ಜರ್ಝರಿತಳಾಗಿದ್ದ ಶಾಂತವ್ವ ಭೈರವನ ಗುಡಿಯಲ್ಲಿ ಪತಿಯ ಶ್ರೇಯಸ್ಸಿಗಾಗಿ ಕಾಪಾಲಿಯ ಮುಖೇನ ಮಾಡಿಸುವ ಪೂಜೆಗೆ ತಾನೇ ಬಲಿಯಾಗಲು ಹೋಗುತ್ತಾಳೆ. ನಾಯಕನ ಕ್ಷೇಮವನ್ನು ಬಯಸುತ್ತ ಕೊನೆಯವರೆಗೂ ನೆಮ್ಮದಿಯ ಕ್ಷಣಗಳನ್ನು ಕಾಣದೇ ಅಸಹಾಯಕ ಮೌನದೊಂದಿಗೆ ಬದುಕುತ್ತಾಳೆ. ಇದಕ್ಕೆ ಕಾರಣ–ಆಕೆಯ ಸಂಸ್ಕಾರ, ನೇಮಯ್ಯನ ನಡೆ-ನುಡಿ ಮತ್ತು ಬೆಳೆದ ವಾತಾವರಣವಾಗಿದೆ.

ಇಂದಿಗೂ ಮಧ್ಯಮ ವರ್ಗದ ಜನಜೀವನದಲ್ಲಿ ಕಂಡುಬರುವ ಸ್ತ್ರೀ ಬವಣೆಗೆ ಕನ್ನಡಿ ಹಿಡಿದಂತಿವೆ ಶಾಂತವ್ವನ ಪಾತ್ರಚಿತ್ರಣ.

ಶಾಂತವ್ವ ಪಾತ್ರದ ಪ್ರಮುಖ ಗುಣ ದಾಂಪತ್ಯ ಸಾರಸ್ಯದ ಕಡೆಗೆ; ಗಾಢ ಕಾಳಜಿ ಗಂಡನ ಬಗೆಗಿನ ಭಯಭಕ್ತಿ ಮತ್ತು ನಿಸ್ವಾರ್ಥದ ಹಿನ್ನೆಲೆಯಲ್ಲಿಯೇ ರೂಪುಗೊಂಡಿದೆ. ಹಲವಾರು ಘಟನೆಯಲ್ಲಿ ಇವಳು ತೋರ್ಪಡಿಸುವ ಮುಖ್ಯ ಆಶಯವು ಇದೇ ಆಗಿದೆ. ವಸ್ತಾರೆಯ ಹೆಗ್ಗಡತಿ ಶಾಂತವ್ವನ ಸೇವಕಿ ಕೆಂಚವ್ವನನ್ನು ಕೇಳುತ್ತಾಳೆ. ದತ್ತಾತ್ರೇಯನ ಪೀಠದಲ್ಲಿ ಶಾಂತವ್ವ ದೇವರಲ್ಲಿ ಏನೆಂದು ಬೇಡಿಕೊಂಡಳು ಎಂದು. ಅದಕ್ಕೆ ಕೆಂಚವ್ವ ಹೀಗೆ ಉತ್ತರಿಸುತ್ತಾಳೆ. "ಮಗು ಬೇಕೂ ಅನ್ನಲಿಲ್ಲ. ಗಾದಿ ಬೇಕೂ ಅನ್ನಲಿಲ್ಲ. ಗಂಡ ನಗುತಾ ಇರಬೇಕು, ತಾನು ತಾಯಿಯೊಂದಿಗೆ ಕಣ್ಣು ಮುಚ್ಚಿಕೊಳ್ಳಬೇಕು" ಅಂದರು ಎಂದು ನುಡಿಯುತ್ತಾಳೆ. ತನ್ನ ಸುಖವನ್ನು ತೇಜಿಸಿ, ಗಂಡನ ಶ್ರೇಯಸ್ಸಿಗಾಗಿಯೇ ತನ್ನ ಬದುಕನ್ನು ಮುಡುಪಾಗಿಸುತ್ತಾಳೆ.

ರಾಜ ಮನೆತನದ ಸೊಸೆಯಾಗಿದ್ದ ಆಕೆ ತೊಂದರೆಗೆ ಒಳಗಾದರೂ ಅದನ್ನು ಪ್ರತಿಭಟಿಸದೆ, ಯಾವ ರೀತಿ ಬದುಕಿದಳು ಎಂಬುದನ್ನು ಈ ಪಾತ್ರದಿಂದ ತಿಳಿಯಬಹುದಾಗಿದೆ.

### ಹೆಗ್ಗಡತಿ

ರಾಣಿಗೆ ಬುದ್ಧಿವಾದ ಹೇಳುವವಳು ಹೆಗ್ಗಡತಿ. ಈಕೆ ಸಂಬಂಧದಿಂದ ರಾಣಿಗೆ ಅಕ್ಕ. ವೀರಮ್ಮಾಜಿಯ ದುರ್ನಡತೆ, ಮೂರ್ಖತನಕ್ಕೆ ರಾಜಸಂತತಿ ಬಲಿಯಾಗುತ್ತಿರುವುದನ್ನು ಕಂಡು ತೀವ್ರವಾಗಿ ಪ್ರತಿಭಟಿಸುತ್ತಾಳೆ. ಗಂಡ ಮತ್ತು ಮಗನನ್ನು ಕಳೆದುಕೊಂಡ ಹೆಗ್ಗಡತಿ ಸೊಸೆ ಮೊಮ್ಮಗನೊಂದಿಗೆ ವಾಸಿಸುತ್ತಿದ್ದಾಳೆ. ಈಕೆ ರಾಜ್ಯದ ಹಿತದೃಷ್ಟಿಯಿಂದ ಸಿಂಹಾಸನಕ್ಕೆ ಗಂಡು ಸಂತತಿ ಬರಲಿ ಎಂದು ಹಂಬಲಿಸುತ್ತಾಳೆ. ವೀರಮ್ಮಾಜಿಯ ವಿಷಯದಲ್ಲಿ ಕಠಿಣ ಮನಸ್ಸಿನವಳಾದರೆ ಶಾಂತವ್ವನ ವಿಚಾರದಲ್ಲಿ ಅಷ್ಟೇ ಮೃದುವಾಗಿ ನಡೆದುಕೊಳ್ಳುತ್ತಾಳೆ. ಹೆಗ್ಗಡತಿ ಒಪ್ಪಿಗೆ ಇಲ್ಲದಿದ್ದರೂ ಮಲ್ಲಿಗೆ ಸಗುನನ್ನೆ ಮದುವೆಯಾಗುತ್ತಾಳೆ. ಕೊನೆಗೂ ತನ್ನ ಹಠವನ್ನೇ ಸಾಧಿಸುತ್ತಾಳೆ. ಗಂಡನನ್ನು ಅನುಸರಿಸುವ, ಅವನಿಗಾಗಿ ಹಂಬಲಿಸುವ ಈ ಸ್ವಾತಂತ್ರ್ಯ, ಸಂತೋಷ, ಅರಮನೆಯಲ್ಲಿ ಕಿರಿಯರಾಣಿಯಾಗಿರುವ ಶಾಂತವ್ವನಿಗೆ ಇಲ್ಲದಿರುವುದನ್ನು ಕಂಡು ಮರುಗುತ್ತಾಳೆ. ಹೆಗ್ಗಡತಿಯ ಪಾತ್ರ ಸೃಷ್ಟಿಯೊಂದಿಗೆ ಅಧಿಕಾರ ಮತ್ತು ವ್ಯಾಪಾರ ವ್ಯವಸ್ಥೆಯ ಸ್ಥೂಲಚಿತ್ರಣ ಕಾದಂಬರಿಯಲ್ಲಿ ಮೂಡಿಬಂದಿದೆ.

### ಮಲ್ಲಿಗೆ

ಜೀತದ ಮಲ್ಲಿಗೆ ಚನ್ನಬಸವನಾಯಕ ಕಾದಂಬರಿಯಲ್ಲಿ ಬರುವ ಚಿಕ್ಕ ಕಾಲ್ಪನಿಕ ಪಾತ್ರ. "ಕಾದಂಬರಿಯಲ್ಲಿ ಮಲ್ಲಿಗೆ ಸಗುನ ಇವರ ಪ್ರಸಂಗದಿಂದ ಹೆಚ್ಚು ಪ್ರಯೋಜನ ಇಲ್ಲದಿರಬಹುದು. ಆದರೆ ಮಲ್ಲಿಗೆ ಪಾತ್ರವೇ ಕಾದಂಬರಿಕಾರರ ಮನಸ್ಸನ್ನು ಸೆಳೆದಿದೆ. ಅವಳು ಚಟುವಟಿಕೆಯಲ್ಲಿ ಜಿಂಕೆಯ ಮರಿ, ಮನಸ್ಸಿನ ನಿರ್ಧಾರದಲ್ಲಿ ಕಲ್ಲಿನಂತೆ ಸ್ಥಿರವಾದವಳು. ಹೆಗ್ಗಡತಿಯ ಒಪ್ಪಿಗೆ ಅಥವಾ ಆಕೆಗೆ ಇಷ್ಟವಿಲ್ಲದಿದ್ದರೂ ಮಲ್ಲಿಗೆ ಸಗುನನ್ನೇ ಮದುವೆಯಾಗುತ್ತಾಳೆ. ತನ್ನ ಯಜಮಾನಿಯ ತೀರ್ಪಿಗೆ ವಿರುದ್ಧವಾಗಿ ನಡೆಯುವಾಗಲೂ ಅವಳಲ್ಲಿ ಗೌರವ; ತನ್ನ ನಡತೆ ಸರಿ ಎಂದು ಯಾಜಮಾನಿಯ ಬಾಯಿಯಿಂದ ಬರಬೇಕು, ಅವಳ ಆಶೀರ್ವಾದ ತನಗೆ ದೊರಕಬೇಕು ಎನ್ನುವ ಆಸೆ ಮಲ್ಲಿಗೆಯದು. ಈ ಎಲ್ಲ ಗುಣಗಳಿಗೆ ಚೆಲುವು ನೀಡುವ ಮುಗ್ಧತೆ, ಕಾದಂಬರಿಕಾರರ ಮನಸ್ಸನ್ನು, ದೃಷ್ಟಿಯನ್ನು ಸೆಳೆದಿದೆ.

ವೀರಮ್ಮಾಜಿ, ಶಾಂತವ್ವ, ಹೆಗ್ಗಡತಿ, ಮಲ್ಲಿಗೆ ಪಾತ್ರಗಳೊಂದಿಗೆ ಕೆಂಚವ್ವ, ದೇವಮ್ಮಾಜಿ, ಸಣ್ಣವ್ವ ಪಾತ್ರಗಳು ಕಾದಂಬರಿಯಲ್ಲಿ ಪೂರಕ ಪಾತ್ರಗಳಾಗಿ ಬರುತ್ತವೆ.

ಶಾಂತವ್ವ ಮತ್ತು ಹೆಗ್ಗಡತಿಯ ಪಾತ್ರಗಳನ್ನು ವೀರಮ್ಮಾಜಿಗೆ ಎದುರಾಗಿ ಸೃಷ್ಟಿಸಿ, ತನ್ಮೂಲಕ ಎರಡು ಮನಃಸ್ಥಿತಿಗಳನ್ನು ತೆರೆದಿಡುವ ಪ್ರಯತ್ನ ನಡೆದಿವೆ. ಹಾಗೆಯೇ ಅಸಹಾಯಕ ಹೆಣ್ಣಿನ ಬವಣೆಗಳನ್ನು ಮನ ಮಿಡಿಯುವಂತೆ ಚಿತ್ರಿಸಲಾಗಿದೆ. ಮಲ್ಲಿಗೆ, ಶಾಂತವ್ವ, ಹೆಗ್ಗಡತಿ, ವೀರಮ್ಮಾಜಿಯ ಪಾತ್ರ ಚಿತ್ರಣವನ್ನು ಗಮನಿಸಿದರೆ, ಹೆಣ್ಣು ತಾನು ಇಚ್ಛಿಸಿದವನೊಂದಿಗೆ ಮದುವೆಯಾಗಿ ಬಾಳಬೇಕು ಮತ್ತು ತನ್ನ ಪತಿಗೆ ನಿಷ್ಠರಾಗಿರಬೇಕು ಎನ್ನುವುದು ಕಾದಂಬರಿಯ ಅಭಿಪ್ರಾಯದಂತೆ ಕಾಣುತ್ತದೆ. ಇಂದಿನ ವೈಚಾರಿಕ ಜಗತ್ತಿಗೆ, ವೀರಮ್ಮಾಜಿ ಆದರ್ಶ ಮಹಿಳೆಯಾದರೆ, ಶಾಂತವ್ವ ಸಾಮಾನ್ಯ ಗೃಹಿಣಿಯಂತೆ ಕಾಣುತ್ತಾಳೆ.

ತರಾಸು ಅವರ ಕಂಬನಿಯ ಕುಯಿಲು, ರಾಜ್ಯದಾಹ, ರಕ್ತರಾತ್ರಿ, ತಿರುಗುಬಾಣ ನಾಲ್ಕು ಕಾದಂಬರಿಗಳಲ್ಲಿ ಚಿತ್ರದುರ್ಗದ ಪಾಳೆಯಗಾರರ ಮನೆತನದ ಅಸ್ತಂಗತವನ್ನು ಚಿತ್ರಿಸಲಾಗಿದೆ. ಈ ಕಾದಂಬರಿಗಳು ವಿಷಯದ ದೃಷ್ಟಿಯಿಂದ ಒಂದಕ್ಕೊಂದು ಪೂರಕವಾಗಿದೆ. ಈ ಕಾದಂಬರಿಗಳಲ್ಲಿ ಮೂಡಿಬಂದ ಗೌರವ್ವನಾಗತಿ, ಓಬವ್ವನಾಗತಿ, ಗಿರಿಜೆ, ಮಲ್ಲವ್ವನಾಗತಿ, ಗಂಗವ್ವ, ಸ್ತ್ರೀಪಾತ್ರಗಳು ತಮ್ಮದೇ ಆದ ಗುಣಮೌಲ್ಯಗಳಿಗೆ ಮಾದರಿಯಾಗಿವೆ.

ಇಮ್ಮಡಿ ಮದಕರಿ ನಾಯಕ ಸಂತಾನವಿಲ್ಲದೆ ಸಾವಿನ ನಂತರದಲ್ಲಿ ಉದ್ಭವವಾಗುವ ರಾಜಕೀಯ ಏರುಪೇರುಗಳು, ನಡೆಯುವ ಹೃದಯ ವಿದ್ರೂಪಕ ಘಟನೆಗಳು, ಅವುಗಳಿಂದುಂಟಾಗುವ ಭೀಕರ ಪರಿಣಾಮಗಳು ಕಂಬನಿಯ ಕುಯಿಲು ಕಾದಂಬರಿಯಲ್ಲಿ ಪರಿಣಾಮಕಾರಿಯಾಗಿ ಚಿತ್ರಿತವಾಗಿವೆ. ಗತಿಸಿದ ಮದಕರಿ ನಾಯಕರಿಗೆ ಮೂವತ್ತು ಜನ ನಾಗತಿಯರೆಂದು ಸೂಚಿಸಿದ ಲೇಖಕರು ನಮಗೆ ನಿಕಟ ಪರಿಚಯಿಸಿದ್ದು ಇಬ್ಬರನ್ನೇ ಓಬವ್ವ ನಾಗತಿ ಮತ್ತು ಗೌರವ್ವನಾಗತಿ. ಇನ್ನುಳಿದವರೆಂದರೆ ಗಿರಿಜೆ, ಗಂಗಾ ಹಾಗೂ ಹನುಮವ್ವ ಸಾಮಾನ್ಯ ಸ್ತ್ರೀಪಾತ್ರಗಳಾಗಿವೆ.

**ಗೌರವ್ವನಾಗತಿ**

ಲೇಖಕರ ತಂತ್ರ ನಾವೀನ್ಯತೆಯಿಂದಾಗಿ ಗೌರವ್ವನಾಗತಿ ಮದಕರಿನಾಯಕರನ್ನು ಕೊನೆಯಲ್ಲಿ ಮದುವೆಯಾದರೂ ಕಾದಂಬರಿಯಲ್ಲಿ ನಮಗೆ ಪ್ರಥಮಬಾರಿಗೆ ಪರಿಚಯವಾಗುತ್ತದೆ. ನಾಯಕರ ಸಾವಿನ ದುರ್ಭರ ಸನ್ನಿವೇಶದಲ್ಲೂ ರಾಜಕೀಯ ಪ್ರಜ್ಞೆಯಿಂದ ಗೌರವ್ವನಾಗತಿ ನಾಯಕರ ಆಸೆಯನ್ನು ಮನದಲ್ಲಿಟ್ಟುಕೊಂಡು ಮುಂದಿನ ಪಟ್ಟ ಯಾರಿಗೆ ಎಂಬ ಪ್ರಶ್ನೆಯೆತ್ತುತ್ತಾಳೆ.

ಇದರಿಂದ ಗೌರವ್ವನಾಗತಿಯ ಕುರಿತು ಸಹೃದಯ ಮೊದಮೊದಲು ಅಸಹ್ಯತೆಯನ್ನು ವ್ಯಕ್ತಪಡಿಸುವಂತಾಗುತ್ತದೆ. ಆದರೆ ಪರಿಸ್ಥಿತಿಯೇ ಹಾಗೆ ಮಾತನಾಡಿಸಬೇಕಾಯಿತೆಂಬುದನ್ನು ತಿಳಿದಾಗ, ಕಿರಿಯವಳಾದರೂ ಗತಿಸಿದ ನಾಯಕರ ಆಶೆಯನ್ನು ಕಾರ್ಯರೂಪಕ್ಕೆ ತರುವ ಉತ್ಕಟತೆಯನ್ನು ಕಂಡು ಮನ ಮಿಡಿಯುವುದು. ಆದರೆ ಹಿರಿಯ ನಾಗತಿ ಬಾಣದ ಮನೆಯ

ಓಬವ್ವ ನಾಗತಿ ಈ ಎಲ್ಲ ವಿಚಾರದಿಂದ ನಿರ್ಲಿಪ್ತಳಾದಂತೆ ಕಾಣುತ್ತದೆ. 'ಆಳುವವರು ಆಳಿಸಿಕೊಳ್ಳುವವರು ಆಳ್ವಿಕೆಯ ಯೋಚನೆ ಮಾಡಲಿ' (ತರಾಸು; ೧೯೫೩; ಪು. ೧೦) ಎಂದು ಹೇಳುವಳು. ನಾಯಕರ ಶವದ ಬಳಿ ಪಟ್ಟದ ಕುರಿತು ಚರ್ಚೆ ನಡೆದಾಗ ಹಿರಿಯ ನಾಗತಿ ಅಲ್ಲಿಂದ ಹೊರಟುಹೋದರೆ, ಗೌರವ್ವನಾಗತಿ ಪುರುಷರ ಮಧ್ಯದಲ್ಲಿ ಕುಳಿತು ನಾಯಕರ ಆಶೆ ಏನಿತ್ತೆಂಬುದನ್ನು ತಿಳಿಸುತ್ತಾಳೆ. "ತಮ್ಮ ಸಂತಾನಕ್ಕೆ ಸಿಂಹಾಸನ ಪ್ರಾಪ್ತವಾಗಬೇಕೆಂಬ ಬಯಕೆ ಪ್ರಭುಗಳಿಗಿತ್ತು......" ಅದಕ್ಕೆಂದೇ ಓಬಣ್ಣ ನಾಯಕನನ್ನು ಸಾಕಿದರು ಎಂದು ಬಿಡಿಸಿ ಹೇಳುತ್ತಾಳೆ. ಶವದ ಎದುರು ಇದೆಲ್ಲ ಯಾಕೆ ಎಂದು ಮಂತ್ರಿಗಳು ಇದರ ಇತ್ಯರ್ಥವನ್ನು ಮುಂದೂಡಿದಾಗ ಶವಸಂಸ್ಕಾರ ಮೊದಲಾದ ವಿಧಿಗಳು ನಡೆಯುತ್ತವೆ.

ಗೌರವ್ವನಾಗತಿ ಎಲ್ಲರೆದುರು ಹಾಗೆ ಹೇಳಿದರೂ ಅವಳ ಅಂತರಂಗದಲ್ಲಿ ಪಶ್ಚಾತ್ತಾಪ ಮೂಡುತ್ತದೆ. ನಾಯಕರ ಬಯಕೆಯನ್ನು ಈಡೇರಿಸಬೇಕೆಂದೇ ತಾನು ಹಾಗೆ ನಡೆದುಕೊಂಡುದಾಗಿ ಹೇಳುತ್ತಾಳೆ. ಇಲ್ಲಿ ಅವಳ ಅಂತರಂಗ ಸ್ಪಷ್ಟವಾಗಿ ಕಾಣುವಂತೆ ಲೇಖಕರು ಚಿತ್ರಿಸಿದ್ದಾರೆ. ಗೌರವ್ವನಾಗತಿ ಮಂತ್ರಿ ಭುವನಪ್ಪನವರನ್ನು ಕರೆಸಿ ಮುಂದಿನ ಯೋಚನೆಗೆ ತೊಡಗಿದಾಗ, ದತ್ತು ಸ್ವೀಕಾರವನ್ನು ಹಿರಿಯನಾಗತಿ ಓಬವ್ವಳೇ ಮಾಡಿಕೊಳ್ಳಬೇಕು. ದೊರೆಗಳ ಪಟ್ಟಮಹಿಷಿ ಅವಳಾದುದರಿಂದ ಅವಳಿಗೆ ಮಾತ್ರ ಅಧಿಕಾರವಿದೆಯೆಂದು ಮಂತ್ರಿಗಳು ತಿಳಿಸುತ್ತಾರೆ. ಹಿರಿಯನಾಗತಿ ಈಗಾಗಲೇ ಸಹಗಮನಕ್ಕೆ ಸಿದ್ಧತೆ ಮಾಡಿಕೊಳ್ಳುತ್ತಿದ್ದಳು. ಅವಳನ್ನು ಅದರಿಂದ ತಡೆದು ನಿಲ್ಲಿಸುವ ಕಾರ್ಯವನ್ನು ಗೌರವ್ವ ಕೈಗೊಳ್ಳುತ್ತಾಳೆ.

ಗೌರವ್ವನಾಗತಿ ತನ್ನ ತಮ್ಮ ಓಬಣ್ಣ ನಾಯಕನನ್ನು ದತ್ತು ಸ್ವೀಕಾರ ಮಾಡಿ ದೊರೆಯನ್ನಾಗಿಸುವ ಹೊಣೆಯನ್ನು ಓಬವ್ವ ನಾಗತಿಗೆ ಒಪ್ಪಿಸುತ್ತಾಳೆ. ಓಬವ್ವ ನಾಗತಿಯನ್ನು ಕಂಡು ಗೌರವ್ವ 'ಅಕ್ಕ ನೀನು ಈ ಲೋಕದ ಹೆಣ್ಣಲ್ಲ. ದೇವತಾಸ್ತ್ರೀ' (ಅದೇ; ಪು. ೬೨) ಎಂದು ಹೊಗಳುವುದಲ್ಲದೆ ಜನ್ಮಜನ್ಮಕ್ಕೂ ಅವಳಿಗೆ ತಂಗಿಯಾಗಿ ಹುಟ್ಟುವ ಭಾಗ್ಯವನ್ನು ಆಶೀರ್ವದಿಸಲು ಬೇಡಿಕೊಳ್ಳುತ್ತಾಳೆ. ತನ್ನ ಹೆಗಲ ಮೇಲಿರುವ ಭಾರವನ್ನು ನ್ಯಾಯಯುತವಾಗಿ ಹೊರಬೇಕಾದ ಹಿರಿಯನಾಗತಿಯ ಮೇಲೆ ಹೊರೆಸಿ ಅವಳನ್ನು ಕರ್ತವ್ಯ ಜಾಗೃತಳನ್ನಾಗಿ ಮಾಡುತ್ತಾಳೆ. ಅಲ್ಲದೆ ತಾನು ಮಾಡಿದ ತಪ್ಪಿಗಾಗಿ ಕ್ಷಮೆಯಾಚಿಸಿ ಓಬವ್ವಳ ಬದಲಾಗಿ ಗೌರವ್ವನಾಗತಿಯು ಸತಿ ಸಹಗಮನಕ್ಕೆ ಹೋಗುತ್ತಾಳೆ.

ಆರಂಭದ ಅವಳ ಧೈರ್ಯ, ಸಾಹಸ, ನಿಷ್ಠುರದ ಮಾತುಗಳು ಅವಳ ವ್ಯಕ್ತಿತ್ವಕ್ಕೆ ಕನ್ನಡಿ ಹಿಡಿದಿವೆ. ನಾಯಕರಿರುವಾಗಿನಿಂದ ಅವಳು ತೋರಿಸಿದ ರಾಜಕೀಯ ಅಭಿರುಚಿ, ಸಮಸ್ಯೆಗಳಿಗೆ ಅವಳು ಹುಡುಕುವ ಪರಿಹಾರ ಇವೆಲ್ಲ ಅವಳ ಚಾಣಾಕ್ಷತೆಯನ್ನು ಎತ್ತಿ ತೋರಿಸುತ್ತವೆ. ಅಲ್ಲದೆ ಅವಳ ಸಹಗಮನ ಓದುಗರನ್ನು ದುಃಖಕ್ಕೀಡುಮಾಡುತ್ತದೆ. ಗೌರವ್ವಳ ಕುರಿತು ನಮ್ಮಲ್ಲಿ ಅತ್ಯಂತ ಆದರ ಅಭಿಮಾನಗಳು ಒಡಮೂಡುವಂತೆ ಲೇಖಕರು ಆ ಪಾತ್ರವನ್ನು ಚಿತ್ರಿಸಿದ್ದಾರೆ.

**ಓಬವ್ವ ನಾಗತಿ**

ಓಬವ್ವ ನಾಗತಿ ಸಂಯಮಿ, ಓರ್ವ ನಾಗತಿಗೆ ಇರಬೇಕಾದ ಗುಣಗಳೆಲ್ಲವೂ ಅವಳಲ್ಲಿವೆ. ಈಕೆಯ ಗುಣ, ಸ್ವಭಾವಗಳನ್ನು ನೋಡಿದರೆ ಅವಳು ಮೊದಮೊದಲು ರಾಜಕೀಯದಿಂದ

ನಿರ್ಲಿಪ್ತಳಾಗಿದ್ದು ಕೇವಲ ಪೂಜೆಯಲ್ಲಿ ನಿರತಳಾಗಿರುವಳು. ನಾಯಕರು ಮರಣ ಹೊಂದಿದ ಮೇಲೆ ಪಟ್ಟ ಯಾರಿಗೆ? ಎಂಬ ಸಂದಿಗ್ಧತೆ ಸಮಯದಲ್ಲಿ ಯಾವುದನ್ನೂ ಲಕ್ಷ್ಯಕ್ಕೆ ತರದೆ ಪೂಜಾಮಂದಿರದಲ್ಲಿಯೇ ಉಳಿದು ಸಹಗಮನಕ್ಕೆ ಸಿದ್ಧತೆ ಮಾಡಿಕೊಳ್ಳುವಳು. ಲೇಖಕರು ಓಬವ್ವಳ ಪಾತ್ರವನ್ನು ಭಾರತೀಯ ಪರಂಪರೆಯಲ್ಲಿ ಮೂಡಿರುವ ಆದರ್ಶ ಮಹಿಳೆಯನ್ನಾಗಿ ಚಿತ್ರಿಸಿದ್ದಾರೆ.

> "ನಾಯಕರು ಕಣ್ಣು ಮುಚ್ಚಿದಾಗಲೇ ನಮ್ಮ ಪಾಲಿಗೆ ಈ ಲೋಕ ಇಲ್ಲವಾಯಿತು.
> 'ಕಮಲವಿದ್ದ ಹಾಗೆ; ನಮ್ಮ ಬಾಳಲ್ಲಿ ಸೂರ್ಯ ಮುಳುಗಿದರೆ ಇದರ ಕಥೆಯೂ ಮುಗಿದಂತೆಯೇ'
> (ಅದೇ; ಪು. ೩೨)

ಎಂದು ಪತಿಯೇ ಪರದೈವವೆಂದು ಬದುಕಿದ ಸಾಧ್ವಿಶಿರೋಮಣಿ. ಓಬವ್ವ ನಾಗತಿ ಮೊದಲು ಮದಕರಿ ನಾಯಕನನ್ನು ಕೈಹಿಡಿದ ಹೆಣ್ಣು. ಆಕೆಯ ಬಳಿಕ ಇಪ್ಪತ್ತೊಂಬತ್ತು ಜನರನ್ನು ಮದುವೆಯಾಗಿ ಆ ವಿಲಾಸ ಸಾಗರದಲ್ಲಿ ಮದಕರಿನಾಯಕ ಮುಳುಗಿದ್ದಾನೆ. ಪತಿಯ ಸುಖದಿಂದ ವಂಚಿತಳಾದ ನಾಗತಿ ಆ ನೋವನ್ನು ತಾನೇ ಅನುಭವಿಸುತ್ತಾಳೆ. ಅದಕ್ಕಾಗಿ ಯಾರನ್ನು ನಿಂದಿಸುವುದಿಲ್ಲ. "ಏನೋ ಹಿಂದಿನ ಜನುಮದಲ್ಲಿ ನಾನು ತಾಯಿಗೆ ಮಾಡಿದ ಅರಿಶಿಣ ಕುಂಕುಮದ ಪೂಜೆ ಸಾಲದಾಯಿತೇನೋ? ಅದಕ್ಕೆ ಈ ಜನ್ಮದಲ್ಲಿ ಪೂರ್ಣವಾಗಿ ಪತಿಸುಖ ದೊರೆಯಲಿಲ್ಲ. ಅದಕ್ಕಾಗಿ ಈ ಜನ್ಮದಲ್ಲಿ ಸವತಿಯೊಂದಿಗೆ ಕಚ್ಚಾಡಿದರೆ ಬರುವುದೇನು? ನಾಯಕರ ಮನಸ್ಸು ಪತಂಗದಂತೆ ದಿನಕ್ಕೊಬ್ಬ ಹೊಸನಾಗತಿಯ ಸುತ್ತ ಸುತ್ತುತ್ತಿರುವಾಗ ಹೆಣ್ಣು ಹೆಣ್ಣು ಕಾದಾಡಿ ಆಗುವ ಲಾಭವೇನು? ವ್ಯಥಾ ಮನಸ್ತಾಪ.. ಅದನ್ನು ಕಟ್ಟಿಕೊಂಡರೂ ಆಗುವುದೇನು? ಮನುಷ್ಯ ಏನು ತಾನೆ ಕೊಡಬಲ್ಲ. ಕೊಡುವುದು ಬಿಡುವುದು ತಾಯಿಯ ಇಚ್ಛೆ. ಆಯಿತು ಈ ಜನ್ಮದಲ್ಲಿ ಆಕೆಯ ಪ್ರೀತಿ ಪಡೆದು ಬರಲಿಲ್ಲ. ಮುಂದಿನ ಜನ್ಮಕ್ಕಾದರೂ ದಾರಿ ಸರಿ ಮಾಡಿಕೊಳ್ಳೋಣ" (ಅದೇ; ಪು. ೫೮) ಎಂದು ನಾಗತಿ ತನ್ನ ಬಾಳಿನ ಬಗ್ಗೆ ಬೇಸರಪಡುತ್ತಾಳೆ. ಮಾನಸಿಕವಾಗಿ ನೊಂದ ಮಹಿಳೆಯ ಪಾತ್ರದಂತೆ ಓಬವ್ವನಾಗತಿ ನಮ್ಮ ಕಣ್ಣೆದುರಿಗೆ ಬರುತ್ತಾಳೆ.

ದೇಶದ ಹಿತಕ್ಕಿಂತ ಆತ್ಮಕಲ್ಯಾಣ ದೊಡ್ಡದಲ್ಲವೆಂದು ಭಾವಿಸಿ ಓಬವ್ವನಾಗತಿ ಸಹಗಮನ ಮಾಡಿಕೊಳ್ಳದೆ ಉಳಿದುಕೊಳ್ಳುತ್ತಾಳೆ. ಕಾರಣ ಆ ವೇಳೆಗಾಗಲೇ ಬ್ರಿಟಿಷರ ಆಡಳಿತ ಮತ್ತು ವಿದ್ಯಾಭ್ಯಾಸದ ಪ್ರಭಾವದಿಂದ ಭಾರತೀಯ ಸಮಾಜದಲ್ಲಿ ನಿಧಾನವಾಗಿ ಬದಲಾವಣೆಯಾಗ ತೊಡಗಿತ್ತು. ಆದ್ದರಿಂದ ತರಾಸು ಅವರು ಓಬವ್ವನಾಗತಿಯನ್ನು ಆಧುನಿಕ ಮನೋಭಾವದ ನೆಲೆಯಲ್ಲಿ ಗುರುತಿಸಿದ್ದಾರೆ. ಹಾಗಾಗಿ ಇಲ್ಲಿ ಬರುವ ನಾಗತಿ ಸಹಗಮನ ಮಾಡಿಕೊಳ್ಳುವುದಿಲ್ಲ. ಇದರಿಂದ ಸಮಸ್ತ ಜವಾಬ್ದಾರಿಯೂ ಹೆಗಲೇರಿದಂತಾಗಿ ಶಾಂತವಾಗಿದ್ದ ಮನಸ್ಸು ಅಸ್ತವ್ಯಸ್ತವಾಗುತ್ತದೆ. ಕಷ್ಟನಿಷ್ಠುರಗಳಿಗೂ ಗುರಿಯಾಗುತ್ತಾಳೆ. ರಾಜಕೀಯವೇ ಸಾಕು ಅಂದುಕೊಂಡಿದ್ದ ನಾಗತಿ ಅನಿವಾರ್ಯವಾಗಿ ಪರಿಧಿಯೊಳಕ್ಕೆ ಪ್ರವೇಶಿಸಬೇಕಾಗುತ್ತದೆ.

ಓಬವ್ವನಾಗತಿ ತನ್ನ ಸವತಿ ಗೌರವ್ವನಿಗೆ ಕೊಟ್ಟ ಮಾತಿನಂತೆ ಓಬಣ್ಣನಾಯಕನನ್ನು ಪಟ್ಟದಲ್ಲಿ ಕೂರಿಸಬೇಕಾದರೆ ಬಹಳಷ್ಟು ಶ್ರಮಿಸುತ್ತಾಳೆ. ದುರ್ಗದ ಸಿಂಹಾಸನಕ್ಕೆ ಸಹಜವಾದ

ಉತ್ತರಾಧಿಕಾರಿ ಇರುವಾಗ ಅದನ್ನು ತಪ್ಪಿಸುವುದು ಹೇಗೆ ಎಂದು ಓಬವ್ವ ನೇರವಾಗಿ ಹೇಳಲಾರದ ಸಂದಿಗ್ಧಕ್ಕೆ ಸಿಲುಕುತ್ತಾಳೆ. ಆದರೂ ಲಿಂಗಣ್ಣನನ್ನು ತನ್ನ ಮಾತಿನ ಚಾತುರ್ಯದಿಂದ, ತನ್ನ ಮೇಲೆ ಅವನಿಟ್ಟ ಭಕ್ತಿ, ಪ್ರೀತಿಯಿಂದಾಗಿ ಕುಂತಿ ಕರ್ಣನಿಗೆ ಮರಳಿ ಬಾಣವನ್ನು ತೊಡದಿರೆಂದು ಕೇಳಿಕೊಂಡಂತೆ, ಲಿಂಗಣ್ಣನ ಪಾಲಿಗೆ ಬಂದಿದ್ದ ರಾಜ್ಯವನ್ನು ಬಿಟ್ಟುಕೊಡಲು ಕೇಳಿಕೊಳ್ಳುವಳು. ಲಿಂಗಣ್ಣನಿಗೆ 'ತಾನು ಒಂದು ಕಡೆ; ರಾಜ್ಯ ಇನ್ನೊಂದು ಕಡೆ ಇದರಲ್ಲಿ ಬೇಕಾದದ್ದು ಯಾವುದು? ಎಂದಾಗ ಲಿಂಗಣ್ಣ ಅವಳನ್ನೇ ಆರಿಸಿಕೊಳ್ಳುತ್ತಾನೆ.

"ನಾನು ಬರೀ ಬಿದರ ತುಂಡು, ನಾಯಕರ ಇಚ್ಛೆ ನನ್ನನ್ನು ನುಡಿಸುತ್ತವೆ"
ನಾನು ನಿಷ್ಠುರ ಕರ್ತವ್ಯದ ಬಂದಿ ಲಿಂಗಣ್ಣ, ನನ್ನ ಹೃದಯವೇನೋ
ಹೇಳಿದರೂ ಕರ್ತವ್ಯ ತೋರಿದ ಪಥದಿಂದ ವಿಮುಖಳಾಗಲಾರೆ.

(ಅದೇ; ಪುಟ ೮೯, ೯೦)

ಎಂದು ಕರ್ತವ್ಯವನ್ನು ಕಾರ್ಯರೂಪಕ್ಕೆ ತರುತ್ತಾಳೆ.

ಲಿಂಗಣ್ಣನ ಮಾನಸಿಕ ಸ್ಥಿತಿಯನ್ನು ತಿಳಿದ ಓಬ್ಬವ್ವ ಎಷ್ಟೋ ವಿಚಾರಗಳನ್ನು ಚರ್ಚಿಸುತ್ತಾ ಸೂಕ್ಷ್ಮತೆಯನ್ನು ಅರಿಯುತ್ತಾಳೆ. ಲಿಂಗಣ್ಣನು ದಿವಂಗತ ನಾಯಕನ ಅಣ್ಣನ ಮಗ ಇವನು ತನಗಿರುವ ಹಕ್ಕನ್ನು ಸ್ಥಾಪಿಸುವ ಛಲ ತೋರಿದ್ದಾರೆ. ನಾಗತಿಗೆ ಕಷ್ಟವಾಗುತ್ತಿತ್ತೇನೋ. ಸಭೆಯಲ್ಲಿ ಲಿಂಗಣ್ಣನಾಡುವ ಮಾತುಗಳನ್ನು ಕೇಳಿ ಮರುಗುತ್ತಾಳೆ. ನಿನ್ನನು ಹಡೆದ ಹೊಟ್ಟೆ, ನನ್ನದಾಗಲಿಲ್ಲವಲ್ಲಾ ಎಂದು ಚಿಂತಿಸುವಾಗ ಲಿಂಗಣ್ಣನು ಎತ್ತಿ ಬೆಳೆಸಿದ ತೋಳು ನಿನ್ನದು ಎನ್ನುತ್ತಾನೆ. ನಾಗತಿಯ ಮಾತು, ಮಾತೃತ್ವದ ಗಾಂಭೀರ್ಯ ಲಿಂಗಣ್ಣನ ಮೇಲೆ ಅಗಾಧವಾದ ಪ್ರಭಾವವನ್ನು ಬೀರುತ್ತವೆ. ಆತನ ರಾಜ್ಯದ ಆಸೆಯೆಂಬ ಹಿಡಿತದಿಂದ ಬಿಡಿಸುತ್ತದೆ. ಇದೊಂದು ಅಸಾಧಾರಣವಾದ ಸಾಧನೆ ನಾಗತಿಯದು.

ಓಬವ್ವನಾಗತಿಯು ಮುದ್ದಣನಂತಹ ಕ್ರೂರಿ, ಬುದ್ಧಿಶಾಲಿಯೂ ಆದ ದಳವಾಯಿಯ ವಿರೋಧವನ್ನು ಕಟ್ಟಿಕೊಳ್ಳಲು ಅಂಜುವುದಿಲ್ಲ. ದಳವಾಯಿ ಮತ್ತಿತರ ಅಧಿಕಾರವರ್ಗ ಮುಖಂಡರನ್ನು ಒಪ್ಪಿಸಿ, ಓಬಣ್ಣನಾಯಕರನ್ನು ನಾಯಕರನ್ನಾಗಿ ಮಾಡುವ ನಿರ್ಧಾರವನ್ನು ಸಭೆಯಲ್ಲಿ ಚರ್ಚಿಸಿ ಗೆಲ್ಲುತ್ತಾಳೆ. ಓಬಣ್ಣ ನಾಯಕನನ್ನು ಪಟ್ಟಕ್ಕೆ ತಂದ ಗಳಿಗೆಯಿಂದ ಎತ್ತತ್ತಲೋ ಬೀಸುತ್ತಿರುವ ರಾಜಕೀಯದಲ್ಲಿ ನಾಯಕನನ್ನು ಕಾಪಾಡುವುಯದಕ್ಕೆ ಕಸ್ತೂರಿ ರಂಗಪ್ಪನಾಯಕನನ್ನು ಪರೀಕ್ಷಿಸುವ ದೃಶ್ಯ ಅವಳ ರಾಜಕೀಯ ಚಾಣಾಕ್ಷತನಕ್ಕೆ ಕನ್ನಡಿಯಾಗಿದೆ. ಪಟ್ಟಾಭಿಷೇಕ ಮುಗಿದ ಮೇಲೆ ಸೈನಿಕರಲ್ಲಿ ಅಸಮಾಧಾನ ಹೆಚ್ಚಾಗುತ್ತದೆ. ಮುದ್ದಣ್ಣನ ಕಾರಸ್ಥಾನ ಒಂದು ಕಡೆಯಾದರೆ, ಬರಿದಾದ ಬೊಕ್ಕಸ ಮತ್ತೊಂದು ಕಡೆ, ಇಂತಹ ವಿಚಿತ್ರ ಸನ್ನಿವೇಶದಲ್ಲಿ ನಾಗತಿ ತನ್ನ ಸ್ವಂತ ಭಂಡಾರವನ್ನು ಸೈನಿಕರಿಗೆ ಹಂಚಿ ಬಿಡಲು ನಿರ್ಧರಿಸುತ್ತಾಳೆ. ರಾಜಕೀಯ ಚದುರಂಗದಾಟದಲ್ಲಿ ನಾಗತಿ ಒಮ್ಮೆ ಸೋತರೆ ಮತ್ತೊಮ್ಮೆ ಗೆಲ್ಲುತ್ತಾಳೆ. ರಾಜಕೀಯದ ಸಂಚಿನಿಂದಾಗಿ ಓಬಣ್ಣನಾಯಕ ಕೊಲೆಯಾಗುತ್ತಾನೆ. ನಂತರ ನಾಗತಿ ಒಬ್ಬ ಸಾಮಾನ್ಯ ಸ್ತ್ರೀಯಂತೆ ಬಾವಿಗೆ ಹಾರಿ ಪ್ರಾಣತ್ಯಾಗ ಮಾಡಿಕೊಳ್ಳುತ್ತಾಳೆ.

## ಗಿರಿಜೆ

ತ.ರಾ.ಸು. ಅವರು ಗಿರಿಜೆಯ ಪಾತ್ರವನ್ನು ಅತೀ ಕಾಳಜಿವಹಿಸಿ, ತಮ್ಮ ನಾಲ್ಕು ಕಾದಂಬರಿಗಳಲ್ಲಿ ಚಿತ್ರಿಸಿದ್ದಾರೆ. ಗಿರಿಜೆ ಕಲ್ಪಿತ ಪಾತ್ರವಾಗಿ ಸೃಷ್ಟಿಗೊಂಡಿದ್ದಾಳೆ. ಗೋಣೂರಿನ ಹನುವಂತನ ಪೂಜಾರಿ ಭೀಮಯ್ಯನ ಮಗಳು. ಕನ್ಯೆ ಓಬವ್ವ ನಾಗತಿಯರ ದಾಸಿಯಾಗಿದ್ದು, ಅವರ ಪ್ರೀತಿಗೆ ಪಾತ್ರಳಾಗಿದ್ದಾಳೆ. ಸೇನೆಯಲ್ಲಿರುವ ವೀರಣ್ಣನಿಗೆ ಮನಸೋತು ಮದುವೆಗೆ ಒಪ್ಪಿದವಳು. ಕಾದಂಬರಿಯಲ್ಲಿ ಇವಳ ಕರ್ತವ್ಯಪ್ರಜ್ಞೆ ಅನುಪಮವಾದದು. ಓಬಣ್ಣ ನಾಯಕನನ್ನು ರಕ್ಷಿಸಲು ನಾಗತಿ ಇವಳಿಗೆ ಹೇಳಿದಾಗ "ಇಂಥ ಪ್ರಸಂಗದಲ್ಲಿ ಕಾವಲು ಕಾಯಲು ಹೆಣ್ಣಿಗಿಂತ ಬಲಶಾಲಿಯಾದ ಗಂಡು ಮೇಲು" ಎಂದು ಸೂಚಿಸುವಲ್ಲಿ ಅವಳ ಮುಂಧೋರಣೆ ಮೆಚ್ಚುವಂತಹದು, ಸೈನಿಕರು ಒಂದು ಪಟ್ಟಗಾಣಿಕೆಗಾಗಿ ಗಲಾಟೆ ಮಾಡುವಾಗ ಬಿಚ್ಚುಗತ್ತಿ ಹಿಡಿದು ಗಿರಿಜೆ ವೀರ ಸೈನಿಕಳಾಗಿ ಕಾಣಿಸುತ್ತಾಳೆ. ಓಬವ್ವನಾಗತಿಯ ಜೊತೆಗೆ ಸೈನಿಕರ ಎದುರು ಹೋಗಿ ನಿಂತು ಒಬ್ಬ ಸಾಮಾನ್ಯ ಹೆಣ್ಣಾದರೂ ವೀರಾವೇಶ ತುಂಬಿ ಮಾತನಾಡುವಲ್ಲಿ ಅವಳ ಶೌರ್ಯವನ್ನು ಕಂಡು ಸಹೃದಯ ಓದುಗರು ಪುಲಕಿತರಾಗುವರು.

ವೀರಣ್ಣನಲ್ಲಿ ಅವಳಿಗೆ ಪ್ರೀತಿಯಿದ್ದರೂ ತನ್ನ ನಿಷ್ಠೆಗೆ ಸ್ವಾಮಿ ಭಕ್ತಿಗೆ ಆ ಪ್ರೀತಿ ಅಡ್ಡ ಬರುವುದೆಂದು ತಿಳಿದು ಬಂದಾಗ ಅವನಿಂದ ದೂರವಾಗಿರಲು ಇಚ್ಚಿಸುತ್ತಾಳೆ. 'ಸರಿ ಹಾಗಾದರೆ ನಮ್ಮಿಬ್ಬರದೂ ಕವಲುದಾರಿ' ಎಂದು ತಿಳಿಸಿದವಳು. ಇಂಥ ನಿಷ್ಠೆಯ ಸೇವಕ ಸಿಕ್ಕರೂ ದ್ರೋಹಿಗಳ ಜಾಲದಿಂದಾಗಿ ಓಬಣ್ಣ ನಾಯಕನನ್ನು ಉಳಿಸಿಕೊಳ್ಳುವುದು ಸಾಧ್ಯವಾಗುವುದಿಲ್ಲ. ಬಹುಶಃ ಇಂತಹ ಸೇವನಿಷ್ಠ ವರ್ಗದಿಂದಲೇ ರಾಜ ಮನೆತನದ ಉಳಿವು ಇದೆಯೇನೋ ಎನ್ನುವಷ್ಟು ಖಚಿತವಾಗಿ ಕಾಣಿಸಿಗುವ ಪಾತ್ರ ಗಿರಿಜೆಯದು.

ಗಿರಿಜೆ ಒಲುಮೆಯ ನಲ್ಲನಾದ ವೀರಣ್ಣನ ಸಾವಿಗೆ ಕಾರಣನಾದ, ಓಬವ್ವ ನಾಗತಿಯನ್ನು ದುರ್ಮರಣಕ್ಕೀಡುಮಾಡಿದ, ಮೇಲಾಗಿ ದುಷ್ಟನಾದ ಮುದ್ದಣ್ಣನ ಸಂಹಾರಕ್ಕಾಗಿ ಹುಚ್ಚಿಯಂತೆ ಕಂಡು ಬರುತ್ತಾಳೆ. ಕರ್ತವ್ಯನಿಷ್ಠೆ, ಸ್ವಾಮಿಭಕ್ತಿ, ದೇಶಪ್ರೇಮ ದುಷ್ಟದಮನದ ಆದಮ್ಯ ಉತ್ಸಾಹದಿಂದ ಪರಿಪೂರ್ಣತೆಯಿಂದ ಕೂಡಿದ್ದಾಗಿದೆ.

ದುರ್ಗದಲ್ಲಿ ದಳವಾಯಿಗಳಿಂದ ನಡೆದ ಹತ್ಯಾಕಾಂಡದಲ್ಲಿ ಇಬ್ಬರೂ ಒಂದೊಂದು ವಿರೋಧ ಗುಂಪಿನ ಸೇವಕರು. ವೀರಣ್ಣ ತಾನು ಮುಂದೆ ದಳವಾಯಿಯಾಗಬಹುದು ಎಂದು ಮುದ್ದಣ್ಣನ ಗುಂಪಿಗೆ ಸೇರಿದವನು. ಗಿರಿಜೆ ಓಬವ್ವ ನಾಗತಿಯರ ಖಾಸಾ ಊಳಿಗದಾಳು. ಸ್ವಾಮಿಭಕ್ತ ನಾಗತಿಯರ ಅಂತರಂಗದ ಸಮಾಚಾರವನ್ನು ಗುಪ್ತವಾಗಿ ತಿಳಿದುಕೊಳ್ಳಬೇಕೆಂಬ ಮುದ್ದಣ್ಣನ ಸಲಹೆಯಂತೆ ವೀರಣ್ಣ ಗಿರಿಜೆಯನ್ನು ಕೇಳಿದಾಗ, ಎಲ್ಲವನ್ನು ತಿಳಿದರೂ ಗಿರಿಜಾ.

> "ಅರಮನೆಯೋರು ಅನ್ನ ಇಡುವ ಧಣಿಗಳು, ದೊಡ್ಡೋರ ಸುದ್ದಿ ನಮಗೇಕೆ ಹೇಳು, ನಾವು ಮಾಡೋದು ಪರಿಚಾರಿಕೆಯ ಕೆಲಸ. ನಮ್ಮ ಚಾಕರಿ ನಾವು

ನೋಡಿಕೊಂಡು ಹೋದರೆ ಸಾಲದೆ? ಕಬ್ಬಿಣ ಹೊಡಿಯೋ ಹತ್ತಿರ ನೊಣಕ್ಕೇನು ಕೆಲಸ" "ಊಳಿಗದ ಹೆಣ್ಣು ನನಗೇಕೆ ಆ ಮಾತೆಲ್ಲಾ"

(ತರಾಸು; ೧೯೫೩; ಪು. ೧೧೯ ಮತ್ತು ೨೩೮)

ಎಂದು ಅರಮನೆಯ ವಿಷಯ ಚರ್ಚಿಸಲೇಬಾರದು ಎಂಬ ಧ್ವನಿಯಲ್ಲಿ ಹೇಳಿ ಬಿಡುತ್ತಾಳೆ. ಆದರೆ ಇಲ್ಲಿ ಪ್ರೇಮ ಹಾಗೂ ಕರ್ತವ್ಯನಿಷ್ಠೆಯ ದ್ವಂದ್ವವಿದೆ. ಪ್ರೇಮದ ಹುಚ್ಚುಹೊಳೆಯಲ್ಲಿ ಕರ್ತವ್ಯ ಪ್ರಜ್ಞೆ ಮರೆಮಾಚಿ ಹೋಗುವುದೇನೋ ನಿಜ, ಆದರೆ ಗಿರಿಜೆಗೆ ಕರ್ತವ್ಯದಿಂದಿರುವುದೇ ಮುಖ್ಯ. ಉಳಿದೆಲ್ಲವೂ ತೃಣಸಮಾನ, ಕರ್ತವ್ಯದ ಬೆಲೆಯ ಮುಂದೆ ಯಾವ ದಾಕ್ಷಿಣ್ಯವೂ ನಿಲ್ಲದು ಎನ್ನುವ ಒಂದು ಚಿರಂತನ ಮೌಲ್ಯ ಈ ಪಾತ್ರದಲ್ಲಿ ಕಾಣಸಿಗುವುದು.

ಕಂಬನಿಯ ಕುಯಿಲಿನಲ್ಲಿ, ಸೌಮ್ಯ, ಸುಂದರಳಾಗಿ ಕಂಡ ಗಿರಿಜೆ ಮುಂದಿನ ರಾಜ್ಯದಾಹ, ರಕ್ತರಾತ್ರಿ, ತಿರುಗುಬಾಣ ಕಾದಂಬರಿಗಳಲ್ಲಿ ಕ್ರಮೇಣ ಉಗ್ರರೂಪವಾಗಿ ಕಾಣಸಿಗುತ್ತಾಳೆ. ದಳವಾಯಿ ಮುದ್ದಣ್ಣನ ಮೇಲೆ ಅವಳ ದ್ವೇಷ ಪ್ರೀತಿಯ ವೀರಣ್ಣನ ಸಾವು, ಓಬವ್ವ ನಾಗತಿಯ ಸಾವು ಅವಳ ದ್ವೇಷಕ್ಕೆ ಮೊದಲ ಹೆಜ್ಜೆಯಾದರೆ, ಸಾಲುನಾಯಕರ ಕೊಲೆ, ದುರ್ಗದ ಮುಗ್ಧರ ಕೊಲೆಯನ್ನು ಕಂಡು, ಅವಳ ದ್ವೇಷ ಇನ್ನುಷ್ಟು ಗಟ್ಟಿಕೊಳ್ಳುವಂತಾಗುತ್ತದೆ. ನಾಗತಿಯ ನೆರಳು ಎಂದೂ, ಹುಚ್ಚಿಯೆಂದೂ ಹುಚ್ಚಿ ಗಿರಿಜವ್ವಯೆಂದೂ, ದುಷ್ಟ ಮುದ್ದಣ್ಣನ ಹಾಗೂ ಆತನ ಸಹೋದರರ ಕೊಲೆಗಾಗಿ, ಮುದ್ದಣ್ಣನ ವಿರುದ್ಧ ಪ್ರಬಲವಾದ ಗುಂಪು ಕಟ್ಟುವಲ್ಲಿ ಯಶಸ್ವಿಯಾಗುತ್ತಾಳೆ.

"ನಾವು ಗಂಡಸರಾದರೆ ಹ್ಞೂ ಎನ್ನಿ, ಇಲ್ಲವಾದರೆ ಕೈಗೆ ಬಳೆ ಇಟ್ಟು ಇಟ್ಟುಕೊಂಡು, ನಾವು ಹೆಂಗಸರು, ಗಂಡಸರನ್ನು ಬೇರೆಕಡೆ ಹುಡುಕಿ ಎಂದು ಹೇಳಿ" (ತರಾಸು; ೧೯೬೪; ಪು. ೧೧೦)

ಎಂದು ಮಲ್ಲಭಟ್ಟರ ಹಳ್ಳಿಯ ಗೌಡನಿಗೆ ಮಾತನಾಡುತ್ತ ದಳವಾಯಿಯ ವಿರುದ್ಧ ಗೌಡರನ್ನೆಲ್ಲ ಎತ್ತು ಕಟ್ಟುವಳು. ವೀರಣ್ಣ ಸಾವಿನಂಚಿನಲ್ಲಿ ನಿಂತು ಗಿರಿಜೆಯಿಂದ ಮುದ್ದಣ್ಣನ ನಾಶದ ಭಾಷೆ ತೆಗೆದುಕೊಂಡು ಸಾಯುತ್ತಾನೆ. ಆಗಿನ ಗಿರಿಜೆಯ ದುಃಖವನ್ನು ಲೇಖಕರೇ ಹೇಳುವಂತೆ "ಅಪ್ಪಯ್ಯ ನನಗಾದದ್ದೆಲ್ಲ ಮರಕ್ಕೆ ಬಂದಿದ್ರೆ ಅದು ಸುಟ್ಟು ಬೂದಿಯಾಗೋದು ನನ್ನದು ಭಂಡ ಜೀವ. ಅದಕ್ಕೆ ಇನ್ನೂ ಉಳಿದಿದೆ" (ತರಾಸು; ೧೯೬೬; ಪು. ೧೦) ಎನ್ನುತ್ತಾಳೆ. ಇಲ್ಲಿ ಗಿರಿಜೆಯ ಮನೋವೇದನೆಯನ್ನು ಕಾಣಬಹುದು.

ಗಿರಿಜೆಯ ವ್ಯಕ್ತಿತ್ವದಲ್ಲಿ ನಮಗೆ ಕಂಡು ಬರುವ ಕ್ರೂರ ಕೋಪದ ಭಾವನೆಗಳು "ಸುಮಾರು ಹನ್ನೆರಡು ವರ್ಷಗಳಿಂದಲೂ ಸೇಡನ್ನು ತೀರಿಸಿಕೊಳ್ಳುವುದಕ್ಕಾಗಿ ಕಾದಿರುವ ಹೆಣ್ಣು (ಕಸ್ತೂರಿ ನಾಯಕನ ಕತ್ತಿಯನ್ನು ೧೨ ವರ್ಷಗಳವರೆಗೆ ತನ್ನ ಬಳಿಯಲ್ಲಿಯೇ ಇಟ್ಟುಕೊಂಡಿರುವ ಹೆಣ್ಣು. ಕಸ್ತೂರಿ ನಾಯಕ ತನ್ನನ್ನೇ ತಾನು ಹಂತಕನ್ನಾಗಿ ಮಾಡಿಕೊಂಡ ಕತ್ತಿ ಅದು) ಲಿಂಗಣ್ಣನಾಯಕನಿಗೆ ತನ್ನ ಬಳಿಯಿದ್ದ ಆ ಕತ್ತಿಯನ್ನು ಒಪ್ಪಿಸುತ್ತಾಳೆ. ಮುದ್ದಣ್ಣನ ವಿರುದ್ಧ ಈಗ ಸೇಡು ತೀರಿಸಿಕೊಳ್ಳಲು

ಲಿಂಗಣ್ಣ ನಾಯಕನನ್ನು ಬಳಸಿಕೊಳ್ಳುತ್ತಾಳೆ" (ಶ್ರೀಶೈಲ ಆರಾಧ್ಯ (ಸಂ); ೧೯೮೪; ಪು. ೨೩೯). ಈ ರೀತಿ ದಾಸಿಯಾಗಿದ್ದ ಗಿರಿಜೆ ಹುಚ್ಚಿಯಾಗಿ ದಳವಾಯಿಗಳ ವಿರುದ್ಧ ಸೇಡನ್ನು ತೀರಿಸಿಕೊಳ್ಳಲು ಸಮಯ ಕಾಯುತ್ತಿದ್ದಳು. ಇಂತಹ ಕಡೆಯಲ್ಲೆಲ್ಲಾ ಗಿರಿಜೆ ಬಗ್ಗೆ. ಕರುಣೆ ಭಾವರಸಗಳಾಗಿ ಒಂದರ ಹಿಂದೆ ಒಂದು ಬಂದು ಮನಸ್ಸನ್ನು ಸೆರೆಹಿಡಿಯುತ್ತವೆ. "ಕಂಬನಿಯ ಕುಯಿಲು, ರಕ್ತರಾತ್ರಿಗೆ ಎಡೆಕೊಡುತ್ತದೆ. ಕಂಬನಿಯನ್ನು ಸುರಿಸಿದವರೇ ರಕ್ತವನ್ನು ಹರಿಸಬೇಕಾದುದು ಅನಿವಾರ್ಯವಾಗಿ ಬಿಟ್ಟದ್ದು. ದುರ್ಗದ ದೌರ್ಭಾಗ್ಯ ಕಂಬನಿಯನ್ನು ತಡೆದು ರಕ್ತ ಹರಿಸಿದವರ ರಕ್ತವನ್ನು ಕುಡಿಯಲು ನಾಗತಿಯ ನೆರಳಾಗಿ ಗಿರಿಜೆ ಹಗಲಿರುಳು ಅಲೆಯುವುದನ್ನು ಕಾಣುತ್ತೇವೆ. (ತರಾಸು; ೧೯೬೫; ಪು. ೧೧೫)

ಗಿರಿಜೆ ಲಿಂಗಣ್ಣ ನಾಯಕನಲ್ಲಿ ಸುಪ್ತವಾಗಿದ್ದ ಕ್ರೋಧವನ್ನು ಉದ್ದೀಪಿಸಿ ಸಿಂಹಾಸನಕ್ಕೇರಬೇಕೆಂಬ ನಿರ್ಧಾರ ಮೂಡಿಸುತ್ತಾಳೆ. ಸಾಮಾನ್ಯ ದಾಸಿಯಾಗಿದ್ದ ಇವಳಲ್ಲಿ ರೊಚ್ಚು, ಕೆಚ್ಚು ತುಂಬಿದ ದಳವಾಯಿಗಳ ವಿರುದ್ಧ ದುರ್ಗದ ಸುತ್ತಮುತ್ತಲ ಹಳ್ಳಿಗಳಿಂದಲೂ ಜನತೆಯನ್ನು ಎತ್ತಿಕಟ್ಟಿ ಯುದ್ಧಕ್ಕೆ ಸಜ್ಜುಗೊಳಿಸುತ್ತಾಳೆ. ನಾಯಕರ ಬಗ್ಗೆ ಜನತೆಯಲ್ಲಿ ಅಭಿಮಾನ ಮೂಡಿಸುತ್ತಾಳೆ. 'ಮತ್ತೆ– ನಾನು ನಾಗತಿಯ ನೆರಳು ದಳವಾಯಿಯ ತಲೆಯನ್ನು ಬೇಟೆಯಾಡ ಹೊರಟ ಹೆಣ್ಣು ಹುಲಿ' (ತರಾಸು; ೧೮೬೪; ಪು. ೨೩) ಎಂದು ಹೊರಟ ಗಿರಿಜೆ ಕೊನೆಗೆ ರಾಯಣ್ಣನನ್ನು ಹಿಡಿದು ಚಿಕ್ಕಣ್ಣನನ್ನು ಬಂಧಿಸಿ, ಇದು ನನ್ನ ಬೇಟೆಯೆಂದು ಮುದ್ದಣ್ಣನ ಕೈ ಕತ್ತರಿಸಿ, ಅವರೆಲ್ಲರನ್ನು ಚಿರತೆಯ ಬಾಯಿಗೆ ನೀಡಿ, ಹುಣಸೆಯ ಮರಕ್ಕೆ ಆ ಶವಗಳನ್ನು ನೇಣು ಹಾಕಿ ಹದ್ದು ಕಾಗೆಗಳಿಗೆ ಆಹಾರವಾಗಿಸುತ್ತಾಳೆ. ಇಲ್ಲಿಗೆ ತನ್ನ ಕಾರ್ಯ ಮುಗಿಯಿತು ಎಂದು ಉಗ್ರ ಚನ್ನವೀರ ಸ್ವಾಮಿಗಳೊಂದಿಗೆ ಹೋಗುವ ಗಿರಿಜೆಯ ಪಾತ್ರ ಭಯಾನಕವಾಗಿ ಕಂಡರೂ ಅದ್ಭುತ. 'ಹೆಣ್ಣು ಒಲಿದರೆ ನಾರಿ ಮುನಿದರೆ ಮಾರಿ' ಎಂಬ ಮಾತನ್ನು ಯಥಾವತ್ತಾಗಿ ಪ್ರತಿನಿಧಿಸುತ್ತದೆ ಈ ಪಾತ್ರ.

ಸಮಯ ಸ್ಫೂರ್ತಿ ಬೆಂಬಲದಿಂದ ಮುದ್ದಣ್ಣನ ಕೈಗೆ ಸಿಗದಂತೆ ತಪ್ಪಿಸಿಕೊಳ್ಳುವ ಗಿರಿಜೆ, ಭರಮಣ್ಣ ಮೊದಲಾದವರೂ ನಿಬ್ಬೆರಗಾಗುವಂತಹ ತಂತ್ರಗಳನ್ನು ಹೂಡಿ ವಿಜಯಶಾಲಿಯಾಗುತ್ತಾಳೆ. ಗಿರಿಜೆಯ ರಕ್ತದಾಹವನ್ನು ಕಂಡು ಭರಮಣ್ಣನಿಗೆ ಕೂಡ ಗಿರಿಜೆಯ ಮನ ಪರಿವರ್ತಿಸಲು ಆಗುವುದಿಲ್ಲ. ಮುದ್ದಣ್ಣನ ಕಿರಾತ ಕಾರ್ಯಗಳ ವಿರುದ್ಧ ಗಿರಿಜೆ ಉಗ್ರರೂಪ ತಾಳುತ್ತಾಳೆ. ನನ್ನದು ಒಂದು ತಲೆಯ ಸೇಡಲ್ಲ ಹತ್ತು ತಲೆಯ ಸೇಡು ಎಂದು ಅಬ್ಬರಿಸುತ್ತಾಳೆ. ಈ ರೀತಿ ಹೆಣ್ಣು ಚಾಮುಂಡಿಯಾದುದನ್ನು ಕಂಡು ಎಲ್ಲರೂ ಮೂಕವಿಸ್ಮಿತರಾಗುತ್ತಾರೆ. ಉಗ್ರಚನ್ನ ವೀರಸ್ವಾಮಿಗಳು ಸಹ ಅಸಹಾಯಕತೆಯನ್ನು ವ್ಯಕ್ತಪಡಿಸುತ್ತಾರೆ. ಆದರೆ ಗಿರಿಜೆಯ ಆತ್ಮಾರ್ಪಣೆಯನ್ನು ತಡೆಯುತ್ತಾರೆ.

ಒಟ್ಟಿನಲ್ಲಿ ಗಿರಿಜೆ ನಾಲ್ಕು ಕಾದಂಬರಿಗಳ ಒಂದು ಕೊಂಡಿಯಂತೆ ಕೇಂದ್ರ ವ್ಯಕ್ತಿಯಾಗಿದ್ದಾಳೆ. ಅವಳು ನಿಷ್ಠಾವಂತ ಸೇವಕಿಯಾಗಿ ಒಲುಮೆಯ ಸ್ತ್ರೀಯಾಗಿ, ದೀರ್ಘ ಪ್ರಯತ್ನವಾದಿಯಾಗಿ ತನ್ನ ಸಾಹಸ ಧೈರ್ಯಗಳನ್ನವಡಿಸಿಕೊಂಡು ಗುರಿ ತಲುಪುವಲ್ಲಿ ಯಶಸ್ವಿಯಾಗುತ್ತಾಳೆ. ಹೆಣ್ಣು

ಮನಸ್ಸು ಮಾಡಿದರೆ ಎಂಥವರನ್ನೂ ಪಾತಾಳಕ್ಕಟ್ಟಬಹುದು ಎಂಬುದನ್ನು ಗಿರಿಜೆ ತೋರಿಸಿ ಕೊಟ್ಟಿದ್ದಾಳೆ. ಕಾದಂಬರಿಯಲ್ಲಿ ಗಿರಿಜೆಯ ಪಾತ್ರ ಕೆಲವು ಅಸಹಜ, ಸನ್ನಿವೇಶ ಘಟನೆಗಳನ್ನೊಳ ಗೊಂಡಿದ್ದರೂ ಬಹುಕಾಲ ಉಳಿಯುವ ಪಾತ್ರವಾಗಿದೆ.

**ಮಲ್ಲವ್ವನಾಗತಿ**

ರಕ್ತರಾತ್ರಿ ಕಾದಂಬರಿಯಲ್ಲಿ ಮೂಡಿಬರುವ ಮಲ್ಲವ್ವ ನಾಗತಿಯ ಪಾತ್ರ ಪ್ರಮುಖವಾದದ್ದು. ಇವಳು ಚಿಕ್ಕಣ್ಣನಾಯಕನ ಮಡದಿ; ಉಗ್ರಚನ್ನವೀರ ಸ್ವಾಮಿಗಳ ಪರಮಭಕ್ತೆ. ಮಲ್ಲವ್ವನಾಗತಿಯ ಅನಿವಾರ್ಯ ಪರಿಸ್ಥಿತಿ ಅವಳಲ್ಲಿ ಕ್ರೋಧವನ್ನು ಉದ್ದೇಶಿಸಿತ್ತು. ಚಿಕ್ಕಣ್ಣನಾಯಕನು ಶಿವದೀಕ್ಷೆ ಪಡೆದಾಗ ಈಕೆಯು ದೀಕ್ಷೆ ಪಡೆದು ಶಿವಭಕ್ತಳಾಗುತ್ತಾಳೆ. ತನ್ನ ಚಂಚಲತೆಯಿಂದ ಚಿಕ್ಕಣ್ಣ ನಾಯಕ ಅದನ್ನು ತ್ಯಜಿಸುತ್ತಾನೆ. ಆದರೆ ಹಟ್ಟಿಮಲ್ಲವ್ವನಾಗತಿ ಮಾತ್ರ ಶ್ರದ್ಧೆಯಿಂದ ಸ್ವೀಕರಿಸಿದ ಶಿವದೀಕ್ಷೆಯನ್ನು ತ್ಯಜಿಸದೆ ವೀರಶೈವಳಾಗಿಯೇ ಉಳಿಯುತ್ತಾಳೆ (ತರಾಸು; ೧೯೬೫; ಪು. ೧೪೮). ಇದರಿಂದ ಚಿಕ್ಕಣ್ಣನಾಯಕರ ಮುನಿಸಿನಿಂದ ಅರಮನೆಗೆ ಬೇಡವಾಗಿ ಗುರುಮನೆಗೆ ಸಮೀಪಳಾದವಳು. ಚಿಕ್ಕಣ್ಣನಾಯಕರ ಮರಣಾನಂತರದಲ್ಲಿ ಅವರ ಮುಖ್ಯ ರಾಣಿಯರೆಲ್ಲ ಸಹಗಮನ ಮಾಡಿದರೂ ಮಲ್ಲವ್ವನಾಗತಿ ಹಾಗೇ ಉಳಿದುಕೊಂಡಿದ್ದಳು. ಲಿಂಗಣ್ಣ ನಾಯಕರನ್ನು ಪಟ್ಟಕ್ಕೆ ತರುವಾಗ, ಮಲ್ಲವ್ವನಾಗತಿ ದತ್ತು ಸ್ವೀಕಾರ ಕಾರ್ಯಕ್ಕೆ ಮುಂದುಮಾಡಿ ಎಲ್ಲರೂ ಕೇಳಲು ಹೋದಾಗ, 'ತನಗೂ ಅದಕ್ಕೂ ಏನು ಸಂಬಂಧ' ಎಂದು ಹೇಳುವಲ್ಲಿ ರಾಜಕೀಯಕ್ಕೂ ತನಗೂ ಏನೂ ಸಂಬಂಧವಿಲ್ಲವೆಂಬುದನ್ನು ಸೂಚಿಸುವಲ್ಲಿ ಅವಳ ಮನೋವ್ಯಥೆ ಅರ್ಥವಾಗುತ್ತದೆ. ಆದರೂ ಗುರುಗಳ ಹಾಗೂ ಪರಶುರಾಮಪ್ಪ ಹಾಗೂ ಭರಮಣ್ಣರ ಒತ್ತಾಸೆಗೆ ಒಲಿದು ಮುದ್ದಣ್ಣನಿಗೆ ಲಿಂಗಣ್ಣ ನಾಯಕರನ್ನೇ ನಾಯಕರನ್ನಾಗಿಸಬೇಕು ಎಂದು ಹೇಳುವಳು. ಇಷ್ಟು ದಿನಗಳಿಂದ ಕಾಣದ ಮರ್ಯಾದೆ ತನಗೆ ಸಿಕ್ಕಂತೆ ಅವಳಿಗನಿಸುವುದು. ಕಾದಂಬರಿಕಾರರು ದುರ್ಬಲ ಮನಸ್ಸಿನ ಸಹಜಸ್ಥಿತಿಯನ್ನು ಈ ಪಾತ್ರದ ಮೂಲಕ ಚಿತ್ರಿಸಿದ್ದಾರೆ. ಕೆಲಸ ತೀರಿದ ನಂತರ ಯಾರೂ ಅವಳನ್ನು ಮತ್ತೆ ಕಾಣದೇ ಇರುವುದರಿಂದ ಅವಳ ಆಶೆಗೆ ತುಕ್ಕು ಹಿಡಿಯುವುದು.

ಮುಂದೆ ಲಿಂಗಣ್ಣನ ವಿವಾಹ ವಿಷಯ ಬಂದಾಗ ನಾಗತಿ ತುಂಬಾ ಕೋಪಿಸಿಕೊಳ್ಳುತ್ತಾಳೆ. ಏಕೆಂದರೆ ಆ ಸಮಯದಲ್ಲಿ ನಾಗತಿಯನ್ನು ನೇರವಾಗಿ ಮಾತನಾಡಿಸದೆ ಗುರುಗಳ ಮೂಲಕ ಮಾತನಾಡಿಸಲು ಪ್ರಯತ್ನಿಸುತ್ತಾರೆ. ಒಂದೆಡೆ ಮಲ್ಲವ್ವನಾಗತಿ ತನ್ನ ಕಡೆಯ ಹುಡುಗಿಯೊಬ್ಬಳನ್ನು ತಂದು ಲಿಂಗಣ್ಣ ನಾಯಕರಿಗೆ ಮದುವೆ ಮಾಡಿದರೆ, ಆಗಲಾದರೂ ನಾನು ಅರಮನೆಯಲ್ಲಿ ಮತ್ತೆ ನಾಗತಿಯಾಗಿ ಹಿರಿತನದಿಂದ ಮೆರೆಯಬಹುದೆಂದು ಬಯಸುವಳು. ಸ್ವಾರ್ಥ ಬಯಕೆ ಇವಳನ್ನೂ ಬಿಡಲಿಲ್ಲವಲ್ಲಾ ಎಂದೆನಿಸುತ್ತದೆ. ಆದರೂ ಉಗ್ರಚನ್ನವೀರ ಸ್ವಾಮಿಗಳ ಉಪದೇಶ ಅವಳ ಕಣ್ಣನ್ನು ತೆರೆಯಿಸುವುದು. ಮುದ್ದಣ್ಣ ಲಿಂಗಣ್ಣ ನಾಯಕರ ಸಾವಿನ ನಂತರ ದೊಣ್ಣೆ ರಂಗಪ್ಪನಾಯಕನಲ್ಲಿ ದತ್ತು ಸ್ವೀಕರಿಸಿ ಪಟ್ಟಕ್ಕೆ ತರಬೇಕೆಂದು ಕೇಳಿಕೊಂಡಾಗ ಮಲ್ಲವ್ವ ನಾಗತಿ, ಉಭಯ ಸಂಕಟದಲ್ಲಿ ನರಳುತ್ತಾ ಕೊನೆಗೆ ವಿಷಪಾನ ಮಾಡಿ ದೇಹತ್ಯಾಗ ಮಾಡುವಳು.

ನಾಗತಿ ಬದುಕಿನಿಂದ ವಂಚಿತಳು, ದುರ್ಬಲ ಮನಸ್ಸಿನವಳು. ಯಾವುದನ್ನೂ ಧೈರ್ಯವಾಗಿ ಎದುರಿಸುವ ಶಕ್ತಿಯಿಲ್ಲದ ಇವಳು ಆತ್ಮಹತ್ಯೆ ಮಾಡಿಕೊಳ್ಳುವ ಪಾತ್ರವಾಗಿ ಚಿತ್ರಿತಕೊಂಡಿದ್ದಾಳೆ. 'ಆತ್ಮಹತ್ಯೆ ಹೇಡಿಗಳ ಲಕ್ಷಣ'ವೆಂದು ಕರೆಯಬಹುದು. ಆದರೆ ದುಷ್ಪರ ಹಿಂಸೆಗೆ ಒಳಗಾಗುವುದಕ್ಕಿಂತ ಸಾವೇ ಸರಿಯಾಗಿರಬಹುದು ಎಂದೆನಿಸುತ್ತದೆ ಎಂಬುವುದು ಈ ಪಾತ್ರದಿಂದ ಕಂಡುಕೊಳ್ಳ ಬಹುದಾಗಿದೆ.

ಮಲ್ಲವ್ವ ನಾಗತಿ ರಾಜಕಾರಣದಲ್ಲೂ ಮುಂದೆ ಬರದೆ, ಧಾರ್ಮಿಕವಾಗಿಯೂ ಹೆಚ್ಚಿನದನ್ನು ಸಾಧಿಸದೆ ಬದುಕೇ ಭಾರವಾಗಿ ಯಾತನೆಯನ್ನು ಅನುಭವಿಸುತ್ತಾಳೆ. ನಯ, ವಿನಯ ಭಕ್ತಿಭಾವನೆಗಳನ್ನು ಹೊಂದಿರುವ ನಾಗತಿಯ ಪಾತ್ರ ಮೊದಮೊದಲು ಸಪ್ಪೆಯಾಗಿ, ಮುಂದೆ ಸ್ವಾರ್ಥದ ಲೇಪನ ಹೊಂದಿ ಜೀವನದಲ್ಲಿನ ಜಿಗುಪ್ಸೆಯಿಂದಾಗಿ ಸಾವನ್ನು ಕಾಣುತ್ತಾಳೆ.

ಓಬವ್ವನಾಗತಿ, ಮಲ್ಲವ್ವನಾಗತಿ ಒಂದೇ ರೂಪದಲ್ಲಿ ಕಂಡರೂ ಇಬ್ಬರಲ್ಲೂ ತುಂಬ ಹೋಲಿಕೆ ಇದೆ. ಇಬ್ಬರೂ ಇನ್ನೊಬ್ಬರ ಪ್ರಚೋದನೆಯಿಂದಲೇ ರಾಜಕೀಯಕ್ಕಿಳಿದವರು. ರಾಜಕೀಯ ಏರುಪೇರುಗಳನ್ನಾಗಲಿ, ಸೂಕ್ಷ್ಮತೆಯನ್ನಾಗಲಿ ಇಬ್ಬರೂ ತಿಳಿಯದವರು; ಅಂತೆಯೇ ಅಲಿಪ್ತತೆಯು ಇಬ್ಬರನ್ನು ಆವರಿಸಿದೆ. ಕೊನೆಯಲ್ಲಿ ಇಬ್ಬರೂ ಆತ್ಮಹತ್ಯೆ ಮಾಡಿಕೊಳ್ಳುವರು. ಒಬ್ಬಳು ಹೊಂಡ ಹಾರಿದರೆ, ಇನ್ನೊಬ್ಬಳು ವಿಷ ಸೇವನೆ ಮಾಡುವಳು. ಹೀಗೆ ಇಬ್ಬರಲ್ಲೂ ಕೆಲವೊಂದು ಅಂಶಗಳಲ್ಲಿ ಸಾಮ್ಯವನ್ನು ಕಾಣಬಹುದಾಗಿದೆ. ಇವರ ಮುಗ್ಧತೆ ಹಾಗೂ ಪ್ರಾಣಾರ್ಪಣೆ ಈ ಎರಡರಿಂದ ಮನಸ್ಸಿನಲ್ಲಿ ಕೆಲವು ಕಾಲ ಉಳಿಯುವ ಪಾತ್ರಗಳು.

**ಗಂಗವ್ವ**

ಗೇಣೂರಿನ ಕಸ್ತೂರಿ ನಾಯಕನ ಮಡದಿ ಗಂಗವ್ವ ಅಸಾಮಾನ್ಯ ಹೆಣ್ಣು. ಸಮರತೆಯುಳ್ಳ ದಾಂಪತ್ಯ ಜೀವನ ಇವರದು. ರಾಜಕಾರಣದ ಸೆಳೆತಕ್ಕೆ ಸಿಕ್ಕ ಕಸ್ತೂರಿನಾಯಕ ಮನೆಮಠಗಳನ್ನೆಲ್ಲಾ ಮರೆಯುತ್ತಾನೆ. ಗಂಗವ್ವ ತುಂಬಾ ಜವಾಬ್ದಾರಿಯಿಂದ ನಡೆದುಕೊಳ್ಳುತ್ತಾಳೆ. ಆದರ್ಶ ಪತ್ನಿಯಷ್ಟೇ ಅಲ್ಲ ಸೊಸೆ, ಅತ್ತಿಗೆ ಎಲ್ಲವೂ ಆಗಿದ್ದಳು. ಪಾಪನಾಯಕ ತನ್ನ ಸೊಸೆಯನ್ನು ದೇವತೆಯೆಂದು ತಿಳಿದಿದ್ದ. ತನ್ನ ಕುಟುಂಬದ ಪುರುಷರು ದಾರಿತಪ್ಪಿದಾಗ ಸರಿದಾರಿಗೆ ತರುವ ಪ್ರಯತ್ನವನ್ನು ಹೆಣ್ಣಾದವಳು ಮಾಡಬೇಕು. ಅದೇ ಕೆಲಸವನ್ನಿಲ್ಲಿ ಗಂಗವ್ವ ಮಾಡುವುದು. ಪ್ರೇಮ, ವಾತ್ಸಲ್ಯ, ಮಾನವೀಯತೆಗಳನ್ನೆಲ್ಲಾ ಪರುಷರಲ್ಲಿ ಬಿತ್ತಿದವಳು ಗಂಗವ್ವ

ಗಂಗವ್ವ ಅಂದಿನ ಸಮಾಜದಲ್ಲಿ ಶ್ರೇಷ್ಠ ಆದರ್ಶ ಗೃಹಿಣಿಯಂತೆ ಕಾಣುತ್ತಾಳೆ. ಸಾಮಾನ್ಯ ಮನೆತನದ ಸ್ತ್ರೀಯಾದರೂ ಗಂಡನು ಬರುವವರೆಗೆ ಊಟ ಮಾಡದೇ ದಾರಿ ಕಾಯುವುದು, ಮೈದುನ ವೀರಣ್ಣ, ಮಾವ ಪಾಪಯ್ಯನನ್ನು ಆತ್ಮೀಯತೆಯಿಂದ ಕಾಣುವುದು ಈ ಎಲ್ಲ ಗುಣಗಳು ಗಂಗವ್ವನ ಪಾತ್ರವನ್ನು ಎತ್ತರಕ್ಕೊಯ್ಯುತ್ತವೆ.

ಒಟ್ಟಾರೆಯಾಗಿ ಈ ನಾಲ್ಕು ಕಾದಂಬರಿಗಳಲ್ಲಿ ಕಂಡುಬರುವ ಸ್ತ್ರೀ ಪಾತ್ರಗಳು ತಮ್ಮದೇ ಆದ ಗುಣ-ಮೌಲ್ಯಗಳಿಗೆ ಮಾದರಿಯಾಗಿವೆ. ಕೆಲವು ಪಾತ್ರಗಳು ಅಧಿಕಾರ ಹೊಂದಿರುವ

ಪಾತ್ರಗಳಾದರೆ ಇನ್ನೂ ಕೆಲವು ಸಾಮಾನ್ಯ ಆದರ್ಶ ಮಹಿಳೆಯ ಪಾತ್ರಗಳಾಗಿವೆ. ಅಲ್ಲದೆ ದೇಶ ರಕ್ಷಣೆಗಾಗಿ ಪ್ರಾಣವನ್ನೇ ಬಲಿದಾನ ಮಾಡಿದ ರೋಷ, ಆವೇಶದ ಪಾತ್ರಗಳು ಜನರಲ್ಲಿ ರಾಷ್ಟ್ರದ ಬಗ್ಗೆ ಅಭಿಮಾನ ಮೂಡಿಸುವ ಉದ್ದೇಶದಿಂದ ತರಾಸು ಅವರು ಭಿನ್ನ ನೆಲೆಯ ಸ್ತ್ರೀಯರ ಪಾತ್ರ ಚಿತ್ರಣವನ್ನು ತಮ್ಮ ಕಾದಂಬರಿಗಳಲ್ಲಿ ಸೃಷ್ಟಿಸಿದ್ದಾರೆ.

### ೪.೨.೧. ಗಣಿಕಾ ಸ್ತ್ರೀಯರು

ಸಮಾಜದ ದೃಷ್ಟಿಯಲ್ಲಿ ಗಣಿಕೆ ಕೇವಲ ಭೋಗದ ವಸ್ತು. ರಾಜನ ಅಂತಃಪುರವನ್ನು ಸೇರಿದಾಗಲೇ ತೌರಿನೊಡನೆ ಸಂಬಂಧವನ್ನು ಕಳೆದುಕೊಳ್ಳುವಳು. ತೌರಿನಲ್ಲಿ ಅವಳಿಗೆ ಸ್ಥಾನವಿಲ್ಲ. ಭ್ರಷ್ಟೆ ಬಹಿಷ್ಕೃತಳಾಗುತ್ತಾಳೆ. ಆದರೆ ರಾಜರು ಶಾಸ್ತ್ರೋಕ್ತವಾಗಿ ಗಣಿಕೆಯನ್ನು ಮದುವೆಯದಾದರೆ ಅಂಥವಳು ಈ ಕಳಂಕದಿಂದ ಮುಕ್ತಳಾಗುವಳು. ಗಣಿಕೆಯರಿಗೆ ತಾವು ಮೆಚ್ಚದವರನ್ನು ಕೂಡುವ ಸ್ವಾತಂತ್ರ್ಯವೂ ಇರುವುದಿಲ್ಲ. ರಾಜನ ಅಂತಃಪುರವನ್ನು ತ್ಯಜಿಸಿ ಬಂದಂಥ ಗಣಿಕೆಯರಿಗೆ ನಾನಾ ರೀತಿ ಶಿಕ್ಷೆಗಳನ್ನು ವಿಧಿಸಲಾಗುತ್ತಿತ್ತು.

ಗಣಿಕೆಯರು ಚಿತ್ರ ವಿಚಿತ್ರ ಕೇಶವಿನ್ಯಾಸ, ರಂಗಿನ ತುಟಗಳು, ಬಣ್ಣ ಹಾಕಿದ ಉಗುರುಗಳು, ನಿರಾಜಿ ಸೀರೆ ಕುಪ್ಪಸಗಳನ್ನು ಉಡುತ್ತಿದ್ದರು. ಜರತಾರಿ ಹೂಗಳ ಹಸಿರು ಬಣ್ಣದ ಕೌಶಿ ಪೀತಾಂಬರ ನರ್ತಕಿಯ ಚಲ್ಲಣವಾಗಿತ್ತು. ಅದಕ್ಕೊಪ್ಪುವ ಹಳದಿಯ ಎದೆಕಟ್ಟು, ತಿಳಿ ನೀಲಿಬಣ್ಣದ ತೆಳುವಾದ ಅಂಗವಸ್ತ್ರ ಆಕೆಯ ತೆಳ್ಳನೆಯ ದೇಹವನ್ನು ಅಲಂಕರಿಸಿ ಏರು ತಗ್ಗುಗಳನ್ನು ಸ್ಫುಟಗೊಳಿಸಿದ್ದವು. ಗಣಿಕೆಯರು ಎಷ್ಟೇ ವೈಭವವಾದ ಜೀವನವನ್ನು ನಡೆಸುತ್ತಿದ್ದರೂ ತಮ್ಮ ಕಳಂಕಯುಕ್ತವಾದ ಜನ್ಮದಿಂದ ಸದಾ ಕೀಳರಿಮೆಯನ್ನು ಅನುಭವಿಸುತ್ತಿದ್ದರು.

ಗಂಗರಾಜ ದುರ್ವಿನೀತನ ಕಾಲದಿಂದಲೂ ಗಣಿಕಾ ಪದ್ಧತಿಯು ಪ್ರಚಲಿತದಲ್ಲಿದೆ. ಸುಂದರ ತರುಣಿ ರಾಜನ ಕಣ್ಣಿಗೆ, ಬಿದ್ದರೆ ರಾಜನು ಅವಳನ್ನು ಇಷ್ಟಪಟ್ಟರೆ, ಆ ಕನ್ಯೆಯನ್ನು ಸಕಲ ಮರ್ಯಾದೆಗಳೊಡನೆ ರಾಜನ ಅಂತಃಪುರಕ್ಕೆ ಕರೆತರುತ್ತಿದ್ದರು. ರೂಢಿಯಂತೆ ಕನ್ಯಾಪಿತನಿಗೆ ಕೊಡಬೇಕಾದ ಶುಲ್ಕಗಳನ್ನು ಕೊಟ್ಟು ಅವಳನ್ನು ತನ್ನ ಅಂತಃಪುರವಾಸಿನಿಯನ್ನಾಗಿಸುವನು. ಇಂತಹವರನ್ನು ಗಣಿಕಾಸ್ತ್ರೀಯರೆನ್ನುವರು.

### ಬಕುಳೆ

ಬಿ. ಪುಟ್ಟಸ್ವಾಮಿಯ ಅವರ 'ದ್ವಾಸುಪರ್ಣ' ಕಾದಂಬರಿಯು ಗಂಗರಾಜ ದುರ್ವಿನೀತನ ಅನಂತರ ರಾಜ್ಯಭಾರ ಮಾಡಿದ ಕಾಂತಾವಿನೀತ ಮುಷ್ಕರದೇವನ ಜೀವನದ, ಆಡಳಿತದ ಕೊನೆಯ ಭಾಗವನ್ನು ಸಾಹಿತ್ಯ, ಸಂಸ್ಕೃತಿ, ರಾಜಕೀಯ, ಪ್ರಣಯ, ಜೀವನ, ಗಣಿಕಾ ವೃತ್ತಿ, ಈ ಎಲ್ಲ ವಿಷಯಗಳ ಹಿನ್ನೆಲೆಯಲ್ಲಿ ಬಕುಳೆಯ ಬದುಕಿನ ನಿರೂಪಣೆಯ ಮೂಲಕ ಚಿತ್ರಿಸುವ ಪ್ರಯತ್ನ ಮಾಡಿರುವ ಕೃತಿಯಾಗಿದೆ.

ಕಾದಂಬರಿಯ ಕಥಾವಸ್ತು ಪ್ರಮುಖವಾಗಿ ಮೂರು ಎಳೆಗಳಲ್ಲಿ ಕಾಣಿಸಿಕೊಳ್ಳುತ್ತದೆ. ಒಂದು ಬಕುಳೆಯ ವೈಯಕ್ತಿಕ ಜೀವನ, ಎರಡು ಬಕುಳೆಯ ಜೀವನದ ಮೇಲೆ ಪ್ರಭಾವ, ಪರಿಣಾಮ

ಬೀರಿದ ಪ್ರಣಯ ಹಾಗೂ ಗಣಿಕಾ ಜೀವನದ ರೀತಿನೀತಿಗಳು. ಮೂರು, ಗಣಿಕೆಯರ ಜೀವನದ ಹಿನ್ನೆಲೆಯಲ್ಲಿಯೇ ಹದಗೆಡಲಾರಂಭಿಸಿ ಉಂಟಾಗುತ್ತಿರುವ ರಾಜಕೀಯ ಸ್ಥಿತ್ಯಂತರಗಳು. ಈ ಮೂರು ಅಂಶಗಳನ್ನು ಕಾದಂಬರಿಯು ಹಿಡಿದಿಡುತ್ತದೆ.

ಕಣಗಾಲು ದುರ್ಗದ ಸಾಮಂತ ರವಿಚಂದ್ರನ ಮಗಳು ಕುಲೀನ ಕನ್ಯೆ ಬಕುಳೆ ತನ್ನ ಲೋಕೋತ್ತರ ಚೆಲುವಿನಿಂದ ಮುಷ್ಕರದೇವನ ಅಂತಃಪುರವಾಸಿನಿಯಾಗಿ ರಾಜ ಪರಿವಾರದ ನಾನೂರು ಗಣಿಕಾ ಸ್ತ್ರೀಯರಲ್ಲಿ ಒಬ್ಬಳಾಗಿಬಿಟ್ಟಿರುವ ವಿಚಾರದೊಂದಿಗೆ ಕಾದಂಬರಿಯ ಕ್ರಿಯೆ ಆರಂಭವಾಗುತ್ತದೆ. ಮುಷ್ಕರದೇವನ ಮನಃಕ್ಲೇಶಹರಿಸಲು ಕಾರಣವಾಗುವಂಥ ಕವಿತಾ ರಚನೆಗೆ ಸ್ಫೂರ್ತಿಯೆಂದು ಗುರುತಾದ ಸಂದರ್ಭ ಬಕುಳೆಯ ಜೀವನದೊಂದಿಗೆ ಕಾದಂಬರಿಯ ಕ್ರಿಯೆಗೂ ಒಂದು ಪ್ರಮುಖ ತಿರುವನ್ನುಂಟುಮಾಡುತ್ತದೆ. ಆಗಿನ ರಾಜಕೀಯ ಮತ್ತು ಸಾಮಾಜಿಕ ವ್ಯವಸ್ಥೆಯ ಒಂದು ಭಾಗವಾಗಿದ್ದ ಗಣಿಕಾ ಸಂಸ್ಥೆ ಮತ್ತು ಗಣಿಕೆಯರ ಜೀವನ ರಾಜಕೀಯದ ಆಗುಹೋಗುಗಳಲ್ಲಿ ಹಾಸುಹೊಕ್ಕಾಗಿದ್ದ ಸಂದರ್ಭವನ್ನೂ ಕಾದಂಬರಿ ಚಿತ್ರಿಸುತ್ತದೆ. ನೇರವಾದ ಮತ್ತು ಸ್ಪಷ್ಟವಾದ ಪಾತ್ರವನ್ನು ಗಣಿಕಾ ಪಾತ್ರಗಳು ವಹಿಸುತ್ತದೆ.

ಕಾದಂಬರಿಯಲ್ಲಿ ಮೂಡಿಬರುವ ಪ್ರಣಯ ಸಂಬಂಧಗಳು ಪ್ರಮುಖವಾಗುತ್ತವೆ. ಮಾನವತಿ - ಮುಷ್ಕರ, ಬಕುಳೆ - ಮುಷ್ಕರದೇವ, ಬಕುಳೆ - ಪಶುಪತಿ, ಪಶುಪತಿ - ಮಾನವತಿ, ಮಾನವತಿ - ಹರಿವರ್ಮ, ಪಶುಪತಿ-ನಯವಿಕೆ ಹೀಗೆ ಪ್ರಣಯ ಸಂಬಂಧಗಳು ಹಲವು ಮುಖಗಳಲ್ಲಿ, ಹಲವು ರೂಪಗಳಲ್ಲಿ ವ್ಯಕ್ತವಾಗುತ್ತವೆ. ಗಣಿಕಾ ಜೀವನ ಗಣಿಕೆಯರೆಂದು ಗುರುತಿಸಲ್ಪಟ್ಟ ಹೆಣ್ಣು ಮಕ್ಕಳು ಇಲ್ಲಿ ಕಾದಂಬರಿಯ ಆಗು - ಹೋಗುಗಳನ್ನು ನಿಯಂತ್ರಿಸಿ ನಿರ್ಣಾಯಕ ತೀರ್ಪುಗಳನ್ನು ಕೊಡುತ್ತಾರೆ.

ಬಕುಳೆಯ ವೈಯುಕ್ತಿಕ ಜೀವನದ ಮೂಲಕವೇ ಕಾದಂಬರಿ ಆರಂಭವಾಗುತ್ತದೆ. ಆರಂಭದಲ್ಲಿಯೇ ಗ್ರಹಿಕೆಗೆ ಒಳಪಡುವ ಅವಳ ಏಕಾಂಗಿತನ ತೀವ್ರ ದುಃಖ ಹಾಗೂ ಗಾಢ ವಿಷಾದಗಳಿಂದ ಕೂಡಿದಂತಹುದು. ದಂಡಿಯ ಕಾವ್ಯಕ್ಕೆ ಸ್ಫೂರ್ತಿಯಾಗಿ, ಗಂಗರಾಜನೊಡನೆ ಏರ್ಪಡುವ ಅವಳ ಸಂಬಂಧ ಬಿಡುಗಡೆ - ಬಂಧನಗಳ ಮಟ್ಟದಲ್ಲಿಯೇ ಉಳಿದುಕೊಳ್ಳದೆ, ಬಕುಳೆಯ ಬದುಕಿನ ದ್ವಂದ್ವಕ್ಕೆ ಕಾರಣವಾಗುತ್ತದೆ. ಬಕುಳೆಯ ದ್ವಂದ್ವ ಮೂರ್ತರೂಪ ಪಡೆದುಕೊಳ್ಳುವುದು ಪಶುಪತಿಯ ಭೇಟಿ ಹಾಗೂ ಅವಳಲ್ಲಿ ಆತ ವ್ಯಕ್ತಪಡಿಸಿದ ಅನುರಾಗದಿಂದ. ಒಲ್ಲದ ಗಣಿಕೆಯ ಜೀವನದಿಂದ ವಿಮುಖಳಾಗಲು ಬದುಕನ್ನೇ ನಿರಾಕರಿಸಲು ಹೊರಟ ಬಕುಳೆ, ಪಶುಪತಿಯ ಮೇಲಿನ ಆಕರ್ಷಣೆಯ ಕಾರಣವಾಗಿಯೇ ಬದುಕನ್ನು ಸ್ವೀಕರಿಸುವ ನಿಲುವಿಗೆ ಮತ್ತೆ ಬರುತ್ತಾಳೆ. ಅದರ ಜೊತೆಗೆ ಬಕುಳೆಯ ದ್ವಂದ್ವವೂ ಗಾಢವಾಗಿ ಅನಾವರಣ ವಾಗುತ್ತದೆ. ಗೃಹಿಣಿ; ಗಣಿಕೆ, ಮನೆ; ಅಂತಃಪುರ, ಪಶುಪತಿ; ಮುಷ್ಕರದೇವ ಅವಳ ದ್ವಂದ್ವದ ಮೂಲ ವಸ್ತುಗಳು. ಇವುಗಳ ದ್ವಂದ್ವಕ್ಕೆ ಒಳಗಾಗುವ ಆಕೆಯ ಮನಸ್ಸಿನ ತೋಳಲಾಟವನ್ನು ಕಾಣಬಹುದು.

ಬಕುಳೆಯ ಬದುಕಿನ ಮೇಲೆ ಪರಿಣಾಮ ಬೀರಿ ತಿರುವು ಕೊಡುವ ಎರಡನೆಯ ಅಂಶವೆಂದರೆ, ಗಂಗರಾಜ್ಯದ ಮೇಲೆ ಕದಂಬ ಹರಿವರ್ಮ ನಡೆಸಿದ ಆಕ್ರಮಣ. ಈ ಆಕ್ರಮಣವನ್ನು

ಎದುರಿಸದೆ ಪ್ರತಿಭಟನೆಯ ಹಾದಿ ಹಿಡಿದು ಸುಮ್ಮನೆ ಕುಳಿತ ಗಂಗಸೈನ್ಯ ಅದರ ಪರಿಣಾಮವಾಗಿ ರಾಜಧಾನಿ ಬಿಟ್ಟು ತಪ್ಪಿಸಿಕೊಳ್ಳಲು ಹೊರಟ ಮಾನವತಿ ಮತ್ತು ಮುಷ್ಕರರ ಆಗಮನಗಳು ಬರುತ್ತವೆ.

ಮಾನವತಿಯ ಪಾತ್ರಕ್ಕೆ ಸಂಪೂರ್ಣ ವೈದೃಶ್ಯವಾಗಿ ಬರುವಂತಹದು ಬಕುಳೆಯ ಪಾತ್ರ. ಕಾದಂಬರಿ ಕ್ರಿಯೆಯ ಆರಂಭದಲ್ಲಿಯೇ ಪ್ರವೇಶ ಮಾಡುವ ಬಕುಳೆಯ ಪಾತ್ರ ಕಾದಂಬರಿಯ ಬೆಳವಣಿಗೆಯ ಜೊತೆಗೆ ಬೆಳೆಯುತ್ತಾ ಸಾಗುವ ವಿಕಾಸಶೀಲ ಪಾತ್ರವಾಗಿದೆ. ಲೋಕೋತ್ತರ ಸೌಂದರ್ಯಕ್ಕೆ ತನ್ನಿಂದ ಕೇಡಾಗಬಾರದೆಂದು ಚಿಂತಿಸುವ ಮುಗ್ಧತೆ, ಸೂಕ್ಷ್ಮ ಪ್ರಕೃತಿ ಈ ಮೂರನ್ನು ಮುಖ್ಯ ಪರಿಕರಗಳನ್ನಾಗಿರಿಸಿಕೊಂಡು ಲೇಖಕರು ಬಕುಳೆಯ ಪಾತ್ರ ರಚನೆಯ ಕಾರ್ಯನಿರ್ವಹಣೆ ಮಾಡಿದ್ದಾರೆ.

ಮುಷ್ಕರದೇವನ ಅಂತಃಪುರದ ಹೆಗ್ಗಡೆ ಸುಂದರಪಾಂಡ್ಯನು ಕಾರ್ಯಾರ್ಥಿಯಾಗಿ ಅರಮನೆಯ ಉದ್ಯಾನಕ್ಕೆ ಒಂದಾಗ ಬಕುಳೆ ಅಶೋಕವನದಲ್ಲಿ ಏಕಾಂಗಿಯಾಗಿ ಚಿಂತಿಸುತ್ತಾ, ಕುಳಿತ್ತಿದ್ದಳು. ಹೆತ್ತವರ ಮುಖಗಳನ್ನು ಮನಸ್ಸಿನಲ್ಲಿ ಸ್ಪಷ್ಟವಾಗಿ ಕಲ್ಪಿಸಿಕೊಳ್ಳುವುದು ನನಗೇಕೆ ಸಾಧ್ಯವಾಗುತ್ತಿಲ್ಲ? ತಂದೆಯನ್ನು ನೆನೆದಾಗ ಸುಂದರಪಾಂಡ್ಯನ ಮುಖ ಎದುರಿಗೆ ನಿಲ್ಲುವುದು. ಕೆಂಪು, ಹಳದಿ ವರ್ತುಲಗಳ ನಡುವೆ ಚಲಿಸಿ ತಾಯಿಯ ಮೇಲೆ ಅಸ್ಫುಟವಾಗುವುದು. ಈ ಅಸಮರ್ಥತೆಯ ಕಾರಣವೇನು? ಎಂಬುದು ಈಗ ಅವಳ ಚಿಂತೆಯಾಗಿತ್ತು. ಕಾವಲು ಸರದಿ ಮುಗಿಯಿತು. ಬಕುಳೆ ಸೈನಿಕರ ಇನ್ನೊಂದು ತುಕಡಿ ಅರಮನೆಯ ಪಹರೆಗಾಗಿ ಬಂದಿದೆ. ಶೃತಿ ತಪ್ಪಿದ ವೀಣೆಯ ಝೇಂಕಾರದಂತೆ ಸುಂದರಪಾಂಡ್ಯನ ನುಡಿಗಳು ಚಿಂತೆಯ ತೆರೆಯನ್ನು ಭೇದಿಸಿ ಬಕುಳೆಯನ್ನು ಎಚ್ಚರಗೊಳಿಸಿದುವು.

ಬಕುಳೆ ಉತ್ತರ ಕೊಡದಿರುವುದನ್ನು ಕಂಡು ಸುಂದರ ಪಾಂಡ್ಯ ಆ ತೆಳು ದೇಹದ ಚೆಲುವನ್ನು ವಾತ್ಸಲ್ಯದ ದೃಷ್ಟಿಯಿಂದ ನಿಟ್ಟಿಸಿ ಅನುಕಂಪದ ದನಿಯಿಂದ, "ನೀನು ಯಾವಾಗಲೂ ಒಂಟಿಯಾಗಿರುವಿಯೇ ಬಕುಳಾ? ಎಂದು ಪ್ರಶ್ನಿಸಿದನು. ಉದ್ಯಾನದ ಬೇರೆ ಕಡೆಗಳಿಂದ ಅಂತಃಪುರವಾಸಿನಿಯರ ಕೂಗಾಟ, ನಲಿದಾಟಗಳು ನದಿಯ ಕಲರವದೊಡನೆ ಬೆರೆತು ಅಶೋಕವನದ ಆ ಪ್ರದೇಶದಲ್ಲಿ ಅಸ್ಫುಟವಾಗಿ ಕೇಳಿಬರುತ್ತಿತ್ತು" (ವೇದಾ ಎಂ.ಎಸ್; ೧೯೭೨; ಪು. ೪೮೬). ಇದನ್ನು ಕೇಳಿದ ಸುಂದರಪಾಂಡ್ಯ ಅವರಂತೆ ನೀನೇಕೇ ಇಲ್ಲ ಬಕುಳ ಎಂದಾಗ 'ನಾನು ಏಕಾಂತವನ್ನು ಬಯಸುತ್ತೇನೆ' ಎನ್ನುತ್ತಾಳೆ.

ಕುಲೀನ ಕನ್ಯೆಯಾಗಿಯೂ ಗಣಿಕೆಯ ಜೀವಕ್ಕೆ ಬೀಳಬೇಕಾದ ಬಕುಳೆಯ ಜೀವನ ವಿಭಿನ್ನವಾದುದು. ಕರ್ಮವನ್ನು ನಂಬಿ ಹೇಳುವುದಾದರೆ ವಿಧಿ ಕೃತವಾದುದು. ಗಣಿಕೆ ಗೃಹಿಣಿ ಅಂತಃಪುರ ಮನೆ ಗಂಗರಾಜ ಪಶುಪತಿ ಈ ಪ್ರಮುಖ ವಿಷಯಗಳ ನೆಲೆಗಟ್ಟಿನ ಮೇಲೆ ರೂಪುಗೊಂಡದ್ದು. ಗಣಿಕೆಯ ಜೀವನಕ್ಕೆ ಬಕುಳೆ ಪ್ರವೇಶ ಮಾಡಲು ಅವಳ ಲೋಕೋತ್ತರ ಚೆಲುವು, ತಂದೆಯ ಅಸಹಾಯಕತೆ, ಮುಷ್ಕರನ ಅಹಂ ಮುಂತಾದ ವಿಚಾರಗಳು ಕಾರಣವಾಗಿವೆ. ಪಶುಪತಿಯ ಅನುರಾಗಕ್ಕೆ ಒಳಗಾದ ಕಾಲದಿಂದ ಅವಳ ದ್ವಂದ್ವ ಸ್ಪಷ್ಟವಾಗುತ್ತದೆ.

ಹರಿವರ್ಮನ ಆಕ್ರಮಣದ ಪರಿಣಾಮ, ವಿದ್ಯಮಾನಗಳ ಕಾರಣವಾಗಿ ಮತ್ತೆ, ತಾಯಿಯ ಮನೆ ಸೇರುವ ಬಕುಳೆ ದ್ವಂದ್ವದಲ್ಲಿಯೇ ಬದುಕನ್ನು ಸಾಗಿಬೇಕಾಗುತ್ತದೆ. ಈ ಹಂತದಲ್ಲಿ ಅವಳ ದ್ವಂದ್ವ ಗುಣ ಗಾಢವಾಗಿ ಮೂರ್ತರೂಪ ತಾಳುತ್ತದೆ. ಕಣಗಾಲು ದುರ್ಗವನ್ನು ಬಿಡುವಾಗ ಬಕುಳೆ ತನ್ನೊಡನೆ ಬರಬೇಕೆ, ಬೇಡವೇ? ಎಂಬ ನಿರ್ಣಯಕ್ಕೆ ಇರುವ ವಿಷಯವನ್ನು ಬಕುಳೆಗೆ ಬಿಟ್ಟಾಗ ಬಕುಳೆ ಮುಷ್ಕರನನ್ನು ನಿರಾಕರಿಸಿ ಪಶುಪತಿಯ ಅನುರಾಗವನ್ನು ಒಪ್ಪಿಕೊಳ್ಳುವುದರ ಸೂಚನೆಯೊಂದಿಗೆ ಆಕೆ ಏಕತ್ವದ ಕಡೆ ಹೆಜ್ಜೆ ಇಡುತ್ತಾಳೆ. ಹರಿವರ್ಮನ ಕಾರಣವಾಗಿಯೇ ಅವಳ ವ್ಯಕ್ತಿತ್ವ ಮತ್ತೆ ಛಿದ್ರಗೊಳ್ಳುತ್ತದೆ.

ಬಕುಳ ಮಾಲಿಕೆ ತಲವನಪುರದ ರಾಜಾಂತಃಪುರವನ್ನು ಬಿಟ್ಟಾಗ ಇಂತಹ ದ್ವಂದ್ವ ಭಾವನೆ ಅವಳ ಜೀವನದಲ್ಲಿ ಮೊದಲಬಾರಿಗೆ ಉದಯವಾಯಿತು. ತಾನು ಗಂಗರಾಜನ ಅಂತಃಪುರವಾಸಿನಿ ಮಾತ್ರವಲ್ಲವೆಂದೂ, ಅದರಿಂದ ವಿಭಿನ್ನವಾದ ಸ್ವತಂತ್ರವಾದ ವ್ಯಕ್ತಿತ್ವ ತನಗಿದೆಯೆಂದೂ ಅವಳು ಅರಿತುಕೊಳ್ಳುತ್ತಾಳೆ. ಮುಷ್ಕರದೇವರಸರು ಕಣಗಾಲು ದುರ್ಗಕ್ಕೆ ಬಂದ ದಿನ ಈ ದ್ವಂದ್ವ ಭಾವನೆಗಳ ಘರ್ಷಣೆ ಉತ್ಕಟಾವಸ್ಥೆಗೇರಿ ಅಂತಃಪುರವಾಸಿನಿಗೆ ಸಹಜವಾದ ದಾಸ್ಯ ಮನೋಭಾವನೆಗೆ ತತ್ಕಾಲಿಕ ವಿಜಯ ದೂರಕುತ್ತದೆ. ಉದ್ರಿಕ್ತವಾಗಿದ್ದ ಈ ದ್ವಂದ್ವ ಭಾವನೆ ಕಾಲಕ್ರಮದಲ್ಲಿ ಸಹಜಸ್ಥಿತಿಗೆ ಬಂದು ತಾನಾಗಿ ಪರಿಹಾರವಾಗಬಹುದಿತ್ತು. ಆದರೆ ದುರಾದೃಷ್ಟದಿಂದ ಕದಂಬ ಹರಿವರ್ಮನ ದುಷ್ಕೃತ್ಯ ದುರಂತಗಳ ಕರಾಳ ಛಾಯೆ ಮೇಲೆರಗಿ ಅದು ವಿಷಮಾವಸ್ಥೆಗೆರುತ್ತದೆ. ಆದರಿಂದ ತನಗಾದ ಅಸಹ್ಯ ವೇದನೆಯನ್ನು ತಡೆಯಲಾರದೆ ಮೌನವ್ರತವನ್ನು ಆಶ್ರಯಿಸಿ ಜಗತ್ತಿನಿಂದ ದೂರವಾಗಿರಲು ಬಕುಳೆ ಪ್ರಯತ್ನಿಸುತ್ತಾಳೆ. ತನ್ನ ಮನೋವೈಕಲ್ಯದ ಕಾರಣ ಅದು ಬೆಳೆದು ಬಂದ ರೀತಿ ಇವು ಈಗ ಬಕುಳೆಗೆ ಅರಿವಾದಾಗ, ಆ ವಿಚಾರದಲ್ಲಿ ತನಗಿದ್ದ ಲಜ್ಜೆ, ಸಂಕೋಚಗಳನ್ನು ಕಳೆದುಕೊಳ್ಳುತ್ತಾಳೆ. ಇದರಿಂದ ಅವಳಿಗೆ ದೊರೆತಿದ ಮನಸ್ವಾಸ್ಥ್ಯ ಮುಂದೆ ಸ್ಥಿರರೂಪ ತಾಳುತ್ತದೆ.

ಬಕುಳೆಗೆ ಸನ್ಯಾಸಿ ಮಾನಸಿಕ ಚಿಕಿತ್ಸೆ ನೀಡುವ ಸಂದರ್ಭದಲ್ಲಿ ಬಕುಳೆಯ ಬದುಕು ವ್ಯಕ್ತಿತ್ವ ಮನಸ್ಸುಗಳ ಮೇಲೆ ಗಾಢ ಪರಿಣಾಮ ಬೀರುವುದು ಕಾದಂಬರಿಯಲ್ಲಿ ಅದ್ಭುತವಾಗಿ ಮೂಡಿಬಂದಿದೆ.

ಬಕುಳೆಯು ದುಃಖದ ದಿನ ಹೋಗಿ ಒಳ್ಳೆಯ ದಿನಕ್ಕಾಗಿ ಕಾಯುತ್ತಾಳೆ. ಪುಷ್ಪಾಲಂಕೃತವಾಗಿದ್ದ ದೇವಿ ಮೂರ್ತಿಗೆ ಕೈಮುಗಿದು "ಇದನ್ನು ನಾನು ನಂಬಲೆ, ತಾಯಿ? ಪಶುಪತಿಯನ್ನು ಪರಿಗ್ರಹಿಸಿ ಉದ್ಧರಿಸುವನೆ? ಇದುವರೆಗೆ ದುಃಖದ ದುರ್ಗಮ ಪಥದಲ್ಲಿ ನಡೆದು ಬಂದ ನಾನು ಮುಂದಾದರೂ ಸುಖವನ್ನು ಕಾಣುವೆನೆ? ಕಳಂಕ ವಿಮುಕ್ತಯಾಗಿ ಕುಲಧರ್ಮ ಸಮಾಜಗಳಿಂದ ಅಂಗೀಕರಿಸಲ್ಪಡುವನೇ? ಎಂದು ಹಂಬಲದಿಂದ ನುಡಿದಳು. ಆಗ ವಿಗ್ರಹದ ಮುಡಿಯಲ್ಲಿದ್ದ ಎರಡು ಹೂವುಗಳು ಕಳಚಿ ಬಿದ್ದವು. ಬಕುಳ ಓಡಿಹೋಗಿ ಅವುಗಳನ್ನೆತ್ತಿಕೊಂಡು ಒಂದು ಹೂವನ್ನು ಮುಡಿಯಲ್ಲಿ ಧರಿಸಿದಳು. ಇನ್ನೊಂದು ಹೂವನ್ನು ಪಶುಪತಿಗೆ ಕೊಟ್ಟು ಜಗದಾತ್ರಿಯ ಕರುಣೆ ನನಗೆ ರಕ್ಷೆಯಾಗಲಿ, ಪಶುಪತಿ ನೀನು ಎಲ್ಲಿರಲಿ, ಹೇಗಿರಲಿ, ನಿನ್ನ

ಅಭ್ಯುದಯವನ್ನು ಹಾರೈಸುವ ಹೆಣ್ಣೊಬ್ಬಳು ಕಣಗಾಲು ದುರ್ಗದಲ್ಲಿರುವಳೆಂಬುದನ್ನು ಮರೆಯಬೇಡ ಶುಭಾಸ್ತೇ ಸಂಧಾನ ಎಂದಳು" (ಅದೇ; ಪು. ೪೮೯).

ಅಂತ್ಯದಲ್ಲಿ ಬಕುಳೆ ಪಶುಪತಿಯ ಅನುರಾಗದತ್ತಲೇ ಒಲಿದು ಆ ಮೂಲಕ ತನ್ನ ಬದುಕಿನ ಒಳ್ಳೆಯ ದಿನಗಳ ನಿರೀಕ್ಷೆಯಲ್ಲಿ ತನ್ನನ್ನು ತೊಡಗಿಸಿಕೊಂಡ ಬಗೆಯನ್ನು ಈ ಸನ್ನಿವೇಶ ಸುಂದರವಾಗಿ ಚಿತ್ರಿಸುತ್ತದೆ.

ಬಕುಳೆಯ ಪಾತ್ರ ಪ್ರವೇಶದ ಆರಂಭದ ಚಿತ್ರಣ ಹಾಗೂ ಮಾತುಕತೆಗಳ ಮುಖಾಂತರ ಲೇಖಕರು ಆಕೆಯ ಬದುಕನ್ನು ಅನಾವರಣಗೊಳಿಸುತ್ತಾರೆ. ಪ್ರವೇಶಾರಂಭದಲ್ಲಿಯೇ ಅವಳು ಬಯಸುವ ಏಕಾಂಗಿತನ ಅವಳ ಬದುಕಿನಲ್ಲಿ ಬಹುತೇಕ ಸಂದರ್ಭಗಳ ಸ್ಥಾಯಿ ಗುಣವೇ ಆಗಿದೆ. ಅವಳ ಬದುಕಿನ ನೋವು ಯಾತನೆ, ವ್ಯಥೆಗಳೂ ಕಾರಣವಾಗಿರುವುದನ್ನು ಹೃದಯ ಸ್ಪರ್ಶಿಯಾಗಿ ಚಿತ್ರಿಸಿದ್ದಾರೆ. ಬಕುಳೆಯ ಪಾತ್ರದಲ್ಲಿ ಪುಟ್ಟಸ್ವಾಮಿಯ್ಯನವರು 'ದ್ವಂದ್ವವನ್ನು ಒಂದು ಆಶಯವನ್ನಾಗಿ ಬಳಸಿಕೊಳ್ಳುತ್ತಾರೆ. ಗಂಗಾಂತಃಪುರದ ಗಣಿಕೆಯಾಗಿ ಇಚ್ಛೆಯಿಲ್ಲದೆ ಜೀವನ ನಡೆಸಬೇಕಾದ ಬಕುಳೆಯ ಬದುಕಿನ ದ್ವಂದ್ವ ಎಂತಹ ಬಗೆಯದು ಎಂಬುದನ್ನು ಕಾಣಬಹುದು. ದ್ವಂದ್ವಗಳ ನಡುವೆ ತನ್ನನ್ನೇ ಕಳೆದುಕೊಳ್ಳಲೂ ಸಿದ್ಧವಾಗುವ ಬಕುಳೆಯ ಪಾತ್ರದಲ್ಲಿ ಬೇರೆಯವರನ್ನು ನೋಯಿಸಲಿಚ್ಚಿಸದ ಸೂಕ್ಷ್ಮ ಪ್ರವೃತ್ತಿ ಕೆಲಸ ಮಾಡುತ್ತದೆ.

ವೇದನೆಯ ಪರಂಪರೆಯಲ್ಲಿ ರೂಪುಗೊಳ್ಳುತ್ತಾ ಹೋಗುವ ಬಕುಳೆಯ ಪಾತ್ರ ಏರುಪೇರುಗಳ ಮೂಲಕವೇ ಮಹತ್ವ ಪಡೆಯುತ್ತದೆ. ತನಗೆ ಸಂಬಂಧಿಸಿದಂತೆ ನಡೆಯುತ್ತಿರುವ ಅವಸರದ ಘಟನೆಗಳ ಬಗೆಗೆ ಸ್ವಂತಿಕೆಯಿಂದ ಯೋಚಿಸಲು ಆಗದಂತಹ ಬದುಕಿನಲ್ಲಿ ಜಡವಾಗುವ ಎಲ್ಲ ಲಕ್ಷಣಗಳನ್ನು ಹೊಂದಿಯೂ ಪ್ರೀತಿ, ಮಧುರತೆ, ಮಾರ್ದವತೆಗಳನ್ನು ಉಳಿಸಿಕೊಂಡು ಬದುಕುವ ಬಕುಳೆಯ ಪಾತ್ರ ಹೃದಯಂಗಮವಾಗಿ ಮೂಡಿಬಂದಿದೆ.

**ಮಾನವತಿ**

ಬಕುಳೆಯ ಪಾತ್ರಕ್ಕೆ ಭಿನ್ನವಾಗಿ ಮಾನವತಿಯ ಪಾತ್ರ ಕಾದಂಬರಿಯಲ್ಲಿದೆ. ಪಶುವತಿಗಾಗಿ ಕಾಯುತ್ತಾ, ಆಲೋಚಿಸುತ್ತಾ ಕುಳಿತಿರುವ ಮಾನವತಿಯ ಚಿತ್ರಣವನ್ನು ಕೊಡುವುದರ ಮೂಲಕ ಆ ಪಾತ್ರದ ಸ್ವಚ್ಛಂದ ಮತ್ತು ಸ್ವೇಚ್ಛಾ ಪ್ರವೃತ್ತಿಯ ಮುಖವನ್ನು ಬಿ. ಪುಟ್ಟಸ್ವಾಮಯ್ಯನವರು ಕಟ್ಟಿಕೊಡುತ್ತಾರೆ. ಘಟನಾ ಪರಂಪರೆಗಳಿಗೆ ಹೆಚ್ಚು ಪ್ರಾಶಸ್ತ್ಯ ಇರುವ 'ದ್ವಾಸುಪರ್ಣ' ಕಾದಂಬರಿಯಲ್ಲಿ ಪ್ರತಿಯೊಂದು ಪಾತ್ರವೂ ಆ ಘಟನಾ ಪರಂಪರೆಗಳಲ್ಲಿ ವಹಿಸುವ ಪಾತ್ರಗಳಿಂದಾಗಿ ಮಹತ್ತ್ವ ಪಡೆದುಕೊಳ್ಳುತ್ತವೆ. ಮೇಲುನೋಟಕ್ಕೆ ಕಾದಂಬರಿಯಲ್ಲಿ ಮುಷ್ಕರನೇ ನಾಯಕನಾಗಿ ಕಂಡುಬಂದರೂ ವಿಕಾಸ, ಬೆಳವಣಿಗೆಗಳ ದೃಷ್ಟಿಯಿಂದ ಇತರ ಪಾತ್ರಗಳೇ ಹೆಚ್ಚು ಜೀವಂತವಾಗಿ, ಪ್ರಾಮುಖ್ಯತೆ ಗಳಿಸಿಕೊಂಡು ಕಾದಂಬರಿಯ ಕ್ರಿಯೆಯ ಬೆಳವಣಿಗೆಯಲ್ಲಿ ಸಕ್ರಿಯವಾಗಿದ್ದು ಪ್ರಮುಖ ಪಾತ್ರಗಳಾಗುತ್ತವೆ.

ಕಾದಂಬರಿಯ ಬೆಳವಣಿಗೆಯ ದೃಷ್ಟಿಯಿಂದ ನೋಡಿದಾಗ ಮಾನವತಿ ಪ್ರಮುಖ ಪಾತ್ರವಾಗುತ್ತಾಳೆ. ರೂಪ, ಯೌವನಗಳ ಮೂಲವಾದ ದರ್ಪ, ಅಹಂಕಾರಗಳ, ಅಭಿಜ್ಞತೆ

ಅಭಿಸಾರತ್ವಗಳ ಎರಕಹೊಯ್ದ ಮಾನವತಿಯ ಪಾತ್ರ ಕೆಲವೊಮ್ಮೆ ಪ್ರಬುದ್ಧವಾಗಿಯೂ ಕಂಡುಬರುತ್ತದೆ. ಚೆಲ್ಲುತನ-ಪ್ರಬುದ್ಧತೆ, ಸುಖ - ದುಃಖ, ನೋವು - ನಲಿವು, ಕಾಮ - ಪ್ರೇಮ ಈ ಬಗೆಯ ಗುಣವಿಶೇಷಗಳಲ್ಲಿ ಮಾನವತಿಯ ಪಾತ್ರ ಒಂದು ಬಗೆಯ ಸಂಕೀರ್ಣತೆಯನ್ನು ಮೈಗೂಡಿಸಿಕೊಂಡು ಜೀವಂತವಾಗುವ ರೀತಿಯಲ್ಲಿ ಲೇಖಕರು ಮಾನವತಿಯ ಪಾತ್ರವನ್ನು ಸೃಷ್ಟಿಸಿದ್ದಾರೆ.

ಕಾದಂಬರಿಯಲ್ಲಿ ಮಾನವತಿಯ ಪಾತ್ರದ ಪ್ರವೇಶ ಮೊದಲ ಅಧ್ಯಾಯದ ಮೂರನೆಯ ಹಂತದಲ್ಲಿ, ಮುಷ್ಕರನ ಮುಂದೆ ದಂಡಿಯ ಕಾವ್ಯ ಪಠನದ ಸಂದರ್ಭದಲ್ಲಿ ಆಗುತ್ತದೆ. ಆ ಸಂದರ್ಭವನ್ನು ವರ್ಣಿಸುವ ಕೆಲವು ಮಾತುಗಳನ್ನು ಇಲ್ಲಿ ನೋಡಬಹುದು.

“ಗಂಗರಾಜ ಕಾಂತಾವಿನೀತ ಮುಷ್ಕರದೇವನು ವಿಲಾಸಭವನದ ಸಭಾಂಗಣದಲ್ಲಿ ಕೆತ್ತನೆಯ ಭದ್ರಾಸನದಲ್ಲಿ ಆಸೀನನಾಗಿದ್ದನು. ಅವನ ಪ್ರೇಮ ಪತ್ನಿ ಕಾಂಚಿಪುರದ ವಿಖ್ಯಾತ ನರ್ತಕಿ ಮಾನವತಿ ನಾಬೆಯಾರ ಭದ್ರಾಮನದ ಪಾರ್ಶ್ವದ ಕಂಬಕ್ಕೆ ಮೈಯಾನಿಸಿ ತ್ರಿಭಂಗಿಯಲ್ಲಿ ನಿಂತಿದ್ದಳು. ಕಾಂಚೀಪುರದಿಂದ ತನ್ನನ್ನು ಗಂಗ ರಾಜಧಾನಿ ತಲವನಪುರದ ರಾಜಾಂತಃಪುರಕ್ಕೆ ಕರೆತಂದ ನಾಟ್ಯಭಂಗಿಗಳನ್ನು ಅವಳು ಯಾವಾಗಲೂ ಮರೆತವಳಲ್ಲ. ನಿಂತಲ್ಲಿ, ಕುಳಿತಲ್ಲಿ, ನಡೆವಲ್ಲಿ, ನುಡಿವಲ್ಲಿ ಯಾವುದಾದರೊಂದು ನಾಟ್ಯಭಂಗಿಯನ್ನು ಆಧರಿಸಿ, ಅದಕ್ಕನುಗುಣವಾಗಿ ಕೈಕಾಲು ಮುಖಗಳನ್ನು ತಿರುಗಿಸುವುದು ಅವಳ ಅಭ್ಯಾಸವಾಗಿತ್ತು. ಆ ವಿಶಿಷ್ಟ ವರ್ತನೆಯನ್ನು ಕಂಡು ಕೇಳಿದ ಕವಿ ಗಮಕಿ ಗಾಯಕರು ಮಾನವತಿಯನ್ನು ‘ಶಿಲಾರತಿ’ ಎಂದು ಕರೆದದ್ದೂ ಉಂಟು. ಮಾನವತಿ ಪಟ್ಟಾಭಿಷಿಕ್ತೆಯಲ್ಲದಿದ್ದರೂ ಗಂಗ ಅರಮನೆಯಲ್ಲಿ ರಾಣಿಗೆ ಸಲ್ಲುವ ಎಲ್ಲ ಗೌರವ ಸನ್ಮಾನಗಳನ್ನು ಪಡೆದಿದ್ದಳು.

ರಾಜಸಭೆಗೆ ಉಚಿತವಾದ ಶಿಸ್ತು ಸಂಭ್ರಮಗಳಿಂದ ಹೆಗ್ಗಡೆ ಸುಂದರಪಾಂಡ್ಯನು ಆಚಾರ್ಯ ದಂಡಿಯನ್ನು ಸಭೆಗೆ ಕರೆತಂದಾಗ ಸೇವೆಯ ನೆವದಿಂದ ಭದ್ರಾಸನದ ಸುತ್ತ ನಿಂತಿದ್ದ ಗಣಿಕೆಯರ ತಂಡ ಹಿಂದಕ್ಕೆ ಸರಿಯಿತು.

ವಿಜಯೀಭವ ಗಂಗ ಸಾಮ್ರಾಟ್ ಮಹಾರಾಜಾಧಿರಾಜ ಕಾಂತಾವಿನೀತ ಮುಷ್ಕರದೇವ ‘ವಿಜಯೀಭವ’ ಎಂದು ದಂಡಿ ಆಶೀರ್ವಾದ ಮಾಡಲು ಕೈಯೆತ್ತಿದನು. “ಮಾನವತಿ ಒಂದು ಹೆಜ್ಜೆ ಮುಂದೆ ಬಂದು ಭದ್ರಾಸನದ ಮೇಲೆ ಕೈಯಿಟ್ಟು ನಿಂತಳು. ಗಂಗರಾಜನ ಮೇಲೆ ತನ್ನ ಅನೈತಿಕ ಒಡೆತನವನ್ನು ಸಿಂಧುವಾಗಿಸಿ ರಾಜಾಶೀರ್ವಾದದಲ್ಲಿ ತನಗೂ ಪಾಲಿದೆಯೆಂಬುದನ್ನು ಸೂಚಿಸುವುದು ಅವಳ ಉದ್ದೇಶವಾಗಿತ್ತು” (ಅದೇ; ಪು. ೪೮೧-೪೮೨).

ಮಾನವತಿ ಗಣಿಕೆಯಾಗಿದ್ದರೂ ಸಂಗೀತ, ವರ್ತನಗಳಂತೆ ರಾಜಕೀಯದಲ್ಲಿಯೂ ಚತುರೆಯಾಗಿದ್ದಳು. ಹತ್ತು ಮಂದಿ ಕರಣಿಕ ಕಾರ್ಯಕರ್ತದ ಕೆಲಸವನ್ನು ಒಬ್ಬಳೇ ನಿರ್ವಹಿಸ ಬಲ್ಲಂತಹ ಶಕ್ತಿ ಅವಳಲ್ಲಿತ್ತು. ಮಂತ್ರಿ ಸಾಮಂತರ ಮನವಿ ಪತ್ರಗಳನ್ನು ಓದಿಗೊಂಡು ಅದಕ್ಕೆ ಟಿಪ್ಪಣಿ ಬರೆಯುವುದು, ನಿರೂಪಣೆಗಳನ್ನು ಗುರುತಿಸುವುದು, ಮಂಡಲಾಧಿಕಾರಿಗಳ ವಾರ್ಷಿಕ

ಆಯ-ವ್ಯಯಗಳ ಪರಿಶೀಲನೆ ಮುಂತಾದ ರಾಜಕಾರ್ಯದಲ್ಲಿ ಆಪ್ತ ಸಚಿವೆಯಂತೆ ಅವಳು ಮುಷ್ಕರದೇವನಿಗೆ ಸಹಾಯ ಮಾಡುತ್ತಿದ್ದಳು.

"ಮಾನವತಿಯ ಪಾತ್ರ ಕಲೆಯ ಅಪೂರ್ವತೆ, ಅವಳ ವೈಯಕ್ತಿಕ ಜೀವನ, ಅವಳ ಕಾಮ - ಪ್ರೇಮಗಳು ವಿಲಾಸಪ್ರಿಯತೆ, ರೂಪವಂತ ತರುಣರನ್ನು ತನ್ನ ಬಲೆಯಲ್ಲಿ ಹಾಕಿಕೊಳ್ಳುವ ಗುಣಗಳು ಅವುಗಳೇ ಪ್ರಜೆಗಳಿಗೂ ಅವಳಿಗೂ ನಡುವೆ ಕಂದರ ಏರ್ಪಡಿಸಿದ ರೀತಿ ಇತ್ಯಾದಿಗಳೆಲ್ಲಾ ವಿವರವಾಗಿ ಬೆಳೆಯುತ್ತಾ ಹೋಗುತ್ತವೆ. ಮಾನವತಿಯ ಕಾರಣವಾಗಿ ರಾಜ್ಯದಲ್ಲಿ ಏರ್ಪಟ್ಟಿರುವ ಪ್ರತಿಕೂಲ ಪರಿಸ್ಥಿತಿಯನ್ನು ಸರಿಪಡಿಸುವ ಕಾರ್ಯ ಮುಷ್ಕರನಿಗೂ ಸಾಧ್ಯವಿಲ್ಲವಾಗಿದೆ. ರಾಜ್ಯದ ಆಡಳಿತ ಗಣಿಕೆಯರ ಕೈಯ್ಯಲ್ಲಿದೆ ಎಂಬ ಮಾತಿನ ಮೂಲ ಉದ್ದೇಶ, ಗುಣಗಳು ಮಾನವತಿಯ ಪಾತ್ರವನ್ನೇ ಗುರಿಯಾಗಿ ಹೊಂದಿದ್ದು, ಅದು ಅವಳ ರಾಜಕೀಯ ಪ್ರಭಾವವನ್ನು ತಿಳಿಸುತ್ತದೆ" (ಅದೇ; ಪು. ೪೮೨-೪೮೩).

ಮಾನವತಿ ನಾಚಿಯಾರಳ ಪಾತ್ರ ಕಾದಂಬರಿಯಲ್ಲಿ ಪ್ರಥಮವಾಗಿ ಪ್ರವೇಶಿದ ಸಂದರ್ಭ ದಲ್ಲಿಯೇ ಅವಳನ್ನು ಕುರಿತಾದ, ಮುಂದೆ ಗಂಗರಾಜ್ಯದಲ್ಲಿ ಉಂಟಾಗಲಿರುವ ಎಲ್ಲಾ ಅನರ್ಥಗಳಿಗೂ ಕಾರಣಗಳೆಂದು ಆಪಾದಿಸುವ ವಿಷಯಕ್ಕೆ ಪೂರಕವಾದ ಎಲ್ಲಾ ಗುಣಗಳನ್ನು ಕಾದಂಬರಿಕಾರರು ಸೂಕ್ಷ್ಮವಾಗಿ ತಿಳಿಸಿದ್ದಾರೆ.

ಕಾದಂಬರಿಯಲ್ಲಿ ಮೊದಲು ಮಾಡಿದ ಮಾನವತಿಯ ಪಾತ್ರ ಪ್ರವೇಶಕ್ಕೂ ನಂತರದ ಪ್ರವೇಶಕ್ಕೂ ಕೆಲವು ಬಾಹ್ಯ ವ್ಯತ್ಯಾಸಗಳು ಮಾತ್ರ ಕಂಡು ಬರುತ್ತವೆ. ಅಂತರಂಗಿಕವಾಗಿ ಮಾನವತಿಯ ಹುಟ್ಟುಗುಣವಾದ ದರ್ಪ ಅಹಂಕಾರ ಇಲ್ಲಿಯೂ ಇವೆ. ಕದಂಬ ಹರಿವರ್ಮನ ಆಕ್ರಮಣದಿಂದ ತಲವನಪುರದಲ್ಲಿ ಉಂಟಾದ ಸೈನಿಕ ವಿದ್ರೋಹದಲ್ಲಿ ತನ್ನ ಬಂಧುಗಳಿಗಾದ ಕೆಡುಕು ಹಾಗೂ ಅದರಿಂದ ರಕ್ಷಿಸಿಕೊಳ್ಳಲು ರಾಜಧಾನಿ ಬಿಟ್ಟು ಶಿಲ್ಪ ಲಲಿತ ಲಯನ ಕಾವ್ಯಧಾಮಕ್ಕೆ ಅರ್ಧ ರಾತ್ರಿಯಲ್ಲಿ ಬಂದಾಗಲೂ ಸಹ ಆಕೆಯಲ್ಲಿ ಅವೇ ಗುಣಗಳು ಕಂಡುಬರುತ್ತವೆ. ಮಾನವತಿಯ ಸಲಿಗೆ, ಸ್ವಾತಂತ್ರ್ಯ ಸ್ವಚ್ಛಂದತೆ, ಸ್ವೇಚ್ಛಾಚಾರಗಳ ಪರಿಮಿತಿ ಮತ್ತು ಅಪರಿಮಿತಿಗಳೆರಡರ ನಡುವೆಯೂ ಕಣ್ಣು ಮುಚ್ಚಾಲೆಯಾಡುವ ರೀತಿಯಲ್ಲಿ ಮುಂದಿನ ಘಟನೆಗಳು ಕಾದಂಬರಿಯಲ್ಲಿ ಚಿತ್ರಣವಾಗುತ್ತಾ ಹೋಗುತ್ತವೆ. ಈಕೆಯ ಪಾತ್ರವನ್ನು ಕುರಿತಾದ ಪಶುಪತಿಯ ಕುತೂಹಲ ಅವಳ ಸ್ವಚ್ಛಂದ ಪ್ರವೃತ್ತಿಯನ್ನು ಪ್ರತಿಬಿಂಬಿಸಿದರೆ ಸುಂದರ ಪಾಂಡ್ಯನ ಆಲೋಚನೆಗಳು ಅವಳ ಸ್ಥಾನಮಾನ, ರೀತಿನೀತಿಗಳನ್ನು ಪ್ರತಿಬಿಂಬಿಸುತ್ತವೆ. ಮೊದಲ ಬಾರಿ ಕಾದಂಬರಿಯಲ್ಲಿ ಕಾಣಿಸಿಕೊಂಡಾಗಿನ ಮಾನವತಿಗೂ, ಈಗ ಕಾಣಿಸಿಕೊಳ್ಳುವ ಮಾನವತಿಗೂ ಇರುವ ಕೆಲವೇ ಸಣ್ಣಪುಟ್ಟ ವ್ಯತ್ಯಾಸಗಳು ಮುಂದೆ ಅವಳಲ್ಲಿ ಆಗಲಿರುವ ಗಾಢ ಪರಿವರ್ತನೆಗಳಿಗೆ ನಾಂದಿಯಾಗಿ ಬರುವ ಸನ್ನಿವೇಶವನ್ನು ಲೇಖಕರು ಸುಂದರವಾಗಿ ಚಿತ್ರಿಸಿದ್ದಾರೆ.

ಮಾನವತಿಯ ಜೀವನ, ವ್ಯಕ್ತಿತ್ವಗಳಿಗೆ ತಿರುವು ಬಂದು ಆ ಮೂಲಕ ಅವಳ ಪಾತ್ರ ಆತ್ಮವಿಮರ್ಶೆಗೆ ಒಳಗಾಗುವುದು ಬಕುಳೆಯ ತಾಯಿ ಅಕ್ಕಾದೇವಿಯ ಭೇಟಿಯ ಮುಖಾಂತರ. ಇದೇ ವಿಷಯ ಕಾದಂಬರಿ ಕ್ರಿಯೆಗೂ ಒಂದು ಪರೋಕ್ಷ ತಿರುವನ್ನು ಕೊಡುವ ಬಗೆಯನ್ನು

ಗಮನಿಸಬಹುದು. ಅಕ್ಕಾದೇವಿಯ ದರ್ಶನದಿಂದ ಮತ್ತು ಕಣಗಾಲು ದುರ್ಗದ ಕೆಲವೇ ದಿನಗಳ ವಾಸ್ತವ್ಯದಿಂದ ಗಣಿಕೆಯರ ಮತ್ತು ಗೃಹಿಣಿಯರ ನಡುವನ ಅಂತರ ತಿಳಿದ ಮಾನವತಿಯ ಪಾತ್ರ ಆ ಮೂಲಕವೇ ಬಕುಳೆಯನ್ನು ಅನುಕಂಪ ದೃಷ್ಟಿಯಿಂದ ನೋಡುವ ಸಹಾನುಭೂತಿಯನ್ನು ಬೆಳೆಸಿಕೊಳ್ಳುತ್ತದೆ. ಈ ಹಂತದಲ್ಲಿಯೇ ಮಾನವತಿಯ ಪಾತ್ರ ತಾನು ಬದುಕಿದ ಸ್ವಚ್ಛಂದ ಬದುಕನ್ನು ನಿರಾಕರಿಸುತ್ತಾ ಗೃಹಿಣಿಯ ಬದುಕನ್ನು ಎತ್ತಿ ಹಿಡಿಯುತ್ತದೆ. ಅದನ್ನೇ ಬಕುಳೆಗೂ ಬೋಧಿಸುತ್ತದೆ.

ಕಾಮ - ಪ್ರೇಮಗಳನ್ನು ಕುರಿತಾದ ಸ್ವಚ್ಛಂದ-ಸ್ವೇಚ್ಛಾಚಾರ, ವಿಲಾಸ-ವಿಭ್ರಮ ಅಹಂಕಾರದರ್ಪ, ತನಗೊಲಿದವರನ್ನೇ ದುರ್ಬಲಗೊಳಿಸಿ ಗಂಗರಾಜ್ಯದಂತಹ ಒಂದು ಸಾಮ್ರಾಜ್ಯದ ರಾಜಕೀಯ ಸ್ಥಿತಿಗತಿಗಳನ್ನೇ ಬದಲಿಸಿಬಿಡುವ ಬೆಳವಣಿಗೆಗಳನ್ನು ಉಂಟುಮಾಡುವಂತಹ ಗುಣವಿಶೇಷಗಳಿಂದ ಆರಂಭವಾಗುವ ಮಾನವತಿಯ ಪಾತ್ರ ಚಿತ್ರಣ, ಕ್ರಮೇಣ ಈ ಎಲ್ಲ ಗುಣಗಳಿಗೂ ತದ್ವಿರುದ್ಧವಾದ ಮತ್ತೊಂದು ಗುಣವಿಶೇಷಗಳತ್ತ ನಡೆಯುವುದನ್ನು ಕಾದಂಬರಿ ಚಿತ್ರಿಸುತ್ತದೆ. ಬದಲಾದ ಅವಳ ಜೀವನ ನಿಲುವುಗಳು ಅವಳ ಆತ್ಮಹತ್ಯೆಯನ್ನು ಸಹಾನುಭೂತಿಯಿಂದ ನೋಡುವಂತೆ ಮಾಡುತ್ತವೆ. ರೂಪ, ಯೌವನ ಸಹಜ ದರ್ಪ, ಅಹಂಕಾರ ಕಾಮ-ಪ್ರೇಮ ಕುರಿತಾದ ಸ್ವಚ್ಛಂದ ನಿಲುವು, ಮುಷ್ಕರ ಹೇಳುವಂತಹ ರಾಜಕೀಯ ಕೌಶಲ - ಇವುಗಳನ್ನೇ ಮೂಲ ಪರಿಕರಗಳನ್ನಾಗಿ ಹೊಂದಿದ ಮಾನವತಿಯ ಪಾತ್ರ ತನ್ನ ದರ್ಪ, ಅಭಿಜ್ಞತೆ, ಅಭಿಸಾರತ್ವ ಮತ್ತು ಮುಂದೆ ಅದಕ್ಕೆ ವಿರುದ್ಧವಾದ ಗುಣಗಳನ್ನು ಮೈಗೂಡಿಸಿಕೊಳ್ಳುವುದರ ಮೂಲಕವೇ ಹೆಚ್ಚು ಸಂಕೀರ್ಣ ಹಾಗೂ ಜೀವಂತ ಪಾತ್ರವಾಗುತ್ತದೆ.

ಈ ಪ್ರಮುಖ ಪಾತ್ರಗಳಲ್ಲದೆ ಕಾದಂಬರಿ ಕ್ರಿಯೆಯಲ್ಲಿ ಸಕ್ರಿಯ ಪಾತ್ರವಹಿಸುವ ದಂಡಿ ಸುಂದರಪಾಂಡ್ಯ, ನಯನಿಕೆ, ಚಯನಿಕೆ, ಲಲಿತಲಯ ಗವಿಚಂದ್ರ, ಅಕ್ಕಾದೇವಿ, ಈ ಮುಂತಾದ ಹಲವು ಪಾತ್ರಗಳು ಕಾದಂಬರಿಯಲ್ಲಿ ತಮ್ಮ ಸ್ಥಾನಮಾನಗಳನ್ನು ಕಾಯ್ದುಕೊಳ್ಳುವ ರೀತಿಯಲ್ಲಿ ರಚನೆಗೊಂಡಿವೆ. ಕಾದಂಬರಿ ಕ್ರಿಯೆಯಲ್ಲಿ ನೇರವಾಗಿ ಭಾಗಿಯಾಗುವ ಪ್ರಮುಖ ವ್ಯಕ್ತಿಗಳೆಲ್ಲ ದ್ವಂದ್ವದಲ್ಲಿಯೇ ತೊಳಲಾಡಿ ಮುಳುಗೇಳುತ್ತಿರುವವರಾಗಿದ್ದಾರೆ. ಆದರೂ ಏಕತ್ವ ಸಾಧನೆಯತ್ತ ತುಡಿಯುವ ಅವರ ಪ್ರಾಮಾಣಿಕ ಪ್ರಯತ್ನಗಳು, ದ್ವಂದ್ವಗಳನ್ನು ಮಹತ್ವಪೂರ್ಣಗೊಳಿಸುತ್ತವೆ. ಕೆಲವರಲ್ಲಿ ದ್ವಂದ್ವ ಸ್ವಯಂಕೃತ ಅಪರಾಧದಿಂದ ಮೂಡಿದ್ದುದಾದರೆ, ಇನ್ನು ಕೆಲವರಲ್ಲಿ ಅದು ಅವರ ಕೈ ಮೀರಿ ಹೋದ ವಿಧಿಕೃತ ಪರಿಣಾಮವಾಗಿ ಕಂಡು ಬರುತ್ತದೆ. ಕುಲೀನ ಕನ್ಯೆಯಾಗಿಯೂ ರಾಜನ ಕಾಮಾಂಧ ದೃಷ್ಟಿಗೆ ಒಳಗಾದ ಬಕುಳೆಯ ದ್ವಂದ್ವ ವಿಧಿಕೃತವಾದರೆ, ಮುಷ್ಕರನದು ಸ್ವಯಂಕೃತವಾದುದು.

ಮಾನವತಿ ಎಲ್ಲರಂತಲ್ಲ; ಸಂಗೀತ ನರ್ತನಗಳಂತೆ ರಾಜಕೀಯದಲ್ಲಿಯೂ ಚತುರೆ ಯಾಗಿದ್ದವಳು. ಅವಳ ಕಾಮ - ಪ್ರೇಮಗಳ ವಿಲಾಸಪ್ರಿಯತೆಯ ಜೀವನದಲ್ಲಿ ಅಕ್ಕಾದೇವಿಯ ಪ್ರವೇಶದಿಂದ ಕೊನೆಯಲ್ಲಿ ಮನಸ್ಸು ಪರಿವರ್ತನೆಯನ್ನು ಹೊಂದುತ್ತಾಳೆ.

ಒಟ್ಟಿನಲ್ಲಿ ಬಕುಳೆ ಗೃಹಿಣಿಯೂ ಆಗಿರದೆ, ಗಣಿಕೆಯೂ ಆಗಿರದೇ ದ್ವಂದ್ವದಲ್ಲಿ ತನ್ನ ಜೀವನವನ್ನು ಕೊನೆಗೊಳಿಸಿಕೊಂಡರೆ, ಮಾನವತಿ ಅಹಂ, ದರ್ಪ, ರೂಪ ಲಾವಣ್ಯಕ್ಕೆ ತನಗೆ ಬೇಕಾದ ರೀತಿಯಲ್ಲಿ ನಡೆದುಕೊಂಡು ಕೊನೆಯಲ್ಲಿ ಆದರ್ಶ ಮೌಲ್ಯಗಳನ್ನು ಬದುಕಿನಲ್ಲಿ ಅಳವಡಿಸಿಕೊಂಡವಳಂತೆ ಚಿತ್ರಿತಳಾಗಿದ್ದಾಳೆ.

### ೪.೨.೨. ನೇತ್ಯಾತ್ಮಕ ಪಾತ್ರಗಳು

ಕಾದಂಬರಿಗಳಲ್ಲಿ ಕೆಲವು ಪ್ರಧಾನ ಇತ್ಯಾತ್ಮಕ ಪಾತ್ರಗಳಿದ್ದಂತೆ ನೇತ್ಯಾತ್ಮಕ ಪಾತ್ರಗಳು ಇರುತ್ತವೆ. ಸದ್ಗುಣಭರಿತ ಇತ್ಯಾತ್ಮಕ ಪಾತ್ರಗಳು ಅಲ್ಲಿ ಪ್ರಧಾನವಾಗಿದ್ದರೂ ಅಂಥ ಪಾತ್ರಗಳ ಬೆಳವಣಿಗೆಯಲ್ಲಿ ದುರ್ಗುಣಿಗಳೆಂದು ಪರಿಗಣಿಸಲಾಗುವ ಕೆಲವು ನೇತ್ಯಾತ್ಮಕ ಪಾತ್ರಗಳ ಕೊಡುಗೆಯೂ ಇದ್ದೇ ಇರುತ್ತದೆ. ಹಾಗಾಗಿ ಒಟ್ಟಾರೆ ಕಾದಂಬರಿಯ ವಿನ್ಯಾಸದಲ್ಲಿ ಈ ಬಗೆಯ ನೇತ್ಯಾತ್ಮಕ ಪಾತ್ರಗಳಿಗೂ ಅವುಗಳದೇ ಆದ ಮಹತ್ವವಿರುತ್ತದೆ. ಉದಾಹರಣೆಗೆ, ನಾಟ್ಯರಾಣಿ ಶಾಂತಲೆಯ 'ಸವತಿ ಗಂಧವಾರಣಿ' ಎಂಬ ಬಿರುದನ್ನು ಸ್ಫುಟಗೊಳಿಸುವಲ್ಲಿ ನೇತ್ಯಾತ್ಮಕ ವ್ಯಕ್ತಿತ್ವದ ಬಮ್ಮಲೆಯ ಪಾತ್ರ ಸಹಕಾರಿಯಾಗುತ್ತದೆ. ಶಾಂತವ್ವನ ಸೌಮ್ಯ ಸ್ವಭಾವಕ್ಕೆ ಅವಳ ಅತ್ತೆಯಾದ ವೀರಮ್ಮಾಜಿ ಪಾತ್ರ ನೆರವಾಗುತ್ತದೆ. ಕುಮಾರರಾಮನ 'ಪರನಾರಿ ಸಹೋದರ'ನೆಂಬ ಶೌಚ್ಯ ಗುಣವನ್ನು ಎತ್ತಿತೋರಿಸಲು ಮಲತಾಯಿ 'ರತ್ನಾಜಿಯ' ನೇತ್ಯಾತ್ಮಕ ಪಾತ್ರ ನೆರವಾಗುತ್ತದೆ.

### ಬಮ್ಮಲೆ

ಕೆ.ವಿ. ಅಯ್ಯರ್ ಅವರ 'ಶಾಂತಲಾ', ಮ.ನ. ಮೂರ್ತಿ ಅವರ 'ನಾಟ್ಯರಾಣಿ ಶಾಂತಲೆ', ಸಮೇತನಹಳ್ಳಿ ರಾಮರಾಯರ ಸವತಿ ಗಂಧವಾರಣೆ ಕಾದಂಬರಿಗಳಲ್ಲಿ 'ಶಾಂತಲೆಯ ಸವತಿ' ಎಂದು ಗುರುತಿಸಿಕೊಂಡ 'ಬಮ್ಮಲೆ'ಯು ನೇತ್ಯಾತ್ಮಕ ಪಾತ್ರವಾಗಿದೆ. ಬಮ್ಮಲೆಯು ಮದುವೆಯಾದ ಕೆಲದಿನಗಳ ನಂತರ ಶಾಂತಲೆಯ ಬಗ್ಗೆ ತಿರಸ್ಕಾರ ಭಾವನೆಯನ್ನು ಹೊಂದುತ್ತಾಳೆ. ಬಮ್ಮಲೆ ಮಗನಾದ ಬಲ್ಲಾಳನಿಗೆ ಶಾಂತಲೆಯ ಬಗ್ಗೆ ದ್ವೇಷ ಬೆಳೆಯುವಂತೆ ಪೀಠಿಕೆ ಹಾಕುತ್ತಾಳೆ. ದೇವರ ಪೂಜೆಗಾಗಿ ಅಣಿ ಮಾಡಿದ್ದ ಹಣ್ಣುಗಳೆಲ್ಲ ತನಗೆ ಬೇಕೆಂದು ಬಲ್ಲಾಳ ಹಠ ಹಿಡಿಯುತ್ತಾನೆ. ಆಗ ಶಾಂತಲೆ ಮಗುವನ್ನು ಬಲವಾಗಿ ಹಿಡಿಯುವಂತೆ ಪರಿಚಾರಕರಿಗೆ ಹೇಳುತ್ತಾಳೆ. "ಮುಂದೆ ನಾನು ರಾಜನಾಗುತ್ತೇನೆ. ಆಗ ನಾಗವ್ವೆಯನ್ನು ಕಂಬಕ್ಕೆ ಬಿಗಿದು ಚಾವಟಿಯಿಂದ ಹೊಡೆಯುತ್ತೇನೆ" ಎಂದು ರಾಜಕುಮಾರ ಕೂಗಾಡುತ್ತಾನೆ. ಇದರಿಂದ ನೊಂದ ಶಾಂತಲೆ ಚಾವರದ ಹಿಡಿಯಿಂದ ಮಗುವಿಗೆ ಹೊಡೆಯುತ್ತಾಳೆ. ಮಗು ಅಳುತ್ತಾ ಹೆತ್ತ ತಾಯಿಯ ಬಳಿಗೆ ಓಡಿ ಹೋಗುತ್ತದೆ. ಈ ಘಟನೆಯಾದ ಮೇಲೆ ಶಾಂತಲೆ ಹಾಗೂ ಬಮ್ಮಲೆಯ ನಡುವೆ ಬಿರುಕು ಇನ್ನೂ ಹೆಚ್ಚುತ್ತದೆ. ರಾಜನಾಗಬೇಕಾದವನಲ್ಲಿ ಪ್ರತೀಕಾರ ಮೊಳೆಯದಿರಲಿ, ದಯ, ದಾಕ್ಷಿಣ್ಯ ಉಕ್ಕಲಿ ಎಂದು ಶಾಂತಲೆ ದೇವರಲ್ಲಿ ಪ್ರಾರ್ಥಿಸಿದರೆ, ಬಮ್ಮಲೆ ಪ್ರತೀಕಾರವನ್ನೇ ಘೋಷಿಸುತ್ತಾಳೆ. ಸಮಯ ಬಂದಾಗಲೆಲ್ಲ ಶಾಂತಲೆಯ ಬಗ್ಗೆ ಕುಟುಕಲು ಪ್ರಾರಂಭಿಸುತ್ತಾಳೆ.

ಬಮ್ಮಲೆ ಸವತಿ ಮತ್ಸರದಿಂದಾಗಿ "ರಾಜ್ಯಕ್ಕೆ ರಾಜಮನೆತನಕ್ಕೆ ನಮ್ಮ ಉಪಕಾರ ಏನಾಗಿದೆ ಎಂದು ಜನತೆ ನಮ್ಮನ್ನು ಗೌರವಿಸಿಯಾರು? ಮಹಾರಾಜರ ಮನಸ್ಸು ಒಲಿಯುವಂತೆ ನಾವು

ಸಿಂಗರಿಸಿಕೊಂಡು ಕುಣಿಯಲಾರೆವು. ಆ ಹಾವ-ಭಾವ ಬೆಡಗು ಭಿನ್ನಾಣಗಳನ್ನು ನಾವು ತೋರಲಾರೆವು" (ಸಮೇತನಹಳ್ಳಿ ರಾಮರಾಯರು; ೧೯೬೮; ಪು. ೧೭೧) ಎಂದು ಶಾಂತಲೆಯನ್ನು ವ್ಯಂಗ್ಯ ಮಾಡಿ ನೋಯಿಸಿದಳು. ಅವಕಾಶ ಸಿಕ್ಕದಾಗಲೆಲ್ಲ ಅವಳನ್ನು ಸವತಿ ಮತ್ಸರದಿಂದಲೇ ಬಮ್ಮಲೆ ಮಾತನಾಡಿಸುತ್ತಿದ್ದಳು. ಶಾಂತಲೆ ಇವಳನ್ನು ಅರಮನೆಯಿಂದ ಹೊರಹಾಕುವ ಶಕ್ತಿಯಿದ್ದರೂ 'ತಾನೇ ಕರೆದು ತಂದ ಹೆಣ್ಣು, ತಾನೇ ಬೆಳೆಸಿದ ಹೆಣ್ಣು, ರಾಜವಂಶಕ್ಕೆ ಪುತ್ರನನ್ನು ಕೊಟ್ಟ ಹೆಣ್ಣು' ಎಂದುಕೊಂಡು ಆಕೆಯನ್ನು ಕ್ಷಮಿಸುತ್ತಾಳೆ.

ಬಮ್ಮಲೆಯ ದುರ್ಬುದ್ಧಿ ಯಾವ ರೀತಿಯಿತ್ತು ಎಂದು ಲೇಖಕರು ಈ ರೀತಿ ವರ್ಣಿಸಿದ್ದಾರೆ. "ರಾಣಿಯರ ವಿರಸ ಅರಮನೆಯನ್ನು ದಾಟಿ ಮನೆಮಾತಾಯಿತು. ವಿಷ್ಣುವರ್ಧನನ್ನು ಬಲವಂತವಾಗಿ ಬಮ್ಮಲೆಯ ಕಡೆ ತಿರುಗಿಸಲು ಶಾಂತಲೆ ಹೆಣಗಾಡಿದಳು. ತೇಪೆ ಹಾಕಲು ಸದಾ ಸೂಚಿದಾರ ಹಿಡಿದುಕೊಂಡೇ ಇರುತ್ತಿದ್ದಳು. ಈ ಘಟನೆಗಳಿಂದ ಪಲ್ಲವ ರಾಜಕುಮಾರಿ ಬಮ್ಮಲೆಯ ಮನಸ್ಸಿನಲ್ಲಿ ಮೊಳೆತ ವಿಷದ ಬಳ್ಳಿಗೆ ನೀರನ್ನು ಎರೆದಂತಾಯಿತು. ಅದು ಹುಲುಸಾಗುತ್ತಾ ತನ್ನ ಅವಲಂಬನೆಯ ಎಲೆಗಳನ್ನು ಸುತ್ತಿ ಬಲವಾಗಿ ಬಿಗಿಯುತ್ತಾ ಮೇಲೆ ಮೇಲೆ ಹತ್ತತೊಡಗಿತು... ಅರಮನೆಯಲ್ಲಿ ಹರಿಯುತ್ತಿದ್ದ ಆ ಹಾಲು ಹೊಳೆ ಬತ್ತಿ ಹೋಗಿ ನೋವಿನ ಕಡಲು ಕೊಡಲಾರಂಭಿಸಿತು" (ಅಶ್ವತ್ಥನಾರಾಯಣ ಜಿ., ಶ್ರೀನಿವಾಸ ಎಸ್.; ಭಾರತಿ ಕಾಸರಗೋಡ (ಸಂ); ೧೯೯೮; ಪು. ೨೫೦).

ಶಾಂತಲೆಯ ಸ್ಥಾನಮಾನ ಇಳಿಸಬೇಕೆಂದು ಹಗಲು-ರಾತ್ರಿ ಬಮ್ಮಲೆ ಚಿಂತಿಸುತ್ತಾಳೆ. ಸಮಯ ದೊರೆತಾಗಲೆಲ್ಲ ಆಕೆಯನ್ನು ದೂರುವುದೇ ಕೆಲಸವಾಗಿತ್ತು. ಮಾರಸಿಂಗಮಯ್ಯನು ಕಟ್ಟಿಸಿದ ಧರ್ಮೇಶ್ವರ ದೇಗುಲದ ಜಾಗಕ್ಕೆ ಶಾಂತಿ ಗ್ರಾಮವೆಂದು ಕರೆಯುತ್ತಾನೆ. ಹೊಯ್ಸಳ ರಾಜ್ಯದ ಉದ್ದಗಲದಲ್ಲೂ ಶಾಂತಲೆ ಬಯಸದಿದ್ದರೂ ಅವಳ ಕೀರ್ತಿ ಹಬ್ಬುತ್ತದೆ. ಇದನ್ನು ಕಂಡ ಬಮ್ಮಲೆ ಮೈ ಪರಚಿಕೊಂಡು ತನ್ನ ನೆಮ್ಮದಿಯನ್ನು ಕಳೆದುಕೊಳ್ಳುತ್ತಾಳೆ. ಅಲ್ಲದೆ ಅರಮನೆಯ ನೆಮ್ಮದಿಯನ್ನು ಸಹ ಕಳೆಯುತ್ತಾಳೆ.

ಬಮ್ಮಲೆ ಅರಮನೆಯ ಹಿರಿಯರ ಬಗ್ಗೆ ತನ್ನ ಮಗನ ಮನಸ್ಸಿನಲ್ಲಿ ವಿಷ ಬಿತ್ತಲು ಪ್ರಯತ್ನಿಸುತ್ತಾಳೆ. "ಸಿಂಹಾಸನವನ್ನು ನಿನಗೆ ತಪ್ಪಿಸಿ, ಎರೆಯಂಗನ ಪಾಲು ಮಾಡಲು ಎಲ್ಲರ ಹವಣಿಕೆ... ಸವಿಯಾದ ಮಾತಿನಿಂದ ಜನರ ಮನಸ್ಸನ್ನು ಒಲಿಸಿಕೊಳ್ಳುವ ಜಾಣೆ ಹೆಣ್ಣು. ತನ್ನ ಹೆಸರು ನೆಲದಲ್ಲಿ ಶಾಶ್ವತವಾಗಿ ನಿಲ್ಲಲೆಂದು ಏನೆಲ್ಲ ಬೇಕೋ ಅದನ್ನು ಮಾಡಿಕೊಂಡಳು" (ಅದೇ; ಪು. ೨೫೧) ಎಂದು ಮಗನ ಮನಸ್ಸಿನಲ್ಲೂ ಶಾಂತಲೆಯ ಬಗ್ಗೆ ಸಂಶಯ ತುಂಬಲು ಹೆಣಗಾಡುತ್ತಾಳೆ.

ಅನುಭವವಿಲ್ಲದೆ ರಾಜಕುಮಾರ ಬಲ್ಲಾಳ ಕುದುರೆಯ ಮೇಲೆ ಕುಳಿತು ಸವಾರಿ ಮಾಡುತ್ತಿರುವಾಗ ಮೇಲಿನಿಂದ ಬಿದ್ದು ಸತ್ತು ಹೋಗುತ್ತಾನೆ. ಇದರಿಂದ ಬಮ್ಮಲದೇವಿ ಅರೆಹುಚ್ಚಿಯಾಗುತ್ತಾಳೆ. ಸದಾ ದ್ವೇಷ, ಅಸೂಯೆ, ಪಟ್ಟದ ರಾಣಿ, ರಾಜಮಾತೆಯಾಗಬೇಕೆಂಬ ಹಂಬಲ, ಸವತಿ ಮತ್ಸರದಂತಹ ದುರ್ಗುಣಗಳಿಂದಲೇ ಬಮ್ಮಲೆಯು ನೇತ್ಯಾತ್ಮಕ ಪಾತ್ರವಾಗಿ ಗುರುತಿಸಿಕೊಳ್ಳುತ್ತಾಳೆ.

## ವೀರಮ್ಮಾಜಿ

ಮಾಸ್ತಿ ಅವರ 'ಚೆನ್ನಬಸವನಾಯಕ' ಕಾದಂಬರಿಯಲ್ಲಿ ಮೂಡಿಬರುವ ವೀರಮ್ಮಾಜಿ ಪಾತ್ರ ಶಾಂತವ್ವನ ಪಾತ್ರಕ್ಕೆ ವಿರುದ್ಧವಾದ ನಡೆವಳಿಕೆಯುಳ್ಳದ್ದು. ಬಿದನೂರಿನ ಹಿರಿಯ ನಾಯಕ ತೀರಿಕೊಂಡ ಮೇಲೆ ಅವನ ಹೆಂಡತಿ ವೀರಮ್ಮಾಜಿಯೇ ರಾಜ್ಯದ ಸೂತ್ರವನ್ನು ಹಿಡಿಯುತ್ತಾಳೆ. ಮಗನಾದ ಚೆನ್ನಬಸವನಾಯಕ ಪ್ರಾಯಕ್ಕೆ ಬಂದಾಗಲೂ ವೀರಮ್ಮಾಜಿ ಆತನಿಗೆ ಪಟ್ಟ ಕಟ್ಟುವುದಿಲ್ಲ. ವೀರಮ್ಮಾಜಿ ಅರಮನೆಯ ಮನೆವಾರ್ತೆಯ ನಂಬಯ್ಯ ಎಂಬುವನಿಗೆ ವಿಶೇಷ ಸಲಿಗೆ ಕೊಟ್ಟಿದ್ದಾಳೆ. ಇವರು ಬೆಳೆಸಿದ ಸಂಬಂಧವೊಂದರ ಮೇಲೆಯೇ ಕಾದಂಬರಿಯು ಕೇಂದ್ರೀಕೃತವಾಗಿದೆ. ಹಲವಾರು ಘಟನೆಗಳು ಈ ಮನೋಭಾವದ ವಿವರಣೆಯ ಕಡೆಗೆ ಒತ್ತನ್ನು ಕೊಡುತ್ತವೆ. ನಂಬಯ್ಯ ಮತ್ತು ವೀರಮ್ಮಾಜಿ ಬೆಳೆಸಿದ ಸಂಬಂಧದಿಂದಾಗಿ ಜನರು ಹತ್ತು ಬಗೆಯಲ್ಲಿ ಆಡಿಕೊಳ್ಳಲು ಅವಕಾಶವಾಗಿದೆ. ಇವರಿಬ್ಬರು ಇರಿಸಿಕೊಂಡಿರುವ ಸಂಬಂಧ ಊರಿಗೆಲ್ಲ ತಿಳಿದಿರುವ ರಹಸ್ಯ. ಈತನನ್ನೇ ರಾಜ್ಯದ ಉತ್ತರಾಧಿಕಾರಿಯನ್ನಾಗಿ ಮಾಡಬಹುದೆಂಬ ಶಂಕೆ ಎಲ್ಲರಲ್ಲಿಯೂ ಇದೆ. ಆದರೆ ವೀರಮ್ಮಾಜಿ 'ಮಗ ತನ್ನನ್ನು ಗೌರವಿಸುತ್ತಿಲ್ಲ' ಎಂದು ಹೇಳುವುದರೊಂದಿಗೆ ತನ್ನ ತಾಯ್ತನದ ಅಧಿಕಾರದ ಸ್ಥಾಪನೆಯಾಗಬೇಕೆಂದು ಹಂಬಲಿಸುವವಳಾಗಿದ್ದಾಳೆ.

ಮಗನಿಗೆ ಪಟ್ಟ ಕಟ್ಟಲು ಮನಸ್ಸಿಲ್ಲದ ವೀರಮ್ಮಾಜಿಗೆ ಸೊಸೆಯಾದ ಶಾಂತವ್ವವನ್ನು ಕಂಡರೆ ಆಗುತ್ತಿರಲಿಲ್ಲ. ಚೆನ್ನಬಸವನಾಯಕನ ಮಡದಿಯಾದ ಶಾಂತವ್ವ ಜೈನ ಸಂಪ್ರದಾಯದವಳು, ಇವರದು ಶೈವ ಸಂಪ್ರದಾಯ. ಅರಮನೆಯಲ್ಲಿ ನಡೆಯುವ ಧಾರ್ಮಿಕ ಆಚರಣೆಗಳನ್ನು ನೋಡಿಕೊಳ್ಳುವ ಸಲುವಾಗಿ ಶೈವ ಧರ್ಮದ ಬೇರೊಬ್ಬಳನ್ನು ಸೊಸೆಯಾಗಿ ತರುವುದು ಒಳ್ಳೆಯದೆಂದು ಯೋಚಿಸುತ್ತಾಳೆ. ನಾಯಕನಿಗೆ ಇದರ ಬಗ್ಗೆ ಆಸಕ್ತಿ ಮತ್ತು ಉತ್ಸಾಹವಿಲ್ಲ. ವೀರಮ್ಮಾಜಿ ಎಷ್ಟೇ ಹಠ ಹಿಡಿದರೂ ಬಸವನಾಯಕ ಒಪ್ಪುವುದಿಲ್ಲ. ಹೀಗಿರುವಾಗ ಅಧಿಕಾರ ಬಿಟ್ಟುಕೊಟ್ಟರೆ ಎಲ್ಲಿ ಮೂಲೆಗುಂಪಾಗಿ ಬಿಡುತ್ತೇನೋ ಎನ್ನುವ ಅಭದ್ರತೆ ವೀರಮ್ಮಾಜಿಗೆ ಕಾಡುತ್ತದೆ. ಆದ್ದರಿಂದ ಈಕೆಯು "ಅಧಿಕಾರದ ಮೇಲಿನ ಆಸೆಗಿಂತ ಅಧಿಕಾರದಲ್ಲಿ ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳುವ ಮನಃಸ್ಥಿತಿಯನ್ನು ಹೊಂದಿದ್ದಾಳೆ" (ಅಹಿತಾನಲ (ಸಂ); ೨೦೦೭; ಪು. ೩೨೦).

ತಂದೆಯ ರಾಜ್ಯ ಮಗನಿಗೆ ಎನ್ನುವುದು ಆಗಿನ ಪದ್ಧತಿ. ಅದಕ್ಕಿಂತಲೂ ಮಿಗಿಲಾಗಿ ವಯಸ್ಸಿಗೆ ಬಂದಿರುವ ಮಗ ರಾಜ್ಯವಾಳಲು ಎಲ್ಲ ವಿಧದಿಂದಲೂ ಸಮರ್ಥನಾಗಿದ್ದಾಗಲೂ ಆತನಿಗೆ ಪಟ್ಟ ಕಟ್ಟುವುದಿಲ್ಲ. ಮಗನ ಸಂಬಂಧ ಹದಗೆಡುವುದಕ್ಕೆ ಮುಖ್ಯ ಕಾರಣ ಆಕೆಯ ಮತ್ತು ನಂಬಯ್ಯನ ನಡುವಿನ ಸಂಬಂಧ. ಈ ವಿಚಾರದಲ್ಲಿ ನಾಯಕ ವಿಶಾಲ ಮನೋಭಾವ ತಿಳಿದು ನಡೆದಿದ್ದರೆ ಎಲ್ಲವೂ ಸರಿ ಇರುತ್ತಿತ್ತು. ಆದರೆ ನಾಯಕ ಹಾಗೇ ನಡೆದುಕೊಳ್ಳುವುದಿಲ್ಲ. ನ್ಯಾಯ ಎನ್ನುವಂತಹದ್ದು ಸ್ತ್ರೀ-ಪುರುಷ ಎಲ್ಲರಿಗೂ ಸಮಾನ ಎಂಬಂತೆ ಈ ಪಾತ್ರವು ಸೃಷ್ಟಿಗೊಂಡಿದೆ.

ನಂಬಯ್ಯನೊಡನೆ ಸರಸ ಸಲ್ಲಾಪ ಮಾಡಲೆಂದೇ ನೆಪ ತೆಗೆದು ಅವನನ್ನು ತನ್ನ ಹತ್ತಿರ ಕರೆಯುವ ವೀರಮ್ಮಾಜಿಯ ಗುಣದ ವಿವರಣೆ ಈ ರೀತಿಯಿದೆ. ದೇವಗಂಗೆಗೆ ವೀರಮ್ಮಾಜಿ

ಒಂದು ಸಲ ಹೋಗಿ ನಂಬಯ್ಯನೊಂದಿಗೆ ನೀರಾಟದಲ್ಲಿ ಸೇರಿದ್ದಳೆಂಬ ಊರಿನ ಗಾಳಿ ಸುದ್ದಿಯನ್ನು ಶಾಂತವ್ವ ಕೇಳುತ್ತ ದುಃಖಪಡುವ ಸನ್ನಿವೇಶ. ವಸ್ತಾರೆಯ ಹೆಗ್ಗಡತಿ ಚೆನ್ನಬಸವನನ್ನು ರಾಜನನ್ನಾಗಿ ಮಾಡಬೇಕೆಂದು ಕೇಳಿ ಬರೆದ ಪತ್ರವೊಂದಕ್ಕೆ ವೀರಮ್ಮಾಜಿಯು ಬರೆದ ತೀವ್ರ ಪ್ರತಿಕ್ರಿಯೆಯ ಉತ್ತರಕ್ಕೆ ಹೆಗ್ಗಡತಿ ಕೊಡುವ "ನನ್ನ ಮಾತು ಕೇಳಿ ಸ್ವಲ್ಪ ನಾಚ ತಾಳೀನೋ ಅಂತ ನಾ ತಿಳಿಸಿದರೆ, ನಾ ಯಾಕೆ ನಾಚಲಿ, ನಾ ಏನು ಗರಿತೀನೇ ಅಂತ ಹೊರಟಿದಾಳಲ್ಲ! ಚೆನ್ನಾಯ್ತು"... ಹೆಂಡಿರಾಗಿ ಗಂಡನ ಮಾನ ತೆಗೆದಿ, ತಾಯಾಗಿ ಮಗನಿಗೆ ಅನ್ಯಾಯ ಮಾಡಿದೆ. ರಾಣಿಯಾಗಿ ರಾಜ್ಯದ ಮರ್ಯಾದೆ ಕಳೆದಿ, ಅಂತ ನಾವಂದ ಮಾತ, ಬೇರೆ ಮಾಡಿ ನೋಡಿ ಅವಳಿಗೆ ಸಂತೋಷ ಆಗಿದ್ದೀತ" (ಮಾಸ್ತಿ ವೆಂಕಟೇಶ ಅಯ್ಯಂಗಾರ್; ೧೯೪೪; ಪು. ೧೦೩) ಎನ್ನುವ ಮಾತುಗಳೆಲ್ಲವೂ ವೀರಮ್ಮಾಜಿಯ ಅನೈತಿಕ ಲೈಂಗಿಕ ಸಂಬಂಧವೊಂದರ ಶೀಲ - ಅಶ್ಲೀಲ ಹಿನ್ನೆಲೆಯಲ್ಲಿಯೇ ನಡೆದವುಗಳಾಗಿವೆ.

ಅಧಿಕಾರವನ್ನು ಮಗನಿಗೆ ಬಿಟ್ಟುಕೊಟ್ಟರೆ ತಾನು ಮೂಲೆಗುಂಪಾಗುತ್ತೇನೆಂದುಕೊಂಡ ವೀರಮ್ಮಾಜಿ ತನ್ನ ಹಟಮಾರಿತನ, ಸ್ವಾರ್ಥ ಮತ್ತು ಅವಿವೇಕದಿಂದಾಗಿ, ಚೆನ್ನಬಸವನಾಯಕ ಮತ್ತು ಸೊಸೆಯಾದ ಶಾಂತ್ವವನೊಂದಿಗೆ ಸದಾ ನಿಷ್ಠುರದಿಂದ ನಡೆದುಕೊಳ್ಳುವ ಪಾತ್ರವಾಗಿ ಚಿತ್ರಿತಕೊಂಡಿದ್ದಾಳೆ.

**ರತ್ನಾಜಿ**

ಕೊರಟಿ ಶ್ರೀನಿವಾಸರಾವ್ ಅವರ 'ಕುಮಾರರಾಮ' ಕಾದಂಬರಿಯಲ್ಲಿ ಮೂಡಿಬರುವ ರತ್ನಾಜಿಯ ಪಾತ್ರ ಪ್ರಮುಖವಾದದು. ಕೊರವಂಜಿಯ ವೇಷ ಧರಿಸಿ ಬಂದ ಮಾತಂಗಿಯು ರತ್ನಾಜಿಯ ಬಗ್ಗೆ ಕಣಿ ನುಡಿಯುತ್ತಾಳೆ. ಈಕೆಯ ಈ ಕಣಿಯೊಂದಿಗೆ ರತ್ನಾಜಿಯ ಪಾತ್ರ ಕಾದಂಬರಿಯಲ್ಲಿ ಪ್ರವೇಶ ಪಡೆಯುತ್ತದೆ. ಕೊರವಂಜಿಯು ರತ್ನಾಜಿಯ ವಿಷಯವಾಗಿ ಅವಳಿಗೆ ಪರಪುರುಷನ ಮೇಲೆ ಅನುರಾಗವಾಗಿದೆ ಎಂದು ಹೇಳುತ್ತಾಳೆ. ಇದನ್ನು ಕೇಳಿದ ಸಂಗಮ್ಮ ಮಾತಂಗಿಯನ್ನು ರತ್ನಾಜಿಯ ಹತ್ತಿರ ಕರೆದುಕೊಡು ಹೋಗುತ್ತಾಳೆ. ವೃದ್ಧನಾದ ಕಂಪಿಲರಾಯನನ್ನು ಮದುವೆಯಾದಾಗ ರತ್ನಾಜಿಯು ಅನೇಕ ಹೊಂಗನಸುಗಳನ್ನು ಕಟ್ಟಿಕೊಂಡಿದ್ದಳು. ಅವಳು ನಿರೀಕ್ಷಿಸಿದ್ದ ದಾಂಪತ್ಯ ಸುಖ ಅವನಿಂದ ದೊರಕದಿದ್ದಾಗ, 'ರಾಮನಾಥ'ನಲ್ಲಿ ಮೋಹಿತಳಾಗುತ್ತಾಳೆ. ರಾಮನಾಥನ ರೂಪ, ಯೌವನಗಳಿಗೆ ಮಾರುಹೋದ ರತ್ನಾಜಿ ಅವನನ್ನು ತನ್ನ ಮೋಹಪಂಜರದಲ್ಲಿ ಸೆರೆ ಹಿಡಿಯಲು ಬಹಳಷ್ಟು ಸಾರಿ ಪ್ರಯತ್ನಿಸಿದ್ದರೂ ಅದು ಸಾಧ್ಯವಾಗಿರುವುದಿಲ್ಲ.

ದೈವಾನುಗ್ರಹದಿಂದ ರತ್ನಾಜಿ ನೀಚ ಕುಲದಲ್ಲಿ ಹುಟ್ಟಿದ್ದರೂ ಕಂಪಿಲನ ಅನುಗ್ರಹಕ್ಕೆ ಪಾತ್ರಳಾಗಿ, ಮಹಾರಾಣಿ ಪದವಿಗೇರುತ್ತಾಳೆ. ತನ್ನ ಕೀಳು ಅಭಿರುಚಿ, ಸಂಸ್ಕೃತಿಗಳಿಂದಾಗಿ ಚಿಕ್ಕಮ್ಮನ ತಾಯಿ ಸ್ಥಾನವನ್ನು ಮರೆತು, ಮಗನ ಮೇಲೆ ಮೋಹಗೊಳ್ಳುತ್ತಾಳೆ. ರಾಮನಾಥನನ್ನು ಒಲಿಸಿಕೊಳ್ಳುವುದರಿಂದ ತನ್ನ ಅತೃಪ್ತ ಬಯಕೆಗಳು ನೆರವೇರುತ್ತದೆ ಎಂದು ಅನೇಕ ರೀತಿಯ ಮಂತ್ರ-ತಂತ್ರಗಳ ಮೊರೆಹೋಗುತ್ತಾಳೆ.

ರತ್ನಾಜಿಯಲ್ಲಿದ್ದ ಅತೃಪ್ತ ಪ್ರಣಯದ ಕುರಿತು ಕಾದಂಬರಿಕಾರರು ಹೀಗೆ ಚಿತ್ರಿಸಿದ್ದಾರೆ. "ಕೊರವಂಜಿ, ದೊಂಬಳಾಗಿದ್ದ ನಾನು ಮಹಾರಾಣಿ ಪದವಿಗೇರಿ ಸುಖಿಯಾಗಿರುವೆನೆಂದು ಲೋಕದ ಜನ ತಿಳಿದಿದ್ದಾರೆ. ಆದರೆ ನಾನು ಕಂಪಿಲರಾಯನನ್ನು ಕೈ ಹಿಡಿದು ನೆಮ್ಮದಿಯಿಂದ ಇಲ್ಲ. ನಾನು ಯಾವ ಸುಖಕ್ಕಾಗಿ ಅವನ ಕೈ ಹಿಡಿದೆನೋ ಆ ದಾಂಪತ್ಯ ಸುಖ ಮಾತ್ರ ನನಗೆ ಲಭ್ಯವಾಗಿಲ್ಲ. ನಾನು ಆ ವೃದ್ಧನ ಶೃಂಗಾರ ಕೇಳಿಗೆ ಒಂದು ಬಲಿಪಶುವಾಗಿದ್ದೇನೆ. ನಾನು ಅತೃಪ್ತ ಪ್ರಣಯಿ ಎಂದರೆ ಲೋಕ ನಗಬಹುದು. ಆದರೆ ಈ ಸತ್ಯವನ್ನು ನಾನು ಮುಚ್ಚಿಡಲಾರೆ.

ನಾನು ಕಂಪಿಲರಾಯನನ್ನು ವಿವಾಹವಾಗಿ ಅಧಿಕಾರ, ಅಂತಸ್ತು, ಸ್ಥಾನಮಾನಗಳನ್ನು ಪಡೆದಿದ್ದೇನೆ. ವೈಭವದ ಸುಪ್ಪತ್ತಿಗೆಯಲ್ಲಿ ಹೊರಳುತ್ತಿದ್ದೇನೆ. ಭೋಗ ಭಾಗ್ಯಗಳನ್ನು ಅನುಭವಿಸುತ್ತಿದ್ದೇನೆ. ಆದರೆ ನನ್ನ ಹೃದಯ, ಮನಸ್ಸುಗಳು ಮಾತ್ರ ನೆಮ್ಮದಿಯಿಂದ ಇಲ್ಲ. ನನಗೆ ಈ ಯಾವ ಸುಖಭೋಗಗಳೂ ಬೇಡವಾಗಿದೆ. ನನಗೆ ಬೇಕಾದ ಸುಖ ಇಲ್ಲಿ ಯಾರಿಂದಲೂ, ಯಾವುದರಿಂದಲೂ ದೊರೆಯದಾಗಿದೆ.

ನನ್ನ ಮನಸ್ಸು ಕುಮಾರ ರಾಮನಾಥನಲ್ಲಿ ಅನುರಕ್ತವಾಗಿದೆ. ಆ ಚನ್ನಿಗನ ಸಾನ್ನಿಧ್ಯ ಸುಖಕ್ಕಾಗಿ ಈ ಜೀವ ಹಾತೊರೆಯುತ್ತಿದೆ. ಆದರೆ ನನ್ನ ಆಸೆ ಈಡೇರಲು ಕಂಪಿಲರಾಯ-ಹರಿಯಾಲದೇವಿಯರು ಘಟಸರ್ಪವಾಗಿ ಕುಳಿತ್ತಿದ್ದಾರೆ. ಮೊದಲು ಆ ಚನ್ನಿಗ ಮೂರ್ತಿಯ ದರ್ಶನವಾದರೂ ದೊರೆಯುತ್ತಿತ್ತು. ಈಗ ಅವನನ್ನು ಆ ರಕ್ಕಸಿ ಹರಿಯಾಲದೇವಿ ನನ್ನ ಕಣ್ಣಿಂದ ಅಡಗಿಸಿಬಿಟ್ಟಿದ್ದಾಳೆ.

ಅವನ ನೆನಪಿನಿಂದ ಮಾತ್ರ ನಾನು ಜೀವಿಸಬೇಕಾಗಿದೆ. ಈ ನೆನಪಿನ ಕೆಂಡ ಹೊತ್ತು ನಾನು ಇಲ್ಲಿ ಹೇಗೆ ತಾನೆ ತಣ್ಣಗೆ ಕುಳಿತಿರಲಿ! ಒಳಗೆ ಬೇಯುವ ಬೆಂಕಿ ಇಟ್ಟುಕೊಂಡು ಹೇಗೆ ತಾನೇ ನೆಮ್ಮದಿಯಿಂದ ಇರಲಿ. ನೀನು ಮಹಾಮಹಿಮಳಂತೆ, ಅಣಿಮಾದಿ ಅಷ್ಟಸಿದ್ಧಿಯು ನಿನಗೆ ವಶವಂತೆ. ನೀನು ಹೇಗಾದರೂ ಮಾಡಿ ನನ್ನ ಮೇಲೆ ಆ ಚನ್ನಿಗರಾಯನು ಒಲಿಯುವಂತೆ ಮಾಡು. ನಿನ್ನ ವಶೀಕರಣ ವಿದ್ಯೆಯಿಂದ, ಇಲ್ಲವೇ ಸಮ್ಮೋಹನ ಕಲೆಯಿಂದ ಅವನು ನನ್ನ ದಾಸನಾಗಿ ಬಿದ್ದಿರುವಂತೆ ಮಾಡು. ನೀನು ಕೇಳಿದ ವಸ್ತುವನ್ನು ನಿನಗೆ ಬಹುಮಾನವಾಗಿ ಕೊಡುತ್ತೇನೆ. ನಾನು ಯಾವಾಗಲೂ ನಿನಗೆ ಚಿರಋಣಿಯಾಗಿರುತ್ತೇನೆ" - ಎಂದು ರತ್ನಾಜಿ ಬಡಬಡಿಸಿದಳು. ಅವಳು ಎಂದೂ ಯಾರ ಮುಂದೆಯೂ ಈ ರೀತಿಯಲ್ಲಿ ಕಾತರಗೊಂಡು ನುಡಿದಿರಲಿಲ್ಲ. ತನ್ನ ಹೃದಯವನ್ನು ಬರಿದು ಮಾಡಿಕೊಂಡಿರಲಿಲ್ಲ" (ಕೊರಟಿ ಶ್ರೀನಿವಾಸರಾವ್; ೨೦೦೬; ಪು. ೪೪) ಎಂದು ತನ್ನ ಮನದ ಇಂಗಿತವನ್ನು ಕೊರವಂಜಿ ಮುಂದೆ ಹೇಳಿಕೊಳ್ಳುತ್ತಾಳೆ.

ಅರಮನೆಯ ಹತ್ತಿರವಿದ್ದ ಆಟದ ಮೈದಾನದಲ್ಲಿ ರಾಮನಾಥ ಲಗ್ಗೆ ಚೆಂಡಾಟವಾಡಲು ಬರುವನೆಂಬ ಸುದ್ದಿ ತಿಳಿದು ರತ್ನಾಜಿ ಹೇಗಾದರೂ ಮಾಡಿ ಈ ಸಲ ರಾಮನಾಥನನ್ನು ತನ್ನ ಮೋಹಜಾಲದಲ್ಲಿ ಬೀಳಿಸಬೇಕೆಂದು ನಿರ್ಧರಿಸುತ್ತಾಳೆ. ಲಗ್ಗೆ ಆಟದ ಸಮಯದಲ್ಲಿ ಆಟವಾಡುವಾಗ ಹೊಡೆದ ಚೆಂಡು ಆಕಸ್ಮಿಕವಾಗಿ ರತ್ನಾಜಿಯ ಉಪ ವನದಲ್ಲಿ ಬೀಳುತ್ತದೆ. ಚೆಂಡನ್ನು ರತ್ನಾಜಿಯು

ತನ್ನಲ್ಲೇ ಉಳಿಸಿಕೊಳ್ಳುತ್ತಾಳೆ. ರಾಮನಾಥ ಅರಮನೆ ಬಂದಾಗ ಚೆಂಡನ್ನು ಕೊಡುವ ನೆಪದಲ್ಲಿ ಅವನನ್ನು ಆಲಿಂಗಿಸಬೇಕೆಂದು ಅದಕ್ಕೆ ಬೇಕಾದ ಸಕಲ ಸಿದ್ಧತೆಗಳನ್ನು ಕೈಗೊಳ್ಳುತ್ತಾಳೆ. ರಾಮನಾಥ ಬಂದಾಗ ರತ್ನಾಜಿಯು ತನ್ನ ಮನದ ಇಂಗಿತವನ್ನು ವ್ಯಕ್ತಪಡಿಸುತ್ತಾಳೆ. 'ಪರನಾರಿ ಸೋದರಿ'ಯೆಂಬ ಪೆಂಡರವನ್ನು ಹಾಕಿ ಕೊಂಡ ನಾನು ನನ್ನ ಐವರು ಪತ್ನಿಯರನ್ನು ಬಿಟ್ಟರೆ ಉಳಿದವರೆಲ್ಲ ನನ್ನ ತಾಯಿ, ಸಹೋದರಿಯರ ಸಮಾನವೆಂದು ಹೇಳುತ್ತಾನೆ. ಬಗೆ ಬಗೆಯಾಗಿ ರತ್ನಾಜಿ ರಾಮನಾಥನನ್ನು ಬೇಡಿಕೊಂಡರೂ ಸಹ ರಾಮನಾಥ ಮಾತ್ರ ತನ್ನ ದೃಢನಿರ್ಧಾರದಿಂದ ಅವಳನ್ನು ತಿರಸ್ಕರಿಸುತ್ತಾನೆ. ರತ್ನಾಜಿ ತನ್ನ ರೂಪ, ಯೌವನಗಳಿಂದ ತನ್ನ ಕಾಮತೃಪ್ತಿಯನ್ನು ಪೂರೈಸಿಕೊಳ್ಳಲು ನಡೆಸಿದ ಎಲ್ಲ ಸಿದ್ಧತೆಗಳು ವ್ಯರ್ಥವಾಗುತ್ತದೆ. ಇದು ಅವಳ ಜೀವನದ ಬಹುದೊಡ್ಡ ಪೆಟ್ಟಾಗುತ್ತದೆ. ಇದರಿಂದ ಜರ್ಜರಿತಳಾಗಿ ರಾಮನಾಥನ ಮೇಲೆ ದ್ವೇಷಕಾರಲು ಪ್ರಯತ್ನಿಸುತ್ತಾಳೆ.

ಈ ಘಟನೆಯನ್ನು ತಿಳಿದು ಕಂಪಿಲರಾಯ ತನ್ನನ್ನು ಶಿಕ್ಷಿಸುವುದಕ್ಕೂ ಮೊದಲೇ ತಾನೇ ಆತ್ಮಹತ್ಯೆ ಮಾಡಿಕೊಳ್ಳುವುದು ಉತ್ತಮವೆಂದು ತಿಳಿದು ಅದಕ್ಕೆ ಮುಂದಾಗುತ್ತಾಳೆ. ತನ್ನನ್ನು ಈ ಸ್ಥಿತಿಗೆ ತಂದ ರಾಮನಾಥನ ಮೇಲೆ ಸೇಡು ತೀರಿಸಿಕೊಳ್ಳದೇ ಸಾಯುವುದೆ? ತನಗಾದ ಅಪಮಾನವನ್ನು ತೀರಿಸಿಕೊಳ್ಳಲು ಆತ್ಮಹತ್ಯೆ ಮಾಡಿಕೊಳ್ಳುವುದನ್ನು ಬಿಟ್ಟು ರಾಮನಾಥನ ಮೇಲೆ ಸೇಡು ತೀರಿಸಿಕೊಳ್ಳಲು ಪ್ರತಿಜ್ಞೆ ಮಾಡುತ್ತಾಳೆ. ರಾಮನಾಥನ ಮೇಲೆ ಇದ್ದ ಪ್ರೇಮದ ಆಸೆಯು ಅವನ ವಿರುದ್ಧ ದ್ವೇಷವಾಗಿ ಮಾರ್ಪಡುತ್ತದೆ. "ಅಲ್ಲಿ ನಡೆದ ಸಂಗತಿಯನ್ನೆಲ್ಲಾ ಬಣ್ಣ ಕಟ್ಟಿ ಕಂಪಿಲರಾಯನಿಗೆ ವರದಿ ಮಾಡಿ ಅವನ ಮೂಲಕ ಕುಮಾರ ರಾಮನಾಥನ ಮೇಲೆ ಸೇಡು ತೀರಿಸಿಕೊಳ್ಳಲು ನಿಶ್ಚಿಯಿಸಿದಳು. ಅವನಿಗೆ ಮಾತೃಗಾಮಿ ಎಂದು ಬಿರುದು ಕೊಟ್ಟು, ಅವನ ಸುಕುಮಾರ ಬಾಳನ್ನು ಹೊಸಕಿ ಹಾಕಲು ನಿಶ್ಚಯಿಸಿದಳು. ತನ್ನ ಜೀವನವನ್ನು ಹೊಸಕಿ ಹಾಕಿದ ಅವನಿಗೆ ಇದೇ ಸರಿಯಾದ ಶಿಕ್ಷೆ' (ಅದೇ; ಪು. ೮೬) ಎಂದು ನಾನಾ ರೀತಿಯಲ್ಲಿ ಆಲೋಚಿಸುತ್ತಾಳೆ. ರಾಮನಾಥನ ಮೇಲಿದ್ದ ಪ್ರೇಮ ಯಾವ ರೀತಿ ದ್ವೇಷವಾಗಿ ಬದಲಾಯಿತು ಎಂಬುದನ್ನು ಲೇಖಕರು ಬಹು ಸೊಗಸಾಗಿ ಚಿತ್ರಿಸಿದ್ದಾರೆ.

ಬೇಟೆಯಾಡಿ ಅರಮನೆಗೆ ಬಂದ ಕಂಪಿಲರಾಯನಿಗೆ ರತ್ನಾಜಿ ಅಲ್ಲಿ ನಡೆದ ಘಟನೆಗೆ ಬಣ್ಣ ಹಚ್ಚಿ ಕುಮಾರರಾಮನನ್ನು ಕೊಲ್ಲುವಂತೆ, ಕಥೆ ಕಟ್ಟಿ ಅದನ್ನು ಸಾಧಿಸಿಕೊಳ್ಳುತ್ತಾಳೆ. ಆದರೆ ಇದರಿಂದ ಪ್ರಜಾವರ್ಗ ಕಂಪಿಲ ಮತ್ತು ರತ್ನಾಜಿಯನ್ನು ನಿಂದಿಸುತ್ತಾರೆ. 'ಪರನಾರಿ ಸೋದರ'ನಾದ ಕುಮಾರರಾಮನ ಸದ್ಗುಣಗಳನ್ನು ನೆನೆದು ಕಣ್ಣೀರು ಸುರಿಸುತ್ತಾರೆ.

ಕುಮಾರರಾಮನ ಅಭಿಮಾನಿಗಳು, ಪ್ರಜಾವರ್ಗವೂ 'ರತ್ನಾಜಿಯನ್ನು' ಬಹಿರಂಗ ವಿಚಾರಣೆಗೆ ಒಳಪಡಿಸಬೇಕೆಂದು ಕಂಪಿಲರಾಯನಿಗೆ ಒತ್ತಾಯಿಸುತ್ತಾರೆ. ಇದನ್ನು ತಿಳಿದ ರತ್ನಾಜಿಯು ಭಯಭೀತಳಾಗಿ ಕಂಪಿಲರಾಯನಿಗೆ ನನ್ನ ತಪ್ಪನ್ನು ಕ್ಷಮಿಸಿರಿ, ಪ್ರಭು ನಾನು ಪಾಪಿ, ಪರಮಪಾಪಿ, ಕುಮಾರ ರಾಮನಾಥನನ್ನು ಕೊಲ್ಲಿಸಿದ ಪಾಪಿ ನಾನು ಎಂದು ತನ್ನದೇ ಆದ ಬೇರೊಂದು ಕಥೆಯನ್ನು ಸೃಷ್ಟಿ ಮಾಡಿ ಹೇಳುತ್ತಾಳೆ.

ಕಂಪಿಲರಾಯನ ಶಿಕ್ಷೆಗೆ ಒಳಗಾದ ಕುಮಾರರಾಮನನ್ನು ಅಮಾತ್ಯ ಬೈಚಪ್ಪ ಬುದ್ಧಿವಂತಿಕೆಯಿಂದ ರಾಮನಾಥನನ್ನು ಅಡಗಿಸಿಟ್ಟುರುತ್ತಾನೆ. ಯಮನರು ದೊಡ್ಡ ಸೈನ್ಯದೊಂದಿಗೆ ಕಂಪಿಲ ರಾಜ್ಯದ ಮೇಲೆ ಯುದ್ಧಕ್ಕೆ ಬಂದಾಗ, ಅಮಾತ್ಯ ರಾಮನಾಥನನ್ನು ಹೊರಗೆ ತರುತ್ತಾನೆ. ಕಂಪಿಲರಾಯನಿಗೆ ತನ್ನ ತಪ್ಪಿನ ಅರಿವಾದಾಗ ಕುಮಾರರಾಮನನ್ನು ಸಾಮ್ರಾಟ ಪದವಿಗೆ ಏರಿಸುತ್ತಾನೆ. ಯುದ್ಧದಲ್ಲಿ ಜಯಗಳಿಸಿದ ರಾಮನಾಥನನ್ನು ಪುರುಜನರೆಲ್ಲರೂ ಅದ್ದೂರಿಯಾಗಿ ಸ್ವಾಗತಿಸುತ್ತಾರೆ. ರತ್ನಾಜಿ, ಶಿಕ್ಷೆಯಿಂದ ಮುಕ್ತಳಾದರೂ ಸಹ ತನ್ನ ತಪ್ಪಿನ ಅರಿವಾಗಿ ಭೂಮಿಯ ಮೇಲೆ ಇದ್ದು ಎಲ್ಲರಿಂದ ತಿರಸ್ಕಾರಕ್ಕೆ ಅನಾದಾರಗಳಿಗೆ ಒಳಗಾಗಿ ಬಾಳುವುದಕ್ಕಿಂತ ಸಾಯುವುದೇ ಒಳ್ಳೆಯದೆಂದು ವಿಷ ಕುಡಿದು ಆತ್ಮಹತ್ಯೆಯನ್ನು ಮಾಡಿಕೊಳ್ಳುತ್ತಾಳೆ. ರತ್ನಾಜಿಯ ಪಾತ್ರ ಕಾದಂಬರಿಯಲ್ಲಿ ಮಧ್ಯದಲ್ಲಿ ಬಂದು ಅಲ್ಲಿಯೇ ಮುಕ್ತಾಯವಾದರೂ ಸಹ ಜನಮನದಲ್ಲಿ ತನ್ನ ನೇತ್ಯಾತ್ಮಕ ಗುಣದಿಂದಲೇ ರತ್ನಾಜಿ ಇಂದಿಗೂ ನೆನಪಿನಲ್ಲಿ ಉಳಿದುಕೊಂಡಿದ್ದಾಳೆ.

ಒಟ್ಟಿನಲ್ಲಿ 'ಬಮ್ಮಲೆ', 'ವೀರಮ್ಮಾಜಿ', 'ರತ್ನಾಜಿ' ಇವರು ನೇತ್ಯಾತ್ಮಕ ಪಾತ್ರಗಳಾಗಿವೆ. ಬಮ್ಮಲೆ ತೋರಿದ ಸವತಿ ಮತ್ಸರವೇ ಶಾಂತಲೆಯನ್ನು ಮೇಲ್ಮಟ್ಟದಲ್ಲಿ ಗುರುತಿಸಲು ಸಹಾಯಕವಾದಂತೆ ವೀರಮ್ಮಾಜಿ ಮತ್ತು ರತ್ನಾಜಿಯ ದುಷ್ಟಗುಣಗಳಿಗೆ ಶಾಂತವ್ವ ಮತ್ತು ಕುಮಾರರಾಮರ ಸೌಮ್ಯ ಮತ್ತು ಶೌಚ್ಯ ಗುಣಗಳು ಎದ್ದು ಕಾಣುತ್ತವೆ. ಈ ಬಮ್ಮಲೆ ವೀರಮ್ಮಾಜಿ, ರತ್ನಾಜಿಯ ಪಾತ್ರಗಳು ಇಲ್ಲದೇ ಹೋಗಿದ್ದರೆ ಶಾಂತಲೆ, ಶಾಂತವ್ವ ಮತ್ತು ಕುಮಾರರಾಮನ ಪಾತ್ರಗಳು ಸ್ಫುಟಗೊಳ್ಳುತ್ತಿರಲಿಲ್ಲ.

ಒಟ್ಟಾರೆಯಾಗಿ ಈ ಎಲ್ಲ ಐತಿಹಾಸಿಕ ಕಾದಂಬರಿಗಳಲ್ಲಿ ಮೂಡಿಬಂದ ಮಹಿಳಾ ಪಾತ್ರಗಳು ತಮ್ಮದೇ ಆದ ಗುಣ ಮೌಲ್ಯಗಳಿಗೆ ಪ್ರಸಿದ್ಧಿಯನ್ನು ಪಡೆದಿವೆ. ಸಾಮಾನ್ಯವಾಗಿ ಐತಿಹಾಸಿಕ ಕಾದಂಬರಿಗಳ ಹಿಂದೆ ಪ್ರಮುಖವಾದ ಉದ್ದೇಶಗಳಿರುತ್ತವೆ. ಪ್ರಸ್ತುತ ಅಧ್ಯಯನದಲ್ಲಿ ಬಳಸಿಕೊಂಡಿರುವ ಕಾದಂಬರಿಗಳ ರಚನೆಗೂ ಈ ಮಾತು ಅನ್ವಯವಾಗುತ್ತದೆ. ಓದುಗರಲ್ಲಿ ಆಧ್ಯಾತ್ಮ ಅನುಭವದ ಕಲೆಗೆ ದೊರೆತ ಪ್ರಾಧಾನ್ಯತೆ, ದೇವಸ್ಥಾನ, ಮಠ-ಮಾನ್ಯಗಳಿಗೆ ನೀಡಿದಂತಹ ದಾನಧರ್ಮಗಳು, ದೇಶಾಭಿಮಾನ, ಧರ್ಮಾಭಿಮಾನಗಳನ್ನು ಮೂಡಿಸುವುದರ ಜೊತೆಗೆ ಇತಿಹಾಸ ಪ್ರಜ್ಞೆಯನ್ನು ಜಾಗೃತಗೊಳಿಸುವ ಉದ್ದೇಶವು ಈ ಕೃತಿಗಳಿಗೆ ಇರುತ್ತವೆ. ಇತಿಹಾಸದಲ್ಲಿ ಮೂಡಿಬಂದಂತಹ ಮಹಿಳಾ ಪಾತ್ರಗಳ ಜೀವನವನ್ನು ಐತಿಹಾಸಿಕ ಘಟನೆಗಳನ್ನು ಕೆಲವೊಂದು ಕಲ್ಪನೆ, ರಂಜಕತೆಗಳೊಂದಿಗೆ, ರೋಚಕವಾಗಿ ನಿರೂಪಿಸಿದರೆ, ಅದು ಓದುಗರ ಮನಸ್ಸನ್ನು ಪರಿಣಾಮಕಾರಿಯಾಗಿ ತಟ್ಟಬಲ್ಲದೆಂಬ ನಿರೀಕ್ಷೆ ಇದ್ದಂತಿದೆ. ಹಾಗಾಗಿ ಇಂತಹ ಕೆಲಸ ಐತಿಹಾಸಿಕ ಕಾದಂಬರಿಗಳಿಂದ ಸಾಧ್ಯವಾಗುತ್ತದೆ ಎಂಬುವುದರಲ್ಲಿ ಎರಡು ಮಾತಿಲ್ಲ. ಇಂಥ ವಿವಿಧ ಬಗೆಯ ಆಶಯಗಳು ಐತಿಹಾಸಿಕ ಕಾದಂಬರಿಗಳಲ್ಲಿ ಪುನರ್‌ಸೃಷ್ಟಿಗೊಂಡ ನಾನಾ ಸ್ವರೂಪದ ಮಹಿಳಾ ಪಾತ್ರಗಳ ಮೂಲಕ ಬಿಂಬಿತವಾಗಿರುವುದು ಗಮನಾರ್ಹ ಸಂಗತಿಯಾಗಿವೆ.

□□

## ಅಧ್ಯಾಯ : ಐದು

# ಕನ್ನಡ ಐತಿಹಾಸಿಕ ಕಾದಂಬರಿಗಳಲ್ಲಿ ಮಹಿಳಾ ಪಾತ್ರಗಳು - ಸ್ತ್ರೀವಾದದ ಹಿನ್ನೆಲೆಯಲ್ಲಿ

**ಭಾ**ರತ ದೇಶವು ಉತ್ಕೃಷ್ಟವಾದ ಸತ್ವಶಾಲಿ ಸಂಸ್ಕೃತಿಯನ್ನು ಹೊಂದಿದೆ. ಪ್ರಕೃತಿಯ ವರದಾನವಾದ ನಿಸರ್ಗ ಸಂಪತ್ತಿನಿಂದ, ಮಣ್ಣನ್ನೇ ಚಿನ್ನವಾಗಿಸಿಕೊಳ್ಳುವಂತಹ ಶಕ್ತಿಯನ್ನು ಹೊಂದಿದೆ. ಸಾವಿರಾರು ದೇಶಪ್ರೇಮಿಗಳು, ವೀರಾಗ್ರಣಿಗಳು ತಾಯ್ನಾಡಿಗಾಗಿ ಇತಿಹಾಸದುದ್ದಕ್ಕೂ ತಮ್ಮ ಕೀರ್ತಿ ಪ್ರತಿಷ್ಠೆಗಳನ್ನು ಮೆರೆದಿದ್ದಾರೆ. ಭಾರತೀಯರಲ್ಲಿ ಸದಾ ಕಾಲ ಜಾಗೃತವಾಗಿರುವ ಧಾರ್ಮಿಕ ಭಾವನೆಯ ವಿಶಿಷ್ಟ ಶಕ್ತಿ ಹಾಗೂ ಅಗಾಧ ಚೈತನ್ಯಕ್ಕೆ ಇದು ಪೂರಕವಾಗಿದೆ. ಪ್ರೇಮ ಸಹಕಾರ, ಶಾಂತಿ, ಸಮಾನತೆ, ಭಾವೈಕ್ಯತೆಯಂಥ ಉದಾತ್ತ ಮೌಲ್ಯಗಳನ್ನು ಸಾರುವ ಸಕಲ ಧರ್ಮಗಳನ್ನು ಭಾರತೀಯರು ಅನಾದಿಕಾಲದಿಂದಲೂ ಗೌರವಿಸಿದ್ದಾರೆ.

ಭಾರತೀಯ ಸಂಸ್ಕೃತಿಯಲ್ಲಿ ಸ್ತ್ರೀಗೆ ಪೂಜ್ಯ ಸ್ಥಾನವಿದೆ. ಸ್ತ್ರೀಯನ್ನು ಆದಿಶಕ್ತಿ ಎಂದು ಕರೆದು ಪೂಜಿಸಿದ್ದಾರೆ. ವಿದ್ಯೆಗೆ ಬುದ್ಧಿಗೆ, ಅಧಿದೇವತೆ ಸ್ತ್ರೀಯರೇ ಆಗಿರುವುದು ಭಾರತೀಯ ಪರಂಪರೆಯಲ್ಲಿ ವಿಧಿತವಾಗಿದೆ. ಸ್ತ್ರೀ ಒಂದು ಮನೆಯಲ್ಲಿ ಮಗುವಾಗಿ ಮತ್ತೊಂದು ಮನೆ ಬೆಳಗುವ ಮೂಲಕ ಎರಡೂ ಕಡೆಗೂ ಕೀರ್ತಿ ತರುವ ಗೌರವಕ್ಕೆ ಪಾತ್ರವಾಗಿರುವಂತಹವಳು. ತನ್ನ ತ್ಯಾಗ, ನಿಷ್ಕಲ್ಮಷ ಪ್ರೀತಿ, ಮಮತೆ ವಾತ್ಸಲ್ಯಗಳಿಂದ ಮೆರೆಯುವ ಸ್ತ್ರೀಯರ ಆದರ್ಶಗಳನ್ನು ಬಿಂಬಿಸುವ ಅನೇಕ ಪುರಾಣ - ಪುಣ್ಯ ಕಥೆಗಳು ನಮಗೆ ಗೋಚರಿಸುತ್ತವೆ. ಅದೇ ರೀತಿ ಕೆಲವೊಂದು ಕುಟಿಲತೆಗಳಿಂದಲೂ ಹೆಸರು ಮಾಡಿರುವ ಸ್ತ್ರೀಯರನ್ನು ನಾವು ಪುರಾಣ ಇತಿಹಾಸದಲ್ಲಿ ಕಾಣುತ್ತೇವೆ.

ಸ್ತ್ರೀಯ ಸ್ಥಾನಮಾನ ಬಾಲ್ಯದಲ್ಲಿ ತಂದೆಯ ಪೋಷಣೆಯಲ್ಲಿ, ಯೌವ್ವನದಲ್ಲಿ ಪತಿಯ ರಕ್ಷಣೆಯಲ್ಲಿ, ವೃದ್ಧಾಪ್ಯದಲ್ಲಿ ಮಗನ ಆಶ್ರಯದಲ್ಲಿ ಉಳಿಯಬೇಕಾದ ಇವಳಿಗೆ ಸ್ವಾತಂತ್ರ್ಯ ಇಲ್ಲವೆಂದು ಮನು ಸಾರುವನು. ಈಕೆಯ ಬದುಕು, ಮನೆ ಕುಟುಂಬದ ಮಟ್ಟಿಗೆ ಸೀಮಿತವಾಗಿತ್ತು. ಇಲ್ಲಿ ಸ್ತ್ರೀಯ ಸ್ವಾತಂತ್ರ್ಯಹರಣಕ್ಕೆ ದಾರಿ ಮಾಡಿಕೊಟ್ಟಿರುವುದು ಸ್ಪಷ್ಟವಿದೆ. ಇದರಿಂದ ವಿದ್ಯಾಭ್ಯಾಸ, ಆಂತರಿಕ ವಿಕಾಸ, ಸಾಹಿತ್ಯರಚನೆ, ಆತ್ಮಸಾಕ್ಷಾತ್ಕಾರ, ಧರ್ಮ ಗ್ರಂಥಗಳ ಅಭ್ಯಾಸ ಹಾಗೂ ರಚನೆ ಇವೇ ಮೊದಲಾದವುಗಳಿಂದ ವಂಚಿತಳಾದಳು. ಬಾಲ್ಯವಿವಾಹ, ಸತಿಸಹಗಮನ ಹೆಸರಿನಲ್ಲಿ ಅಮಾನುಷ ಸಂಪ್ರದಾಯಗಳಿಗೆ ಬಲಿಯಾಗುತ್ತಾ ಬಂದಳು.

ಪುರುಷ ಪ್ರಧಾನ ವ್ಯವಸ್ಥೆಯಡಿಯಲ್ಲಿ ಮಹಿಳೆ ಸಿಕ್ಕು ಅನುಭವಿಸಿದ ನೋವು ಅತ್ಯಂತ ಶೋಚನೀಯ. ಬರೀ ಹೆಣ್ಣು ಎನ್ನುವ ಕಾರಣಕ್ಕಾಗಿ ಆಕೆ ಅನುಭವಿಸಿದ ಸಂಕಷ್ಟ, ನಿರಾಶೆಗಳು ಅಗಣಿತ, ಅವಳ ಶೋಷಣೆಗೆ ಆರ್ಥಿಕ ನಿರಾಧಾರವೂ ಕಾರಣವಾಗಿ ಆಕೆಯ ವ್ಯಕ್ತಿತ್ವವನ್ನೇ ನುಂಗಿವೆ. ಸ್ತ್ರೀಯನ್ನು ಸ್ತ್ರೀಯಂತೆ ಕಾಣದೇ ಆಕೆಯನ್ನು -

ಕಾರ್ಯೆಷು ಮಂತ್ರಿ ಕರುಣೇಷು ದಾಸೀ
ಭೋಜ್ಯಷು ಮಾತಾ ಶಯನೇಷು ರಂಭಾ
ಧರ್ಮಾನುಕೂಲ ಕ್ಷಮಯಾಧರಿತ್ರೀ
ಷಡ್ಗುಣ್ಯಭಾರ್ಯ ಕುಲ ಮುದ್ದಿರಂತಿ

(ಜವಳಿ ಬಿ.ಪಿ.; ೧೯೮೩; ಪು. ೪೯)

ಈ ರೀತಿಯಾಗಿ ಮಹಿಳೆಯು ಪುರುಷನ ಹಿತಾಸಕ್ತಿಗನುಗುಣವಾಗಿ ಹಲವಾರು ಪಾತ್ರಗಳನ್ನು, ಸ್ಥಾನಗಳನ್ನು ಭರಿಸಬೇಕಾಗುತ್ತದೆ. ಇಂತಹ ಪರಿಸ್ಥಿತಿಯಲ್ಲಿ ೧೨ನೇ ಶತಮಾನದ ಶಿವಶರಣರು ವ್ಯಕ್ತಿಯನ್ನು ವ್ಯಕ್ತಿಯಾಗಿಯೇ ಗುರುತಿಸಿ, ಮಹಿಳೆಯರಿಗೆ ವಿಶಿಷ್ಟ ಸ್ಥಾನಮಾನವನ್ನು ಸರ್ವಸಮಾನತೆಯನ್ನು ನೀಡಿದರು. ಸ್ತ್ರೀ ಹೇಗಿರಬೇಕೆಂಬುದನ್ನು ಅವರು ಹೇಳಲಿಲ್ಲ ಸ್ತ್ರೀಯೊಂದಿಗೆ ಪುರುಷ ಪ್ರಪಂಚ ಹೇಗಿರಬೇಕೆಂಬುದನ್ನು ಸ್ಪಷ್ಟಪಡಿಸಿದರು. ಆಧ್ಯಾತ್ಮಿಕ ಸಾಧನೆಯ ವಲಯದಲ್ಲಿ ಹೆಣ್ಣು-ಗಂಡಿನ ನಡುವೆ ತರತಮಭಾವಗಳು ಇರಕೂಡದೆಂದು ವಚನಕಾರರು ಸಾರಿದರು. ಅದರಂತೆ ನಡೆದುಕೊಂಡ ಅಕ್ಕಮಹಾದೇವಿ, ಕೌಶಿಕ ಮಹಾರಾಜನನ್ನು ಎದುರಿಸಿ 'ಲೋಕದ ಗಂಡರನ್ನು ಒಲೆಯೊಳಗಿಕ್ಕು' ಎಂದು ಪ್ರಭುತ್ವವನ್ನು ಧಿಕ್ಕರಿಸಿದಳು.

"ಮಾಲೆ ಮುಡಿ ಬಂದಡೆ ಹೆಣ್ಣೆಂಬರು
ಮೀಸೆ ಕಾಸೆ ಬಂದಡೆ ಗಂಡೆಂಬರು
ಈ ಉಭಯದ ಜ್ಞಾನ
ಹೆಣ್ಣು ಗಂಡೊ ನಾಪ್ತಿನಾಥ."
"ಮಾಲೆ ಮುಡಿ ಇದ್ದುದೆ ಹೆಣ್ಣೆಂದು ಪ್ರಮಾಣಿಸಲಿಲ್ಲ.
ಕಾಸೆ ಮೀಸೆ ಕಠಾರವಿದ್ದುದೆ ಗಂಡೆಂದು ಪ್ರಮಾಣಿಸಲಿಲ್ಲ.
ಅದು ಜಗದ ಹಾಗೆ ಬಲ್ಲವರ ನೀತಿಯಲ್ಲ".

(ವೀಣಾ ಶಾಂತೇಶ್ವರ (ಸಂ); ೧೯೯೩; ಪು. ೧೩೪)

ಎನ್ನುವ ಗೊಗ್ಗವ್ವೆ ಮತ್ತು ಸತ್ಯಕ್ಕನ ಈ ಎರಡೂ ವಚನಗಳು ಅಂದಿನ ಸಮಾಜದಲ್ಲಿ ಗಂಡು ಶ್ರೇಷ್ಠ ಹೆಣ್ಣು ಕನಿಷ್ಠ ಎಂಬ ಭಾವನೆ ಅಜ್ಞಾನ ಮೂಲದಿಂದ ಬಂದುದು ಪರಸ್ಪರ ಅಂಗವಿನ್ಯಾಸದಲ್ಲಿ ವ್ಯತ್ಯಾಸವಿದೆಯೇ ಹೊರತು ಅವರ ಬೌದ್ಧಿಕ ಸ್ತರದಲ್ಲಿ ಅಲ್ಲ ಎಂಬುದನ್ನು ಧ್ವನಿಸುತ್ತವೆ. ಹೆಣ್ಣು ನಿಕೃಷ್ಟವೆಂಬ ಮನುಷ್ಯ ಭಾವನೆಯನ್ನು ಇವರು ಖಂಡಿಸಿದರು. ಅಂದಿನ ಸಂಪ್ರದಾಯ ನಷ್ಟ ಪರಿಸರದಲ್ಲಿ ಸ್ತ್ರೀ ಸಮಾನತೆಯನ್ನು ಕುರಿತು ಮಾತನಾಡಿದುದು ಅವರ ದಿಟ್ಟ ಕ್ರಮವೆಂದೇ ಹೇಳಬಹುದು.

ಈ ದಿಟ್ಟತನದ ಹಾದಿಯಲ್ಲಿ ಬಂದ ೧೭ನೇ ಶತಮಾನದಲ್ಲಿದ್ದ ಸಂಚಿಯ ಹೊನ್ನಮ್ಮ ತನ್ನ 'ಹದಿಬದೆಯ ಧರ್ಮ' ಎಂಬ ಕೃತಿಯಲ್ಲಿ ಹೆಣ್ಣಿಗೂ ಗಂಡಿಗೂ ಸಮವಾದ ನ್ಯಾಯನೀತಿಗಳನ್ನು ಹೇಳಿರುವುದು ಗಮನಾರ್ಹವಾಗಿದೆ. ಅಂದಿನ ಕಾಲದಲ್ಲಿ ಸ್ತ್ರೀಯರ ಬಗೆಗೆ ಪುರುಷರು ತೋರುವ ಅಸಡ್ಡೆಯನ್ನು ಖಂಡಿಸಿ,

"ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ
ಪೆಣ್ಣಲ್ಲವೆ ಪೊರೆದವಳು,
ಪೆಣ್ಣು ಪೆಣ್ಣೆಂದೇತಕೆ ಬೀಳುಗೆಳೆವರು
ಕಣ್ಣು ಕಾಣದಗಾವಿಲರು"

ಎಂದು ಸಮಾಜದ ಅಜ್ಞಾನವನ್ನೇ ಪ್ರಶ್ನಿಸಿದ್ದಾಳೆ. ಅಲ್ಲದೆ,

"ಕುಮಾರನಾದೊಡೆ ಬಂದ ಗುಣವೇನದರಿಂದ
ಕುಮಾರಿಯಾದೊಡೆ ಕುಂದೇನು?"

(ವಾಗೀಶ್ವರಶಾಸ್ತ್ರಿ; ೧೯೯೩; ಪು. ೧೨೩)

ಎಂದು ಪ್ರಶ್ನಿಸಿ, ಹೆಣ್ಣು ಗಂಡಿನ ಸಮಾನತೆಯನ್ನು ಸೂಚಿಸುತ್ತಾಳೆ.

ಇತಿಹಾಸದುದ್ದಕ್ಕೂ ವಿವಿಧ ಸಮಾಜ ವ್ಯವಸ್ಥೆಗಳಲ್ಲಿ ಮಹಿಳೆಯ ಸ್ಥಿತಿಗತಿ ಅತ್ಯಂತ ಶೋಚನೀಯವಾಗಿದೆ. ಆಕೆಗೆ ಸಿಕ್ಕಿದ್ದು ಮನೆಯೊಳಗಿನ ಪ್ರಪಂಚದ ಉಸ್ತುವಾರಿ; ಬೆಟ್ಟದಷ್ಟು ಕೆಲಸದ ಹೊರೆಯ ಭಾರ, ಅವಳ ಕೆಲಸ ಎಂದಿಗೂ ಗಂಡು ಮಾಡುವ ಕೆಲಸಕ್ಕೆ ಸಮಾನವಾಗುವುದಿಲ್ಲವೆಂಬ ಪೂರ್ವಾಗ್ರಹಪೀಡಿತ ಅಭಿಪ್ರಾಯ.

ಇಲ್ಲಿಯವರೆಗೂ ರಚಿತವಾಗಿರುವ ಚರಿತ್ರೆಗಳಲ್ಲಿ ಪುರುಷನೇ ಕೇಂದ್ರಬಿಂದು. ಯಾವುದೇ ಬಗೆಯ ಚರಿತ್ರೆಗಳಲ್ಲಿಯೂ ಸ್ತ್ರೀ ನಗಣ್ಯಳು. ಈ ಮಾತು ಜಗತ್ತಿನ ಯಾವುದೇ ಪ್ರದೇಶದ ಚರಿತ್ರೆಗೂ ಅನ್ವಯವಾಗುವಂಥದ್ದು. ಹೀಗಾಗಿ ಇದುವರೆಗೂ ರಚನೆ ಆಗಿರುವ ಕನ್ನಡ ಅಥವಾ ಕರ್ನಾಟಕ ಸಂದರ್ಭದ ಚರಿತ್ರೆಗೂ ಈ ಮಾತು ಒಪ್ಪುತ್ತದೆ. ವಿಭಿನ್ನ ಕಾಲಘಟ್ಟದ ಚರಿತ್ರೆಯ ಪ್ರಕ್ರಿಯೆಗಳಲ್ಲಿ ಮಹಿಳೆಯ ಪಾಲು ಸಹ ಪುರುಷನಷ್ಟೇ ಸಮಾನವಾದುದು.

ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಸ್ತ್ರೀವಾದದ ಪರಿಕಲ್ಪನೆ ಸುಮಾರು ಮೂರು ದಶಕಗಳಿಗೂ ಹೆಚ್ಚು ಚರ್ಚೆಯಾಗುತ್ತಾ ಒಂದು ಸಾಹಿತ್ಯ ಪರಿಕಲ್ಪನೆಯಾಗಿ ಬೆಳೆದುಬಂದಿದೆ. ಹಾಗೆಯೇ ಕನ್ನಡ ಸಾಹಿತ್ಯ ಮತ್ತು ವಿಮರ್ಶಾ ಕ್ಷೇತ್ರದಲ್ಲಿ ಸ್ತ್ರೀವಾದವು ಪ್ರಮುಖ ಚರ್ಚೆಯಾಗಿ ಬೆಳವಣಿಗೆ ಹೊಂದಿದೆ. ಪಾಶ್ಚಾತ್ಯ ದೇಶಗಳಲ್ಲಿ ಸ್ತ್ರೀವಾದವು ಅಧ್ಯಯನ ಹಾಗೂ ಸಾಮಾಜಿಕ ಚಳುವಳಿಯ ರೂಪದಲ್ಲಿ ಆರಂಭವಾಗಿದ್ದರೂ ಸಹ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಇದರ ಬೆಳವಣಿಗೆಯನ್ನು ಸ್ಪಷ್ಟವಾಗಿ ಗುರುತಿಸಬೇಕಾಗಿದೆ. ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ಸ್ತ್ರೀವಾದ ಏಕಮುಖ ಚಿಂತನಾ ಕ್ರಮವಾಗದೇ ಬಹುಮುಖಿ ಚಿಂತನೆಯ ಕ್ರಮವಾಗಿ ಸ್ಥಾಪಿತವಾಗಬೇಕಾಗಿದೆ. ಹಾಗಾಗಿ ಈಗಾಗಲೇ ರಚನೆಗೊಂಡಿರುವ ಐತಿಹಾಸಿಕ ಕಾದಂಬರಿಗಳನ್ನು ಸ್ತ್ರೀವಾದಿ ನೆಲೆಯಲ್ಲಿ ವಿಮರ್ಶೆಗೊಳಪಡಿಸಬೇಕಾದ ಅನಿವಾರ್ಯತೆ ಇದೆ.

ಮಹಿಳೆಯರು ಚರಿತ್ರೆಯಲ್ಲಿ ತಮ್ಮ ಇರುವಿಕೆಯು ಕೇವಲ ನೆಪ ಮಾತ್ರಕ್ಕಾಗಿ ಎಂಬಂತೆ ಚಿತ್ರಿತಗೊಂಡಿದ್ದಾರೆ. ಹಲವಾರು ಐತಿಹಾಸಿಕ ಕಾದಂಬರಿಗಳು ಮಹಿಳೆಯರನ್ನೇ ಮುಖ್ಯ ಭೂಮಿಕೆಯಲ್ಲಿರಿಸಿಕೊಂಡು ರಚನೆಯಾಗಿದ್ದರೂ ಸಹ ಅಲ್ಲಿ ಮಹಿಳಾ ಪಾತ್ರಗಳ ಮೂಲಕ ಸಾಂಪ್ರದಾಯಿಕ ಮೌಲ್ಯಗಳನ್ನು ಇನ್ನಷ್ಟು ಗಟ್ಟಿಗೊಳಿಸುವ ಕ್ರಿಯೆ ನಡೆಯುತ್ತಿರುತ್ತದೆ. ಹಾಗಾಗಿ ಇಲ್ಲಿ ಮಹಿಳೆ ಮೌಲ್ಯಗಳನ್ನು ಬಿತ್ತರಿಸುವ ವಾಹಕದಂತೆ ಗೋಚರಿಸುತ್ತಾಳೆ.

ಐತಿಹಾಸಿಕ ಕಾದಂಬರಿಗಳನ್ನು ರಚಿಸಿದವರಲ್ಲಿ ಪುರುಷರ ಸಂಖ್ಯೆಯೇ ಹೆಚ್ಚಾಗಿರುವುದು ಕಂಡುಬರುತ್ತದೆ. ಹಾಗೆಯೇ ಇವರು ಸಾಹಿತ್ಯ ರಚನೆಗೆ ಆಯ್ಕೆ ಮಾಡಿಕೊಂಡ ವಸ್ತುವಿಷಯವೂ ಸಹ ಪಿತೃಪ್ರಧಾನ ಸಂಸ್ಕೃತಿಯನ್ನು ಗಟ್ಟಿಗೊಳಿಸುವಂಥವೇ ಆಗಿರುತ್ತವೆ. ಈ ಹಿನ್ನೆಲೆಯಲ್ಲಿ ಮಹಿಳೆಯರನ್ನೇ ಕೇಂದ್ರವಾಗಿರಿಸಿಕೊಂಡು ರಚನೆಯಾದ ಐತಿಹಾಸಿಕ ಕಾದಂಬರಿಗಳು ನಮಗೆ ದೊರೆಯುತ್ತವೆಯಾದರೂ, ಅವುಗಳು ಪಿತೃಪ್ರಧಾನ ಮೌಲ್ಯಗಳನ್ನು ಬಿತ್ತುವ ನೆಲೆಯಲ್ಲಿಯೇ ರೂಪಿತಗೊಂಡಿರುತ್ತವೆ ಎಂಬುದನ್ನು ಮರೆಯುವಂತಿಲ್ಲ.

ಕಾದಂಬರಿಗೆ ಆಯ್ಕೆ ಮಾಡಿಕೊಂಡ ವಿಷಯ ವಸ್ತು ಮಹಿಳೆಯ ಕುರಿತದ್ದಾಗಿದ್ದರೆ, ಆ ಮಹಿಳೆಯರು ಇತಿಹಾಸದಲ್ಲಿ ಸಮಾಜ ಒಪ್ಪುವ ರೀತಿಯಲ್ಲಿ ಕೆಲಸ ಕಾರ್ಯಗಳನ್ನು ಮಾಡಿರುತ್ತಾರೆ. ಹಾಗೆಯೇ ಆ ಕಾರ್ಯಗಳ ಮೂಲಕ ಜನಮನ್ನಣೆ ಪಡೆದು ಜನಪ್ರಿಯರಾಗಿರುತ್ತಾರೆ. ಇತಿಹಾಸದಲ್ಲಿ ಜನಪ್ರಿಯಗೊಂಡ ಮಹಿಳೆಯರ ಕುರಿತಾಗಿ ಕೆಲವು ಕಾದಂಬರಿಗಳು ರಚನೆಗೊಂಡಿವೆ. ಕಾದಂಬರಿಯ ಮುಖ್ಯವಸ್ತುವಾಗಿ ಮಹಿಳೆಯರಿದ್ದರೂ ಸಹ ಅವರು ಸ್ವತಂತ್ರರಾಗಿದ್ದಾರೆ ಅಥವಾ ಸ್ವತಂತ್ರವಾಗಿ ಚಿತ್ರಿತಗೊಂಡಿದ್ದಾರೆ ಎಂದು ಹೇಳಲಾಗುವುದಿಲ್ಲ. ಇದುವರೆಗೂ ಐತಿಹಾಸಿಕ ಕಾದಂಬರಿಗಳ ಕುರಿತಾಗಿ ಹಲವಾರು ವಿಮರ್ಶೆಗಳು ನಡೆದಿವೆಯಾದರೂ ಅವುಗಳಲ್ಲಿ ಸ್ತ್ರೀವಾದಿ ದೃಷ್ಟಿಕೋನದಿಂದ ಇತಿಹಾಸದ ವಿಷಯಗಳನ್ನು ವಸ್ತುವಾಗಿಸಿ ನೋಡಿದ ಅಧ್ಯಯನಗಳು ಇಲ್ಲವೆನ್ನುವಷ್ಟು ವಿರಳ ಎನ್ನಬಹುದು. ಇತಿಹಾಸದ ವಿಷಯಗಳನ್ನು ವಸ್ತುವಾಗಿಸಿ ಕೃತಿಗಳು ರಚನೆಯಾಗಿರುತ್ತವೆಯಾದ್ದರಿಂದ ಇವುಗಳನ್ನು ಕೆದುಕುವ ಕೆಲಸ ಮಾಡಿಲ್ಲ. ಹಾಗಾಗಿ ಮಹಿಳೆ ಇತಿಹಾಸದ ಪುಟಗಳಲ್ಲಿ ಮರೆಯಾಗಿ ಹೋಗಿದ್ದಾಳೆ. ಈ ಕಾರಣಕ್ಕಾಗಿ ಇತಿಹಾಸ ಅಥವಾ ಐತಿಹಾಸಿಕ ಸನ್ನಿವೇಶಗಳನ್ನು ಒಳಗೊಂಡ ಕಾದಂಬರಿಗಳನ್ನು ಲಿಂಗೀಯ(ಸ್ತ್ರೀವಾದ) ನೆಲೆಯಲ್ಲಿ ವಿಶ್ಲೇಷಿಸಬೇಕಾದ ಅಗತ್ಯತೆ ಇದೆ.

ಕನ್ನಡದ ಐತಿಹಾಸಿಕ ಕಾದಂಬರಿಗಳು ಇತಿಹಾಸದಲ್ಲಿ ಆಗಿಹೋದ ಮಹಿಳೆಯರನ್ನು ಸ್ತ್ರೀಪರ ದೃಷ್ಟಿಕೋನದಿಂದ ಚಿತ್ರಿಸಿವೆಯೇ? ಕನ್ನಡದ ಕೆಲವೊಂದು ಪೌರಾಣಿಕ ಕಾದಂಬರಿಗಳಲ್ಲಿ ಚಿತ್ರಿತವಾದಂತೆ ಐತಿಹಾಸಿಕ ಕಾದಂಬರಿಗಳಲ್ಲೂ ಆಧುನಿಕ ಮಹಿಳಾ ಪ್ರಜ್ಞೆಯ ಅಭಿವ್ಯಕ್ತಿ, ಸಾಧ್ಯವಾಗಿದೆಯೇ? ಇಲ್ಲವಾದಲ್ಲಿ ಅದು ಯಾಕೆ ಸಾಧ್ಯವಾಗಿಲ್ಲ ಇತ್ಯಾದಿ ಸಂಗತಿಗಳನ್ನು ಇಲ್ಲಿ ವಿಶ್ಲೇಷಣೆಗೆ ಒಳಪಡಿಸಬೇಕಾದ ಅವಶ್ಯಕತೆ ಇದೆ.

ಮಾತೆ ಮಹಾದೇವಿ ಅವರು ರಚಿಸಿರುವ ತರಂಗಿಣಿ ಕಾದಂಬರಿಯಲ್ಲಿನ ಅಕ್ಕಮಹಾದೇವಿಯು ಚಿಕ್ಕವಳಿದ್ದಾಗಲೇ ತಾನು ಓದಬೇಕೆಂಬ ಆಸೆಯನ್ನು ತಂದೆಯ ಮುಂದೆ ವ್ಯಕ್ತಪಡಿಸುತ್ತಾಳೆ.

‘ಹೆಣ್ಣು ಮಕ್ಕಳಿಗೆಲ್ಲ ಓದ್ಯಾಕೆ ಬಿಡಿರಿ - ನಾವೆಲ್ಲ ಓದೇ ಇದೀವೆನು? ಗಂಡು ಹುಡುಗನಾದರೂ ಆಗಿದ್ದರೆ ವ್ಯವಹಾರಕ್ಕೆ ಜಗತ್ತು ತಿಳ್ಕೊಳ್ಳಕ್ಕೆ ಓದಬೇಕಾಗಿತ್ತು’ ಎಂದು ಲಿಂಗಮ್ಮ ಮಧ್ಯೆ ಪ್ರವೇಶಿಸುತ್ತಾಳೆ. ‘ಅದ್ಕೇ ಮತ್ತೇ ನಿಂಗೆ ಏನೂ ಬರೋಲ್ಲ. ಅಪ್ಪ ಓದೋದನ್ನ ಮುಂದುಕೂತು ದಡ್ಡಿಯಂತೆ ಕೇಳ್ತೀಯಾ’... ಮಹಾದೇವಿ ಮುದ್ದು ಮಾತಿನಲ್ಲಿ ತಾಯಿಯನ್ನು ಅಣಕಿಸುತ್ತಾಳೆ. ‘ಇಷ್ಟು ಭಕ್ತಿಯ ಹಾಡನ್ನು ಹಸೆ ಹಾಡನ್ನು ನಾನೇ ಹೇಳಿಕೊಟ್ಟು ಬಿಡ್ತೀನಿ, ಮಠಕ್ಕೆ ಯಾರು ಹೆಣ್ಣು ಮಕ್ಕಳು ಸಾಲಿ ಕಲೀಲಿಕ್ಕೆ ಹೋಗಲ್ಲ’.

“ನೀನು ಹೆಣ್ಣುಮಗಳವ್ವ ಬಹಳಷ್ಟು ಓದು ಬೇಡ ನನ್ನ ತಾಯಿ...” (ಮಾತೆ ಮಹಾದೇವಿ; ೧೯೭೫; ಪು. ೬೫) ಎಂದು ಲಿಂಗಮ್ಮ ತನ್ನ ಕಾಲದಲ್ಲಿದ್ದ ಪರಿಸ್ಥಿತಿಯನ್ನು ಮಗಳ ಮೇಲೆ ಅದು ಪಾರಂಪರಿಕ ಸಂಪ್ರದಾಯ ಎನ್ನುವಂತೆ ಹೇರಲು ಪ್ರಯತ್ನಿಸುತ್ತಾಳೆ. ‘ಹೆಣ್ಣು ಹುಡುಗಿಯರನ್ನು ಸಾಲಿಗೆ ಕಳಿಸೋಲ್ಲ - ವಿದ್ಯೆ ಗಂಡಸರ ಸೊತ್ತು’ ಎಂದು ಲಿಂಗಮ್ಮನ ಮಾತಿಗೆ ಪುಷ್ಠಿ ನೀಡುವಂತೆ ಪ್ರಸಾದಣ್ಣ ಸಹ ಮಾತನಾಡುತ್ತಾನೆ. ಅಷ್ಟೇ ಅಲ್ಲದೆ ಅಕ್ಕಮಹಾದೇವಿಯ ದಿಟ್ಟ ನುಡಿಗಳನ್ನು ಕೇಳಿದ ಪ್ರಸಾದಣ್ಣ ‘ಹಂಗಾರೆ ಇದೇನೋ ಹೊಸ ಸಂಪ್ರದಾಯ, ಹೆಂಗಸರೂ ಹೊರಗ್ಬರಬಹುದು ಎನ್ನೋದು ನಿನ್ನಿಂದಲೇನೇ ಆರಂಭವಾಗುತ್ತೇನೋ... (ಅದೇ; ಪು. ೬೭) ಎಂದು ನುಡಿಯುತ್ತಾನೆ.

ಹಿಡಿದ ಹಠವನ್ನು ಬಿಡದ ಅಕ್ಕಮಹಾದೇವಿ ತಂದೆಯೊಂದಿಗೆ ಗುರುಗಳ ಹತ್ತಿರ ಮಠದ ಶಾಲೆಗೆ ಹೋಗುತ್ತಾಳೆ. ಹೆಣ್ಣುಮಕ್ಕಳನ್ನು ಓದಲು ಕಳುಹಿಸಿದರೆ, ದೈವದವರು ಆಡಿಕೊಳ್ಳುತ್ತಾರೆ ಎಂಬ ತಾಯಿಯಲ್ಲಿದ್ದ ಭಯವನ್ನು ಓಂಕಾರ ಗುರುಗಳ ಮುಂದೆ ಹೇಳುತ್ತಾನೆ. ಆಗ ಗುರುಗಳು “ವಿದ್ಯೆ ಹೆಣ್ಣುಮಕ್ಕಳಿಗೆ ಬೇಡವೇ? ಅವರಿಗೂ ಬುದ್ಧಿ, ಹೃದಯಗಳಿಲ್ಲವೆ? ನಮ್ಮ ಸಮಾಜವು ದೈವೀ ಸೃಷ್ಟಿಯ ಅರ್ಧ ಅಂಗವಾದ ಸ್ತ್ರೀಕುಲವನ್ನು ಶೋಷಿಸುತ್ತ, ಅವರ ಯಾವ ಪ್ರತಿಭೆಗಳೂ ಅರಳದಂತೆ ಇರಿಸಿದೆ. ನೋಡು, ಬಿರಿವ ಮೊಗ್ಗನ್ನು ನೀರಿನಲ್ಲಿ ತೇಲಿಬಿಟ್ಟರೆ ಅರಳುವುದು; ಅದು ಬಿಟ್ಟು ಬೆಂಕಿಯ ಸಾಮೀಪ್ಯದಲ್ಲಿಟ್ಟರೆ! ಎಷ್ಟೋ ಪ್ರತಿಭಾವಂತ ಶಕ್ತಿಗಳನ್ನು ಅವಕಾಶ ನೀಡಿ ಅರಳಿಸದೆ ಸಂಸಾರದ ಬಂಧನಕ್ಕೆ ಬಾಲ್ಯದಲ್ಲಿಯೇ ಸಿಕ್ಕಿಸಿ ಬಿಡುವ ಅಜ್ಞಾನದ ಆಚರಣೆ ಸಮಾಜವನ್ನು ತುಂಬಿದೆ. ಪ್ರತಿ ಮಾನವನ ನಿಲುವಿನಲ್ಲಿ, ಹೆಣ್ಣಿರಲಿ, ಗಂಡಿರಲಿ, ಕ್ರಿಯಾತ್ಮಕ, ಬೌದ್ಧಿಕ, ಭಾವಾತ್ಮಕ ಮೂರು ಮುಖಗಳಿರುವುದು ಸಹಜ. ಆ ಮೂರು ಮುಖಗಳ ವಿಕಾಸಕ್ಕೆ ಕಾರಣವಾಗಬೇಕಾದುದೇ ಶಿಕ್ಷಣದ ಗುರಿ. ಇಂತಹ ಶಿಕ್ಷಣ ಹೆಣ್ಣು ಮಕ್ಕಳಿಗೆ ಬೇಡವೇ? ಆನೆಯಂತಹ ಪ್ರಾಣಿ ಕಾಡಿನಲ್ಲಿ ಮುಂದೆ ಸಾಗಿದಾಗ ಆಡಿನಂತಹವು ನಿರ್ಮಾಣವಾದ ದಾರಿಯಲ್ಲಿ ಅಡಿ ಇಡಬಲ್ಲವು. ವಿವೇಕಿಗಳಾದ ಕೆಲವರಾದರೂ ಸಾಹಸದ ಹೆಜ್ಜೆ ಇಡದಿದ್ದರೆ ಉಳಿದವರಿಗೆ ಮುಂದುವರಿಯಲು ಆಸ್ಪದವೆಲ್ಲಿ? ಮೊದಮೊದಲು ಹೊಸತನ್ನು ಕಂಡಾಗ ಸಮಾಜ ಟೀಕಿಸುವುದು ಸಹಜ. ಯಾರಾದರೂ ಮುಂದುವರೆದು ಹೊಸತನ್ನು ತುಳಿದಾಗ ಆಡಿಕೊಳ್ಳುವ ಸಮಾಜವೇ ನಂತರ ಸ್ಫೂರ್ತಿಗೊಂಡು ಹಿಂಬಾಲಿಸುವುದು” (ಅದೇ; ಪು. ೭೧-೭೨) ಎಂದ ಗುರುಗಳ ಮಾತಿಗೆ ಓಂಕಾರನು ಸಹ ಹೌದು ಹೊಸದನ್ನು ಹಿಡಿಯುವವರಿಗೆ ಸಮಾಜದಿಂದ

ಟೀಕೆಗಳು ಬಹಳಷ್ಟು ಬರುತ್ತದೆ. ಅಂತಹ ಟೀಕೆಗಳನ್ನು ಸಹಿಸಿಕೊಂಡು ಸ್ತ್ರೀಯು ಸಮಾಜದಲ್ಲಿನ ಮೌಢ್ಯ ಸಂಪ್ರದಾಯವನ್ನು ಕಿತ್ತೊಗೆಯುವ ಸಾಹಸ ಮಾಡಬೇಕೆನ್ನುತ್ತಾನೆ. ಕಾದಂಬರಿಕಾರರು ಸ್ತ್ರೀಪರ ಚಿಂತನೆಗಳಲ್ಲಿ ಒಂದಾದ 'ಶಿಕ್ಷಣದ ಕುರಿತು ಓಂಕಾರ ಮತ್ತು ಗುರುಲಿಂಗರ ಮೂಲಕ ತಮ್ಮ ನಿಲುವನ್ನು ವ್ಯಕ್ತಪಡಿಸಿದ್ದಾರೆ.

'ಕೀಳು ಜನರಿಗೆ ಅನ್ನ ನೀಡಿದರೆ ದೇವರಿಗೆ ಸಿಟ್ಟು ಬಂದು ಮೈಲಿಗೆ ಆಗಿ ಹಾವು, ಚೇಳು ಬರುತ್ತದೆ. ಹಿರಿಯರು ನಡೆಸಿಕೊಂಡು ಬಂದ ಸಂಪ್ರದಾಯವನ್ನು ನಾವು ಎಂದಿಗೂ ಮುರಿಯಬಾರದು' ಎನ್ನುವ ಲಿಂಗಮ್ಮನ ಮಾತಿಗೆ ಅಕ್ಕಮಹಾದೇವಿಯು ನಮ್ಮಂತೆ ಕೈಕಾಲು, ದೇಹ, ಹೃದಯ, ಜನನ, ಮರಣ ಎಲ್ಲ ಇರುವ ಮನುಷ್ಯ ಜೀವಿಯನ್ನು ಕೀಳು ಅನ್ನೋದು ಯಾವ ಧರ್ಮನವ್ವಾ, ಅಂತಹ ಧರ್ಮವನ್ನು ಸುಡಬೇಕು. ಈ ಕೆಟ್ಟ ಸಂಪ್ರದಾಯವನ್ನು ಮುರಿಯಬೇಕು. 'ಅಮ್ಮ, ಹಸಿದು ಬಂದ ಮಾದಯ್ಯನಿಗೆ ಊಟ ಹಾಕು ಇಲ್ಲದಿದ್ದರೆ ನಾನು ಬಸವಣ್ಣನಂತೆ ಮನೆ ಬಿಟ್ಟು ಹೋಗುತ್ತೇನೆ' ಎಂದಾಗ ತಾಯಿ ಮಗಳ ಮಾತಿಗೆ ಮಣಿದು ನೂರಾರು ವರ್ಷಗಳ ಸಂಪ್ರದಾಯವನ್ನು ಮುರಿದು ಮಾದಯ್ಯನಿಗೆ ಊಟ ಹಾಕುತ್ತಾಳೆ. ಸ್ವಾಭಿಮಾನ ದಿಟ್ಟತನದ ಪ್ರತೀಕವಾಗಿದ್ದ ಮಹಾದೇವಿ ವಿನಯದ ಹೆಸರಿನಲ್ಲಿ ನಡೆಯುವ ಮೌಢ್ಯತನಕ್ಕೆ ತಲೆಬಾಗುವುದನ್ನು ಒಪ್ಪಿಕೊಳ್ಳುವುದಿಲ್ಲ.

ಪುರುಷ ನಿರ್ಮಿತ ಸಮಾಜದಲ್ಲಿ ಹೆಣ್ಣು ಕೇವಲ ತಂದೆ-ತಾಯಿ ಹೇಳುವ ರೀತಿಯಲ್ಲಿ ಗಂಡನ ಸೇವೆ ಮಾಡಿಕೊಂಡು, ಮಕ್ಕಳ ಲಾಲನೆ ಪಾಲನೆಯಲ್ಲಿ ತೊಡಗಿರಬೇಕು. ಹೆಣ್ಣು ಎಂದರೆ ಸೋಲು ಎನ್ನುವ ವಾತಾವರಣದಲ್ಲಿದ್ದ ಅಕ್ಕಮಹಾದೇವಿ ಅಂತಹ ಸಂಪ್ರದಾಯದ ವೃಕ್ಷವನ್ನೇ ಅಲುಗಾಡಿಸಲು ಮುಂದಾಗುತ್ತಾಳೆ. ಶಿವಮೂರ್ತಪ್ಪ ತನ್ನ ಮಗನಿಗೆ ವಹಿಸಿದ ಕೆಲಸ ಏನಾಯಿತ್ತು, ಗಂಡು ಹೆಣ್ಣು ಎಂದು ಕೇಳಿದಾಗ, ಮಗನು ಗಂಡು ಎಂದು ನುಡಿಯುತ್ತಾನೆ. ಇದನ್ನು ಆಲಿಸುತ್ತಿದ್ದ ಮಹಾದೇವಿ ಅದರ ಅರ್ಥವನ್ನು ಕೇಳುತ್ತಾಳೆ. ಶಿವಮೂರ್ತಪ್ಪ ಹೋದ ಕೆಲಸ ಆಯ್ತೋ ಇಲ್ಲವೋ ಎಂದು ಕೇಳಲು ಬಳಸುವ ಭಾಷೆ ಇದಾಗಿದೆ. ಗಂಡು ಎಂದರೆ 'ಗೆಲುವು' ಹೆಣ್ಣು ಎಂದರೆ 'ಸೋಲು'; ಸೋಲು ಹೆಣ್ಣಿನ ಸಂಕೇತ ಎಂದಾಗ ಮಹಾದೇವಿ ಆವೇಶಭರಿತಳಾಗಿ ಹೀಗೆ ನುಡಿಯುತ್ತಾಳೆ.

"ಹೆಣ್ಣು ಅಂದರೆ ಸೋಲಿನ ಸಂಕೇತವೇ ದೊಡ್ಡಪ್ಪ? ಇದು ಸ್ತ್ರೀಕುಲಕ್ಕೆ ಅಪಮಾನಕಾರವಲ್ಲವೇ? ಸೋಲೋ ಗೆಲುವೋ ಅಂತ ಕೇಳಲು 'ಕಾಯೋ', 'ಹೆಣ್ಣೋ' ಎನ್ನಬಹುದು. ಅದು ವಿಶಿಷ್ಟ ಸ್ಥಿತಿಯನ್ನು ಹೇಳಿದಂತಾಗುವುದು. ಕೆಲವು ಸಲ ಸೋಲು, ಗೆಲುವಿನ ಮೊದಲ ಮೆಟ್ಟಿಲಾಗಬಹುದು. ಆದರೆ ಹೆಣ್ಣೋ ಗಂಡೋ ಎಂಬಲ್ಲಿ ಹೆಣ್ಣಿನ ಬಗ್ಗೆ ಎಂತಹ ತಿರಸ್ಕಾರ ವ್ಯಕ್ತವಾಗಿದೆ" (ಅದೇ; ಪು. ೮೨) ಎಂದು ಅಕ್ಕಮಹಾದೇವಿ ತನಗೇ ಅಪಮಾನವಾದಂತೆ, ಸ್ತ್ರೀಕುಲದ ಪರವಾಗಿ ತನ್ನ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುತ್ತಾಳೆ.

ಹೆಣ್ಣಿನ ಬಗ್ಗೆ ಏನೇ ಮಾತನಾಡಿದರೂ ರೂಢಿ ಸಂಪ್ರದಾಯವನ್ನು ಹೇರಿ, ಅದನ್ನು ಮುರಿಯುವಂತಿಲ್ಲ. ಪ್ರತಿಯೊಂದು ಆಚರಣೆಯ ಮಾತಿನಲ್ಲಿಯೂ ಹೆಣ್ಣಿನ ಬಗ್ಗೆ ತಿರಸ್ಕಾರದಿಂದ

ನುಡಿಯುತ್ತೀರಾ. ಹೆಂಗಸಿನ ಬುದ್ಧಿ ಮೊಳಕಾಲ ಕೆಳಗೆ ಅಂತ ಹೇಳುವ ನಿಮ್ಮಂಥರಿಗೇನು ಗೊತ್ತು ಹೆಂಗಸಿನ ಬುದ್ಧಿ ಪುರುಷರ ತಲೆಮಟ್ಟದ ಬುದ್ಧಿಗೆ ಸಮಾನ ಎಂದು. ಸ್ತ್ರೀಯರ ಬೆನ್ನ ಮೇಲೆ ಸಂಪ್ರದಾಯದ ಭಾರವನ್ನು ಹೊರಿಸಿ ತಲೆ ಎತ್ತದಂತೆ ಮಾಡಿದ್ದೀರಲ್ಲಾ ಎಂದು ತನ್ನಲ್ಲಿದ್ದ ಸ್ತ್ರೀಯರ ಬಗೆಗಿನ ಕಾಳಜಿಯನ್ನು ಆವೇಶಭರಿತ ನುಡಿಗಳ ಮೂಲಕ ವ್ಯಕ್ತಪಡಿಸುತ್ತಾಳೆ.

ವಿದ್ಯೆ ಕಲಿಯುವುದನ್ನು ಬಿಡಿಸಿ ಮದುವೆ ಮಾಡಿಸಬೇಕೆಂದು ಲಿಂಗಮ್ಮ ಗುರುಗಳನ್ನು ಕೇಳಿಕೊಳ್ಳುತ್ತಾಳೆ. ತನ್ನ ನೆರೆಹೊರೆಯವರ ಮಕ್ಕಳನ್ನು ನೋಡಿದ ಲಿಂಗಮ್ಮ ಚಿಕ್ಕವಯಸ್ಸಿನಲ್ಲಿಯೇ ಅವರಿಗೆಲ್ಲ ಮದುವೆ ಮಾಡಿ ತಂದೆ ತಾಯಿಗಳು ತಮ್ಮ ಜವಾಬ್ದಾರಿಯನ್ನು ಮುಗಿಸಿಕೊಂಡಿದ್ದಾರೆ. ಮಹಾದೇವಿಯ ಓರಗೆಯವರಿಗೆಲ್ಲ ಮದುವೆ ಆಗಿದೆ. ಆದ್ದರಿಂದ ಮಹಾದೇವಿಗೂ ಯೋಗ್ಯನಾದ ವರನನ್ನು ಹುಡುಕಿ ಮದುವೆ ಮಾಡಬೇಕು ಎನ್ನುತ್ತಾಳೆ. ಲಿಂಗಮ್ಮನ ನುಡಿಗಳನ್ನು ಕೇಳಿದ ಗುರುಲಿಂಗದೇವರು "ನಿಜಲಿಂಗಮ್ಮ, ಅನೇಕ ಅವೈಚಾರಿಕ, ಕುರುಡು ಸಂಪ್ರದಾಯಗಳು ಸಂಕೋಲೆಯ ರೂಪದಲ್ಲಿ ಈ ಸಮಾಜವನ್ನು ಬಿಗಿದಿವೆ. ತಮ್ಮ ದಿಟ್ಟ ವೈಚಾರಿಕತೆಯ ಖಡ್ಗದಿಂದ ಬಸವಣ್ಣನವರು ಈ ಸಂಕೋಲೆಗಳನ್ನು ತುಂಡರಿಸುತ್ತ ನಡೆದಿರುವರು. ಹಲವಾರು ಸಂಪ್ರದಾಯಗಳನ್ನು ಪ್ರತಿಭಟಿಸಿ ನಿಂತಿರುವ ನಾವು, ಈ ಬಾಲ್ಯವಿವಾಹ ಪದ್ಧತಿಯನ್ನು ಪ್ರತಿಭಟಿಸೋಣವಂತೆ, ಅರಿಯದ ಮುಗ್ಧರಿಗೆ ಈ ಸಂಸಾರದ ಸಂಕೋಲೆಯನ್ನು ಹೇರಿ ಬೆನ್ನುಬಾಗುವಂತೆ ಮಾಡುವುದು ತರವಲ್ಲ" (ಅದೇ; ಪು. ೧೦೨).

ಆದರೂ ಗುರುಗಳೇ 'ಎಷ್ಟು ಓದಿವರೇನಂತೆ ಹೆಂಗಸಿಗೆ ಮುಸುರೆ ತೊಳೆಯೋದು ತಪ್ಪದು, ಈಗ ಕಲಿತಷ್ಟು ಸಾಕಾದೀತಲ್ಲ'... ಎನ್ನುತ್ತಾಳೆ.

ತಾಯಿ, ತಂದೆ, ಗುರುಗಳ ನಡುವೆ ನಡೆಯುತ್ತಿದ್ದ ಸಂಭಾಷಣೆಯನ್ನು ಮೌನವಾಗಿ ಆಲಿಸುತ್ತಿದ್ದ ಅಕ್ಕಮಹಾದೇವಿ ಮಾತನಾಡುತ್ತಾಳೆ.

"ಗುರುಗಳೇ, ಹೆಣ್ಣಿಗೆ ಬೇರಾವ ಬದುಕಿಗೂ ಅವಕಾಶವಿಲ್ಲವೇ? ಗಂಡ, ಮದುವೆ, ಅಡುಗೆ, ಉಡಿಗೆ, ತೊಡುಗೆ... ಈ ಕೆಸರಿನಲ್ಲಿಯೆ ಬಿದ್ದು ಸಾಯಬೇಕೇ? ಎನ್ನುವಾಗ ತಾಯಿ ಅಹುದು ... ಮಾದೇವಿ, ಲತೆ, ವಿತ್ತ, ವನಿತೆ ಬೇರೊಂದರ ಆಶಯವಿಲ್ಲದೆ ಬದುಕಲಾರದವ್ವಾ, ಬಳ್ಳಿಗೆ ವೃಕ್ಷದಾಶ್ರಯವಿಲ್ಲದಿದ್ದರೆ ತುಳಿಸಿಕೊಳ್ಳಪ್ಪಡುವುದು, ಹಣವು ಅವ್ಯವಸ್ಥಿತವಾಗುವುದು, ಹೆಣ್ಣು ಅನಾಥಳಾಗುವಳು, ಅಷ್ಟಲ್ಲದೆ, ಆಕೆಯನ್ನು ಅಬಲೆ ಎನ್ನುವರು" ಎಂದು ಉತ್ತರಿಸುತ್ತಾಳೆ.

ತಾಯಿ ನುಡಿದ 'ಅಬಲೆ' ಎನ್ನುವ ಶಬ್ದ ಕೇಳಿದೊಡನೆಯೇ ಮಹಾದೇವಿ, "ಓಹ್... ಅಬಲೆ... ಅಬಲೆ. ಇದೊಂದು ದೊಡ್ಡ ಬಿರುದು! ದೈಹಿಕ ಶಕ್ತಿಯಲ್ಲಿ ಹೆಣ್ಣು ಅಬಲೆ ಇರಬಹುದವ್ವಾ, ಮಾನಸಿಕ ಶಕ್ತಿಯಲ್ಲಿ ಆಕೆ ಅಬಲೆಯೇನಲ್ಲ, ಹೆಣ್ಣಿನಲ್ಲಿರುವಷ್ಟು ಸಂಕಲ್ಪ, ದೃಢತೆ, ಛಲ, ಸಹನೆ ಗಂಡಿಗಿಲ್ಲ.... ಗುರುಗಳೇ ನಾನು ಅಬಲೆ, ಕೀಳು, ಆಳಿಸಿಕೊಳ್ಳಲಷ್ಟೇ ಅರ್ಹಳು ಎಂಬ ನಂಬಿಕೆಗೆ ಹೆಂಗಸಿನಲ್ಲೇ ಇರುವುದನ್ನು ಕಂಡು ನನಗೆ ತುಂಬ ಖೇದವೆನಿಸುತ್ತದೆ.

ಇಂಥ ಬಂಧನಗಳನ್ನೆಲ್ಲ ತುಂಡರಿಸಿ, ಸ್ತ್ರೀಯಲ್ಲಿಯೂ ಸುಪ್ತಶಕ್ತಿಯಿದೆ. ಅದರ ಬಲದಿಂದ ಉನ್ನತ ಸಾಧನೆಯನ್ನು ಮಾಡಬಲ್ಲಳು. ಆತ್ಯಂತಿಕ ಸಿದ್ಧಿಯನ್ನು ಪಡೆಯಬಲ್ಲಳು (ಅದೇ; ಪು. ೧೦೪) ಎನ್ನುತ್ತಾಳೆ. 'ಅವ್ವಾ ಗಂಡಸಿನ ವಸ್ತ್ರ ಉಟ್ಟು, ಗಂಡಸಾಗಲಿಕ್ಕೆ ನಾನು ಬಯಸಲ್ಲ.

ತೋರಲು ಹೆಣ್ಣು ರೂಪಿನಲ್ಲಿದ್ದೇ ಗಂಡುತನವನ್ನು ಮೆರೆಯಲು ಬಯಸುವೆ. ಯಾವುದು ಹೆಣ್ಣಿಗೆ ಅಸಾಧ್ಯ ಎಂದು ಸಾವಿರ ನಾಲಿಗೆ ಸಾರಿ, ವಿದ್ಯೆಗೆ ಅನರ್ಹಳು ಸ್ವಾತಂತ್ರ್ಯಕ್ಕೆ ಅನರ್ಹಳು, ಧರ್ಮಕ್ಕೆ ಅನಧಿಕಾರಿ ಎಂದು ಅಂದಿರುವರೋ ಅದೆಲ್ಲ ಸುಳ್ಳು ಮಾಡಿ ಗಂಡಸು ಪಡೆಯುವ ಎಲ್ಲ ಹಕ್ಕುಗಳಿಗೆ ಸಾಧಿಸುವ ಎಲ್ಲ ಸಿದ್ಧಿಗಳಿಗೆ ಅರ್ಹಳು ಎಂದು ಸಾರಬೇಕೆನಿಸುತ್ತದೆ" (ಪು. ೧೦೫) ಎನ್ನುತ್ತಾಳೆ.

ಪ್ರಸ್ತುತ ಸಂದರ್ಭದಲ್ಲೂ ಸ್ತ್ರೀಯರಿಗೆ ಸಂವಿಧಾನಬದ್ಧವಾಗಿ ಎಲ್ಲ ಹಕ್ಕುಗಳನ್ನು ನೀಡಿದರೂ ಸಹ ಕೆಲವೊಂದು ಕಡೆ ಸ್ತ್ರೀ ಅಬಲೆ ಪುರುಷನ ಆಶ್ರಯಕ್ಕೆ ಒಳಗಾಗಲೇಬೇಕು ಎಂದು ಧರ್ಮದ ಹೆಸರಿನಲ್ಲೂ, ಸಂಸಾರ ಹೆಸರಿನಲ್ಲೂ, ವಿವಾಹದ ಹೆಸರಿನಲ್ಲೂ ಆಕೆಯನ್ನು ಬಂಧಿಸಲಾಗುತ್ತಿದೆ.

ಹೆಂಗಸರಿಗೆ ವಿಶೇಷ ಸ್ವಾತಂತ್ರ್ಯವಿಲ್ಲದ ಆ ದಿನಗಳಲ್ಲಿ ನೀರು ತುಂಬಲು ಬಾವಿಗೆ ಬರುವುದು, ಬಟ್ಟೆ ಒಗೆಯಲು ಕೆರೆಗೆ ಹೋಗುವುದು ಇಲ್ಲವೇ ಬಹಿರ್ದೆಸೆಗೆ ಬಯಲಿಗೆ ಹೋಗುವುದು. ಹೆಚ್ಚೆಂದರೆ ಗುಡಿಗೆ ಹೋಗುವುದು. ಇವಿಷ್ಟೇ ಹೊರಬರುವ ಸಾಧನಗಳು, ಶ್ರೀಮಂತ ಹೆಂಗಸರಿಗೆ ಅಷ್ಟು ಅವಕಾಶವಿರಲಿಲ್ಲ. ಕೆಲವು ಸಂಪ್ರದಾಯಸ್ಥರಲ್ಲಿ ಮದುವೆಯಾಗಿ ಮನೆ ತುಂಬುವಾಗ ಹೊಸ್ತಿಲ ಒಳಗೆ ಕಾಲಿಟ್ಟ ಸ್ತ್ರೀಯು ಹೊರಬರುತ್ತಿದ್ದುದು ಹೆಣವಾದಾಗಲೇ! ಓಂಕಾರನ ಮನೆಯವರು ಆ ಕಟ್ಟನ್ನು ಎಂದೋ ಮುರಿದಿದ್ದರೂ ಗುಡಿ, ಮಠ ಬಿಟ್ಟರೆ ಎಲ್ಲಿಯು ಕಾಲಿಟ್ಟವರಲ್ಲ" (ಪು. ೨೨೪). ಇಂಥ ವಾತಾವರಣದಲ್ಲಿ ಅಕ್ಕಮಹಾದೇವಿಯು 'ಸ್ತ್ರೀಸ್ವಾತಂತ್ರ್ಯಕ್ಕಾಗಿ', ಆಧ್ಯಾತ್ಮಿಕ ಚಿಂತನೆಗಾಗಿ ತನ್ನ ಜೀವನವನ್ನು ಮುಡಿಪಿಟ್ಟಿದ್ದಳು. ತನ್ನ ಈ ಕಾರ್ಯಕ್ಕೆ ಅಡ್ಡಬಂದಿರುವ ಸಮಾಜವನ್ನು ಕುರಿತು ಗೆಳತಿಯೊಂದಿಗೆ ಹೀಗೆ ನುಡಿಯುತ್ತಾಳೆ.

"ನೋಡೆ, ಈ ಹೋರಿ ತನ್ನ ಪಾಡಿಗೆ ತಾನು ಮೇಯುತ್ತಿತ್ತು. ನಾಯಿಗೇಕೆ ಹೊಟ್ಟೆಯುರಿ ಇರಬೇಕು. ವ್ಯರ್ಥವಾಗಿ ಬೊಗಳುತ್ತದೆ! ಬೊಗಳಿ ಏನೂ ಮಾಡಲಾರದು. ಸುಮ್ಮನೆ ಕಿರುಕುಳ ಕೊಡುವುದಷ್ಟೆ! ಹಾಗೆಯೇ ಈ ಜಗತ್ತಿನಲ್ಲಿ ಆಧ್ಯಾತ್ಮ ಜೀವಿಗಳು ತಮ್ಮ ಪಾಡಿಗೆ ತಾವು ಪಾರಮಾರ್ಥದ ಕ್ಷೇತ್ರದಲ್ಲಿ ಭಕ್ತಿಯ ಹುಲ್ಲನ್ನು ಮೇಯುತ್ತಲಿದ್ದರೆ, ನಾಯಿಯಂತಹ ಕೆಲವು ಕ್ಷುಲ್ಲಕ ಲೌಕಿಕರಿಗೆ ಸಹನೆಯೇ ಆಗದು! ಬರಿದೇ ನಿಂದೆಗೆ ತೊಡಗುತ್ತಾರೆ. ನಾಯಿಯಂತೂ ಹುಲ್ಲು ತಿನ್ನದು! ಹೋರಿ ತಿಂದರೆ ಇದಕ್ಕೇಕೆ ಸಂಕಟ? ಅದರ ಆಹಾರ ಬೇರೆ. ಇದರ ಆಹಾರ ಬೇರೆ. ಹಾಗೆಯೇ ಆಧ್ಯಾತ್ಮ ಜೀವಿಗಳ ತಂಟೆ ಈ ಲೌಕಿಕರಿಗೇಕೆ ಬೇಕು ಹೇಳು".

"ನಾವು ಹೆದರಿ ನಿಂತರೆ ಸಮಸ್ಯೆಗಳು ಮುತ್ತಿ ಕಾಡುತ್ತವೆ, ಎದೆಗೊಟ್ಟರೆ ಬೆದರಿ ಓಡುತ್ತವೆ. ಎಂತಹ ಉಪದೇಶವಾಯಿತು ನನಗೆ! ಬೆನ್ನು ತೋರಿದರೆ ಬೆನ್ನು ಹತ್ತುತ್ತ, ಎದೆಗೊಟ್ಟರೆ ಹೆದರಿ ಹಿಮ್ಮೆಟ್ಟುತ್ತವೆ. ಇದು ವಿಶ್ವದ ಲೀಲೆ, ಶೈಲಜಾ ಬರುವ ಎಡರುತೊಡರುಗಳು ಬರಲಿ"... (ಅದೇ; ಪು. ೨೩೧) ಅವುಗಳನ್ನು ಧೈರ್ಯದಿಂದ ಮೆಟ್ಟಿ ನಿಲ್ಲಬೇಕು.

"ಆಳುತನದ ಮಾತನೇರಿಸಿ ನುಡಿದಡೆ
ಆಗಳೇ ಕಟ್ಟಿದೆನು ಗಂಡುಗಟ್ಟೆಯ;
ತಿಗುರನೇರಿಸಿ ತಿಲಕವನಿಟ್ಟು

ಕೈದುವ ಕೊಂಡು ಕಳನೇರಿದ ಬಳಿಕ,
ಕಟ್ಟಿದ ನಿರಿ ಸಡಲಿದಡೆ ಇನ್ನು ನಿಮ್ಮಾಣೆ
ಕಾಣಾ ಚೆನ್ನಮಲ್ಲಿಕಾರ್ಜುನಾ! (ಅದೇ; ಪು. ೨೩೨)

ಹೆಣ್ಣು ಹೆಣ್ಣು ಎಂದು ಹೀಗಳೆಯುವ ಜಗತ್ತಿಗೆ ತಾನು ಏನೆಂಬುದನ್ನು ಸಾಧಿಸಿ ತೋರಿಸಬೇಕು. ಆಕಾರದಲ್ಲಿ ಹೆಣ್ಣಿನ ರೂಪವಾಗಿದ್ದು, ಹೃದಯದಲ್ಲಿ ಗಂಡಿನ ಗಟ್ಟಿತನವಿರಬಹುದು ಶೈಲಜ. ಈ "ಜಗತ್ತಿನ ಮುಂಡಿಗೆಯನ್ನು ಇಂದು ನಾನು ಸ್ವೀಕರಿಸುವೆ; ದಿಟ್ಟತನದ ಕಚ್ಚೆಯನ್ನುಟ್ಟು ಸ್ವಾಭಿಮಾನದ ಗುರಾಣಿ ಹಿಡಿದು, ಶಿವಪ್ರೇಮದ ತಿಲಕವನ್ನಿಟ್ಟು, ಆತ್ಮವಿಶ್ವಾಸದ ಖಡ್ಗವ ಹಿಡಿದು, ವಿರಕ್ತಿಯ ಸಮರಾಂಗಣಕ್ಕೆ ನಡೆಯುವೆ. ಇಟ್ಟ ಹೆಜ್ಜೆ ಹಿಂತೆಗೆದು 'ಮನೋಸ್ಥೈರ್ಯದ ಗುಂಡು ಗಟ್ಟಿಯ ಸಡಲಿಸಿದರೆ ಅಂದೇ ನನ್ನ ಪ್ರಾಣ ಹೋಗುತ್ತದೆ' (ಅದೇ; ಪು. ೨೩೨). ಇದು ಚೆನ್ನಮಲ್ಲಿಕಾರ್ಜುನನ ಆಣೆ ಎಂದು ತನ್ನ ದೃಢ ನಿರ್ಧಾರವನ್ನು ತಿಳಿಸುತ್ತಾಳೆ. ಮೌನವಾಗಿ ಆಲಿಸುತ್ತಿದ್ದ ಶೈಲಜಾ "ಮಹಾದೇವಿ ನೀನು ಗಂಡಾಗಿ ಹುಟ್ಟಿದ್ದರೆ ಚೆನ್ನಾಗಿರುತ್ತಿತ್ತು" ಎಂದಾಗ, "ಅದು ಪ್ರಯೋಜನವಿಲ್ಲ. ಮುಕ್ತಿಪಥಕ್ಕೆ ಪುರುಷನಷ್ಟೇ ಹೋಗಬಲ್ಲ; ಹೆಣ್ಣು ಮಾಯೆ, ಹೆಣ್ಣಿಗೆ ಅಸಾಧ್ಯ ಎಂಬುದನ್ನು ಲೋಕ ಆಡುವಾಗ ಅದನ್ನು ಸುಳ್ಳಾಗಿಸಬೇಕಾದರೆ, ಸ್ತ್ರೀಗೆ ಬಂದ ಅರ್ಥರಹಿತ ಕಳಂಕವನ್ನು ಕಿತ್ತೊಗೆಯಬೇಕಾದರೆ, ಗಂಡಾಗಿ ಹುಟ್ಟಿದರೆ ಸಾಧ್ಯವಾಗುವುದೇ...? ಇದೇ ಸರಿ" (ಅದೇ; ಪು. ೨೩೨) ಈ ಹೆಣ್ಣು ಜನ್ಮದಲ್ಲಿಯೇ ಅದನ್ನು ಸಾಧಿಸುತ್ತೇನೆ. ಇಂಥ ಸಾಧನೆಯ ಮಾರ್ಗವನ್ನು ಸ್ತ್ರೀವಾದಿ ಚಿಂತಕರು ಸಹ ಚಿಂತಿಸುವುದು. ಸಮಾಜದಲ್ಲಿ ಹೆಣ್ಣಿಗೆ ತನ್ನದೇ ಆದ ಅಸ್ತಿತ್ವ ಇದೆ. ಅದನ್ನು ಪಡೆಯಬೇಕಾದರೆ ಹೋರಾಟ ಮಾಡಲೇಬೇಕು. ಪುರುಷ ತನ್ನ ಸ್ವಾರ್ಥಕ್ಕಾಗಿ ನಿರ್ಮಿಸಿದ ನೀತಿ ನಿಯಮಗಳನ್ನು ಮುರಿದು, ತನ್ನಂತೆ ಹೆಣ್ಣಿಗೂ ಮನಸ್ಸಿಯಿದೆ, ಆಕೆಯು ಸರ್ವಕ್ಷೇತ್ರದಲ್ಲೂ ಸಾಧನೆಯನ್ನು ಮಾಡಬಲ್ಲಳು, ಅವಳಿಗೆ ಬೇಕಾದ ಸೌಲಭ್ಯವನ್ನು ಕಲ್ಪಿಸಿಕೊಡಬೇಕು. 'ಹೆಣ್ಣೊಂದು ಕಲಿತರೆ ಶಾಲೆಯೊಂದು ತೆರೆದಂತೆ' ಎನ್ನುವಂತೆ ಮಹಿಳೆಯ ವಿಚಾರಗಳಿಗೆ ಪ್ರೋತ್ಸಾಹ ನೀಡಬೇಕು ಎಂಬುವುದೇ ಸ್ತ್ರೀವಾದಿ ಚಿಂತಕರ ನಿಲುವು ಆಗಿದೆ.

ಸಾಧನೆಯ ಹಾದಿಯಲ್ಲಿ ಬಂದ ಕಷ್ಟನಿಷ್ಠೂರಗಳನ್ನು ಎದುರಿಸಿ, ಆಧ್ಯಾತ್ಮಿಕ ಸಾಧನೆಯನ್ನು ಸಾಧಿಸಿದ ಅಕ್ಕಮಹಾದೇವಿಯ ಬಗ್ಗೆ ಕಾದಂಬರಿಕಾರರು ಬಸವಣ್ಣನ ಮೂಲಕ ಈ ರೀತಿ ಹೇಳಿಸುತ್ತಾರೆ. "ಬ್ರಹ್ಮತತ್ವದಲ್ಲಿ ಬೆರೆತು ತನ್ನ ಹೆಣ್ತನವನ್ನು ಅಳಿದುಕೊಂಡ ಮಹಾನುಭಾವೆ ಈಕೆ. ತಾನು ಹಿಡಿದ ಪಥದಲ್ಲಿ ಎಂತಹ ದೃಢತೆಯಿದೆ. ಯಾರ ಪ್ರಶ್ನೆಗಳಿಗೂ ಹೆದರದೆ ಉತ್ತರಿಸುವ ದಿಟ್ಟತನವಿದೆ! 'ಹೆಣ್ಣು ಅಬಲಳು ಮಾಯೆ' ಎಂದು ಸಂಪ್ರದಾಯವು ಶತಶತಮಾನಗಳಿಂದ ಹೇರಿರುವ ಸಂಕೋಲೆಗಳನ್ನು ಕಿತ್ತೊಗೆದು ಸ್ತ್ರೀ-ಸ್ವಾತಂತ್ರ್ಯದ ಕ್ರಾಂತಿ ಕಹಳೆಯನ್ನು ಊದಿ ಬಂದ ವೀರವಿರಕ್ತಳು ನಮ್ಮ ಮಹಾದೇವಿಯಕ್ಕ" (ಅದೇ; ಪು. ೬೯೧) ಎನ್ನುತ್ತಾರೆ. ದಬ್ಬಾಳಿಕೆಯ ವಿರುದ್ಧ ಹೋರಾಡುತ್ತಲೇ ನ್ಯಾಯ ಅನ್ಯಾಯಗಳನ್ನು ಪ್ರಶ್ನಿಸುತ್ತಲೇ ಆಧುನಿಕ ಮಹಿಳೆಯರಿಗೆ ಸ್ಫೂರ್ತಿ ತುಂಬುವ ಪಾತ್ರವಾಗಿ ಅಕ್ಕಮಹಾದೇವಿ ಕಾದಂಬರಿಯಲ್ಲಿ ಕಾಣಿಸುತ್ತಾಳೆ.

ಕದಳಿಯ ಕರ್ಪೂರ ಕಾದಂಬರಿಯಲ್ಲಿ 'ಅಕ್ಕಮಹಾದೇವಿಯು' ಶ್ರೀಶೈಲಕ್ಕೆ ತಾನೂ ಹೋಗುತ್ತೇನೆಂದು ಹಠ ಹಿಡಿಯುತ್ತಾಳೆ. ಆಗ ಗುರುಗಳು 'ನಿನಗದು ಸಾಧ್ಯವಿಲ್ಲ' ಎನ್ನುತ್ತಾರೆ. "ಏಕೆ ಗುರುಗಳೇ, ನನಗೇಕೆ ಸಾಧ್ಯವಿಲ್ಲ"?.

"ನೀನು ಹೆಣ್ಣುಮಗಳು'...

'ಮಲ್ಲಿಕಾರ್ಜುನ ದರ್ಶನ ಗಂಡಸರಿಗೆ ಮಾತ್ರವೋ'? (ತಿಪ್ಪೇರುದ್ರಸ್ವಾಮಿ ಎಚ್.,; ೧೯೮೧; ಪು. ೧೩) ಎಂದು ದಿಟ್ಟತನದಿಂದ ಪ್ರಶ್ನಿಸುತ್ತಾಳೆ.

ಅಕ್ಕಮಹಾದೇವಿ ತಾನು ಕಲಿತಿರುವ ವಚನಗಳನ್ನೆಲ್ಲಾ ಗುರುಗಳಿಗೆ ಒಪ್ಪಿಸಿ, ಹೊಸ ವಚನಗಳನ್ನು ಕಲಿಯಬೇಕು. ಶಂಕರೀ ನೀನು ಶಾಲೆಗೆ ಬರುತ್ತೀಯಾ ಎಂದು ಉತ್ಸಾಹದಿಂದ ಕೇಳುತ್ತಾಳೆ. ಆಗ ಕಾತ್ಯಾಯಿನಿ 'ನಾನು ಶಾಲೆಗೆ ಹೋಗುತ್ತೇನೆ ಅಂತ ಕೇಳಿದರೆ ಮನೆಯಲ್ಲಿ ಹೇಳುತ್ತಾರೆ, ನೀನಗೇತಕ್ಕೆ ಅದೆಲ್ಲಾ ಓದು ಕಲಿತು ನೀನೇನು ಮಾಡುತ್ತೀ? ಹೆಣ್ಣುಮಕ್ಕಳಿಗೆ ಅದೆಲ್ಲಾ ಬೇಕಾಗಿಲ್ಲ" (ಅದೇ; ಪು. ೪೪) ಎನ್ನುತ್ತಾರೆ ಎಂದಾಗ ಅಕ್ಕಮಹಾದೇವಿ, ಹೆಣ್ಣುಮಕ್ಕಳೆಂದರೆ ಹೀಗೆ ಏಕೆ ಅಸಡ್ಡೆ ಮಾಡುತ್ತಾರೆ. 'ಹೆಂಗಸರಿಗೆ ಇದೇಕೆ? ಹೆಂಗಸರಿಗೆ ಅದೇಕೆ'? ಎಂದು ಹೇಳಿ ನಿಯಮವನ್ನು ಹೆಂಗಸಿನ ಮೇಲೆ ಏಕೆ ಹೇರುತ್ತಾರೆ ಎಂದು ಸಿಟ್ಟಿನಿಂದ ನುಡಿಯುವುದರೊಂದಿಗೆ ಅಂತಹ ವ್ಯವಸ್ಥೆಯನ್ನು ಬದಲಾಯಿಸಬೇಕು ಎಂದು ದಿಟ್ಟತನದಿಂದ ಆ ಚಿಕ್ಕ ವಯಸ್ಸಿನಲ್ಲಿಯೇ ಗಂಡು ಹೆಣ್ಣು ಎಂಬ ಭೇದದ ಕುರಿತು ತಿರಸ್ಕಾರದಿಂದ ನುಡಿಯುತ್ತಾಳೆ.

ದಾಕ್ಷಾಯಿಣಿ ಅಕ್ಕಮಹಾದೇವಿಯೊಂದಿಗೆ ಮದುವೆಯ ವಿಷಯ ಕುರಿತು ಮಾತನಾಡುವಾಗ, ಅಕ್ಕಮಹಾದೇವಿ, ಈ ಮದುವೆ, ಮಗು, ಗಂಡ, ಹೆಂಡತಿ ಇದರಲ್ಲಿಯೇ ತಮ್ಮ ಜೀವನವನ್ನು ತೊಡಗಿಸಿಕೊಳ್ಳಬೇಕೇ? ಹೆಣ್ಣು ಆ ಬಂಧನ ಬಿಟ್ಟು ಬಾಳುವುದಕ್ಕೆ ಸಾಧ್ಯವಿಲ್ಲವೆ ಎನ್ನುವಾಗ, ಆಕೆಯ ಗೆಳತಿಯರು ಹಾಸ್ಯ ಮಾಡುತ್ತಾ, ಮಹಾದೇವಿ ಕೈಹಿಡಿಯುವ ಗಂಡ ಎಂತಹವನು ಎಂದಾಗ ಮಹಾದೇವಿ.

> ಗಿರಿಯಲ್ಲಲ್ಲದೆ ಹುಲ್ಲು ಮೊರಡಿಯಲ್ಲಾಡುವುದೇ ನವಿಲು?
> ಕೊಳನಲ್ಲದೆ ಕಿರವಳ್ಳ ಕಾಳಸುವುದೇ ಹಂಸೆ?
> ಮಾಮರ ತಳಿತಲ್ಲದೆ ಸ್ವರಗೈವುದೇ ಕೋಗಿಲೆ?
> ಪರಿಮಳವಿಲ್ಲದ ಪುಷ್ಪಕ್ಕೆಳಸುವುದೇ ಭ್ರಮರ?
> ಎನ್ನ ದೇವ ಚೆನ್ನಮಲ್ಲಿಕಾರ್ಜುನನಲ್ಲದೇ ಅನ್ಯಕ್ಕೆಳಸುವುದೇ,
> ಎನ್ನ ಮನ? ಕೇಳಿರೆ ಕೆಳದಿಯರಿರಾ. (ಅದೇ; ಪು. ೫೫)

ಎಂದು ಮಹಾದೇವಿ ಲೌಕಿಕ ಗಂಡನನ್ನು ತಿರಸ್ಕರಿಸಿ, ಅಲೌಕಿಕ ಗಂಡನನ್ನು ಬಯಸುತ್ತಾಳೆ.

ಆಧುನಿಕ ಮನೋಧೋರಣೆಯನ್ನು ಹೊಂದಿದ ಬಸವರಾಜು ಕಟ್ಟೀಮನಿಯವರು 'ಗಿರಿಯ ನವಿಲು' ಕಾದಂಬರಿಯಲ್ಲಿ ಅಕ್ಕಮಹಾದೇವಿಯ ಮೂಲಕ ಈ ರೀತಿ ಹೇಳಿಸುತ್ತಾರೆ. 'ಗಂಡಸು

ಏನು ಮಾಡಿದರೂ ನಡೆಯುತ್ತದೆ. ಅದನ್ನೆಲ್ಲಾ ಸಹಿಸಿಕೊಂಡು ಮೂಕ ಕುರಿಯಂತೆ ಬಿದ್ದಿರುವುದಷ್ಟೇ ಹೆಂಗಸಿನ ಪಾಲಿನ ಕೆಲಸ. ಹೆಣ್ಣು ಜಾತಿಯ ಮೇಲೆ ಈ ಸಮಾಜದಲ್ಲಿ ನಡೆದಿರುವ ಇಂಥ ಅನ್ಯಾಯಗಳನ್ನು ಕಂಡರೆ ನನ್ನ ಮೈಯುರಿಯುತ್ತೆ. ಹೆಣ್ಣು ಸ್ವಲ್ಪ ಹಾದಿ ತಪ್ಪಿದರೂ ಅವಳು ಕಳಂಕಿತೆಯೆನಿಸಿಕೊಳ್ಳುತ್ತಾಳೆ. ಅವಳನ್ನು ಅವಮಾನಗೊಳಿಸಿ ಮನೆ ಬಿಡಿಸಿ ಹೊರದಬ್ಬಿ ಬಿಡುತ್ತಾರೆ. ಗಂಡಸು ಮಾತ್ರ ಎಂಥ ಅಡ್ಡ ಹಾದಿಗೆ ಬಿದ್ದರೂ ಅದೆಲ್ಲ ಸ್ವಾಭಾವಿಕ! ...ಕ್ಷಮ್ಯ! ... ಯಾವ ನರಾಧಮ ಈ ಕಟ್ಟಳೆಗಳನ್ನು ರಚಿಸಿದನೊ! ಗಂಡಿಗೊಂದು ಕಟ್ಟಳೆ ಹೆಣ್ಣಿಗೊಂದು ಕಟ್ಟಳೆ. ಗಂಡಸಿನ ನೀಚ ಸ್ವಾರ್ಥಕ್ಕೆಂದೇ ನಿರ್ಮಿತವಾದ ಅನ್ಯಾಯಗಳನ್ನು ಕಂಡರೆ ನನ್ನ ಮೈಯುರಿಯುತ್ತೆ. ಈ ಅನ್ಯಾಯವನ್ನೆದುರಿಸಿ ಬಂಡು ಹೊಡುವ ಕಾಲವೀಗ ಬಂದಿದೆ" (ಬಸವರಾಜ ಕಟ್ಟೀಮನಿ; ೧೯೫೬; ಪು. ೭೫) ಎಂಬ ಮಾತುಗಳಲ್ಲಿ ಬಂಡಾಯದ ಪ್ರವೇಶವಾಗುತ್ತದೆ.

'ತರಂಗಿಣಿ' ಕಾದಂಬರಿಯಲ್ಲಿ ಬರುವ ಸ್ತ್ರೀಪರವಾದ ಸನ್ನಿವೇಶಗಳು, ಸಂವಾದಗಳು ಕಾದಂಬರಿಯ ಒಟ್ಟಾರೆ ಪರಿಣಾಮಗಳಿಗೆ ಪೂರಕವಾಗಿದೆ. ಹಾಗಾಗಿ ಕಾದಂಬರಿಯ ಆಶಯವೇ ಸ್ತ್ರೀ ಪರವಾಗಿದೆ ಎನ್ನಬಹುದು. ಅದರ ಜೊತೆಗೆ ಆಧುನಿಕ ಮಹಿಳಾ ಪ್ರಜ್ಞೆಯೂ ಕೂಡ ಕಾದಂಬರಿಯಲ್ಲಿ ಅಲ್ಲಲ್ಲಿ ಇಣುಕಿ ಹಾಕಿದಂತೆ ಭಾಸವಾಗುತ್ತದೆ. ಹನ್ನೆರಡನೇ ಶತಮಾನದಲ್ಲಿ ಆಗಿಹೋದ ಅಕ್ಕಮಹಾದೇವಿ ಪ್ರಸ್ತುತ ಸಂದರ್ಭಗಳಲ್ಲೂ ಸ್ತ್ರೀ ಚಿಂತಕರಿಗೆ ಮಾದರಿಯಾಗಿ ನಿಲ್ಲುತ್ತಾಳೆ. ಆದುದರಿಂದ ಅಕ್ಕಮಹಾದೇವಿಯ ಕುರಿತು ರಚನೆಯಾಗುವ ಆಧುನಿಕ ಕೃತಿಗಳಲ್ಲಿ ಇಂತಹ ಸ್ತ್ರೀಪರ ನಿಲ್ಲುವುಗಳು ಅಪೇಕ್ಷಣೀಯವೂ ಹೌದು. 'ಕದಳಿಯ ಕರ್ಪೂರ', 'ಗಿರಿಯ ನವಿಲು' ಕಾದಂಬರಿಗಳಲ್ಲಿ ಕೆಲವೊಂದು ಕಡೆ ಸ್ತ್ರೀಪರವಾದ ವಿಚಾರಗಳಿಗೆ ಅನ್ವಯಿಸುವಂತೆ ಚಿತ್ರಿಸಿದ್ದಾರೆ.

ಮ.ನ. ಮೂರ್ತಿ ಅವರ 'ನಾಟ್ಯರಾಣಿ ಶಾಂತಲಾ' ಕಾದಂಬರಿಯಲ್ಲಿನ ಶಾಂತಲೆಯು ನರ್ತಕಿಯ ವಂಶಕ್ಕೆ ಸೇರಿದವಳಾಗಿದ್ದಾಳೆ. ಶಾಂತಲೆಯನ್ನು ಮೊದಮೊದಲು ಸ್ವಂತ ನಿರ್ಧಾರವನ್ನು ತೆಗೆದುಕೊಳ್ಳುವ ಸ್ವತಂತ್ರ ವ್ಯಕ್ತಿಯೆಂಬಂತೆ ಚಿತ್ರಿಸಿರುವ ಕಾದಂಬರಿಕಾರರು ವಿವಾಹದ ನಂತರದಲ್ಲಿ ಆಕೆಯನ್ನು ಸಂಪೂರ್ಣವಾಗಿ ಧರ್ಮದ ಹಿಡಿತದಲ್ಲಿ ಇರುವಂತೆ ಮಾಡಿದ್ದಾರೆ. ಕಾದಂಬರಿಯ ಆರಂಭದಲ್ಲಿನ ಪ್ರಸಂಗಗಳಲ್ಲಿ ಶಾಂತಲೆಯು ಕಲೆಯ ಸಂಪ್ರದಾಯವನ್ನು ಮುಂದುವರೆಸುವ ವಾಹಕದಂತೆ ಕಂಡುಬರುತ್ತಾಳೆ. ಹೊನ್ನಾದೇವಿಯ ಸನ್ನಿಧಿಯಲ್ಲಿ ಮನೆತನದ ವಾರ್ಷಿಕ ಸೇವೆಯ ಕುರಿತು ಮಾತನಾಡಲು ಬಂದಿರುವ ಅರ್ಚಕರಿಗೆ, ಶಾಂತಲೆಯ ಅಜ್ಜಿಯಾದ ಮಾಚಿಕಬ್ಬೆಯು ಒಂದು ವರಹವನ್ನು ತೆಗೆದುಕೊಂಡು ಬಂದು ಹೀಗೆ ನಡಿಯುತ್ತಾಳೆ.

"ಅರ್ಚಕರಿಗೆ ಇದನ್ನು ಕೊಡು ಶಾಂತಲಾ"

"ನೀನೇ ಕೊಡಜ್ಜಿ" ಎಂದಳು.

"ನನ್ನ ಕಾಲಾಯಿತವ್ವ ಇನ್ನು ಮುಂದೆ ನಮ್ಮ ಮನೆತನದ ಸಂಪ್ರದಾಯಗಳೆಲ್ಲಾ ನಿನ್ನಿಂದ ನಡೆಯಬೇಕು. ಅರ್ಚಕರಿಗೆ ದಕ್ಷಿಣೆ ಕೊಟ್ಟು ನಮಸ್ಕಾರ ಮಾಡು" (ಮೂರ್ತಿ ಮ.ನ.; ೨೦೦೮; ಪು. ೧೦). ಶಾಂತಲೆ ಹಾಗೆಯೇ ಮಾಡುತ್ತಾಳೆ. ಇಲ್ಲಿ ಮುಖ್ಯವಾಗಿ ನರ್ತಕಿಯ ವಂಶದವಳಾಗಿದ್ದರಿಂದ ಶಾಂತಲೆ ತನ್ನ ಮನೆತನದ ಸಂಪ್ರದಾಯವನ್ನು ಮುಂದುವರೆಸಲು

ಮುಂದಾಗುತ್ತಾಳೆ. ಅಂದರೆ ಸಂಪ್ರದಾಯವನ್ನು ಮುಂದುವರೆಸುವ ಜವಾಬ್ದಾರಿ ಹೆಣ್ಣಿಗೆ ಇದೆಯೇ ಹೊರತು ಗಂಡಿಗಲ್ಲ. ಈ ಸಂಭಾಷಣೆ ಮುಂದುವರೆದು ದೇವಿಯ ಸಮ್ಮುಖದಲ್ಲಿ ನಾಟ್ಯವಾಡಲು ಶಾಂತಲೆಯ ಒಪ್ಪಿಗೆಯನ್ನು ಕೇಳಲು ಅರ್ಚಕರು ಮುಂದಾದಾಗ ಶಾಂತಲೆ ಗೊಂದಲಕ್ಕೀಡಾಗುತ್ತಾಳೆ. "ತನ್ನ ಆರಾಧ್ಯದೇವಿಯ ಸನ್ನಿಧಾನದಲ್ಲಿ ತನ್ನ ವಿದ್ಯೆಯನ್ನು ಪ್ರದರ್ಶಿಸುವ ಅವಕಾಶ ಮತ್ತು ಸೂಚನೆ ಬಂದಿರುವಾಗ ಅದನ್ನು ನಿರಾಕರಿಸುವುದು ದೈವ ದ್ರೋಹವಾದೀತೆಂಬ ಅಂಜಿಕೆಯೊಂದು ಕಡೆ, ಸಾರ್ವಜನಿಕ ಸ್ಥಳದಲ್ಲಿ ತಾನು ನೃತ್ಯ ಮಾಡುವುದರ ಪರಿಣಾಮವೇನಾದೀತೇ ಎಂಬ ಭಯ" (ಅದೇ; ಪು. ೧೧). ಶಾಂತಲೆ ತನ್ನ ನೃತ್ಯ ಕೇವಲ ದೇವಿಗೆ ಮಾತ್ರ ಸೀಮಿತ ಎಂದುಕೊಂಡಿದ್ದಳು. ಆದರೆ ಸಾರ್ವಜನಿಕವಾಗಿ ಗುರುತಿಸಿಕೊಂಡರೆ ತನ್ನ ವ್ಯಕ್ತಿತ್ವದ ಕುರಿತು ಜನರು ಏನೆಂದುಕೊಳ್ಳುತ್ತಾರೋ ಎಂಬ ಭಯ ಅವಳಲ್ಲಿ ಕಾಡತೊಡಗುತ್ತದೆ. ಕೊನೆಗೆ ದೇವಿಯ ಸಾನಿಧ್ಯದಲ್ಲಿ ನರ್ತಿಸಲು ಅಣಿಯಾಗುತ್ತಾಳೆ. ಇಲ್ಲಿ ಮುಖ್ಯವಾಗಿ ಕಲೆ ಎಂಬುದು ಕೇವಲ ದೇವರ ಸಾನಿಧ್ಯದಲ್ಲಿ ತೋರ್ಪಡಿಸುವ ಮತ್ತು ಉನ್ನತ ವರ್ಗದ ಜನರೆದುರು ನರ್ತಿಸುವುದಕ್ಕೆ ಮಾತ್ರ ಸೀಮಿತವಾಗಿದೆ ಎಂಬ ಅರ್ಥದಲ್ಲಿ ಕೃತಿಕಾರರು ಚಿತ್ರಿಸಿದ್ದಾರೆ. ಹಾಗಾಗಿ ಶಾಂತಲೆ ಗೊಂದಲಕ್ಕೀಡಾಗುತ್ತಾಳೆ. ಇನ್ನು ವಿವಾಹಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ಶಾಂತಲೆ ತನ್ನ ಅಜ್ಜಿಯ ಜೊತೆ ಮದುವೆಯ ವಿಷಯವಾಗಿ ಮಾತನಾಡುತ್ತಾ ವಿವಾಹ ಎಂಬುದು ಕಲಾಕಾರರಿಗೆ ಎಷ್ಟು ಮಹತ್ವದ್ದು ಎಂಬುದನ್ನು ಅಜ್ಜಿ ಮಾಚಿಕಬ್ಬೆಯು ಹೀಗೆ ಹೇಳುತ್ತಾಳೆ.

ಶಾಂತಲೆ "ಮದುವೆಯ ಮಾತನ್ನು ಬಿಡು ಅಜ್ಜಿ. ನಾನು ಕೇಳಿದುದು ನನ್ನ ನರ್ತನದ ವಿಷಯ" ಎಂದಾಗ - "ಮದುವೆ ಮಾತನ್ನು ಹೇಗೆ ಬಿಡುವುದು ಶಾಂತಲಾ? ದಿನ ದಿನಕ್ಕೆ ನೀನು ಬೆಳೆಯುತ್ತಿರುವ ರೀತಿಯನ್ನು ನೋಡಿ ನಿನ್ನ ಅವ್ವ ಮಾಚಿಯು ಮೂರು ಹೊತ್ತು ಅದೇ ಯೋಚನೆ ಮಾಡುತ್ತಿದ್ದಾಳೆ. ಹೆಂಗಸು ಎಷ್ಟೇ ವಿದ್ಯೆ ಕಲಿತರೂ, ಅವಳು ಪ್ರಾಪ್ತ ವಯಸ್ಕಳಾದಾಗ ಒಬ್ಬ ಗಂಡಿನ ಆಶ್ರಯದಲ್ಲಿರುವುದು ಅವಶ್ಯಕ. ಇಲ್ಲವಾದರೆ ಹಲವಾರು ದುಷ್ಟ ಕಣ್ಣುಗಳು ಅವಳ ಮೇಲೆ ಬೀಳುತ್ತವೆ. ಕಲಾವಿದರಾದ ನಮ್ಮ ಮನೆನತದವರಿಗಂತೂ ಅಂಥ ರಕ್ಷಣೆ ಅತ್ಯಗತ್ಯ. ಇದುವರೆಗೆ ನಮ್ಮ ವಂಶದಲ್ಲಿ ಒಂದು ಅಪವಾದಕ್ಕೆ ಎಡಗೊಡದಂತೆ ಕಾಪಾಡಿಕೊಂಡು ಬಂದಿದ್ದೇವೆ. ನೀನಾದರೂ ಆದಷ್ಟು ಬೇಗ ಒಬ್ಬ ಗಂಡಸಿನ ಆಶ್ರಯ ಪಡೆಯುವುದು ಒಳ್ಳೆಯದು. ಆದರೆ ನಿನಗೆ ತಕ್ಕ ಗಂಡು ಎಲ್ಲಿ ಸೃಷ್ಟಿಯಾಗಿದ್ದಾನೋ ನಿನ್ನನ್ನು ಕರುಣಿಸಿದ ಧರ್ಮೇಶ್ವರ ಸ್ವಾಮಿಯೇ ಬಲ್ಲ (ಅದೇ; ಪು. ೮) ಎಂದು ಮಾಚಿಕಬ್ಬೆಯ ಹೇಳುತ್ತಾಳೆ.

ಈ ಮೇಲಿನ ಪ್ರಸಂಗವನ್ನು ಗಮನಿಸಿದರೆ ವಿವಾಹ ಎಂಬುದು ಕಲಾವಿದರಿಗೆ ತಮ್ಮನ್ನು ತಾವು ರಕ್ಷಿಸಿಕೊಳ್ಳಲು ಒಂದು ಮಾರ್ಗ ಎಂದು ಪರಿಭಾವಿಸಿಕೊಂಡಂತಾಯಿತು. ಇಲ್ಲಿ ವಿವಾಹದ ನಂತರ ಪುರುಷನು ರಕ್ಷಣೆಯನ್ನು ಮಾಡುವ ನೆಲೆಯಲ್ಲಿ ಮತ್ತು ಮಹಿಳೆ ಅವನಿಂದ ರಕ್ಷಿಸಲ್ಪಡುವ ನೆಲೆಯಲ್ಲಿನ ಚಿಂತನೆಯನ್ನು ಕಾಣುತ್ತೇವೆ.

ವಿವಾಹದ ಪೂರ್ವದಲ್ಲಿ ವಧುವಿನ ಪರೀಕ್ಷೆಯನ್ನು ಮಾಡುವುದು ಒಂದು ವಾಡಿಕೆ. ಈ ಪದ್ಧತಿಯೂ ಇಂದಿಗೂ ಜೀವಂತವಾಗಿಯೇ ಇದೆ. ನೃತ್ಯ ಪ್ರವೀಣೆ ಎನಿಸಿಕೊಂಡ ಶಾಂತಲೆಗೂ

ಸಹ ಇದು ತಪ್ಪಲಿಲ್ಲ. ವಿಷ್ಣುವರ್ಧನನು ತನ್ನ ರಾಜ್ಯದ ರಾಣಿಯಾಗಿ ಬರುವವಳು ಎಲ್ಲಾ ಗುಣಗಳಲ್ಲಿಯೂ ಪ್ರಾವೀಣ್ಯತೆಯನ್ನು ಪಡೆದವಳಾಗಿರಬೇಕು ಎಂಬ ಹಂಬಲವನ್ನು ಹೊಂದಿದ್ದನು. ವಧುಪರೀಕ್ಷೆಯ ಅಂಗವಾಗಿ ಏಚಲಾದೇವಿಯು ವಿಷ್ಣುವರ್ಧನನ ಪಟ್ಟಾಭಿಷೇಕಕ್ಕೆ ಶಾಂತಲೆಯ ಕುಟುಂಬದವರನ್ನು ಆಹ್ವಾನಿಸುತ್ತಾಳೆ. ಆ ಸಂದರ್ಭದಲ್ಲಿ ಶಾಂತಲೆಯ ನಡೆ-ನುಡಿಗಳನ್ನು ಪರೀಕ್ಷೆಗೆ ಒಳಪಡಿಸಲಾಯಿತು. "ಸುಖಾಸದಲ್ಲಿ ಕುಳಿತು ರಾಜಮಾತೆಯು ಶಾಂತಲೆ ಬರುವುದನ್ನು ನಿರೀಕ್ಷಿಸುತ್ತಿದ್ದಳು. ಅತ್ತಕಡೆಯೇ ನೆಟ್ಟ ದೃಷ್ಟಿಯಿಂದ ನೋಡುತ್ತಿದ್ದಳು. ನಡೆಯಲ್ಲಿ ಗಾಂಭೀರ್ಯ ವಿದೆಯೇ, ಅವಳದು ಗಜಗಮನವೆ, ಹಂಸಗಮನವೆ, ಕಾಕಗಮನವೆ, ನಡೆಯುವಾಗ ಪಾದಸ್ಪರ್ಶ ಹೇಗಾಗುತ್ತದೆ, ಉಟ್ಟದು ಕುಲದ ನೆರಿಗೆ ಚಿಮ್ಮುತ್ತದೆಯೇ ಇತ್ಯಾದಿ ಲಕ್ಷಣಗಳನ್ನೆಲ್ಲಾ ಆಕೆ ನೋಡಬೇಕಿತ್ತು; ಆದ್ದರಿಂದಲೇ ಶಾಂತಲೆಯು ದೂರದಿಂದ ಬರುತ್ತಿದ್ದುದನ್ನೇ ರಾಜಮಾತೆಯ ದೃಷ್ಟಿಸುತ್ತಿದ್ದಳು.

"ಶಾಂತಲೆಯ ರೂಪ ಮನಮೋಹಕವಾಗಿತ್ತು. ನಡೆ ಗಾಂಭೀರ್ಯಕ್ಕೆ ಪಾಠ ಕಲಿಸುವಂತಿತ್ತು. ಪದ್ಮಿನೀ ಲಕ್ಷಣಗಳೆಲ್ಲಾ ಅವಳಲ್ಲಿ ನೆಲೆ ಮಾಡಿಕೊಂಡಿರುವಂತೆ ರಾಜಮಾತೆಗೆ ತೋರಿತು. ಅವಳು ಬಂದು ಅತ್ತಿತ್ತ ಸಹ ನೋಡದೆ, ಸಂದೇಹಪಡದೇ ನಮಸ್ಕಾರ ಮಾಡಿದುದರಿಂದ ದೊಡ್ಡವರನ್ನು ಗುರುತಿಸುವ ಜಾಣ್ಮೆ, ಗೌರವಿಸುವ ಘನತೆ ಅವಳಲ್ಲಿರುವಂತೆ ಮನಸ್ಸಿಗೆ ಬಂತು" (ಅದೇ; ಪು. ೯೩-೯೪). ಈ ರೀತಿಯ ಪರೀಕ್ಷೆಯನ್ನು ನಡೆಸಿದ ನಂತರ ರಾಜಮಾತೆ ಮದುವೆಗೆ ಒಪ್ಪಿಗೆ ನೀಡುತ್ತಾಳೆ. ಮಹಿಳೆಯರನ್ನು ನಾಲ್ಕು ಜಾತಿಗಳನ್ನಾಗಿ ವಿಂಗಡಿಸಿದ್ದರು. ಪದ್ಮಿನಿ, ಚಿತ್ತಿನಿ, ಹಸ್ತಿನಿ ಮತ್ತು ಶಂಕಿನಿ ಎಂದು. ಈ ನಾಲ್ಕು ಜಾತಿಗಳ ಹೆಣ್ಣುಗಳನ್ನು ಬಣ್ಣಿಸಲೆಂದೇ ಹಲವಾರು ಪುಸ್ತಕಗಳು ಆ ಕಾಲಕ್ಕೆ ರಚಿತವಾಗಿದ್ದವು. ಹೆಣ್ಣಿನ ಅಂಗಾಂಗಳ ಪರೀಕ್ಷೆಗಳಿಂದ ಯಾವ ಹೆಣ್ಣು ಯಾವ ಜಾತಿಗೆ ಸೇರಿದವಳೆಂದು, ಆಕೆಯ ಗುಣಾವಗುಣ ಗಳೇನೆಂಬುದನ್ನು ನಿರ್ಣಯಿಸಲಾಗುತ್ತಿತ್ತು. ಈ ಗುಣಗಳಿಂದ ತನ್ನ ಮನೆತನದ ಗೌರವವನ್ನು ಉಳಿಸುವ, ಬೆಳೆಸುವ ಜವಾಬ್ದಾರಿಯನ್ನು ಅರಿಯಲಾಗುತ್ತಿತ್ತು. ಮುಖ್ಯವಾಗಿ ಶಾಂತಲೆಯನ್ನು ಸಹ ಇದೇ ನೆಲೆಯಲ್ಲಿಯೇ ಪರೀಕ್ಷೆಗೆ ಒಳಪಡಿಸಿರುವುದನ್ನು ಕಾಣುತ್ತೇವೆ. ಈ ರೀತಿಯ ಪರೀಕ್ಷೆಗಳು ಮಹಿಳೆಯರಿಗೆ ಮಾತ್ರ ಇದ್ದವೇ ವಿನಃ ಪುರುಷರಿಗಿಲ್ಲ. ಏಕೆಂದರೆ ಪುರುಷನು ಪೌರುಷದ ಸಂಕೇತದಂತೆ, ಅವನು ನೂರಾರು ಹೆಣ್ಣುಗಳನ್ನು ಆಳುವವನು ಎಂಬ ನಂಬಿಕೆಯೂ ಸಹ ಜನರಲ್ಲಿ ಬಲವಾಗಿದ್ದುದರಿಂದ, ರಾಜರು ಹಲವಾರು ರಾಣಿಯರಿಗೆ ಒಡೆಯರಾಗಿರುತ್ತಿದ್ದರು. ಹೀಗೆ ರಾಜನು ಸರ್ವಾಧಿಕಾರವನ್ನು ಹೊಂದಿದ್ದನು.

ವಿಷ್ಣುವರ್ಧನನು ಶಾಂತಲೆ, ಬಮ್ಮಲೆ, ರಾಜಲೆ, ಬಿಜ್ಜಲೆ ಮತ್ತು ದೇವಕಿ ಎಂಬುವವರನ್ನು ಒಂದೇ ಸಮಯದಲ್ಲಿ ವಿವಾಹವಾಗುತ್ತಾನೆ. ಇಲ್ಲಿ ವಿವಾಹ ಎಂಬುದು ಕೇವಲ ಒಂದು ಸಾಮಾಜಿಕ ವಿಧಿಯಾಗಿರದೆ, ಹೆಣ್ಣಿನ ಲೈಂಗಿಕತೆಯನ್ನು ನಿಯಂತ್ರಿಸುವ ಪ್ರತಿಬಂಧಿಸುವ ಬಹುಮುಖ್ಯ ಸಾಮಾಜಿಕ ಸಂಸ್ಥೆಯೇ ವಿವಾಹವಾಗಿದೆ. ಸಮಾಜದ ಸದಸ್ಯರ ಲೈಂಗಿಕತೆಯನ್ನು ಕ್ರಮಬದ್ಧ ಗೊಳಿಸುವ, ನಾಗರಿಕತೆಯ ಹೆಸರಿನಲ್ಲಿ ಈ ವಿವಾಹವು ಹುಟ್ಟಿಕೊಂಡಿದೆ. ಆದರೆ ವಾಸ್ತವದಲ್ಲಿ

ಹೆಣ್ಣಿನ ಲೈಂಗಿಕತೆಯನ್ನು ಒಬ್ಬ ಪುರುಷನಿಗೆ ಅಧೀನಪಡಿಸುವುದೇ ಈ ಸಂಸ್ಥೆಯ ಮೂಲ ಉದ್ದೇಶ ಎನ್ನುವುದೇನೂ ರಹಸ್ಯದ ಸಂಗತಿಯಲ್ಲ. ಹೆಣ್ಣಿನ ಬಗ್ಗೆ ಹೊರಬಂದಿರುವ ಎಲ್ಲ ಸಾಮಾಜಿಕ ಚಿಂತನೆಗಳಲ್ಲೂ ವಿವಾಹದ ಈ ಉದ್ದೇಶಗಳು ಇನ್ನಷ್ಟು ಸ್ಥಿರಪಟ್ಟಿವೆ. ಪ್ರಭುತ್ವವೂ ಕೂಡ ಈ ಚಿಂತನೆಗಳನ್ನೇ ಪೋಷಿಸುತ್ತಾ ಕಾರ್ಯಕ್ರಮಗಳನ್ನು ಜಾರಿಗೊಳಿಸುತ್ತಿರುತ್ತವೆ. ಧರ್ಮಗಳು ನಿರ್ಗತಿಕರ ಉದ್ಧಾರಕ್ಕಾಗಿ, ಸೆರೆಸಿಕ್ಕವರ ಏಳ್ಗೆಗಾಗಿ, ದೂರದ ವಾಸಕ್ಕಾಗಿ, ಮಕ್ಕಳ ಅಕಾಲಿಕ ಮರಣಕ್ಕಾಗಿ, ಪುತ್ರಪ್ರಾಪ್ತಿಯ ಫಲಾಪೇಕ್ಷೆಗಾಗಿ ಬಹುಪತ್ನಿತ್ವ ಅಗತ್ಯವಾಗಿವೆ ಎಂದು ಹೇಳುತ್ತದೆ. ಆದರೆ ಸ್ತ್ರೀವಾದವು ಇದನ್ನು ಅಲ್ಲಗಳೆಯುತ್ತದೆ. ಸ್ತ್ರೀವಾದಿಗಳು ಹೇಳುವಂತೆ, ಪುರುಷ ದೃಷ್ಟಿಕೋನದ ಲೈಂಗಿಕತಾವಾದವೇ ಬಹುಪತ್ನಿತ್ವ ಪದ್ಧತಿಯಲ್ಲಿ ಕಾರ್ಯನಿರ್ವಹಿಸುತ್ತಿರುತ್ತದೆ. ಕೆಲವು ಸಂದರ್ಭಗಳಲ್ಲಿ ಮಹಿಳೆಯಿಂದಲೇ ತನ್ನ ಗಂಡನಿಗೆ ಇನ್ನೊಂದು ವಿವಾಹ ಮಾಡಿಸುವ ಪ್ರಕ್ರಿಯೆಗಳೂ ಸಹ ನಡೆಯುತ್ತವೆ. ಸಮೇತನಹಳ್ಳಿ ರಾಮರಾಯರ 'ಸವತಿ ಗಂಧವಾರಾಣಿ' ಕಾದಂಬರಿಕಾರರಲ್ಲಿ 'ಶಾಂತಲೆಯು' ತನಗೆ ಮಕ್ಕಳಗಾಲಿಲ್ಲ ಎಂದು ವಿಷ್ಣುವರ್ಧನನಿಗೆ ಮತ್ತೊಂದು ಮದುವೆಯನ್ನು ಮಾಡಿಲು ಮುಂದಾಗುತ್ತಾಳೆ. ತಾನು ಬಂಜೆ, ತನ್ನಿಂದ ಈ ರಾಜ್ಯಕ್ಕೆ ಯುವರಾಜನನ್ನು ಕೊಡಲು ಆಗುತ್ತಿಲ್ಲ ಎಂದು ಯೋಚಿಸಿ, ತನ್ನ ನಿರ್ಧಾರವನ್ನು ಗುರುಗಳ ಮುಂದೆ, ಈ ರೀತಿಯಾಗಿ ನಿವೇದಿಸುತ್ತಾಳೆ.

"ನೀವು ಕಾಣಿರೇ ಗುರುದೇವ, ನಮ್ಮ ವಂಶದ ಬಳ್ಳಿ ಮುರುಟಿಕೊಂಡುದನ್ನು? ಇದ್ದ ಒಂದನ್ನೂ ತಿಂದುಕೊಂಡೆವು".

"ಅಭದ್ರವನ್ನು ನುಡಿಯಬೇಡಿ ತಾಯಿ".

"ನಮ್ಮ ಕೈಲಿ ಬಳೆಯದಿರುವುದನ್ನೂ ತಾವು ಬಲ್ಲಿರಲ್ಲ?"

"ದೇವರಿಗೆ ಇಚ್ಛೆ ಇದ್ದಂತೆ ಕಾಣುವುದಿಲ್ಲ".

"ನಮ್ಮ ತಂಗಿ ಬಳೆಸಿದರೂ ಅದು ನಮ್ಮದೇ ಆಗುತ್ತದೆ".

"ನಿಮ್ಮವೇ ತಾಯಿ, ಒಪ್ಪಿದೆವು".

"ನಾವು ಹೇಳಿದರೆ ಮಹಾರಾಜರು ಹಗುರವಾಗಿ ತೇಲಿಸಿಬಿಡುತ್ತಾರೆ.

ನೀವು ಹೇಳಿ, ಇದು ಅಷ್ಟು ಲಘುವಾದ ಮಾತೇ? ನಮ್ಮ ಮೇಲಿನ ಅವರ ಪ್ರೇಮ ಅವರನ್ನು ಹಾಗೆ ಮಾಡಿಸಿದೆ. ಅವರು ದೊಡ್ಡವರು, ಆದರೆ ನಮ್ಮ ಯಾದವ ಕುಲದ ಬಳ್ಳಿ ಇಲ್ಲಿಗೆ ನಿಲ್ಲಬೇಕೆ? (ಸಮೇತನಹಳ್ಳಿ ರಾಮರಾಯ; ೧೯೬೮; ಪು. ೩೫) ಎಂದು ಹೇಳಿ, ವಿಷ್ಣುವರ್ಧನನಿಗೆ ಮತ್ತೊಂದು ಮದುವೆಯನ್ನು ಮಾಡಿಸುತ್ತಾಳೆ.

ನಾಣ್ಯರಾಣಿ ಶಾಂತಲಾ ಕಾದಂಬರಿಯಲ್ಲಿ ಶಾಂತಲೆಯನ್ನು ಒಳಗೊಂಡಂತೆ, ವಿಷ್ಣುವರ್ಧನನಿಗೆ ನಾಲ್ಕು ಜನ ರಾಣಿಯರಿದ್ದರು. ಇವರೆಲ್ಲರೂ ಲೈಂಗಿಕ ಕ್ರಿಯೆಯಲ್ಲಿ ತೊಡಗಿಕೊಳ್ಳಲು ಶಾಂತಲೆಯೇ ಪ್ರೇರೇಪಿಸುವುದು ಒಂದು ಕಡೆಯಾದರೆ, ವಿವಾಹವಾದ ಪ್ರತಿಯೊಬ್ಬ ಮಹಿಳೆಯನ್ನು ಸಂತೋಷ ಪಡಿಸಬೇಕು ಎಂಬುದು ಧರ್ಮದ ನೀತಿ. ಹಾಗಾಗಿ ವಿಷ್ಣುವರ್ಧನನು ತನ್ನ ಪತ್ನಿಯರೊಂದಿಗೆ

ಒಂದೊಂದು ದಿನ ಕಳೆಯುತ್ತಾನೆ. ಹೀಗೆ ಲೈಂಗಿಕಾಸಕ್ತಿಯ ಕಾರಣವಾಗಿ ಬಹುಪತ್ನಿತ್ವಕ್ಕೆ ಒಳಗಾಗುವ ಕೆಲಸ ನಡೆಯುತ್ತದೆ.

ಬಹುಪತ್ನಿತ್ವಕ್ಕೆ ಇನ್ನೊಂದು ಕಾರಣವಿದೆ. ಶತ್ರುಗಳಿಂದ ರಕ್ಷಣೆಯನ್ನು ಪಡೆಯುವ ಸಲುವಾಗಿ ಈ ವಿವಾಹ ಪದ್ಧತಿಗೆ ಒಳಗಾಗುತ್ತಿದ್ದುದು ಕಂಡುಬರುತ್ತದೆ. ವಿಷ್ಣುವರ್ಧನನು ಪಲ್ಲವರ ಸಂಬಂಧವನ್ನು ಬೆಳೆಸುವ ಮೂಲಕ ಅವರ ಶತ್ರುಗಳಾದ ಚೋಳರನ್ನು ನಿಗ್ರಹಿಸಲು ಮುಂದಾದನು. ಈ ಅಂಶವು ಕಾದಂಬರಿಯಲ್ಲಿ ಅಲ್ಲಲ್ಲಿ ವ್ಯಕ್ತವಾಗಿದೆ. ವಿಷ್ಣುವರ್ಧನನ ಪಟ್ಟಾಭಿಷೇಕದ ಸಂದರ್ಭದಲ್ಲಿಯೇ ಅವನ ಮದುವೆಯನ್ನು ಮಾಡಬೇಕೆಂಬ ಆಸೆಯಿಂದ ರಾಜಮಾತೆ ಮಾಹಾಪ್ರಧಾನಿಗಳನ್ನು ಬರಹೇಳಿದಳು. ಇವರಿಬ್ಬರ ಸಂಭಾಷಣೆಯ ಸಂದರ್ಭದಲ್ಲಿ ಮಹಾಪ್ರಧಾನಿಗಳು ಪಲ್ಲವ ರಾಜಕುಮಾರಿಯನ್ನು ಕುರಿತು ಹೇಳುವಾಗ "ಪಲ್ಲವ ಗೋವಿಂದ ರಾಜರಿಗೂ ಚವುಡಬ್ಬೆ ರಾಣಿಯರಿಗೂ ಮಗಳಾಗಿರುವ ಬಮ್ಮಲಾದೇವಿ" ಎಂಬ ಅತ್ಯಂತ ಸ್ಫುರದ್ರೂಪಿಯಾದ ಕನ್ಯೆಯಿದಾಳಂತೆ. ಆಕೆ ಅಶ್ವವಿದ್ಯಾಪಾರಂಗತೆಯಂತೆ ಆಕೆಯನ್ನು ತಂದುಕೊಳ್ಳುವುದರಿಂದ ಪಲ್ಲವರ ಸಂಬಂಧ ನಮಗಾಗಿ ನಮ್ಮ ಶತ್ರುಗಳಾದ ಚೋಳರನ್ನು ನಿಗ್ರಹಿಸಲು ಅನುಕೂಲವಾಗಬಹುದು" (ಮೂರ್ತಿ ಮ.ನ.; ೨೦೦೮; ಪು. ೧೧೭) ಎಂದು ಹೇಳುತ್ತಾನೆ. ಹೀಗೆಯೇ ಇನ್ನೊಂದು ಪ್ರಸಂಗದಲ್ಲಿ ವಿಷ್ಣುವರ್ಧನ ತನ್ನ ಐದು ಜನ ರಾಣಿಯರೊಂದಿಗೆ ಯಾವಾಗ ಕೂಡಬೇಕು ಅಥವಾ ಯಾವಾಗ ಲೈಂಗಿಕ ಕ್ರಿಯೆಯಲ್ಲಿ ತೊಡಗಬೇಕು ಎಂಬುದರ ಬಗ್ಗೆ ತೀರ್ಮಾನ ತೆಗೆದುಕೊಳ್ಳುವ ಸ್ವಾತಂತ್ರ್ಯ ತನಗಿಲ್ಲವೇ? ಎಂದು ಶಾಂತಲೆಯನ್ನು ಪ್ರಶ್ನಿಸಿದಾಗ "ಇದು ಬರಿಯ ಸ್ವಾತಂತ್ರ್ಯದ ಪ್ರಶ್ನೆಯಲ್ಲ ಸ್ವಾಮಿ; ರಾಜಕಾರಣ. ಆ ರಾಣಿಯರನ್ನು ಮದುವೆಯಾಗಿರುವುದು ಅವರ ತವರಿನ ಜನರ ಬೆಂಬಲ ತಮ್ಮ ರಾಜ್ಯಕ್ಕೆ ಬೇಕೆಂದು. ತನ್ನ ಮೇಲಿನ ವ್ಯಾಮೋಹದಿಂದ ತಾವು ಅವರ ಮನಸ್ಸಿಗೆ ಅಸಮಾಧಾನವುಂಟುಮಾಡಿದರೆ ನನಗೆ ಕೆಟ್ಟ ಹೆಸರು ಬರುವುದು ಮಾತ್ರವಲ್ಲದೆ ಅವರ ತವರಿನವರು ನಮ್ಮ ರಾಜ್ಯಕ್ಕೆ ಶತ್ರುಗಳಾಗುತ್ತಾರೆ ಅಲ್ಲವೇ?" (ಅದೇ; ಪು. ೧೬೩) ಎಂದು ಹೇಳುತ್ತಾಳೆ. ಈ ಎರಡೂ ಪ್ರಸಂಗಗಳಲ್ಲಿ ತಮ್ಮ ಸಾಮ್ರಾಜ್ಯದ ಬಲವನ್ನು ಹೆಚ್ಚಿಸುವುದಕ್ಕಾಗಿ ಮತ್ತು ರಕ್ಷಣೆಗಾಗಿ ವಿವಾಹ ಸಂಬಂಧಗಳು ಏರ್ಪಡುತ್ತಿದ್ದವು. ಈ ಕಾರಣಕ್ಕಾಗಿ ವಿಷ್ಣುವರ್ಧನನು ಐದು ಜನ ಹೆಂಡತಿಯರನ್ನು ಹೊಂದಿದ್ದನು. ಮಧ್ಯಯುಗೀನ ಕಾಲದ ಸಂದರ್ಭದಲ್ಲಿ ಈ ಕಾರಣಕ್ಕಾಗಿ ಬಹುಪತ್ನಿತ್ವ ವಿವಾಹ ಪದ್ಧತಿ ಅತೀ ಹೆಚ್ಚಾಗಿದ್ದುದನ್ನು ಕಾಣುತ್ತೇವೆ. ಹೀಗೆ ಈ ಬಹುಪತ್ನಿತ್ವ ಮಹಿಳೆಯರಲ್ಲಿ ದ್ವೇಷಾಸುಯೆಗಳನ್ನು ಹೆಚ್ಚಿಸುತ್ತದೆ ಎಂಬುದನ್ನು ಕಾದಂಬರಿಯಲ್ಲಿ ಕಾಣುತ್ತೇವೆ.

ರಾಜಮನೆತನದವಳಾದ, ತನಗಿಂತಲೂ ಸಾಧಾರಣ ಹೆಗ್ಗಡೆಯ ಮಗಳಾದ ಶಾಂತಲೆ ಹಿರಿಯ ರಾಣಿಯಾಗಿ ರಾಜನ ಪ್ರೇಮದ ರಾಣಿಯಾಗಿ ಮೆರೆಯುತ್ತಿದ್ದುದ್ದು ಬಮ್ಮಲೆಗೆ ಹಿಡಿಸದಾಯಿತು. ಇದಕ್ಕೆ ಚತ್ತಬ್ಬೆಯೆಂಬ ಸೇವಕಿ ಉರಿಯುವ ಬೆಂಕಿಗೆ ತುಪ್ಪವನ್ನು ಸೇರಿಸಿದಂತೆ ಬಮ್ಮಲೆಯನ್ನು ಸೇರಿಕೊಂಡಳು. ಚತ್ತಬ್ಬೆಯ ಮಾತಿನಿಂದ ಶಾಂತಲೆಯ ಮೇಲಿನ ದ್ವೇಷ

ಇನ್ನೂ ಹೆಚ್ಚಾಯಿತು. ವಿಷ್ಣುವರ್ಧನನ್ನು ಶಾಂತಲೆಯಿಂದ ಬೇರ್ಪಡಿಸಿ ತನ್ನ ಕಡೆ ಸೆಳೆದುಕೊಳ್ಳಲು ಅವಕಾಶಕ್ಕಾಗಿ ಕಾದಿದ್ದಳು. ಹಾಗೆಯೇ ಆ ಒಂದು ಸಂದರ್ಭ ಒದಗಿಬಂದಿತು. ಚಾಲುಕ್ಯ ಅರಸ ತ್ರಿಭುವನಮಲ್ಲ ಪೆರ್ಮಾಡಿಯು ಹೊಯ್ಸಳರ ಶ್ರೇಯಸ್ಸನ್ನು ಕಂಡು ಅಸೂಯೆಗೊಂಡಿರುವುದು ಮತ್ತು ಅವನು ಇಪ್ಪತ್ತು ಮಂದಿ ಸಾಮಂತರ ಬೆಂಬಲದಿಂದ ಯುದ್ಧ ಮಾಡಲು ಸಿದ್ಧತೆ ನಡೆಸಿರುವ ಸಂಗತಿ ತಿಳಿದು ಬಮ್ಮಲೆಗೆ ಸಂತೋಷವಾಯಿತು. ಏಕೆಂದರೆ ಅವಳು ಯುದ್ಧ ವಿದ್ಯೆಯನ್ನು ಬಲ್ಲವಳು. ಅಶ್ವಹೃದಯದಲ್ಲಿ ಪರಿಣಿತಳಾಗಿದ್ದಳು. ಆದ್ದರಿಂದ ಈ ಯುದ್ಧದ ಅವಕಾಶವನ್ನು ಬಳಸಿಕೊಂಡು ವಿಷ್ಣುವರ್ಧನನ್ನು ತನ್ನ ವಶಕ್ಕೆ ತೆಗೆದುಕೊಳ್ಳಲು ಮುಂದಾದಳು. ಮುಂದೆ ಬಮ್ಮಲೆಯು ವಿಷ್ಣುವರ್ಧನನೊಂದಿಗೆ ಯುದ್ಧಕ್ಕೆ ಹೋಗುತ್ತಾಳೆ. ಯುದ್ಧದ ಸಂದರ್ಭದಲ್ಲಿ ವಿಷ್ಣುವರ್ಧನನ್ನು ತನ್ನ ಕಡೆ ಒಲಿಸಿಕೊಳ್ಳುವುದರಲ್ಲಿ ಯಶಸ್ವಿಯಾಗುತ್ತಾಳೆ. ಅಂದಿನಿಂದ ರಾಜ ಬಮ್ಮಲೆಯ ಕಡೆಗೆ ಹೆಚ್ಚು ಒಲಿಯುತ್ತಾನೆ. ಇದರಿಂದಾಗಿ ಕ್ರಮೇಣ ಶಾಂತಲೆಯನ್ನು ಉದಾಸೀನ ಮಾಡಲು ಆರಂಭಿಸುತ್ತಾನೆ. ಇಷ್ಟೇ ಅಲ್ಲದೆ ವಿವಾಹದ ಹೊಸದರಲ್ಲಿ ಶಾಂತಲೆಯೇ ಒತ್ತಾಯಪೂರ್ವಕವಾಗಿ ಸವತಿಯರ ನಿವಾಸಕ್ಕೆ ಪತಿ ವಿಷ್ಣುವರ್ಧನನನ್ನು ಕಳುಹಿಸಬೇಕಾಗಿತ್ತು. ಆದರೆ ಶಾಂತಲೆಯ ಬಗ್ಗೆ ಅವರು ತೋರಿಸುತ್ತಿದ್ದ ಮತ್ಸರವನ್ನು ಮನಗಂಡು ವಿಷ್ಣುವರ್ಧನ ಅವರೆಡೆಗೆ ಸುಳಿಯುವುದನ್ನು ನಿಲ್ಲಿಸಿದ್ದ. ಶಾಂತಲೆಯೇ ಒತ್ತಾಯಿಸಿದರೂ ಆ ವಿಚಾರವನ್ನು ಪ್ರಸ್ತಾಪಿಸಲೇಬೇಡವೆಂದು ನಿಷ್ಠುರವಾಗಿ ಹೇಳುತ್ತಿದ್ದ ಕಾಲವೊಂದಿತ್ತು. ಆದರೆ ಈ ವಿಷ್ಣುವರ್ಧನನೇ ಬಮ್ಮಲೆಯಲ್ಲಿಗೆ ಹೋಗಿ ಬರುತ್ತಿದ್ದನು. ಕೆಲ ಸಲ ಅನೇಕ ದಿವಸಗಳನ್ನು ಅಲ್ಲಿಯೇ ಕಳೆಯುತ್ತಿದ್ದ ಈ ಸಂದರ್ಭದಲ್ಲಿ ಬಮ್ಮಲೆಯು ಸಮಯವನ್ನು ನೋಡಿ ಶಾಂತಲೆಯ ಮೇಲಿನ ಹಠವನ್ನು ಸಾಧಿಸುವಲ್ಲಿ ಯಶಸ್ವಿಯಾಗುತ್ತಾಳೆ. ಅಂದರೆ ತನ್ನ ಜಾಣ್ಮೆಯಿಂದ ಶಾಂತಲೆ ಮತ್ತು ವಿಷ್ಣುವರ್ಧರನ್ನು ಬೇರ್ಪಡಿಸುತ್ತಾಳೆ. ಈ ಹಿಂದೆ ಯಾವೆಲ್ಲಾ ಸಾಮಾಜಿಕ, ಧಾರ್ಮಿಕ ಸಮಾರಂಭಗಳಲ್ಲಿ ವಿಷ್ಣುವರ್ಧನನೊಡನೆ ಪಟ್ಟದರಸಿ ಶಾಂತಲೆ ಕಾಣಿಸಿಕೊಳ್ಳುತ್ತಿದ್ದಳು ಅಂತಹ ಸಮಾರಂಭಗಳಿಗೆ ವಿಷ್ಣುವರ್ಧನನು ಹಾಜರಾಗದಂತೆ ನೋಡಿಕೊಂಡಳು. ಹೀಗಾಗಿ ಶಾಂತಲೆಯ ಪ್ರಾಮುಖ್ಯತೆ ಕುಂದುವಂತೆ ಮಾಡುವುದು ಮತ್ತು ನೇರವಾಗಿ ಅವಮಾನವಾಗುವಂತೆ ಮಾಡಿದಳು. ಹೀಗೆ ಮಾಡುವುದಕ್ಕೆಲ್ಲಾ ಬಮ್ಮಲೆಯ ಸೇವಕಿಯಾದ ಚತ್ತಬ್ಬೆಯು ಕುಮ್ಮಕ್ಕು ನೀಡುತ್ತಿರುತ್ತಾಳೆ. ಈ ದ್ವೇಷ ಎಲ್ಲಿಯವರೆಗೆ ಮುಂದುವರೆಯುತ್ತದೆ ಎಂದರೆ ಶಾಂತಲೆಯ ಮಗನನ್ನು ಕೊಲ್ಲುವುದು ಮತ್ತು ಶಾಂತಲೆ ಅರಮನೆಯನ್ನು ಬಿಟ್ಟು ಶಿವಗಂಗೆಗೆ ತೆರಳಿ ಮರಣ ಹೊಂದುವಲ್ಲಿಗೂ ಮುಂದುವರೆಯುತ್ತದೆ.

ಇಲ್ಲಿ ಮಹಿಳೆಗೆ ಮಹಿಳೆಯೇ ಶತ್ರುವಾಗಿರುವುದನ್ನು ಕಾಣಬಹುದು. ಸ್ತ್ರೀವಾದಿ ದೃಷ್ಟಿಕೋನದಿಂದ ಇದನ್ನು ಗಮನಿಸಿದರೆ ಮೊದಲು ಮಹಿಳೆಗೆ ಮಹಿಳೆ ಶತ್ರು ಎಂಬುದನ್ನು ತಳ್ಳಿಹಾಕಲಾಗುತ್ತದೆ. ಏಕೆಂದರೆ ವ್ಯವಸ್ಥೆಯಲ್ಲಿ ಹೆಣ್ಣಿಗೆ ಹೆಣ್ಣೇ ಶತ್ರು ಎಂಬುದಾಗಿ ಬಿಂಬಿಸ ಲಾಗುತ್ತದೆಯೇ ವಿನಃ ಮೂಲತಃ ಅವರು ಶತ್ರುಗಳಲ್ಲ. ಏಕೆಂದರೆ ಸಾಮಾಜಿಕ ಮೌಲ್ಯಗಳು ಮಹಿಳೆಯನ್ನು ಆ ರೀತಿ ರೂಪಿಸುತ್ತದೆ. ಇನ್ನು ಕಾದಂಬರಿಕಾರರು ಮಹಿಳೆಯನ್ನು ದ್ವೇಷ, ಅಸೂಯೆ ಮತ್ತು ಸೇಡಿನ ರೂಪದ ಪ್ರತೀಕದವಳಂತೆ ಚಿತ್ರಿಸಿರುವುದನ್ನು ಕಾಣುತ್ತೇವೆ. ಲೇಖಕರೇ

ಹೇಳುವಂತೆ "ಛಲವನ್ನು ಸಾಧಿಸುವುದರಲ್ಲಿ ಹೆಣ್ಣು ಅಸಮಾನಳು. ಹಾವು ಹನ್ನೆರಡು ವರ್ಷ ಕಾದರೆ ಹೆಣ್ಣು ಹನ್ನೆರಡು ಜನ್ಮಗಳವರೆಗೆ ಕಾಯಬಲ್ಲಳು. ಭೀಷ್ಮನ ಮೇಲೆ ಛಲ ಸಾಧಿಸಲಾಗದೆ ಹೋದ ಅಂಬೆ ತನ್ನ ದೇಹವನ್ನೇ ಅಗ್ನಿಗೆ ಅಹುತಿ ಮಾಡಿ ಶಿಖಂಡಿಯಾಗಿ ಹುಟ್ಟಿ ಅದನ್ನು ಸಾಧಿಸಿಕೊಂಡಳು. ತಲೆ ಕೂದಲನ್ನು ಬಿಚ್ಚಿದ ದ್ರೌಪದಿಯು ರಾಕ್ಷಸಿಯರೂ ಹೇಸಬಹುದಾದಂತೆ ದುಶ್ಯಾಸನ ವಕ್ಷಸ್ಥಲದ ರಕ್ತವನ್ನು ಕೂದಲಿಗೆ ಹಚ್ಚಿಕೊಂಡು ಮುಡಿ ಕಟ್ಟಿದಳು. ಛಲವೆನ್ನುವ ಗುಣ ಸ್ತ್ರೀ ಜಾತಿಗಾಗಿಯೇ ಬ್ರಹ್ಮನಿಂದ ಸೃಷ್ಟಿಯಾದುದು" (ಅದೇ; ಪು. ೧೫೯: ೧೬೦) ಎಂದರು. ಹೀಗೆ ಹೇಳುವುದರ ಮುಖಾಂತರ ಬಮ್ಮಲೆಯ ಸೇಡಿನ ಕುರಿತು ತಿಳಿಸುತ್ತಾರೆ. ಒಟ್ಟಾರೆಯಾಗಿ ಕಾದಂಬರಿಯಲ್ಲಿ ಬಮ್ಮಲೆ ಮತ್ತು ಚತ್ತಬ್ಬೆಯನ್ನು ಸೇಡಿನ ಜ್ವಾಲಾಮುಖಿಗಳಂತೆ ಚಿತ್ರಿಸಲಾಗಿದೆ. ಶಾಂತಲೆ ಮಾತ್ರ ಶಾಂತಿಯ ಪ್ರತಿರೂಪದಂತೆ ಇರುವುದನ್ನು ಕಾಣುತ್ತೇವೆ.

ಪಟ್ಟದ ರಾಣಿಯಾಗಿದ್ದು ಸಕಲ ಸೌಲಭ್ಯವನ್ನು ಹೊಂದಿದ ಶಾಂತಲೆ ಯಾವುದೇ ಕೆಲಸ ಮಾಡಿದರೂ ರಾಜನಾದ ವಿಷ್ಣುವರ್ಧನನಿಗೆ ಕೇಳಲೇಬೇಕಿತ್ತು. ಅವಳಿಗೆ ತನ್ನದೇ ಆದ ಸ್ವಾತಂತ್ರ್ಯವಿರಲಿಲ್ಲ ಎನ್ನುವುದನ್ನು ಈ ನಿದರ್ಶನದೊಂದಿಗೆ ನೋಡಬಹುದು.

ಶಾಂತಲಾದೇವಿ "ಪ್ರಭುಗಳು ಒಪ್ಪಿದರೆ ಕುದುರೆಯ ಏರಾಟದ ಒಂದು ಶಾಲೆಯೇ ಹೆಮ್ಮಕ್ಕಳಿಗಾಗಿ ನಡೆಸಬಹುದು. ಕಲಿವ ಮಂದಿಗೆ ಕೊರತೆಯಿಲ್ಲ" ಎಂದು ಬೇಡಿದಳು. ವಿಷ್ಣುವರ್ಧನನು ನಕ್ಕು "ಆಗಲಿ" ಎಂದು ಭರವಸೆಯನ್ನು ಕೊಟ್ಟನು(ಸಮೇತನಹಳ್ಳಿ ರಾಮರಾಯ; ೧೯೬೮; ಪು. ೧೨೩).

ಇತಿಹಾಸದಲ್ಲಿ ಪಟ್ಟದ ರಾಣಿಯಾದರೂ ರಾಜನು ಯುದ್ಧಕ್ಕೆ ಹೋದ ಸಂದರ್ಭದಲ್ಲಿ ರಾಜನ ಸ್ಥಾನದಲ್ಲಿ ನಿಂತುಕೊಂಡು ಆಡಳಿತ ನಡೆಸುತ್ತಿದ್ದರು. ಆಡಳಿತ ನಡೆಸುವುದಕ್ಕೂ ಮುಂಚೆಯೇ ಸಭೆಯಲ್ಲಿ ಅದರ ತೀರ್ಮಾನವನ್ನು ಕೈಗೊಳ್ಳಲಾಗುತ್ತಿತ್ತು.

ಪಡುವಣದ ಮಲೆಪರು ವಿರುದ್ಧ ಯುದ್ಧಕ್ಕೆಂದು ಹೊರಡುವಾಗ ವಿಷ್ಣುವರ್ಧನ ತನ್ನ ಸ್ಥಾನದಲ್ಲಿ ಪ್ರತಿ ರಾಜನಾಗಿ ಅಂದಂದಿನ ಕೆಲಸಗಳನ್ನು ಸರಿತೂಗಿಸಿಕೊಂಡು ಹೋಗಲು ತನ್ನ ಪಟ್ಟದರಸಿ ಶಾಂತಲಾದೇವಿಯೇ ತಕ್ಕವಳು ಎಂದುಕೊಳ್ಳುತ್ತಾನೆ. "ಶಾಂತಲಾದೇವಿ ತಕ್ಕವಳು ಎಂಬುದನ್ನು ವಿಷ್ಣುವರ್ಧನನು ಬಲ್ಲನು. ಅದನ್ನು ತಾನು ಹೇಳುವುದು ಅಷ್ಟಾಗಿ ಚೆಂದವಲ್ಲ ಎಂದು ಅವನು ಬಗೆದನು. ರಾಜನು ಊರಿನಲ್ಲಿ ಇಲ್ಲದ ಸಮಯದಲ್ಲಿ ನೂರು ಮಂದಿ ಅಧಿಕಾರಿಗಳು, ಅಮಾತ್ಯರು ರಾಜನ ಅಧಿಕಾರಕ್ಕೆ ತಲೆಬಾಗಿಸಬೇಕಾದವರು. ಹಾಗೆ ಇದ್ದವರು ತಲೆತಲಾಂತರದಿಂದ ಹೊಯ್ಸಳ ರಾಜ್ಯಕ್ಕೆ ಸೇವೆಯನ್ನು ಸಲ್ಲಿಸಿದ ಹಿರಿಯ ವಂಶದವರು; ಸಂಭಾವಿತರು ಮತ್ತು ಪರಿಣಿತರು, ಅಂತಹ ಬಲ್ಲವರ ಮೇಲೆ ತಾನು ತನ್ನ ಅಧಿಕಾರವನ್ನು ಉಪಯೋಗಿಸಿ ಆ ಜಾಗದಲ್ಲಿ ಒಂದು ಹೆಣ್ಣನ್ನು ಇಡುವುದಾದರೆ, ಕೆಲಸ ಮಾಡುವ ಜನ ಅದನ್ನು ಹೇಗೆ ನೋಡುತ್ತಾರೆ ಎಂಬುದು ಮುಖ್ಯ. ಅದರಲ್ಲಿಯೂ ನಾಡನ್ನು ಯುದ್ಧದ ಸುಳಿಗೆ ಸಿಕ್ಕಿಸುವಂತಹ ಬಹುಮುಖ್ಯ ದಿವಸಗಳಲ್ಲಿ ಅಂತಹ ನಿಷ್ಠುರ ಮನಸ್ಸನ್ನು ಮುರಿಯುವುದು ಶುಭವಲ್ಲ" (ಅದೇ; ಪು. ೧೬೫) ಎಂದುಕೊಳ್ಳುತ್ತಾನೆ ವಿಷ್ಣುವರ್ಧನ. ಈ ವಿಷಯವನ್ನು

ಸಭೆಯಲ್ಲಿ ಚರ್ಚಿಸುವಾಗ ನಾಗಯ್ಯನು ಶಾಂತಲಾದೇವಿಯರು ಮಹಾರಾಣಿಯಾಗಿರಲು ತಕ್ಕ ಗುಣವಿದೆ ಎಂದಾಗ "ಒಂದು ಹೆಣ್ಣಿನ ಕೈಕೆಳಗೆ ದುಡಿಯಬಲ್ಲ ಜನ ಒಪ್ಪಬೇಕು".

"ಆ ತಾಯಿಯಿಂದ ಗಂಡುಗಳು ಎಂದೆನಿಸಿಕೊಂಡ ನಾವು ಕಲಿಯಬೇಕಾದದ್ದು ಎಷ್ಟಿಲ್ಲ? ಪ್ರಭುವಿನ ಶಂಕೆಯನ್ನು ಕಳೆಯುವ ಕೆಲಸವನ್ನು ನಾಳಿನ ಓಲಗದಲ್ಲಿ ಜನತೆ ಮಾಡುತ್ತದೆ" (ಅದೇ; ಪು. ೧೬೬). ಈ ರೀತಿಯ ಸಂಭಾಷಣೆಯಲ್ಲಿ ಕಾದಂಬರಿಕಾರರು ಒಂದು ಸಾಮ್ರಾಜ್ಯವನ್ನು ನಡೆಸುವ ಅಧಿಕಾರ ಹೊಂದಿರುವ ರಾಜನೇ ಹೆಣ್ಣಿನ ಸ್ಥಾನಮಾನದ ಬಗ್ಗೆ ಜನತೆ ಏನೆಂದುಕೊಳ್ಳುತ್ತದೆ ಎಂಬ ಸಂಶಯಕ್ಕೆ ಒಳಗಾಗುವಂತೆ ಸನ್ನಿವೇಶವನ್ನು ಚಿತ್ರಿಸಿದ್ದಾರೆ.

ನರ್ತಕಿ ವಂಶದಲ್ಲಿ ಹುಟ್ಟಿದ ಶಾಂತಲೆಗೆ ಸಂಪ್ರದಾಯವಾಗಿ ವಿಧಿಸಿದ ಚೌಕಟ್ಟು ಒಂದು ಕಡೆಯಾದರೆ, ವೈಶ್ಯೆಯಾಗಿ ನರ್ತನೆಯಲ್ಲಿಯೇ ಪ್ರವೀಣೆಯಾದ 'ಚಿನ್ನಾಸಾನಿಯು' ರಾಜನ ಅಪ್ಪಣೆಗೆ ಮಣಿಯುತ್ತಾಳೆ. ದೇವುಡು ಅವರ 'ಚಿನ್ನಾ' ಕಾದಂಬರಿಯು ವಿಜಯನಗರದ ರಾಜ ನರ್ತಕಿಯಾದ 'ಚಿನ್ನಾಳ' ನರ್ತನದ ಸುತ್ತಲೇ ಸುತ್ತುತ್ತದೆ. ಗೋಲ್ಕೊಂಡ ಷಾಹಿ ನವಾಬರು ಚಿನ್ನಾದೇವಿಯ ನರ್ತನವನ್ನು ನೋಡುವ ಅಭಿಲಾಷೆಯಿಂದ ಐದು ದಿನ ತನ್ನ ಆಸ್ಥಾನದಲ್ಲಿ ಚಿನ್ನ ಸೋದರಿಯರು ನರ್ತನ ಮಾಡಿದರೆ ಒಂದು ಲಕ್ಷ ಬಹುಮಾನವನ್ನು ನೀಡುವುದಾಗಿ ಹೇಳಿ ಕಳುಹಿಸುವುದು ಮತ್ತು ಇದಕ್ಕೆ ಚಿನ್ನಾದೇವಿ ಒಪ್ಪದಿರುವ ಪ್ರಸಂಗಗಳು ಕಂಡುಬರುತ್ತವೆ. ಸ್ವತಃ ಚಕ್ರವರ್ತಿಗಳೇ ಆಕೆಯನ್ನು ಕರೆಯಿಸಿಕೊಂಡು "ಹೋಗಿ ಬಾ ಚಿನ್ನಾ, ನಮ್ಮ ಆಸ್ಥಾನದ ಕೀರ್ತಿ ಬೆಳೆಯಲಿ" ಎನ್ನುತ್ತಾರೆ. ಚಿನ್ನಾ ಚೊಕ್ಕವಾಗಿ ಕೈಮುಗಿದು 'ಮಹಾಪ್ರಭು' ವಿಜಯನಗರದ ಚಕ್ರವರ್ತಿಯವರಿಗೆ ಜಯವಾಗಲಿ ಎಂದು ಮುಗಿದ ಕೈ ಮತ್ತೊಬ್ಬರಿಗೆ ಮುಗಿಯುವುದು ಸಾಧ್ಯವಿಲ್ಲ ಎನ್ನುತ್ತಾಳೆ. ಇದನ್ನು ಬಹುವಾಗಿ ಮೆಚ್ಚಿ 'ಹುಚ್ಚಿ ಇದು ವಿದ್ಯಾಸ್ಥಾನ, ಗೋಲ್ಕೊಂಡ ಲಕ್ಷ್ಮಿಸ್ಥಾನ' ಎನ್ನುತ್ತಾರೆ. ಹೀಗೆ ಹೇಳುವುದರ ಮೂಲಕ ಚಿನ್ನಾಳನ್ನು ತನ್ನ ಸಾಮ್ರಾಜ್ಯದ ಕೀರ್ತಿ ಪತಾಕೆಯನ್ನು ಬೇರೆಡೆ ಪಸರಿಸಲು ತಿಳಿಸುತ್ತಾರೆ. ಚಿನ್ನಾದೇವಿಯು ಹೀನಕುಲದ ಸೂಳೆ ವಂಶಕ್ಕೆ ಸೇರಿದವಳಾಗಿದ್ದರಿಂದ ಅವಳನ್ನು ಬೇರೆ ರಾಜರ, ಸುಲ್ತಾನರ ಸಮ್ಮುಖದಲ್ಲಿ ನರ್ತನ ಮಾಡಲು ಸೂಚಿಸುತ್ತಾರೆ. ಆದರೆ ರಾಜನ ಅಂತಃಪುರದ ರಾಣಿಯಾದರೆ ಈ ಕಾರ್ಯಕ್ಕೆ ಮುಂದಾಗುತ್ತಿರಲಿಲ್ಲವೆಂಬುದು ಮುಖ್ಯವಾಗುತ್ತದೆ. ಹಾಗೆಯೇ ಕಾದಂಬರಿಯಲ್ಲಿ ಚಿನ್ನಾಳನ್ನು 'ಸೂಳೆ' ಎಂದು ಸಂಬೋಧಿಸುವುದು ಹಲವು ಕಡೆ ಕಂಡುಬರುತ್ತದೆ. ಜೊತೆಗೆ ಚಿನ್ನಾಳೇ ತನ್ನ ಕುಲದ ಬಗ್ಗೆ ಜಿಗುಪ್ಸೆಯನ್ನು ತಾಳುವ ಪ್ರಸಂಗಗಳು ಕಂಡುಬರುತ್ತವೆ. ಕೊನೆಗೆ ಗೋಲ್ಕೊಂಡದ ಸುಲ್ತಾನನು ವೀರಪ್ಪಶೆಟ್ಟಿಯೊಂದಿಗೆ ಸಂಧಿಯನ್ನು ಸಾಧಿಸಿ ತಮ್ಮ ಮನದಿಚ್ಛೆಯನ್ನು ಪೂರೈಸಿಕೊಳ್ಳುತ್ತಾನೆ. ಅಂದರೆ ಚಿನ್ನಸಾನಿಯು ಸುಲ್ತಾನನ ಮುಂದೆ ನರ್ತನ ಮಾಡುವುದರಿಂದ ಅವರೊಂದಿಗೆ ಸ್ನೇಹ ಸಂಬಂಧ ಬೆಳೆಯುವುದರ ಜೊತೆಗೆ ಯುದ್ಧಗಳು ಸಂಭವಿಸುವುದಿಲ್ಲ ಎಂಬ ಆಶಯವೊಂದು ಪೂರ್ಣಗೊಂಡಿತು. ವಿಜಯನಗರ ಸಾಮ್ರಾಜ್ಯದ ಉಳಿವಿಗಾಗಿ ಮತ್ತು ಅಭಿವೃದ್ಧಿಗಾಗಿ ಚಿನ್ನಾಳನ್ನು ಸುಲ್ತಾನನಿಗೆ ಒತ್ತೆ ಇಟ್ಟ ಹಾಗಾಗುತ್ತದೆ. ಈ ಪ್ರಕ್ರಿಯೆಗಳೆಲ್ಲವೂ ಚಿನ್ನಾಳ ನರ್ತನದ ಸುತ್ತಲೇ ಸುತ್ತುತ್ತವೆ. ಚಿನ್ನಾಸಾನಿ ಸೂಳೆಯೆಂದು ಕರೆಯಲ್ಪಟ್ಟಿದ್ದರೂ ಸಹ

ಅವಳನ್ನು ಪುರುಷ ವ್ಯವಸ್ಥೆ ತಮ್ಮ ಅನುಕೂಲಕ್ಕೆ ತಕ್ಕಂತೆ ಬಳಸಿಕೊಳ್ಳುತ್ತದೆ ಎಂಬುದು ಕಾದಂಬರಿಯಿಂದ ತಿಳಿದುಬರುತ್ತದೆ. ನರ್ತನವೆಂಬುದು ಒಂದು ಕಲೆ. ಈ ಕಲೆಯ ಹೆಸರಿನಲ್ಲಿ ಪುರುಷ ವ್ಯವಸ್ಥೆ ತಮ್ಮ ಲೈಂಗಿಕ ಇಚ್ಛೆಗಳನ್ನು ಪೂರೈಸಿಕೊಳ್ಳುವುದು ಮತ್ತು ಆಕೆಯನ್ನು ತನ್ನ ಸ್ವಂತ ಆಸ್ತಿಯೆಂಬಂತೆ ನಡೆಸಿಕೊಳ್ಳುವುದನ್ನು ಕಾಣಲಾಗುತ್ತದೆ.

ಕಂಬನಿಯ ಕುಯಿಲು ಕಾದಂಬರಿಯಲ್ಲಿ ಮದಕರಿನಾಯಕನ ಹಿರಿಯ ನಾಗತಿಯಾದ ಓಬವ್ವ ನಾಗತಿಯ ಪಾತ್ರ ಪ್ರಮುಖವಾಗುತ್ತದೆ. ಮಹಿಳೆಯ ಪಾತಿವ್ರತ್ಯವನ್ನು ವೈಭವೀಕರಿಸುವಲ್ಲಿ ಈ ಕಾದಂಬರಿಯು ಪ್ರಮುಖ ಪಾತ್ರವನ್ನು ವಹಿಸುತ್ತದೆ. ಮದಕರಿನಾಯಕರ ಮರಣದ ನಂತರ ರಾಜ್ಯದ ಉತ್ತರಾಧಿಕಾರದ ಪ್ರಶ್ನೆ ಎದುರಾದಾಗ ನಾಯಕರ ಕಿರಿಯ ಹೆಂಡತಿಯಾದ ಗೌರವ್ವನಾಗತಿ ಓಬವ್ವ ನಾಗತಿಗೆ ತನ್ನ ಮನದಿಚ್ಛೆಯನ್ನು ತಿಳಿಸುತ್ತಾಳೆ. ಆಗ ಓಬವ್ವ ನಾಗತಿ "ನಮಗಿನ್ನು ಈ ಚಿಂತೆ ಉಳಿದಿದೆಯೇ ಗೌರಕ್ಕ - ಸೂರ್ಯ ಮುಳುಗಿದ ಮೇಲೆ ಬೆಳಕಿನ ಯೋಚನೆಯೇಕೆ? ಆ ಮಾತು ಅವರಿಗೆ ಬಿಡು ಪ್ರಭುಗಳ ಉಪ್ಪು ತಿಂದವರಿಗೆ ಅವರ ಋಣ ತೀರಿಸುವ ಭಾರ ಇರಲಿ. ನಾವು ದೊರೆಗಳು ಕೊಟ್ಟ ಅರಿಶಿಣ, ಕುಂಕುಮ ಸೂರೆ ಮಾಡುವ ಚಿಂತೆ ಮಾಡೋಣ; ಆಳುವವರು, ಆಳಿಸಿಕೊಳ್ಳುವವರು ಆಳ್ವಿಕೆಯ ಆಲೋಚನೆ ಮಾಡಲಿ" (ತ.ರಾ.ಸು.; ೧೯೫೩; ಪು. ೧೩) ಎಂದು ಹೇಳುತ್ತಾಳೆ. ಹಾಗೆಯೇ ಇನ್ನೊಂದು ಪ್ರಸಂಗದಲ್ಲಿ ಮದಕರಿನಾಯಕರ ಮರಣದ ನಂತರ ಉತ್ತರಾಧಿಕಾರಿಯ ವಿಷಯವಾಗಿ ತನ್ನ ದೃಢ ನಿರ್ಧಾರವನ್ನು ದೇಸಾಯಿಗಳಿಗೆ, ಮಂತ್ರಿಗಳಿಗೆ ಗೌರವ್ವ ನಾಗತಿ ತಿಳಿಸಿದಾಗ "ಪ್ರಭೂ, ಪ್ರಭೂ ನಿಮ್ಮೆದುರು ಇಷ್ಟು ಮಾತಾಡಿದ ನನ್ನ ಅಪರಾಧವನ್ನು ಮನ್ನಿಸಿ ನಿಮ್ಮ ಬಯಕೆಯನ್ನು ನೆರವೇರಿಸಲು ಲಜ್ಜೆಗೆಟ್ಟು ಇಷ್ಟು ಮಾತನಾಡಬೇಕಾಯಿತು" (ಅದೇ; ಪು. ೧೭) ಎಂದಳು. ಹೀಗೆ ತಾವು ಪತಿವ್ರತೆಯಾಗಿದ್ದುಕೊಂಡು ಗಂಡನ ಎದುರಿಗೆ ಮಾತನಾಡುವುದೂ ಕೂಡ ಅಕ್ಷಮ್ಯ ಅಪರಾಧ ಎಂದು ತಿಳಿದಿದ್ದರು. ಹಾಗಾಗಿ ಈ ರೀತಿಯ ಮಾತುಗಳು ಅವರ ಬಾಯಿಂದ ಬಂದವು. ಅಂದರೆ ಪತಿವ್ರತೆಯಾದವಳು ಪುರುಷನಿಗೆ ಎದುರು ನಿಂತು ಮಾತನಾಡಬಾರದು ಅವಳು ಕೇವಲ ಜವಾಬ್ದಾರಿಗಳನ್ನು ನಿಭಾಯಿಸಬೇಕೇ ಹೊರತು ಅವುಗಳನ್ನು ಪ್ರಶ್ನಿಸುವಂತಿಲ್ಲ ಎಂಬ ವಿಚಾರಗಳು ನಮ್ಮ ಸಂಪ್ರದಾಯದಲ್ಲಿ ನಡೆದುಕೊಂಡು ಬಂದಿರುವುದರಿಂದ ಮಹಿಳೆ ಅದರಿಂದ ಹೊರಬರಲು ಆಗಲಿಲ್ಲ. ಅರಿಶಿಣ, ಕುಂಕಮ ಎಂಬುದು ಹೆಣ್ಣಿನ ಮುತ್ತೈದೆಯ ಸಂಕೇತವಾಗಿರುತ್ತದೆ ಎಂಬ ನಂಬಿಕೆ ಮಹಿಳೆಯರಲ್ಲಿ ಬಲವಾಗಿ ಇರುವುದರಿಂದ ಗಂಡ ಸತ್ತ ನಂತರ ಹೆಂಡತಿಯಾದವಳು ಕುಂಕುಮವನ್ನು ಹಣೆಯಲ್ಲಿ ಇಟ್ಟುಕೊಳ್ಳುವಂತಿಲ್ಲ ಎಂಬ ನೀತಿ ನಮ್ಮ ಸಂಸ್ಕೃತಿಯಲ್ಲಿದೆ.

ಹಾಗಾಗಿ ತಮ್ಮ ಪತಿದೇವರಾದ ಮದಕರಿನಾಯಕರೇ ಮರಣ ಹೊಂದಿದ ಮೇಲೆ ಅವರಿಗೆ ಇನ್ನಾವುದರ ಚಿಂತೆಯೇ ಇಲ್ಲದೆ ತಮ್ಮ ಮುತ್ತೈದೆತನವನ್ನು ಕಳೆದುಕೊಳ್ಳುವ ಕ್ರಿಯೆಗೆ ಆಲೋಚಿಸಬೇಕು ಎಂಬುದನ್ನು ಓಬವ್ವ ನಾಗತಿಯು ಗೌರವ್ವ ನಾಗತಿಗೆ ತಿಳಿಸುತ್ತಾಳೆ. ಈ ಅವಧಿಯಲ್ಲಿ ಗಂಡನೇ ಸರ್ವಸ್ವ ಎಂದು ಬದುಕಿಬಾಳಬೇಕಾದುದು ಹೆಣ್ಣಿನ ಕರ್ತವ್ಯ ಎಂದು

ನಿಯಮವನ್ನು ರೂಪಿಸಲಾಗಿತ್ತು. ಆ ಕಾರಣಕ್ಕಾಗಿಯೇ ಮಹಿಳೆಯರು ಪತಿಯೇ, ಪರದೈವ ಎಂದು ತಿಳಿದು ಬಾಳುತ್ತಿದ್ದರು.

ಓಬವ್ವ ನಾಗತಿಯು ಮದಕರಿ ನಾಯಕನನ್ನು ಕೈಹಿಡಿದ ಮೊದಲ ಮಹಿಳೆ. ಈಕೆಯ ನಂತರ ಇಪ್ಪತ್ತೊಂಬತ್ತು ಜನರನ್ನು ವಿವಾಹವಾದ ಮದಕರಿನಾಯಕನು ವಿಲಾಸಿ ಜೀವನದಲ್ಲಿ ಮುಳುಗುತ್ತಾನೆ. ಮೊದಮೊದಲು ಓಬವ್ವ ನಾಗತಿಯ ಹೃದಯದಲ್ಲಿಯೂ ಸವತಿ ಮತ್ಸರವು ಹೊತ್ತಿ ಹೆಡೆಯಾಡಿಸುತ್ತಿತ್ತು. ತನ್ನ ಸುಖಕ್ಕೆ ಕಂಟಕವಾಗಿ ಬಂದರಲ್ಲಾ ಎಂದು ಮರುಗುತ್ತಿದ್ದಳು. ನಂತರ ತನ್ನನ್ನು ತಾನು ಸಂತೈಸಿಕೊಂಡು ಸವತಿ ಮತ್ಸರವನ್ನು ಬಿಟ್ಟು ಬಿಡುತ್ತಾಳೆ.

"ಏನೋ ಹಿಂದಿನ ಜನುಮದಲ್ಲಿ ನಾನು ತಾಯಿಗೆ ಮಾಡಿದ ಅರಿಶಿಣ, ಕುಂಕುಮದ ಪೂಜೆ ಸಾಲದಾಯಿತೇನೋ, ಅದಕ್ಕೆ ಈ ಜನ್ಮದಲ್ಲಿ ಪೂರ್ಣವಾಗಿ ಪತಿ ಸುಖ ದೊರೆಯಲಿಲ್ಲ. ಅದಕ್ಕಾಗಿ ಈ ಜನ್ಮದಲ್ಲಿ ಸವತಿಯರೊಂದಿಗೆ ಕಚ್ಚಾಡಿದರೆ ಬರುವುದೇನು? ನಾಯಕರ ಮನಸ್ಸು ಪತಂಗದಂತೆ ದಿನಕ್ಕೊಬ್ಬ ಹೊಸ ನಾಗತಿಯ ಸುತ್ತ ಸುತ್ತುತ್ತಿರುವಾಗ, ಹೆಣ್ಣು ಹೆಣ್ಣು ಕಾದಾಡಿ ಆಗುವ ಲಾಭವೇನು? ವೃಥಾ ಮನಸ್ತಾಪ; ಅದನ್ನು ಕಟ್ಟಿಕೊಂಡರೂ ಆಗುವುದೇನು? ಮನುಷ್ಯ ಮನುಷ್ಯನಿಗೆ ಏನು ತಾನೇ ಕೊಡಬಲ್ಲ. ಕೊಡುವುದು, ಬಿಡುವುದು ತಾಯಿಯ ಇಚ್ಛೆ ಆಯಿತು ಈ ಜನ್ಮದಲ್ಲಿ ಆಕೆಯ ಪ್ರೀತಿ ಪಡೆದು ಬರಲಿಲ್ಲ. ಮುಂದಿನ ಜನ್ಮಕ್ಕಾದರೂ ದಾರಿ ಸರಿ ಮಾಡಿಕೊಳ್ಳೋಣ" (ಅದೇ; ಪು. ೫೦) ಎಂದುಕೊಂಡಳು. ಮುಂದಿನ ಜನ್ಮದಲ್ಲಿ ಪತಿಯ ಸುಖವನ್ನು ಸಂಪೂರ್ಣವಾಗಿ ಪಡೆಯಬೇಕೆಂದರೆ ಈ ಜನ್ಮದಲ್ಲಿ ಭೋಗ, ಭಾಗ್ಯ ವಿಲಾಸಗಳನ್ನು ತ್ಯಜಿಸಿ ಪೂಜೆಯನ್ನು ಮಾಡಿಕೊಂಡೇ ಜೀವಿಸಬೇಕೆಂದು ನಿರ್ಧರಿಸಿದಳು. ಅಂದರೆ ವಿವಾಹ ನಂತರ ಪತಿಯ ಸುಖ ದೊರೆಯದಿದ್ದಾಗ ಮಹಿಳೆ ಈ ರೀತಿಯಾಗಿ ಮಾನಸಿಕವಾಗಿ ನೋವನ್ನು ಅನುಭವಿಸುತ್ತಾಳೆ. ಲೈಂಗಿಕತೆಯ ಅತೃಪ್ತಿ ಭಾವ ಅವಳನ್ನು ಯಾವಾಗಲೂ ಕಾಡುತ್ತಿರುತ್ತದೆ.

ಕೊರಟಿ ಶ್ರೀನಿವಾಸರಾವ್ ಅವರ 'ಕುಮಾರರಾಮ' ಕಾದಂಬರಿಯಲ್ಲಿ ಬರುವ ರತ್ನಾಜಿಯು ಸಹ ಲೈಂಗಿಕತೆಯ ಅತೃಪ್ತಿಗೆ ಒಳಗಾಗಿ ತನ್ನನ್ನು ತಾನು ಸ್ವವಿಮರ್ಶೆಗೆ ಒಳಪಡಿಸಿಕೊಳ್ಳುತ್ತಾಳೆ. "ರತ್ನಾಜಿ, ನೀನು ಕಾಮಾತುರಳಾಗಿ ಎಂತಹ ಹೇಯ ಕಾರ್ಯಕ್ಕೆ ಹೊರಟಿದ್ದಿ. ವಾರೆಯಲ್ಲಿ ಮಗನಾಗುವ ರಾಮನಾಥನನ್ನು ನೀನು ಕೂಡಲು ಹೊರಟಿದ್ದು ನಿನಗೆ ಗೌರವ ತರುವ ಕಾರ್ಯವೆ? ನೀನು ಕಾಮವಿಹ್ವಲಳಾಗಿ ತಿಳಿಗೇಡಿಯಾಗಬೇಡ".

"ನಾನು ಕಾಮಾತುರಳಾಗಿರಬಹುದು. ಆದರೆ ತಿಳಿಗೇಡಿಯಲ್ಲ. ನನ್ನನ್ನು ವಿವಾಹವಾದ ಕಂಪಿಲರಾಯನು ತನ್ನ ಇಚ್ಛೆಯ ವಿರುದ್ಧ ತನ್ನನ್ನು ಭೋಗಿಸಲಿಲ್ಲವೆ? ಇಂದು ನನ್ನ ಸ್ವ - ಇಚ್ಛೆಯಿಂದ ರಾಮನಾಥನಿಗೆ ನಾನು ಒಲಿದರೆ ಅದರಲ್ಲಿ ಯಾವ ತಪ್ಪು?"

"ನೀನು ಕಂಪಿಲರಾಯನ ಧರ್ಮಪತ್ನಿ. ಅವನು ಅನುಭವಿಸಿದ ದೇಹವನ್ನು ರಾಮನಾಥನಿಗೆ ಅರ್ಪಿಸುವೆಯಾ"?

"ನನ್ನ ಪಾಲಿಗೆ ಇಬ್ಬರೂ ಪುರುಷರೇ! ತಂದೆ-ಮಕ್ಕಳಾದರೇನು? ನನ್ನ ಕಾಮದೃಷ್ಟಿಗೆ ಅವರು ಪುರುಷರು. ಅಲ್ಲದೆ ತಂದೆಯು ಆಳಿದ ವಸುಂಧರೆಯನ್ನು ಮಗನು ಅನುಭವಿಸುವುದಿಲ್ಲವೆ ಅಂತೆಯೇ ನಾನು ಒಲಿದವನನ್ನು ಕೂಡಿದರೆ ತಪ್ಪೇನು?"

"ಇದು ಕೇವಲ ಕುತರ್ಕ, ಕೇವಲ ಸ್ವಾರ್ಥ ಸಾಧನೆಯ ಮಾತು".

"ಅವನು ನನಗೆ ಬಗೆದ ದ್ರೋಹಕ್ಕಿಂತ ನಾನು ಬಗೆಯುತ್ತಿರುವ ದ್ರೋಹ ದೊಡ್ಡದೆ?"

"ಅವನು ಬಗೆದ ದ್ರೋಹವಾದರೂ ಏನು?"

"ಯುವತಿಯಾದ ನನ್ನನ್ನು ವರಿಸಿ, ತನ್ನ ಕಾಮತೃಷೆಗೆ ಬಲಿಕೊಟ್ಟು, ಪಂಜರದ ಗಿಳಿಯನ್ನಾಗಿ ಮಾಡಿಕೊಂಡ. ಇದು ಸಣ್ಣ ಅಪರಾಧವೆ"?

"ಇದರಲ್ಲಿ ನಿನಗೆ ಸಂತೋಷವಿತ್ತು, ಸುಖವಿತ್ತು, ಬಾಳಿನಲ್ಲಿ ನೆಮ್ಮದಿ ಬಂತು".

"ಆದರೆ ನಾನು ನಿರೀಕ್ಷಿಸುವ ಸುಖ, ಶಾಂತಿ ಮಾತ್ರ ನನ್ನದಾಗಲಿಲ್ಲ".

"ಏಕೆ?"

"ಕಂಪಿಲರಾಯನಿಂದ ನನ್ನ ಮನೋರಥ ಈಡೇರಲಿಲ್ಲ. ನಾನು ಅವನಂತೆಯೇ ಮನುಷ್ಯಳು. ರಕ್ತಮಾಂಸಗಳಿಂದ ತುಂಬಿದ ಮಾನವಳು. ಕಾಮ ಕ್ರೋಧಗಳಿಂದ ಕೂಡಿದ ಹೆಂಗಸೆಂಬುದನ್ನು ಮರೆತು ನನ್ನನ್ನು ಅವನು ಅಂತಃಪುರದ ವಿಲಾಸಿನಿಯನ್ನಾಗಿ ಮಾಡಿದ ನನ್ನ ಬಾಳಿನ ಆಸೆಗಳಿಗೆಲ್ಲಾ ಬೆಂಕಿ ಇಟ್ಟ. ಸೊಸೆಯಾಗಬಹುದಾದ ನನ್ನನ್ನು ತಾನೇ ವಿವಾಹವಾಗಿ, ನನ್ನ ಜೀವನವನ್ನು ನಾಶ ಮಾಡಿದ(ಕೊರಟಿ ಶ್ರೀನಿವಾಸರಾವ್; ೨೦೦೬; ಪು. ೮೪-೮೫) ಎಂದು ದುಃಖಿಸುತ್ತಾಳೆ. ಗಂಡಸಿನ ಸಾರ್ವಭೌಮತ್ವವನ್ನು, ದರ್ಪದ ಅಧಿಕಾರವನ್ನು ಪ್ರತಿಭಟಿಸುತ್ತಾಳೆ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಗಂಡು ಹೇಳಿದ್ದೇ ಅಂತಿಮ; ಅದಕ್ಕೆ ಯಾರು ಎದುರಾಡುವಂತಿಲ್ಲ. ಇಂತಹ ಸಮಾಜವೂ ಹೇರಲ್ಪಟ್ಟ ನಿಯಮಗಳಲ್ಲಿ ಸ್ತ್ರೀಯರನ್ನು ನಿಯಂತ್ರಿಸಲಾಗುತ್ತದೆ ಎಂಬುದನ್ನು ಇಲ್ಲಿ ಕಾಣಬಹುದು. ಕಂಪಿಲರಾಯನ ನೀತಿ ನಿಯಮಗಳೇ ರತ್ನಾಜಿಯ ಬಯಕೆಗಳಿಗೆ ಅಡ್ಡಿಮಾಡಿವೆ. ತನ್ನ ಕಾಮದ ಹಸಿವಿನ ಸಂದರ್ಭಗಳು ರತ್ನಾಜಿಯ ಬದುಕಿನ ಮೇಲೆ ಕಾರ್ಮೋಡಗಳನ್ನು ಕಟ್ಟಿದವು. ಇಂತಹ ಸಂದರ್ಭದಲ್ಲಿ ತನ್ನ ಮನಸ್ಸಿನ ಆಸೆಯನ್ನು ಈಡೇರಿಸಿಕೊಳ್ಳಲು ಕುಮಾರರಾಮನನ್ನು ಪಡೆಯುವ ಸಾಹಸಕ್ಕೆ ಕೈಹಾಕುತ್ತಾಳೆ.[೧]

ತೈಲ ಚಿತ್ರ ರಚನೆಯ ಸಂದರ್ಭದಲ್ಲಿ ಕಾಮೇಶ್ವರಿಯು ಚಿತ್ರಕಾರನೊಂದಿಗೆ ಆಡುವ ಮಾತುಗಳು ಹೀಗಿವೆ.

"ನೀನು ಒಳ್ಳೆ ಚಿತ್ರಕಾರನಾದರೂ ಜೀವನದ ಅನುಭವ ಪಡೆದಿಲ್ಲ. ಶೀಲವಂತ... ಮಾನವ, ನಿಸರ್ಗ - ಇವೆಲ್ಲದರಲ್ಲಿ ನಾವು ಪಡೆಯುವ ಆನಂದದ ಮೂಲ ಒಂದೇ. ಅದು ಸ್ತ್ರೀ ಸೌಂದರ್ಯ.... ನಿನ್ನ ಈ ತಾವರೆ ಕೊಳದ ಚಿತ್ರ ಅರಳಿದ ತಾವರೆ ಹೂಗಳ ನಡುವೆ ಎರಡು ಚಕ್ರವಾಕ ಪಕ್ಷಿಗಳನ್ನು ಬರೆದಿರುವುದು ಅರ್ಥವೇನು?

ತಾವರೆ ಹೆಣ್ಣಿನ ಕಣ್ಣು, ಮುಖಗಳನ್ನು ನೆನಪಿಗೆ ತರುವುದು. ತುಂಬೆದೆಯ ಪ್ರತೀಕ ಚಕ್ರವಾಹ ಮಿಥುನ. ಕೊಳವು ಹೆಣ್ಣಿನ ದೇಹದ ಸಂಕೇತ. ಬಿಸಿಲಲ್ಲಿ ಬಳಲಿದವರು ಕೊಳದಲ್ಲಿ ಮುಳುಗಿದಣಿವಾರಿಸಿಕೊಳ್ಳುವಂತೆ ಹೆಣ್ಣಿನ ಅಲಿಂಗನದಿಂದ ರಸಿಕನು ಆನಂದಿಸುವನು....ನಿಸರ್ಗವೂ ಒಂದು ಹೆಣ್ಣು, ಶೀಲವಂತ. ಹೆಣ್ಣಿನ ಬೆಡಗು ಬಿನ್ನಾಣ ಆಕರ್ಷಣೆ ವಿಕರ್ಷಣೆಗಳೆಲ್ಲವೂ, ಸೂಕ್ಷ್ಮ ರೂಪದಲ್ಲಿ, ಹೆಚ್ಚು ಬಲಿಷ್ಠವಾಗಿ ನಿಸರ್ಗದಲ್ಲಿಯೂ ಇರುತ್ತದೆ. ಕವಿಗಳು ಪ್ರಕೃತಿಯನ್ನು ಹೆಣ್ಣೆಂದು ವರ್ಣಿಸುವುದನ್ನು ನೀನು ಕೇಳಿಲ್ಲವೆ? ನಿಸರ್ಗದಂತೆ ಹೆಣ್ಣನ್ನು ನಿರಾಭರಣೆಯಾಗಿ ನಿರಾವರಣೆಯಾಗಿ ಚಿತ್ರಿಸಿದರೆ ಎಷ್ಟು ಚೆನ್ನು! ಅದು ನಮ್ಮ ಸಂಪ್ರದಾಯವಲ್ಲ.

ಹೊಸ ಸಂಪ್ರದಾಯವನ್ನು ಆಚರಣೆಗೆ ತಂದರಾಯಿತು. ದೇವಮಂದಿರದ ಗೋಡೆ ಕಂಬಗಳಲ್ಲಿ ಎಷ್ಟೆಲ್ಲಾ ನಗ್ನ ಪ್ರತಿಮೆಗಳಿಲ್ಲ? ಶಿಲ್ಪದಲ್ಲಿ ಕಡೆಯಬಹುದಾದ್ದನ್ನು ಚಿತ್ರಗಳಲ್ಲೇಕೆ ಬರೆಯಬಾರದು? ಶೀಲವಂತ ಸ್ವಲ್ಪ ಹೊತ್ತು ಯೋಚಿಸಿ ಬರೆಯಬಹುದು. ಆದರೆ ತಕ್ಕ ಮಾದರಿ ಸಿಕ್ಕಬೇಕಲ್ಲ? ಎಂದನು. ಏಕೆ ಸಿಕ್ಕುವುದಿಲ್ಲ? ಅಪೇಕ್ಷಿಸಿದರೆ ನಾನು ನಿಲ್ಲುತ್ತೇನೆ! ಶೀಲವಂತ ಬೆರಗಾದನು. ಕಾಮೇಶ್ವರಿಯ ನಗೆಗಣ್ಣುಗಳು ಉತ್ತರಕ್ಕಾಗಿ ಕಾತರಗೊಂಡಂತೆ ಕಂಡವು...(ಎಂ.ಎಸ್. ವೇದಾ; ೧೯೬೨; ಪು. ೩೪೫-೩೪೬). ಹೆಣ್ಣು ಸಮಾಜದಲ್ಲಿ ಈ ರೀತಿ ದಿಟ್ಟತನದಿಂದ ಮಾತನಾಡಿದರೆ, ಸಮಾಜ ಅದನ್ನು ಅಶ್ಲೀಲ ಎಂದು ಗುರುತಿಸುವುದರೊಂದಿಗೆ ಆಕೆ ಗಂಡುಭೀರಿಯೆಂದು ನಿಂದಿಸುತ್ತಾರೆ. ಹೆಣ್ಣು ಎಷ್ಟು ಸ್ವತಂತ್ರವಾದ ಅಭಿವ್ಯಕ್ತಿಯನ್ನು ವ್ಯಕ್ತಪಡಿಸಿದರೂ ಸಹ ಅವರು ಸಂಪ್ರದಾಯ ಬಿಟ್ಟು ಹೊರಬರುವಂತಿಲ್ಲ.

ಹೆಣ್ಣುಮಕ್ಕಳಿಗೆ ಮದುವೆ ವಿಷಯದಲ್ಲಿ ಅವಳ ಅಭಿಪ್ರಾಯಕ್ಕೆ ಬೆಲೆಯನ್ನು ಕೆಲವರು ಕೊಡುತ್ತಿದ್ದರೆ ಕೆಲವರು ಕೊಡುತ್ತಿದ್ದಿಲ್ಲ. ಆದರೂ ಅವಳ ಅಭಿಪ್ರಾಯಕ್ಕೆ ಬೆಲೆ ಕೊಡಬೇಕೇ ಬೇಡವೇ ಎನ್ನುವುದನ್ನು ಈ ಕೆಳಗಿನ ಪ್ರಸಂಗದಿಂದ ತಿಳಿಯಬಹುದಾಗಿದೆ. "ಸಾಮಂತ ರವಿಚಂದ್ರನ ಹಿರಿಯ ಮಗಳು(ಬಕುಳೆ) ಗಣಿಕೆಯ ಅದೃಷ್ಟ ಚೆನ್ನಾಗಿದ್ದರೆ ಅವಳು ರಾಜಮಹಿಷಿ ಯಾಗುತ್ತಿದ್ದಳು. ಹೀನವಾಗಿದ್ದರೆ ರಾಜಗಣಿಕೆಯಾಗುತ್ತಿದ್ದಳು. ಆದರೆ ಈ ಎರಡು ಬಗೆಯ ವಿಪತ್ತುಗಳಿಂದ ಪಾರಾಗಿ ಬಂದ ಕಳಂಕರಹಿತೆಯಾದ ಆ ಬಕುಳೆಯ ಮದುವೆಯ ಪ್ರಯತ್ನ ನಡೆಯುತ್ತಿದೆ. ಇದು ನಿಜವಾಗಿ ದಿಟ್ಟತನವೇ. ಅದೂ ಅವಳಿಗೆ ತನ್ನ ಅಭಿಮತವನ್ನು ಹೇಳುವ ಸ್ವಾತಂತ್ರ್ಯವನ್ನು ಕೂಡ ಕೊಡುತ್ತಾರೆ. ಹಿರಿಯ, ದೇಸಾಯರು. ಮದುವೆ ಮಾಡಲು ತಂದೆ ಮಗಳ ಒಪ್ಪಿಗೆ ಪಡೆಯಬೇಕೆ? ಅಚ್ಚರಿಯಿಂದ ನುಡಿದನು ರವಿಚಂದ್ರ. ಇದುವರೆಗೆ ನಾನು ಎಲ್ಲಿಯೂ ಇಂತಹ ಸಂಪ್ರದಾಯವನ್ನು ಕೇಳಿಲ್ಲ. 'ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ' ಎಂದು ಶಾಸ್ತ್ರ ಹೇಳುತ್ತದೆ. ಅದರ ವಿರುದ್ಧ ನಾವು ಸ್ತ್ರೀ ಸ್ವಾತಂತ್ರ್ಯವನ್ನು ಪುರಸ್ಕರಿಸುವ ಹೊಸ ಸಂಪ್ರದಾಯವನ್ನು ಆಚರಣೆಗೆ ತಂದರೆ ಗಂಗ ರಾಜ್ಯದ ತಳಹದಿ... "ಅದಕ್ಕೆ ದೇಸಾಯಿಯರ ಉತ್ತರ ... ಗಂಗ ರಾಜ್ಯದ ತಳಹದಿ ಒಬ್ಬ ಹೆಣ್ಣಿನ ಸ್ವಾತಂತ್ರ್ಯಾಪೇಕ್ಷೆಯಿಂದ ಅಲುಗಾಡುವ ಸಂಭವವಿಲ್ಲ. ಇನ್ನು ಶಾಸ್ತ್ರ ವಿಚಾರ, ಮೈತ್ರಿ ಗಾರ್ಗಿಯಂತಹ ವಿದುಷಿಯರಿಗೆ ಜನ್ಮವಿತ್ತ ನಮ್ಮ ಸಂಸ್ಕೃತಿ ಮಾನವನರಲ್ಲಿ ಅರ್ಧ ಭಾಗವಾದ ಸ್ತ್ರೀಯರನ್ನು ಸರ್ವದಾ ಪರಾಧೀನತೆಗೆ ತಳ್ಳುವ ಸಾಹಸಕ್ಕೆ ತೊಡಗುವುದಿಲ್ಲ. ಯಾವುದೋ ವಿಶೇಷ ಪರಿಸ್ಥಿತಿಯಲ್ಲಿ ವಿಶಿಷ್ಟ ಜನರಿಗೆ

ಅನ್ವಯವಾಗುವಂತಹ ಪ್ರಕ್ಷಿಪ್ತ ಶ್ಲೋಕಗಳು ನಮ್ಮ ಧರ್ಮಶಾಸ್ತ್ರದಲ್ಲಿ ದೊರಕುತ್ತವೆ. ನಾವು ಅವನ್ನು ಪರಮಾರ್ಥವೆಂದು ತಿಳಿಯುವುದು ಸಲ್ಲ" (ದ್ವಾಸುಪರ್ಣ; ೧೯೯೬; ಪು. ೧೫೧-೧೫೨) ಎಂದು ಸ್ತ್ರೀಯ ಅಭಿಮತಕ್ಕೆ ಬೆಲೆಯನ್ನು ಕೊಡುವ ಅವಳಿಗೂ ಒಂದು ವ್ಯಕ್ತಿತ್ವವಿದೆ ಎಂದು ತಿಳಿಯುತ್ತಿದ್ದರು.

ಅಬ್ಬಕ್ಕ ರಾಣಿಯು ರಾಜಕೀಯ ವಿಷಯವಾಗಿ ಪತಿಯಾದ ಲಕ್ಷ್ಮಪ್ಪ ಬಂಗರಸನೊಂದಿಗೆ ಚರ್ಚಿಸುತ್ತಾಳೆ. ವೀರತ್ವ ಗುಣವು ಗಂಡಿಗೇ ಮಾತ್ರ ಸೀಮಿತವಾಗಿರುವುದು ಎನ್ನುವಂಥ ಕಾಲದಲ್ಲಿ ಉಳ್ಳಾಲದ ರಾಣಿಯಾಗಿ ಹೋರಾಟದ ಹಾದಿ ಹಿಡಿದ ಅಬ್ಬಕ್ಕ ರಾಣಿಯ ಬಗ್ಗೆ, ಹೆಣ್ಣಿನ ಹೋರಾಟದ ಬಗ್ಗೆ ಗಂಡು ಹೆಣ್ಣಿನ ನಡುವಿನ ಶೂರತ್ವದ ಬಗ್ಗೆ ಪತಿ ಪತ್ನಿಯರು ಈ ರೀತಿ ಮಾತನಾಡುತ್ತಾರೆ.

"ದೇವಿ! ಹೆಣ್ಣಾದರೂ ನೀನು ಹೋರಾಟದ ಯೋಚನೆ ಬಿಟ್ಟವಳಲ್ಲ. ಅದೇ ನನಗೆ ವಿಸ್ಮಯ".

"ಹೆಣ್ಣಾದರೇನು ಗಂಡಾದರೇನು. "ರಾಜ್ಯ ಪರಿಪಾಲನ ಧರ್ಮ ಇಬ್ಬರಿಗೂ ಒಂದೇ ಅಲ್ಲವೇ?"

"ಆದರೂ ಹೆಣ್ಣಾದವಳು ಯುದ್ಧದ ಸಂದರ್ಭದಲ್ಲಿ ಪುರುಷರ ಹಾಗೆ ಮುಂದೆ ಬರಲು ಸಾಧ್ಯವಾದೀತೆ?"

"ಅದು ಅವರವರ ಬುದ್ಧಿ ಸಂಸ್ಕಾರವನ್ನು ಹೊಂದಿಕೊಂಡಿದೆ. ಗಂಡುಸಾಗಿ ಜನಿಸಿದರು". ಹೆಣ್ಣಾಗಿ ಕೀಳಾಗಿ ಬಾಳುವವರಿಲ್ಲವೇ? ಈ ಅಬ್ಬಕ್ಕದೇವಿ ಹೇಡಿ ಹೆಣ್ಣಲ್ಲ. ಮಹಾಭಾರತದಲ್ಲಿರುವ ಉತ್ತರಕುಮಾರ ಗಂಡಸಲ್ಲವೇ? ಹೆಣ್ಣಾಗಿದ್ದರೂ ಅವನಿಗಿಂತ ಪೌರುಷ ತೋರಿಸಬಹುದಿತ್ತು".

"ಆದರೆ ನನ್ನ ರಾಣಿಯು ಸದಾ ಭಯರಹಿತಳು ಎಂದೆನ್ನಬಹುದು ತಾನೆ".

"ಸರ್ವತ್ರ ಭಯ ವರ್ಜನಾ' ಎಂದು ಗುರುಗಳು ನನಗೆ ಉಪದೇಶ ಹೇಳಿದ್ದಾರೆ. ನಮ್ಮ ಕುಲ ಹಿರಿಯರಲ್ಲಿದ್ದ ಪೌರುಷವೆಲ್ಲವೂ ನನ್ನಲ್ಲಿ ಆವಿರ್ಭವಿಸಿದೆ. ಯಾವ ದುಷ್ಟಶಕ್ತಿಗಳಿಗೆ ನಾನಂಜುವವಳಲ್ಲ".

"ಹಾಗಿರುವಲ್ಲಿ ನಾನು ವೀರರಾಣಿಯೆನಿಸಿಕೊಳ್ಳುವೆ"
"ಶೂರ ರಾಜ ಎಂದು ನೀವೆನಿಸಲಾರಿರೇ?"
"ನಿನ್ನಲ್ಲಿರುವ ಪೌರುಷ ನನ್ನಲ್ಲಿರಬೇಡವೇ"
(ವಿಶ್ವಾಮಿತ್ರ ರಾ.ಮೋ.; ೨೦೦೩; ಪು. ೩೪-೩೫)

ಎಂದು ಲಕ್ಷ್ಮಪ್ಪ ಬಂಗರಸ ನುಡಿಯುತ್ತಾನೆ. ಅಬ್ಬಕ್ಕರಾಣಿ ಉಳ್ಳಾಲದ ಪ್ರಜೆಗಳ ಏಳಿಗೆಗಾಗಿ ರಾಜ್ಯದ ಅಧಿಕಾರಿಯಾಗಿ ಯಾವ ರೀತಿ ನಡೆದುಕೊಳ್ಳಬೇಕು ಎನ್ನುವುದನ್ನು ತಿಳಿಸುತ್ತಿದ್ದಳು. ತನ್ನನ್ನು ಹೆಣ್ಣು ಎಂದು ಹಂಗಿಸುವವರಿಗೆ ತನ್ನ ಚತುರುತೆಯಿಂದ ಉತ್ತರವನ್ನು ನೀಡುತ್ತಿದ್ದಳು.

ಶ್ರೀಮಂತ ಮನೆತನದಲ್ಲಿ ಜನಿಸಿದ ಅತ್ತಿಮಬ್ಬೆ ಮತ್ತು ಗುಂಡಮಬ್ಬೆಯರು ಅಕ್ಷರಾಭ್ಯಾಸವನ್ನು ಕಲಿಯುವುದರೊಂದಿಗೆ ಕ್ಷತ್ರಿಯ ಗುಣಗಳಾದ ಕುದುರೆ ಸವಾರಿ ಬಿಲ್ಲುವಿದ್ಯೆಗಳನ್ನು ಸಹ

ಕಲಿತ್ತಿದ್ದರು. ಇವರ ಮದುವೆ ವಿಷಯವಾಗಿ ತಾಯಿಯಾದ ಅಬ್ಬಕಬ್ಬೆಯು ಮಾತನಾಡಲು ಹೋದಾಗ ಚಾವುಂಡರಾಯರನ್ನು ಮಾತನಾಡಿಸಲು ಏಕೆ ಬಿಡಲಿಲ್ಲ ಅಮ್ಮ. ನಮ್ಮನ್ನು ಎಲ್ಲಿಗೂ ಹೋಗದಂತೆ ಯಾರೊಡನೆಯೂ ಮಾತನಾಡದಂತೆ ನಿರ್ಭಂದ ಮಾಡುವಿರಿ. ತಾತಾ ಇದ್ದಿದ್ದರೆ ನಾವು ಅವರೊಂದಿಗೆ ಹೋಗಿ ಕುಶಲೋಪವನ್ನು ವಿಚಾರಿಸಿಕೊಳ್ಳುತ್ತಿದ್ದೆವು. ತಾತಾ ಸತ್ತಾಗಲೇ ನಾವು ಸ್ವಾತಂತ್ರ್ಯವನ್ನು ಕಳೆದುಕೊಂಡೇವು ಎಂದು ಗುಂಡಮ್ಮಬ್ಬೆ ದುಃಖದಿಂದ ನುಡಿಯುತ್ತಾಳೆ. ಮಗಳ ಮಾತನ್ನು ಕೇಳಿ ತಾಯಿಯು 'ಚಾವುಂಡರಾಯರೆಂದರೆ ಏನೆಂದುಕೊಂಡಿರಾ ಗಂಗಾ ಸಾಮ್ರಾಜ್ಯದ ಸೂತ್ರದಾರ!" ಎಂದಾಗ "ಚಕ್ರೇಶನೆ ಆಗಿರಲಿ ನಮಗೇನಂತೆ. ನಾವೇನು ಅವರೊಡನೆ ಕಾದಾಡಬೇಕೆ? ಲೋಕಾಭಿರಾಮವಾಗಿ ಒಂದೆರಡು ಮಾತಾಡಿದರೆ ಏನಾದೀತು?" ಎಂದು ಅತ್ತಿಮಬ್ಬೆ ಗತ್ತಾಗಿ ನುಡಿಯುತ್ತಾಳೆ. "ಯುದ್ಧಕ್ಕೆ ಕಳಿಸಿದರೂ ಹೋದಿರೋ ಏನೋ ನೀವಿಬ್ಬರೂ ಗಯ್ಯಾಳಿಗಳು  ಎಂದು ತಾಯಿ ನುಡಿದಾಗ ಗಂಡಸರೆಲ್ಲ ಸ್ವಾರ್ಥಪರರು! ನಮ್ಮ ಕೈಗೆ ವೀಣೆ ಕೊಟ್ಟು ಕುಕ್ಕರು ಬಡಿಯವರು. ಬಿಲ್ಲುಬಾಣ ಹಿಡಿದು ನಿಂತೆವೆಂದರೆ ಗಂಡಸರಿಗೆ ಹೊಯ್ ಕೈಯಾಗಿ ಹೋರಾಡೇ ಹೋರಾಡುವೆವು ಸತ್ತರೆ ಸ್ವರ್ಗ ಇದ್ದರೆ ಕೀರ್ತಿ!" (ಬ್ರಹ್ಮಪ್ಪ ಜಿ.; ೧೯೯೯; ಪು. ೪೦) ಎಂದು ವೀರಮಹಿಳೆಯಂತೆ ಗುಂಡುಮಬ್ಬೆ ನುಡಿಯುತ್ತಾಳೆ. ಲೇಖಕರು ಅತ್ತಿಮಬ್ಬೆ ಮತ್ತು ಗುಂಡುಮಬ್ಬೆ ಪಾತ್ರದ ಮೂಲಕ ಮಹಿಳೆಯರಿಗೂ ಎಲ್ಲ ಕ್ಷೇತ್ರಗಳಲ್ಲಿ ಭಾಗವಹಿಸಲು ಅವಕಾಶ ನೀಡಬೇಕು. ಅವರು ಯಾರೊಂದಿಗಾದರೂ ಮುಕ್ತವಾಗಿ ಚರ್ಚಿಸಲು ಅವಕಾಶ ನೀಡಬೇಕೆಂದು ಆ ಪಾತ್ರದ ಮೂಲಕ ಬಿಂಬಿಸುತ್ತಾರೆ. ಸ್ತ್ರೀಯೆಂದು ಗುರುತಿಸಲು ಪಡುವ ಅಬ್ಬಕಬ್ಬೆಯನ್ನು ಸಂಪ್ರದಾಯದ ಹೆಸರಿನಲ್ಲಿ ಕಟ್ಟಿ ಹಾಕಿದ್ದಾರೆ. ಹಿರಿಯರು ಒಪ್ಪಿದಂತೆ ಅವರು ಹೇಳಿದ ಗಂಡನನ್ನೇ ಮದುವೆಯಾಗಬೇಕು ಎಂದಾಗ "ಅತ್ತಿಮಬ್ಬೆಯನ್ನು ನಾಗದೇವನಿಗೂ ಗುಂಡುಮಬ್ಬೆಯನ್ನು ಜನ್ನಣ್ಣನಿಗೂ ಕೊಡಬೇಕೆಂದು ಯೋಚಿಸಿರುವೆವು" ಎಂದಾಗ ಅತ್ತಿಮಬ್ಬೆ ತನ್ನ ತಾಯಿಯ ಇಷ್ಟದಂತೆ ನನ್ನನ್ನು ಯಾರಿಗೆ ಕೊಟ್ಟರೂ ಸಂತೋಷವೇ ಎಂದರೆ ಗುಂಡುಮಬ್ಬೆ ಅಕ್ಕನ ಗಂಡನೇ ನನಗೂ ಗಂಡನಾಗಬೇಕು ಎಂದು ಹಠಹಿಡಿಯುತ್ತಾಳೆ. ಇದನ್ನು ಹೇಳಿದ ತಾಯಿಯು "ಗುಂಡು ನೀನು ಕ್ಷಣಕಾಲದ ಭಾವಾವೇಶಕ್ಕೆ ಸಿಕ್ಕಿ ಬಾಳೆಲ್ಲ ಬವಣೆ ಪಡಬೇಕಾಗುವುದು. ನೀನಂತು ತಿಳುವಳಿಕೆಯಿಲ್ಲದೆ ಮಾತಾಡುತ್ತಿರುವೆ ಹಿರಿಯರಾದ ನಾವು ಇಬ್ಬರನ್ನು ಒಬ್ಬರಿಗೇ ಕೊಟ್ಟೇವೆ? ಲೋಕ ಏನಂದೀತು? (ಅದೇ; ಪು. ೪೨). ಲೋಕದ ಸುದ್ದಿ ನಮಗೇಕೆ ಬೇಕು ಅಮ್ಮ ತಂಗಿ ಹೇಳಿದಂತೆಯೇ ಆಗಲಿ ನಮ್ಮಿಬ್ಬರನ್ನು ಒಬ್ಬರಿಗೇ ಕೊಟ್ಟು ಮದುವೆ ಮಾಡಿ ಅಮ್ಮ ಎಂದು ಅತ್ತಿಮಬ್ಬೆಯು ಹೇಳುತ್ತಾಳೆ. ಸ್ತ್ರೀ ಆದವಳು ತನಗೆ ಬೇಕಾದ ಗಂಡನನ್ನು ಮದುವೆಯಾಗುವ ಅವಕಾಶ ಸಹ ಇರಲಿಲ್ಲ.

ಸತಿಪದ್ಧತಿಯ ಆಚರಣೆಯ ಪ್ರಸಂಗಗಳು ಐತಿಹಾಸಿಕ ಕಾದಂಬರಿಗಳಲ್ಲಿ ಕಂಡುಬರುವುದನ್ನು ಕಾಣುತ್ತೇವೆ. ಅಂದರೆ ರಾಜಮಹಾರಾಜರುಗಳು ಸತ್ತರೆ ಹೆಂಡತಿಯಾದವಳು ಆತನ ಚಿತೆಯಲ್ಲಿ ಬೀಳಲೇಬೇಕಿತ್ತು. ಆಕೆಗೆ ಬದುಕುವ ಆಯ್ಕೆ ಇರುತ್ತಿರಲಿಲ್ಲ. ಈ ರೀತಿಯ ಅಮಾನುಷ ಪದ್ಧತಿ ಜಾರಿಯಲ್ಲಿದ್ದುದು ಐತಿಹಾಸಿಕ ಕಾದಂಬರಿಗಳಲ್ಲಿ ವ್ಯಕ್ತವಾಗುತ್ತದೆ. 'ನಾಟ್ಯರಾಣಿ ಶಾಂತಲಾ' ಕಾದಂಬರಿಯಲ್ಲಿ ವಿಷ್ಣುವರ್ಧನನ ತಮ್ಮನಾದ ಉದಯಾದಿತ್ಯನು ಅಣ್ಣ ಮತ್ತು ಅತ್ತಿಗೆಯವರ ನಡುವಿನ ಬಿರುಕು, ವದಂತಿಗಳಿಂದ ರೇಸಿ ಹೋಗಿ ದೂರದ ಕಲ್ಲಿವೆತ್ತಿಗೆ ಹೋಗಿ ನೆಲೆಸಿದ್ದನು.

ಉದಯಾದಿತ್ಯನು ಗುಣಪಡಿಸಲಾಗದ ವಿಷಮಶೀತ ಜ್ವರಕ್ಕೆ ತುತ್ತಾಗಿ ಅಕಾಲಿಕ ಮರಣಕ್ಕೆ ಈಡಾದನು. ಇದನ್ನು ತಿಳಿದ ಹೆಂಡತಿ ಚಂಚಲಾದೇವಿಯು ತನ್ನ ಗಂಡನ ಜೊತೆ ಸಹಗಮನ ಮಾಡಿಕೊಂಡಳು ಎಂಬುವುದು ಕಾದಂಬರಿಯಲ್ಲಿ ಉಲ್ಲೇಖಿತಗೊಂಡಿದೆ.

ದಾನಚಿಂತಾಮಣಿ ಕಾದಂಬರಿಯಲ್ಲಿ ಸತಿಸಹಗಮನವನ್ನು ಕೌಸಲ್ಯಬ್ಬೆ ಮತ್ತು ಗುಂಡುಮಬ್ಬೆಯರು ಸಂಪ್ರದಾಯದ ಹೆಸರಿನಲ್ಲಿ ಗಂಡನ ಚಿತೆಯೊಂದಿಗೆ ಸಹಗಮನ ಮಾಡುತ್ತಾರೆ. ಜೈನ ಧರ್ಮದಲ್ಲಿ ಸಹಗಮನವನ್ನು ಒಪ್ಪುವುದಿಲ್ಲ. ಆದರೂ ಹತ್ತನೇ ಶತಮಾನದಲ್ಲಿ ಕೆಲವು ಮನೆತನಗಳಲ್ಲಿ ಮಾತ್ರ ಸಹಗಮನದ ಸಂಪ್ರದಾಯವಿತ್ತು ಎಂದು ಲೇಖಕರೇ ಹೇಳಿದ್ದಾರೆ. ಯುದ್ಧದಲ್ಲಿ ಮಡಿದ ಪೊನ್ನಮಯ್ಯನ ಹೆಣವನ್ನು ಚಿತೆಗೇರಿಸಲು ಏರ್ಪಾಟುಗಳನ್ನು ನಡೆಸುವ ಸಂದರ್ಭದಲ್ಲಿ ಕೌಸಲ್ಯಬ್ಬೆ ಸಹಗಮನ ಮಾಡುವುದಾಗಿ ಅಬ್ಬಕಬ್ಬೆಗೆ ಹೇಳುತ್ತಾಳೆ.

"ಅಕ್ಕ ನಮ್ಮಿಂದ ಏನಾದರೂ ತಪ್ಪಾಗಿದ್ದರೆ ಕ್ಷಮಿಸಿಬಿಡು ಅಕ್ಕ" ಎಂದು ಕೌಸಲ್ಯಬ್ಬೆ ಅಂಗಲಾಚಿದಾಗ 'ಅಯ್ಯೋ ತಾಯಿ ನೀನು ನನಗೆ ವಾರಗಿತ್ತಿಯಲ್ಲಮ್ಮ, ಬೆನ್ನಿಗೆ ಬಿದ್ದ ತಂಗಿಯಾಗಿದ್ದಲೇ! ನನ್ನಿಂದ ಏನಾದರೂ ಅಪಚಾರವಾಗಿರಬಹುದು. ಮನಸ್ಸಿನಲ್ಲಿ ಇಟ್ಟು ಕೊಳ್ಳಬೇಡ ತಾಯಿ" ಎಂದು ಅಬ್ಬಕಬ್ಬೆಗೋಗರೆದಳು. "ಅಮ್ಮ ನಮ್ಮನ್ನು ತಬ್ಬಲಿ ಮಾಡುವೆಯಾ, ನಮ್ಮನ್ನು ಗಂಡನ ಮನೆಗೆ ಕಳುಹಿಸಿಕೊಡುವವರಿಗಾದರೂ ಇದ್ದುಬಿಡು ಚಿಕ್ಕಮ್ಮ" ಎನ್ನುತ್ತಾ ಅತ್ತಿಮಬ್ಬೆ ಗೋಳಾಡುತ್ತ ಅಂಗಲಾಚಿದಳು. ಚಿಕ್ಕಮ್ಮ ಅಜ್ಜ ಸತ್ತ ನಂತರ ನೀನೇ ನನಗೆ ಸರ್ವಸ್ವವಾಗಿದ್ದೆ. ತಬ್ಬಲಿ ಮಾಡಿ ಹೋಗುತ್ತೀಯ ಚಿಕ್ಕಮ್ಮ" ಎಂದು ಗುಂಡುಮಬ್ಬೆ ನೆಲಕ್ಕೆ ಕುಸಿದಳು (ಬ್ರಹ್ಮಪ್ಪ ಜಿ.; ೧೯೯೯; ಪು. ೪೬-೪೭).

ಮಲ್ಲಪ್ಪ ಪುನ್ನಮಯ್ಯನ ಚಿತೆಗೆ ಬೆಂಕಿ ಹಚ್ಚುತ್ತಾನೆ. ಉರಿಯುವ ಬೆಂಕಿಯಲ್ಲಿ ಸರ್ವಾಲಂಕೃತ ಭೂಷಿತೆಯಾಗಿದ ಕೌಸಲ್ಯಬ್ಬೆ ನಗು ನಗುತ್ತಾ ಚಿತೆಯ ಮೇಲೇರಿ ಗಂಡನ ಬಳಿ ಹಾಯಾಗಿ ಮಲಗುತ್ತಾಳೆ. ಜ್ವಾಲೆ ಕ್ಷಣಕ್ಷಣಕ್ಕೂ ಹೆಚ್ಚಾಗುತ್ತಾ, ಹೆಣವನ್ನು ಮತ್ತು ಕೌಸಲ್ಯಬ್ಬೆಯನ್ನು ಸುಟ್ಟು ಹಾಕುತ್ತದೆ. ಈ ದೃಶ್ಯವನ್ನು ಕಂಡ ಅತ್ತಿಮಬ್ಬೆ ಮತ್ತು ಗುಂಡುಮಬ್ಬೆಯರು ಹೆಣ್ಣಿನ ಬಾಳು ಕಣ್ಣೀರೆಂದು ನಿರ್ಧರಿಸುತ್ತಾರೆ. ಮದುವೆಯಾಗಿ ಜೀವನದ ಸುಖವನ್ನು ಕಾಣಬೇಕಾದ ಇವರು ಚಿಕ್ಕಮ್ಮನ ಪರಿಸ್ಥಿತಿಯನ್ನು ಕಂಡು ಹೆಣ್ಣಿನ ಬದುಕಿನ ಬವಣೆಯಿಂದ ಬೆಚ್ಚು ಬೀಳುತ್ತಾರೆ. ಸಂಪ್ರದಾಯದ ಹೆಸರಿನಲ್ಲಿ ಕೌಸಲ್ಯಬ್ಬೆಯು ಸಹಗಮನ ಮಾಡಿಕೊಂಡದ್ದನ್ನು ವಿರೋಧಿಸಬೇಕೆಂಬ ಭಾವನೆಯು ಅತ್ತಿಮಬ್ಬೆಯಲ್ಲಿ ಮೊಳೆಯುತ್ತದೆ.

ರಾಷ್ಟ್ರಕೂಟರೊಂದಿಗೆ ಯುದ್ಧಕ್ಕೆ ಹೋದ ಸಂದರ್ಭದಲ್ಲಿ ನಾಗದೇವ ಮರಣವನ್ನು ಹೊಂದುತ್ತಾನೆ. ನಾಗದೇವನ ಜೊತೆ ಗುಂಡುಮಬ್ಬೆ ಸಹಗಮನ ಮಾಡಲು ಮುಂದಾಗುತ್ತಾಳೆ. ತನ್ನ ಮಕ್ಕಳು ವಿಧವೆಯಾದ್ದನ್ನು ಕಂಡ ಅಬ್ಬಕಬ್ಬೆ ಮಹಾರಾಣಿಯೊಂದಿಗೆ ಮಾತನಾಡುತ್ತಾಳೆ. "ಅಮ್ಮ ನಿಮ್ಮ ಸಾಮ್ರಾಜ್ಯಕ್ಕಾಗಿ ನನ್ನ ಮಕ್ಕಳಿಬ್ಬರ ಮಂಗಳ ಸೂತ್ರ ಹೋಯಿತಲ್ಲ ತಾಯಿ! ಎಂದು ಅಬ್ಬಕಬ್ಬೆ ಅರಚಿದಳು".

"ಹೆಂಗಸರ ಮಾತನ್ನು ಕೇಳುವವರಾರಮ್ಮ? ಪ್ರತಿಷ್ಠೆಗೆ ಬಿದ್ದು ಹಾಳು ಗಂಡಸರು ಹಣಾಣಿ ಯಾಡುವರು! ಹೆಣ್ಣಿನ ಕಣ್ಣೀರಿನಲ್ಲಿ ಈಜು ಹೊಡೆಯಲು ಪುರುಷರೆಲ್ಲ ಪೈಪೋಟಿಯೆನಿಸುವಾಗ

ನಾನು ನೀನು ಏನು ಮಾಡಲಾದೀತು? ಹತ್ತು ಸಾಮ್ರಾಜ್ಯಗಳನ್ನು ಕೊಟ್ಟರೂ ನನ್ನ ಮೈದುನ ನಾಗದೇವನಂಥವನನ್ನು ಮತ್ತೆ ತಂದೇವೆ? ಎಂದು ಮಹಾರಾಣಿ ನಿಸ್ಸಹಾಯಕಳಾಗಿ ಗೋಳಿಟ್ಟಳು (ಅದೇ; ಪು. ೧೩). ನಾಗದೇವನೊಂದಿಗೆ ಸತಿಹೋಗಲು ಅತ್ತಿಮಬ್ಬೆ ಮತ್ತು ಗುಂಡುಮಬ್ಬೆಯರು ನಿರ್ಧರಿಸುತ್ತಾರೆ. ಆದರೆ ಮಗುವಿನ ತಾಯಿಯಾದ ಕಾರಣ ಅಣ್ಣಿಗನನ್ನು ನೋಡಿಕೊಂಡು ಮನೆಯಲ್ಲಿ ಇರಬೇಕು ಎಂದು ಗುಂಡುಮಬ್ಬೆ ಹೇಳಿದಾಗ ಅವರಿಬ್ಬರಲ್ಲಿಯೂ ಮಾತುಕತೆ ನಡೆಯುತ್ತದೆ. ಕೊನೆಗೆ ಹಿರಿಯರು ಹೇಗೆ ನಿರ್ಧರಿಸುವವರೂ ಅದಕ್ಕೆ ಬದ್ಧರಾಗುತ್ತಾರೆ. "ಹಿರಿಯರೆಲ್ಲ ಕಲೆತು ಒಂದು ತೀರ್ಮಾನಕ್ಕೆ ಬಂದರು. ಗಂಡುಮಬ್ಬೆ ಸಹಗಮನ ಮಾಡಬೇಕೆಂತಲೂ ಅತ್ತಿಮಬ್ಬೆ ಅಣ್ಣಿಗನಿಗಾಗಿ ಮನೆಯಲ್ಲಿ ಉಳಿದುಕೊಳ್ಳಬೇಕೆಂದೂ ನಿರ್ಧರಿಸಿದರು" (ಅದೇ; ಪು. ೧೧೪). ಹೆಣ್ಣಾಗಿ ಹುಟ್ಟಿದ ಕಾರಣ ಅವಳಿಗೆ ಸಾಯುಲು ಸಹ ಸ್ವಾತಂತ್ರ್ಯವಿಲ್ಲದಂತಾಗಿದೆ. ಹಿರಿಯರ ನಿರ್ಧಾರಕ್ಕೆ ಆಕೆ ಮಣಿಯಲೇಬೇಕು. ಹುಟ್ಟು, ಸಾವು, ಇಷ್ಟ ಕಷ್ಟಗಳೆಲ್ಲ, ಪುರುಷರು ಹೇಳಿದಂತೆಯೇ ನಡೆಯಬೇಕು; ಇದು ಅವರು ವಿಧಿಸಿರುವ ನಿಯಮದಂತೆ ಕಾಣುತ್ತದೆ.

ವಿಧವೆಯಾಗಿ ಸಮಾಜದಲ್ಲಿ ಇದ್ದರೂ ಒಂದೇ ಹೋದರೂ ಒಂದೇ, ದೇವರಿಗಿಲ್ಲ ದಿಂಡರಿಗಿಲ್ಲ. ಅಮಂಗಳದ ಕುರುಹಾಗಿ ಕುದಿಯುತ್ತಿರಬೇಕು. ಬಾಳಲ್ಲ ಬವಣೆ ಪಡಬೇಕು. ನಮ್ಮ ಗುಂಡು ಪುಣ್ಯಾತ್ಮಳು, ಸತ್ತು ಸ್ವರ್ಗಕ್ಕೆ ಹೋದಳು. ನಾನು ಇದ್ದು ನರಕವನ್ನು ಅನುಭವಿಸಬೇಕಾಗಿದೆ!" (ಅದೇ; ಪು. ೧೧೭) ಎಂದು ಅತ್ತಿಮಬ್ಬೆ ದುಃಖದಿಂದ ನುಡಿಯುತ್ತಾಳೆ. ಪಂಪಮಹಾಕವಿಯು ಅತ್ತಿಮಬ್ಬೆಯನ್ನು ನಾನಾ ರೀತಿಯಲ್ಲಿ ಸಮಾಧಾನ ಮಾಡಲು ಪ್ರಯತ್ನಿಸುತ್ತಾನೆ. ಅಬ್ಬೆ "ಬಾಳಿಗೆ ಅನೇಕ ಮುಖಗಳಿವೆ. ಗಂಡ, ಮಕ್ಕಳು ಒಂದು ಮುಖ ಅಷ್ಟೆ! ನೀನು ಗಂಡನನ್ನು ಮಾತ್ರ ಕಳೆದುಕೊಂಡಿರುವೆ. ಉಳಿದೆಲ್ಲ ಮುಖಗಳೂ ನಿನಗಾಗಿ ಕಾದಿವೆ. ನೀನು ಮಾಡಬೇಕಾದ ಕಾರ್ಯ ಬೆಟ್ಟದಷ್ಟಿದೆ" ಎಂದಾಗ, 'ಮಾವ ನನ್ನ ಸೇವೆ ಯಾರಿಗೆ ಬೇಕಾಗಿದೆ?' ಎಂದು ಅತ್ತಿಮಬ್ಬೆ ನಿರಾಶಳಾಗಿ ನುಡಿದಾಗ ಹಾಗನ್ನಬಾರದು, ಕನ್ನಡ ಸಾಹಿತ್ಯ ನಿನ್ನಿಂದ ಬದುಕಿ ಬೆಳಕಿಗೆ ಬರಬೇಕಾಗಿದೆ. ಅತ್ತಿಮಬ್ಬೆ ಕವಿಗಳು ಬದುಕಬೇಕಾದರೂ ನಿನ್ನಂಥ ಕಲ್ಪತರು ಬೇಡವೆ? ಸಾಹಿತ್ಯ ಉಳಿಯಬೇಕಾದರೆ ಕಾಲಕಾಲಕ್ಕೆ ಪ್ರತಿ ಮಾಡಿಸಬೇಕಲ್ಲ! ಸ್ತ್ರೀಯರು ಮನಸ್ಸು ಮಾಡಿದರೆ ಸಾಹಿತ್ಯ ಸಂರಕ್ಷಕರಾಗಿ ರಾರಾಜಿಸಬಹುದು (ಅದೇ; ಪು. ೧೯) ಎಂದು ನುಡಿಯುತ್ತಾನೆ. ಹೆಣ್ಣು ಮನಸ್ಸು ಮಾಡಿದರೆ ಏನೆಲ್ಲ ಸಾಧಿಸಬಹುದು ಎಂದು ಹೇಳುವ ಲೇಖಕರು ಕೆಲವೊಂದು ಕಡೆ ಆಕೆಯ ಮೇಲೆ ಸಂಪ್ರದಾಯವನ್ನು ಹೇರಿದ್ದಾರೆ.

ಶಾಂತಾದೇವಿ ಮಾಳವಾಡರ 'ಶೂರರಾಣಿ ಕೆಳದಿಯ ಚೆನ್ನಮ್ಮ' ಕಾದಂಬರಿಯಲ್ಲಿ ಸೋಮಶೇಖರನಾಯಕರು ಕುತಂತ್ರಕ್ಕೆ ಒಳಗಾಗಿ ಮರಣ ಹೊಂದುವ ಮೊದಲು ಚೆನ್ನಮ್ಮಾಜಿಗೆ "ಚೆನ್ನಾ ನಾನಿನ್ನು ಬದುಕಲಾರೆ - ನೀನು ಸತಿ ಹೋಗಬೇಡ ರಾಜ್ಯವನ್ನಾಳು" ಎನ್ನುವಲ್ಲಿ ಸ್ತ್ರೀವಾದ ಅಲ್ಲದಿದ್ದರು ಅದು ಗಂಡನ ಮೂಲಕ ಹೇಳಿಸುವುದು ಮುಖ್ಯವಾಗುತ್ತದೆ.

ತ.ರಾ.ಸು. ಅವರ 'ಕಂಬನಿಯ ಕುಯಿಲು' ಕಾದಂಬರಿಯಲ್ಲಿಯೂ ಸಹ ಸತಿ ಆಚರಣೆಯನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಸತಿಪದ್ಧತಿಗೆ ಒಳಗಾಗುವ ಸಂದರ್ಭದಲ್ಲಿ, ಯಾವ ಯಾವ

ವಿಧಿಯಾಚರಣೆಗಳನ್ನು ಮಾಡಬೇಕಾಗುತ್ತದೆ ಎಂಬುದನ್ನು ಕಾದಂಬರಿಯಲ್ಲಿ ವಿವರವಾಗಿ ತಿಳಿಸಲಾಗಿದೆ. ಮದಕರಿ ನಾಯಕರ ಹೆಂಡತಿಯರಾದ ಗೌರವ್ವನಾಗತಿಯನ್ನು ಒಳಗೊಂಡಂತೆ ಉಳಿದ ಎಲ್ಲಾ ರಾಣಿಯರೂ ಈ ಸಹಗಮನಕ್ಕೆ ಒಮ್ಮತವನ್ನು ನೀಡಿದ್ದರು. ಹಾಗಾಗಿ ಓಬವ್ವ ನಾಗತಿಯನ್ನು ಹೊರತುಪಡಿಸಿ ಉಳಿದೆಲ್ಲಾ ರಾಣಿಯರು ಸತಿಪದ್ಧತಿಗೆ ಒಳಗಾದರು. "ವಿವಾಹ ವೇದಿಕೆಗೆ ತೆರಳಲು ಶೃಂಗಾರವಾದ ವಧುವಿನಂತೆ ಸಕಲ ಪವಿತ್ರ ಅಲಂಕಾರಗಳಿಂದ ಅಲಂಕೃತರಾದ ಅವರು ಕಲಶ, ಕನ್ನಡಿ, ಅರಿಶಿಣ, ಕುಂಕುಮ ಮತ್ತು ಬಾಗಿನ ದಾನವಿತ್ತು, ಅಲ್ಲಿಂದ ಏಕನಾಥೇಶ್ವರಿ, ಹಿಡಂಬೇಶ್ವರ, ಸಂಪಿಗೆಯ ಸಿದ್ದೇಶ್ವರ, ಗೋಪಾಲಕೃಷ್ಣಸ್ವಾಮಿ, ಅರಮನೆಯ ಬಳಿಯ ಸುಬ್ರಹ್ಮಣ್ಯ ಸ್ವಾಮಿ ಎಲ್ಲರಿಗೂ ಮನಸ್ಸು ತೃಪ್ತಿಯಾಗುವಷ್ಟು ಪೂಜೆ ಮಾಡಿಸಿ ಅರಮನೆಗೆ ಹಿಂದಿರುಗಿದರು. ಆ ವೇಳೆಗೆ ಅರಮನೆಯಲ್ಲಿ ನೆರೆದ ನಾಯಕರು ಮತ್ತು ನಾಗತಿಯರ ನೆಂಟರಿಷ್ಟರೆಲ್ಲರಿಗೂ ಊಟ, ಉಪಚಾರವಾಯಿತು. ನಾಗತಿಯರು ತಾವೇ ಎಲ್ಲರಿಗೂ ಕೈಯಾರೆ ಉಣಬಡಿಸಿ, ವೀಳ್ಯ ಮತ್ತು ತಮ್ಮ ಆಭರಣ ವಸ್ತ್ರಗಳನ್ನು ಆಪ್ತಷ್ಟರಿಗೆ, ದಾಸಿಯರಿಗೂ ಹಂಚಿದರು. ನಾಗತಿಯರೇನೋ ನಗುತ್ತಾ ಉಣಬಡಿಸಿ, ಉಡುಗೊರೆಯಿತ್ತರೂ ಯಾರಿಗೂ ತುತ್ತು ಒಳಗಿಳಿಯಲಿಲ್ಲ, ಉಡುಗೊರೆಯನ್ನು ಸ್ವೀಕರಿಸುವ ಕೈ ಶೋಕದ ಆ ವೇಗದಿಂದ ಕಂಪಿಸುತ್ತಿತ್ತು. ಈ ಎಲ್ಲಾ ಶಾಸ್ತ್ರಗಳು ಮುಗಿದ ಬಳಿಕ ನಾಗತಿಯರ ಹರವಿನಲ್ಲಿ ನಿರ್ಮಿತವಾದ ಚಿತೆಯತ್ತ ಹೊರಟಿತು" (ತ.ರಾ.ಸು.; ೧೯೬೫; ಪು. ೩೪).

ನಾಗತಿಯರ ಹರವಿನ ನಡುವೆ ಗಂಧ ಕೊರಡುಗಳಿಂದ ಬಹುವಿಶಾಲವಾದ ಚಿತೆ ರಚಿತವಾಗಿತ್ತು. ನಾಯಕರ ಶವವನ್ನು ಚಿತೆಯ ಮೇಲಿಟ್ಟು ಬಳಿಕ ಲಿಂಗಣ್ಣ ನಾಯಕ ನೀರಿನ ಮಡಕೆ ಹೊತ್ತು ಚಿತೆಯನ್ನು ಮೂರು ಬಾರಿ ಪ್ರದಕ್ಷಿಣೆ ಮಾಡಿ, ಅಗ್ನಿ ಸ್ಪರ್ಶ ಮಾಡಿ ಹಿಂದಿರುಗಿ ನೋಡದೆಯೇ ಹೋದ. ಆ ಬಳಿಕ ನಾಗತಿಯರು, ಅಲ್ಲಿ ನೆರೆದಿದ್ದ ಮುತ್ತೈದೆಯರಿಗೆ ಅರಿಶಿಣ, ಕುಂಕುಮ, ಹೂವು, ವೀಳೆಯಗಳನ್ನಿತ್ತು, ತಾವು ಧರಿಸಿದ್ದ ಆಭರಣಗಳನ್ನು ದಾನ ಮಾಡಿ, ಗುರು ಹಿರಿಯರ ಅಪ್ಪಣೆ ಪಡೆದು, ಶಿರದಲ್ಲಿ ಪಿತೃ ಕುಂಭಗಳನ್ನು ಧರಿಸಿ, ಒಬ್ಬೊಬ್ಬರಾಗಿ ಚಿತೆಯನ್ನೇರಿ, ಮೂರು ಬಾರಿ ಪತಿಯ ಶವವನ್ನು ಪ್ರದಕ್ಷಿಣೆ ಮಾಡಿ, ಪೂರ್ವಾಭಿಮುಖವಾಗಿ ನಿಂತು ಎಲ್ಲರಿಗೂ ನಮಸ್ಕರಿಸಿ, ತಲೆಯ ಮೇಲಿನ ಕುಂಭದಲ್ಲಿದ್ದ ತುಪ್ಪವನ್ನು ಚಿತಾಗ್ನಿಗೆ ಎರೆದು ಪತಿಯ ಶವದ ಬಳಿ ಕುಳಿತರು. ಕೂಡಲೇ ಚಿತೆಯ ಸುತ್ತಲಿದ್ದವರು ಮುಗಿಲು ಮಾರ್ಮೊಳಗುವಂತೆ ಜಯಕಾರಿ ಮಾಡಿ, ತಾವು ಹಿಡಿದಿದ್ದ ತುಪ್ಪ, ಎಣ್ಣೆಗಳನ್ನು ಚಿತೆಗೆ ಸುರಿದರು. ಘನ, ತೈಲ, ಕರ್ಪೂರಗಳ ಆಹಾರದಿಂದ ಸೊಕ್ಕಿದ ಅಗ್ನಿ ಧಗ್ಗನೆ ಹೊತ್ತಿ ಮುಗಿಲುದ್ದ ನಾಲಿಗೆ ಚಾಚಿತು.

ಆದರೆ ಚಿತೆಯಿಂದ ಯಾವೊಂದು ಸದ್ದು ಕೇಳಿ ಬರಲಿಲ್ಲ. ಮಾಸತಿಯರ ಕೀರ್ತಿಯನ್ನು ಸಹಸ್ರ ತೋಳಗಳನ್ನೆತ್ತಿ ಸಾರುವವನಂತೆ ಅಗ್ನಿ ದೇವ ಉರಿಯುತ್ತಿದ್ದ ಅವರ ಸತಿತ್ವದ ಪವಿತ್ರ ಕೀರ್ತಿಯನ್ನು ಲೋಕಕ್ಕೆ ಸಾರುವ ಹರಿಕಾರನಂತೆ ಪರಿಮಳಮಯ ಗಂಧ, ಧೂಮ, ದಿಕ್ಕು, ದಿಕ್ಕನ್ನು ವ್ಯಾಪಿಸುತ್ತಿತ್ತು" (ಅದೇ; ಪು. ೩೫). ಹೀಗೆ ಸತಿಪದ್ಧತಿಗೆ ಒಳಗಾಗುವುದನ್ನು ಕಣ್ಣಿಗೆ ಕಟ್ಟುವಂತೆ ಕಾದಂಬರಿಕಾರರು ಚಿತ್ರಿಸಿದ್ದಾರೆ.

ಭಾರತೀಯ ಸಂಸ್ಕೃತಿಯನ್ನು ನಾವು ಹೆಮ್ಮೆಯಿಂದ ಹೊಗಳುತ್ತೇವೆ. ಈ ಸಂಸ್ಕೃತಿಯು ಪುರಾತನವಾದದ್ದು, ಆದರ್ಶವಾದದ್ದು, ಜಗತ್ಪ್ರಸಿದ್ಧವಾದದ್ದು ಎಂದು ನೆನೆಯುತ್ತೇವೆ. ಇಂತಹ ಭವ್ಯ ಪರಂಪರೆಯನ್ನು ಹೊಂದಿರುವ ಭಾರತೀಯ ಸಂಸ್ಕೃತಿಯು ಸ್ತ್ರೀ ಪುರುಷರ ನಡುವೆ ತಾರತಮ್ಯವನ್ನು ಏರ್ಪಡಿಸಿತು. ಮಹಿಳೆಯರು ಆತಂಕದಲ್ಲಿ ಜೀವಿಸುವಂತೆ ಮಾಡಲಾಯಿತು. ಮಹಿಳೆ ತನ್ನ ಪತಿ ಮರಣ ಹೊಂದಿದರೆ ಅವನ ಚಿತೆಯ ಪ್ರಜ್ವಲಿಸುವ ಜ್ವಾಲೆಯಲ್ಲಿ ತಾನು ಧುಮುಕಿ ಆತ್ಮಾರ್ಪಣೆ ಮಾಡಿಕೊಳ್ಳುವ ಪದ್ಧತಿಯು ರೂಢಿಯಲ್ಲಿದ್ದುದು ಮಹಿಳೆಗೆ ಆತಂಕದ ಸಂಗತಿಯಾಗಿತ್ತು. ಆದರೆ ಈ ರೀತಿಯ ಸತಿ-ಸಹಗಮನವು ಹಿಂದೂ ಧರ್ಮದ ಭಾಗವೆಂದೇ ಭಾವಿಸಿದ್ದರು ಮತ್ತು ಪತಿಯ ಜೊತೆ ಸಹಗಮನ ಹೊಂದಿದರೆ ನೇರವಾಗಿ ಸ್ವರ್ಗಕ್ಕೆ ಹೋಗುತ್ತಾರೆ ಎಂಬ ದಂತಕಥೆಗಳಿದ್ದವು. ಅವುಗಳಿಂದ ಪ್ರೇರಿತಳಾಗಿ ಮಹಿಳೆ ಈ ಪದ್ಧತಿಗೆ ಒಳಗಾಗುತ್ತಿದ್ದಳು. ೧೯ನೆಯ ಶತಮಾನದ ವೇಳೆಗೆ ವಸಾಹತುಶಾಹಿ ಆಡಳಿತ ವ್ಯವಸ್ಥೆ ಆರಂಭಗೊಂಡಿತ್ತು. ಅಂದಿನ ಸಂದರ್ಭದಲ್ಲಿ ರಾಜಾರಾಮ್‌ಮೋಹನರಾಯರು ಈ ಸತಿಪದ್ಧತಿಯೆಂಬ ಕ್ರೂರ ಆಚರಣೆಯನ್ನು ಮೊಟ್ಟಮೊದಲ ಬಾರಿಗೆ ವಿರೋಧಿಸಿದರು. ಭೂಮಿಯ ಮೇಲೆ ಜನ್ಮ ಪಡೆದ ಪ್ರತಿಯೊಬ್ಬರಿಗೂ ಸಮಾನ ಹಕ್ಕುಗಳು ಇರಬೇಕೆಂದು ಪ್ರತಿಪಾದಿಸಿದರು. ಸಹಗಮನವು ಒಂದು ಬರ್ಬರ ಕೃತ್ಯವಾಗಿತ್ತು. ಧರ್ಮಾಂಧತೆಯ, ಪೊಳ್ಳು ವೀರತನದ ಪ್ರತೀಕವಾಗಿತ್ತು ಎಂಬುದನ್ನು ಮನಗಂಡ ರಾಜರಾಮ್ ಮೋಹನರಾಯರು ಇದನ್ನು ನಿಷೇಧಿಸುವಂತೆ ೧೮೨೯ರಲ್ಲಿ ಬ್ರಿಟಿಷ್ ಗವರ್ನರ್ ಆಗಿದ್ದ ಲಾರ್ಡ್ ವಿಲಿಯಂ ಬೆಂಟಿಕ್‌ರಿಗೆ ಮನವಿಯನ್ನು ಸಲ್ಲಿಸಿದರು. ಇದರ ಪ್ರತಿಫಲವೆಂಬಂತೆ, ಡಿಸೆಂಬರ್ ೪, ೧೮೨೯ರಂದು ಸತಿ ನಿಷೇಧಕ್ಕೆ ಆಜ್ಞೆಯನ್ನು ಹೊರಡಿಸಿದರು. ಆದುದರಿಂದ ಇಂದು ಸತಿಸಹಗಮನ ಪದ್ಧತಿ ಶಾಶ್ವತವಾಗಿ ಕಣ್ಮರೆಯಾಗಿದೆ.

ಭಾರತೀಯ ಸಂದರ್ಭದಲ್ಲಿ ವಿವಾಹದ ನಿಯಮಗಳಂತೂ ಯಾವ ಧರ್ಮದಲ್ಲಿಯೂ ಮಹಿಳೆಯರ ಪರವಾಗಿಲ್ಲ ಎಂಬುದನ್ನು ಗಮನಿಸಬೇಕಾಗಿದೆ. ಏಕೆಂದರೆ ವಿವಾಹ ಎಂಬುದು ಪುರುಷನ ಹಕ್ಕುಗಳನ್ನು, ಮಹಿಳೆಯ ಬಾಧ್ಯತೆಗಳನ್ನು ಖಚಿತಪಡಿಸಿ ಹೇಳುವ ವಿಧಿಯೇ ಆಗಿರುತ್ತದೆ. ವಿವಾಹವು ಧರ್ಮದ ಅಂಕುಶಕ್ಕೆ ಸಿಕ್ಕು ಸ್ವಾತಂತ್ರ್ಯ ಸಮಾನತೆಗಳನ್ನು ಸಹ ಕಳೆದುಹೋಗುವಂತೆ ಮಾಡುತ್ತದೆ. ನಮ್ಮಲ್ಲಿ ಭಾರತೀಯ ಆದರ್ಶ ಸ್ತ್ರೀತ್ವದ ಪರಿಕಲ್ಪನೆ ಹೆಚ್ಚಾಗಿ ಕಂಡುಬರುತ್ತದೆ. ಇದು ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತಗಳಿಂದ ಎರವಲು ಪಡೆದುಕೊಂಡಂತೆ ಕಾಣುತ್ತದೆ. ಅದರ್ಶ ನಾರಿಯ ಪರಿಕಲ್ಪನೆಯನ್ನು ಮೂರು ವಿಧದಲ್ಲಿ ವಿಂಗಡಿಸಿಕೊಳ್ಳಬಹುದಾಗಿದೆ. “ಅಹಲ್ಯಾ, ದ್ರೌಪದಿ, ತಾರಾ, ಕುಂತಿ, ಮಂಡೋದರಿಯರು ಪ್ರಾರ್ಥನೆಗೆ ಅರ್ಹರಾದ ಗಣ್ಯ ಪಂಚಕನ್ಯೆಯರು, ಇವರನ್ನು ಸ್ಮರಿಸಿ ದಿನವನ್ನಾರಂಭಿಸಿದ ಹೆಂಗಸಿನ ಮಹಾಪಾತಕಗಳು ನಾಶವಾಗಿ ಬಿಡುತ್ತದೆ ಎಂಬ ನಂಬಿಕೆಯಿದೆ. ಎರಡನೆಯ ಗುಂಪು ಸೀತೆ, ಸಾವಿತ್ರಿ, ಪಾರ್ವತಿಯರದು. ಇವರೇ ಆದರ್ಶ ಸ್ತ್ರೀತ್ವದ ಮಾದರಿಗಳು, ಇವರೆಡೂ ಗುಂಪಿಗೆ ಸೇರದಿದ್ದರೂ ನಮ್ಮ ಗಾಂಧಿ, ವಿವೇಕಾನಂದ, ರವೀಂದ್ರನಾಥ ಠಾಗೋರರಂಥ ಆಧುನಿಕ ಚಿಂತಕರ ಮೆಚ್ಚುಗೆಯನ್ನು ಪಡೆದ ದಮಯಂತಿ, ಶಕುಂತಲಾ ಮೈತ್ರೇಯಿ, ಸುಭದ್ರ, ಇವರು ಮೂರನೆಯ ಗುಂಪಿಗೆ ಸೇರುತ್ತಾರೆ (ಶ್ರೀಮತಿ ಎಚ್.ಎಸ್.; ೨೦೦೪; ಪು. ೬).

ಹೆಣ್ಣು ಅವಲಂಬಿಯಾಗಿಯೇ ಇರಬೇಕು ಎಂಬುದು ಹಲವು ಧರ್ಮಶಾಸ್ತ್ರಕಾರರ ಆಶಯವಾಗಿತ್ತು. ಈ ಧರ್ಮಶಾಸ್ತ್ರಕಾರರು ರೂಪಿಸಿದ ನಿಯಮಗಳೇ ಮಹಿಳೆಯರಿಗೆ ಮುಳುವಾಗಿದ್ದನ್ನು ಕಾಣಬಹುದಾಗಿದೆ.

ಕಲೆಯು ಸಾಮಾಜಿಕ, ರಾಜಕೀಯ ವಲಯದಲ್ಲಿಯೇ ಇದೆ. ಅಷ್ಟೇ ಅಲ್ಲದೆ ಕಲೆಯು ಯಾರು ತನ್ನನ್ನು ನಿರ್ಮಿಸಿದ್ದಾರೋ ಅವರ ದೃಷ್ಟಿಕೋನದಿಂದಲೇ ಮಾತಾಡುತ್ತದೆ. ಕಲೆಯಲ್ಲಿ ನಡೆಯುವುದು ವಾಸ್ತವದ ಪ್ರತಿನಿಧೀಕರಣ ಎಂದಾದರೆ, ಇದೂ ಕೂಡ ಜೀವನದಂತೆಯೇ ಪುರುಷ ನಿರ್ಮಿತವಾಗಿದೆ. ಹೀಗಾಗಿ ಕಲೆಯೂ ಸಹ ಸ್ತ್ರೀಗೆ ಅಂತಿಮ ಬಿಡುಗಡೆಯನ್ನು ನೀಡಲಾರದು (ಮೀರಾ ಎಲ್.ಜಿ.; ೨೦೦೪; ಪು. ೭) ಎಂದು ಮೀರಾ ಎಲ್.ಜಿ. ಅವರು ಅಭಿಪ್ರಾಯಪಡುತ್ತಾರೆ. ಹೆಣ್ಣುಮಕ್ಕಳು ಅನುಸರಿಸಿಕೊಂಡು ಬಂದಿರುವ ಕೆಲವು ಪಾರಂಪರಿಕ ಕಲೆಗಳು ಮಹಿಳೆಯ ಶೋಷಣೆಯ ಸಂಕೇತವಾಗಿ ಕಂಡಿರುವುದು ಸ್ತ್ರೀವಾದಿ ದೃಷ್ಟಿಕೋನವಾಗಿದೆ. ಮುಖ್ಯವಾಗಿ ಇಲ್ಲಿ ಶಾಂತಲೆ ನೃತ್ಯಕಲೆಯಲ್ಲಿ ಪ್ರಾವೀಣ್ಯತೆಯನ್ನು ಸಾಧಿಸಿದ್ದಳಾಗಿದ್ದರಿಂದ ಆ ಕಲೆಯೇ ಅವಳನ್ನು ಒಂದು ಚೌಕಟ್ಟಿನಡಿಯಲ್ಲಿ ಬಂಧಿಯನ್ನಾಗಿಸಿರುವುದು ಕಂಡುಬರುತ್ತದೆ.

ಕನ್ನಡದ ಐತಿಹಾಸಿಕ ಕಾದಂಬರಿಗಳಲ್ಲಿ ಪುರುಷ ಪ್ರಧಾನ ಮೌಲ್ಯಗಳು ಹೆಚ್ಚಾಗಿ ಬಿಂಬಿತವಾಗುವಂತೆ ಪಾತ್ರಗಳನ್ನು ಚಿತ್ರಿಸಿರುವುದನ್ನು ಕಾಣುತ್ತೇವೆ. ಪಾತಿವ್ರತ್ಯದ ಸಂಕೋಲೆಗೆ ಸಿಕ್ಕಿಸುವಂತಹ, ಆ ಮೂಲಕ ಸಮಾಜದ ಇನ್ನಿತರ ಮಹಿಳೆಯರಿಗೆ ಮಾದರಿಯಾಗುವಂತಹ ರೀತಿಯಲ್ಲಿ ಬಹುಪಾಲು ಐತಿಹಾಸಿಕ ಮಹಿಳಾ ಪಾತ್ರಗಳು ಪಾತಿವ್ರತ್ಯವೇ ಹೆಣ್ಣು ಮಕ್ಕಳ ಬದುಕಿನ ಆದರ್ಶ ಎಂಬ ರೀತಿಯಲ್ಲಿ ಬಿಂಬಿತವಾಗಿವೆ.

ಒಟ್ಟಾರೆಯಾಗಿ ಗಮನಿಸಿದಾಗ ಸ್ತ್ರೀಪರ ದೃಷ್ಟಿಕೋನದಿಂದ ಮಹಿಳಾ ಪಾತ್ರಗಳನ್ನು ಚಿತ್ರಿಸಿದ ಐತಿಹಾಸಿಕ ಕಾದಂಬರಿಗಳು ತೀರ ವಿರಳವೆನ್ನಬಹುದು. ಮೇಲೆ ಅವಲೋಕಿಸಿದಂತೆ ಮಾತೆ ಮಹಾದೇವಿ ಅವರ 'ತರಂಗಿಣಿ' ಕಾದಂಬರಿಯಲ್ಲಿ ಅಕ್ಕಮಹಾದೇವಿಯ ಪಾತ್ರ ಚಿತ್ರಣ ಸಂದರ್ಭದಲ್ಲಿ ಸ್ವಲ್ಪಮಟ್ಟಿನ ಸ್ತ್ರೀಪರ ದೃಷ್ಟಿಕೋನಗಳು ಕಂಡುಬರುವುದನ್ನು ಬಿಟ್ಟರೆ, ಉಳಿದ ಯಾವುದೇ ಕಾದಂಬರಿಗಳು ಆ ನಿಟ್ಟಿನಲ್ಲಿ ಗಮನಾರ್ಹವೆನಿಸಿಲ್ಲ. ಸ್ವತಃ ಅಕ್ಕಮಹಾದೇವಿಯ ವ್ಯಕ್ತಿತ್ವವೇ ಸ್ತ್ರೀಪರವಾಗಿದ್ದುದರಿಂದ ಕಾದಂಬರಿಕಾರರಿಗೆ, ಆಕೆಯ ಪಾತ್ರವನ್ನು ಆ ದೃಷ್ಟಿಕೋನದಿಂದ ಚಿತ್ರಿಸಲು ಸಾಧ್ಯವಾಯಿತು. ಆದರೆ ಅಕ್ಕಮಹಾದೇವಿಯ ಜೀವನವನ್ನೇ ವಸ್ತುವಾಗಿರಿಸಿಕೊಂಡ, ಕನ್ನಡದ ಉಳಿದೆರಡು ಐತಿಹಾಸಿಕ ಕಾದಂಬರಿಗಳು ಆ ಪ್ರಯತ್ನವನ್ನು ಅಷ್ಟಾಗಿ ಮಾಡಿದಂತೆಯಿಲ್ಲ. ಶಾಂತಲೆ, ಬಮ್ಮಲೆ, ಅತ್ತಿಮಬ್ಬೆ, ಗುಂಡಮಬ್ಬೆ, ರತ್ನಾಜಿ, ಚಿನ್ನಾಸಾನಿ, ಓಬವ್ವ ನಾಗತಿ, ಗೌರವ್ವನಾಗತಿ, ಕಾಮೇಶ್ವರಿ, ಕೆಳದಿ ಚೆನ್ನಮ್ಮ, ಕಿತ್ತೂರ ಚೆನ್ನಮ್ಮ, ಅಬ್ಬಕ್ಕರಾಣಿ, ಒನಕೆ ಓಬವ್ವ ಮೊದಲಾದ ಮಹಿಳೆಯರು ಕನ್ನಡ ಐತಿಹಾಸಿಕ ಕಾದಂಬರಿಗಳಲ್ಲಿ ಕೇಂದ್ರ ಪಾತ್ರಗಳಾಗಿಯೂ, ಪೂರಕ ಪಾತ್ರಗಳಾಗಿಯೂ ಚಿತ್ರಣಗೊಂಡಿದ್ದಾರೆ. ಅವರೆಲ್ಲರ ಪಾತ್ರಚಿತ್ರಣಗಳ ಸಂದರ್ಭಗಳಲ್ಲಿ ಸ್ತ್ರೀಯರ ವಿವಿಧ ವ್ಯಕ್ತಿತ್ವಗಳಿಗೆ ಮಾದರಿಗಳಾಗಿ, ಅವರು ಚಿತ್ರಿತರಾಗಿದ್ದಾರೆಯೇ ಹೊರತು ಅಲ್ಲಿ ಸ್ತ್ರೀಪರ ದೃಷ್ಟಿಕೋನಗಳನ್ನು ವಿಶೇಷವಾಗಿ ಗುರುತಿಸಲು ಸಾಧ್ಯವಾಗುವುದಿಲ್ಲ. ಶಿಕ್ಷಣದಲ್ಲಿ, ಕಲಾಕ್ಷೇತ್ರದಲ್ಲಿ, ದಾನಗುಣದಲ್ಲಿ, ಯುದ್ಧ ಕಲೆಯಲ್ಲಿ, ಅದೇ ರೀತಿ ಆಡಳಿತದಲ್ಲಿ ನಿಪುಣರೆನಿಸಿದ

ಹೆಣ್ಣುಮಕ್ಕಳ ಪಾತ್ರಗಳು ಕೆಲವು ಐತಿಹಾಸಿಕ ಕಾದಂಬರಿಗಳಲ್ಲಿ ಕಂಡುಬರುತ್ತವೆಯಾದರೂ ಅವೆಲ್ಲ ವರ್ತಮಾನದ ಬದುಕಿಗೆ ಸ್ಫೂರ್ತಿ-ಆದರ್ಶ ಎಂಬ ನೆಲೆಗಷ್ಟೇ ನಿಂತು ಬಿಡುತ್ತವೆ. ಅಂಥ ಪಾತ್ರಚಿತ್ರಣಗಳಲ್ಲಿ ವಿಶೇಷವಾದ ಸ್ತ್ರೀಪರ ದೃಷ್ಟಿಕೋನವನ್ನಾಗಲಿ, ಆಧುನಿಕ ಮಹಿಳಾ ಪ್ರಜ್ಞೆಯನ್ನಾಗಲಿ ಗುರುತಿಸುವುದು ಕಷ್ಟಸಾಧ್ಯ.

ಕನ್ನಡದಲ್ಲಿ ಬಂದಿರುವ ಕೆಲವು ಪೌರಾಣಿಕ ಕಾದಂಬರಿಗಳು ಅಹಲ್ಯೆ, ಸೀತೆ, ಶಾಕುಂತಲೆ, ದ್ರೌಪದಿ, ಕುಂತಿ, ಮಾಧವಿ ಮೊದಲಾದ ಪೌರಾಣಿಕ ಪಾತ್ರಗಳನ್ನು ಆಧುನಿಕ ಮಹಿಳಾ ಪ್ರಜ್ಞೆಯ ನೆಲೆಯಲ್ಲಿ ಚಿತ್ರಿಸಿವೆ. ಪಾರಂಪರಿಕವಾದ ಪುರಾಣದ ಒಪ್ಪಿತ ಮೌಲ್ಯಗಳನ್ನು ಪ್ರಶ್ನಿಸುವಂತೆ ಆ ಪಾತ್ರಗಳು ಪುನರ್‌ಸೃಷ್ಟಿಗೊಂಡಿವೆ. ಆದರೆ ಕನ್ನಡ ಐತಿಹಾಸಿಕ ಕಾದಂಬರಿಗಳ ಮಹಿಳಾ ಪಾತ್ರಗಳು ಆಧುನಿಕ ಮಹಿಳಾ ಪ್ರಜ್ಞೆಯ ದೃಷ್ಟಿಯಿಂದ ಪುನರ್‌ಸೃಷ್ಟಿಗೊಂಡಂತೆ ಕಂಡು ಬರುವುದಿಲ್ಲ. ಪೌರಾಣಿಕ ಸ್ತ್ರೀಪಾತ್ರಗಳನ್ನು ಪುನರ್‌ಸೃಷ್ಟಿಸುವಲ್ಲಿ ಕನ್ನಡದ ಕೆಲ ಕಾದಂಬರಿಕಾರರು ವಹಿಸಿರುವ ಸ್ವಾತಂತ್ರ್ಯ-ಮುಕ್ತತೆಯನ್ನು ಐತಿಹಾಸಿಕ ಕಾದಂಬರಿಕಾರರು ವಹಿಸಿಲ್ಲ ಎನ್ನಬಹುದು. ಇತಿಹಾಸವೆನ್ನುವುದು ನಡೆದ ಘಟನೆ ಆಗಿರುವುದರಿಂದ ಕಾದಂಬರಿ ರಚನೆಯ ಸಂದರ್ಭದಲ್ಲಿ ಇತಿಹಾಸಕ್ಕೆ ಸಾಧ್ಯವಾದಷ್ಟು ಬದ್ಧವಾಗಿರಬೇಕು ಎಂಬ ನಂಬಿಕೆಯೇ ಇದಕ್ಕೆ ಕಾರಣವಿದ್ದರೂ ಇರಬಹುದು. ಅದೇನೇಯಿದ್ದರೂ ಚರಿತ್ರೆಯ ಬರವಣಿಗೆಯಲ್ಲಿ ಅಷ್ಟು ಇಷ್ಟು ಸ್ಥಾನ ಪಡೆದಿರುವ ಮಹಿಳೆಯರ ಬದುಕಿಗೆ ಜೀವ ತುಂಬಿ, ಬಣ್ಣ ತುಂಬಿ, ಅವರ ಜೀವನವನ್ನು ಕಾದಂಬರಿಯಾಗಿಸಿದ, ಆ ಮೂಲಕ ಅವರನ್ನು ಓದುಗರ ಮನಗಳಲ್ಲಿ ನೆಲೆನಿಲ್ಲಿಸಿದ ಶ್ರೇಯಸ್ಸು ಅಂತು ನಮ್ಮ ಐತಿಹಾಸಿಕ ಕಾದಂಬರಿಕಾರರಿಗೆ ಸಲ್ಲುತ್ತದೆ.

**ಕೊನೆ ಟಿಪ್ಪಣಿ**

೧. ಇಲ್ಲಿ ರತ್ನಾಜಿಯು ತನ್ನ ಮನೋಗತವನ್ನು ವ್ಯಕ್ತಪಡಿಸುವ ರೀತಿ ತೀರ ಆಧುನಿಕವಾಗಿದೆ ಎನ್ನಬಹುದು. ಈ ನಿಟ್ಟಿನಲ್ಲಿ ರತ್ನಾಜಿಯನ್ನೇ ಕೇಂದ್ರ ಪಾತ್ರವಾಗಿಸಿಕೊಂಡು, ಸ್ತ್ರೀವಾದಿ ದೃಷ್ಟಿಕೋನದಿಂದ ಕಾದಂಬರಿಯೊಂದನ್ನು ರಚಿಸಬಹುದಾದ ಸಾಧ್ಯತೆಯೂ ನಿಚ್ಚಳವಾಗಿದೆ.

□□

## ಅಧ್ಯಾಯ : ಆರು

# ಕನ್ನಡ ಐತಿಹಾಸಿಕ ಕಾದಂಬರಿಗಳ ಭಾಷಾಶೈಲಿ ಮತ್ತು ತಂತ್ರ

**ಭಾ**ಷೆ ಎನ್ನುವುದೊಂದು ಅತ್ಯುತ್ತಮ ಅಭಿವ್ಯಕ್ತಿ ಮಾಧ್ಯಮ. ತಮ್ಮ ಮನದ ಅಭಿಪ್ರಾಯ ಅನಿಸಿಕೆ, ಭಾವ-ಭಾವನೆ, ಆಲೋಚನೆ, ಸುಖ-ದುಃಖ, ನೋವು-ನಲಿವು ಇತ್ಯಾದಿ ಸಂಗತಿಗಳನ್ನು ಇತರರ ಮುಂದೆ ಅಭಿವ್ಯಕ್ತಪಡಿಸಲು ಭಾಷೆಯಷ್ಟು ಸಹಕಾರಿಯಾದ ಮಾಧ್ಯಮ ಇನ್ನೊಂದಿಲ್ಲ. ಮಾನವರು ಕಂಡುಕೊಂಡ ಅಭಿವ್ಯಕ್ತಿ ಮಾಧ್ಯಮಗಳಲ್ಲೆಲ್ಲ ಭಾಷೆಯೇ ಅತ್ಯಂತ ಪ್ರಭಾವಶಾಲಿಯಾದುದು ಹಾಗೂ ಇತರ ಎಲ್ಲಾ ಪ್ರಾಣಿಗಳಿಂದ ಬೇರ್ಪಡಿಸಲು ಮೂಲಕಾರಣವಾದುದು. ಮನುಷ್ಯರು ತಮ್ಮ ನೆರೆಹೊರೆಯವರೊಂದಿಗೆ ಬೆರೆಯಲು ಭಾಷೆ ಒಂದು ಅತ್ಯವಶ್ಯಕವಾದ ಸಾಧನವಾಗಿದೆ.

'ಭಾಷೆ' ಭಾವನೆಗಳ ಅಭಿವ್ಯಕ್ತಿ ಮಾಧ್ಯಮವೇ ಆದರೂ ಅಭಿವ್ಯಕ್ತಿಗೊಳಿಸುವ ಭಾಷೆಯಲ್ಲಿ ವೈವಿಧ್ಯತೆಯಿದೆ. ಅಂದರೆ, ವ್ಯಕ್ತಿ ಅಥವಾ ವ್ಯಕ್ತಿಗಳ ಸಮೂಹ ಒಂದೇ ಭಾಷೆಯನ್ನು ಬಳಸಿದರೂ ಬಳಕೆಯ ಸಂದರ್ಭದಲ್ಲಿ ಹಲವು ವ್ಯತ್ಯಾಸಗಳು ಕಂಡು ಬರುತ್ತವೆ. ಹೀಗೆ ವ್ಯತ್ಯಾಸಗಳಿದ್ದಾಗ್ಯೂ ಆ ಭಾಷೆಯನ್ನಾಡುವವರು ಪರಸ್ಪರ ಅರ್ಥ ಮಾಡಿಕೊಳ್ಳಬಲ್ಲ ವಿಶಿಷ್ಟ ಪ್ರಾವೀಣ್ಯತೆಯೂ ಭಾಷೆಗಿದೆ. ಒಟ್ಟಾರೆ ವ್ಯಕ್ತಿಯೊಬ್ಬರೂ ಬಳಸುವ ಭಾಷೆಯು ಅವರ ಪ್ರದೇಶ, ಪರಿಸರ, ಸಮಾಜ, ಸಂಸ್ಕೃತಿ, ಅನ್ಯಭಾಷಾ ಪ್ರಭಾವ ಮುಂತಾದ ಅಂಶಗಳಿಗೆ ಅನುಗುಣವಾಗಿರುತ್ತವೆ. ಅಲ್ಲದೆ ಇಂತಹ ವ್ಯತ್ಯಾಸಗಳಿಗೆ ಭೌಗೋಳಿಕ, ಸಾಮಾಜಿಕ, ರಾಜಕೀಯ ಸ್ಥಿತ್ಯಂತರಗಳೂ ಕಾರಣವಾಗಿರಬಹುದು.

ಯಾವುದೇ ಸೃಜನಶೀಲ ಸಾಹಿತ್ಯ ಕೃತಿಯೊಂದರ ಅಧ್ಯಯನದಲ್ಲಿ ಭಾಷೆಯನ್ನು ಅತ್ಯಂತ ಪ್ರಮುಖ ಪರಿಣಾಮಕಾರಿ, ಮಾನದಂಡವಾಗಿ ಸ್ವೀಕರಿಸಲಾಗಿದೆ. ಕೃತಿಯಲ್ಲಿ ಪ್ರಕಟಗೊಂಡ ಭಾಷಾ ವೈಶಿಷ್ಟ್ಯದ ಮೂಲಕವೇ ಕೃತಿಕಾರರ ಮಾನಸಿಕ ಸಂವೇದನೆಯ ತೀವ್ರತೆಯನ್ನು ಅಳೆಯಲು ಸಾಧ್ಯವಾಗುತ್ತದೆ. ಒಂದು ವಸ್ತುವನ್ನು ಅಥವಾ ಘಟನೆಯನ್ನು ಕಂಡು, ಅನುಭವಿಸಿ ಅದನ್ನು ಗ್ರಹಿಸಿಕೊಂಡು ನಂತರ ತನ್ನದೇ ಆದ ರೀತಿಯಲ್ಲಿ ಅಭಿವ್ಯಕ್ತಗೊಳಿಸುವ ಶೈಲಿ ಬಹಳ ಮುಖ್ಯ. ಇಲ್ಲಿ ಗ್ರಹಿಕೆ ಹಾಗೂ ಅಭಿವ್ಯಕ್ತಿ ಈ ಎರಡೂ ಸಾಹಿತ್ಯದಲ್ಲಿ ಪ್ರಭಾವಯುತವಾಗಿರಬೇಕು. ಆಯಾ ಕಾಲಘಟ್ಟದಲ್ಲಿಯ ಬೇರೆ ಬೇರೆ ಆಶಯ ಧೋರಣೆಗಳಿರುವಂತೆ, ಅಲ್ಲಿ ಪ್ರಚಲಿತವಿರುವ ಭಾಷಾ ಕುಶಲತೆಯೂ ಪ್ರಸ್ತುತ ಜೀವನ ದೃಷ್ಟಿಯ ಪ್ರತಿಪಾದನೆಯಾಗಿಯೂ ಆಗಿರುತ್ತದೆ.

"ಬರಹವು ಬದುಕಿನ ಬಣ್ಣದ ಬಟ್ಟೆಯಾಗಬಾರದು. ಬದುಕಿನ ಚರ್ಮವಾಗಬೇಕು. ಬಟ್ಟೆಯಾಗುವ ಸಾಹಿತ್ಯ ಬದುಕಿನ ಭಾಗವಾಗುವುದಿಲ್ಲ. ಬದುಕಿನ ಹೊದಿಕೆಯಾಗುತ್ತದೆ. ಸಾಹಿತ್ಯ ಬದುಕಿನ ಚರ್ಮವಾದಾಗ ಅವಿನಾಭಾವ ಸಂಬಂಧ ಸಾಧ್ಯವಾಗುತ್ತದೆ"(ಬರಗೂರು ರಾಮಚಂದ್ರಪ್ಪ; ೧೯೯೩; ಪು. ೨೪) ಎಂದು ಬರಗೂರು ರಾಮಚಂದ್ರಪ್ಪ ಅವರು ಅಭಿಪ್ರಾಯಪಡುತ್ತಾರೆ.

'ಶೈಲಿ' ಎಂಬ ಪದವು ಇಂಗ್ಲೀಷಿನ 'Style' ಎಂಬುದರ ಸಂವಾದಿ ರೂಪವಾಗಿದೆ. ಭಾಷೆ ಬಳಕೆಯ ಸಾಧ್ಯ ಸಾಧ್ಯತೆಗಳನ್ನು ಬರವಣಿಗೆಯಲ್ಲಿ ಅರ್ಥವತ್ತಾಗಿ ದುಡಿಸಿಕೊಳ್ಳುವುದೇ ಶೈಲಿ. ವಸ್ತು, ತಂತ್ರಗಳು ಮುಖ್ಯವಾಗಿ ಶೈಲಿಯನ್ನೇ ಅವಲಂಬಿಸಿವೆ. ವ್ಯಕ್ತಿಯೇ ಶೈಲಿ, ವ್ಯಕ್ತಿತ್ವವೇ ಶೈಲಿಯೆಂದು ಹೇಳುವುದುಂಟು. ಶೈಲಿಯೆಂದರೇನು? ಎಂಬ ಪ್ರಶ್ನೆಯನ್ನು ಕುರಿತು ಆಲೋಚಿಸಬೇಕಾದರೆ ಕಾದಂಬರಿಯಲ್ಲಿ ಶೈಲಿಯ ಅಥವಾ ಭಾಷಾಶೈಲಿಯ ಬಳಕೆ ಅರ್ಥೈಸಿಕೊಳ್ಳಲಿಕ್ಕೆ ಸುಲಭವಾಗುತ್ತದೆ. ಶೈಲಿಯೆಂದರೆ ಉತ್ತಮವಾದ ಬರವಣಿಗೆ, ಸಾಹಿತ್ಯ ಭಾಷೆಗೆ ಹೊದೆಸಿದ ಅಲಂಕಾರ, ಒಂದು ಸಾಹಿತ್ಯದ ಸಂಪ್ರದಾಯದಲ್ಲಿ ಅಥವಾ ಲೇಖಕನಲ್ಲಿ ಗುರುತಿಸಬಹುದಾದ ಪ್ರತ್ಯೇಕತೆ. ವಸ್ತುವಿಷಯ ಸಂದರ್ಭಗಳಿಗೆ ಸಮಂಜಸವಾಗುವಂತೆ ಭಾಷೆಯನ್ನು ಬಳಸುವ ರೀತಿ. ಹೀಗೆ ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆ ರೀತಿಯ ಜನಸಮುದಾಯದ ಜನರು 'ಶೈಲಿ'ಯನ್ನು ಕುರಿತು ಅರ್ಥೈಸಿಕೊಂಡಿರುತ್ತಾರೆ.

'ಶೈಲಿ ಲೇಖಕನ ಅಂಗಿಯಲ್ಲಿ ತೊಗಲು'
'ಸುಂದರ ಕಾವ್ಯದೇವಿಯ ಮುಖ ಬಣ್ಣದ ಹೊಳಪೇ ಶೈಲಿ'
'ಕವಿಯೇ ಶೈಲಿ'
'ಆಲೋಚನೆಯ ಉಡುಗೆಯೇ ಶೈಲಿ'

ಇತ್ಯಾದಿ ಆಂಗ್ಲ ವಿಮರ್ಶಕರ ವ್ಯಾಖ್ಯಾನಗಳನ್ನು ಎಸ್.ವಿ. ರಂಗಣ್ಣನವರು ತಮ್ಮ ಶೈಲಿ ಕೃತಿಯ ಮೂರು ಸಂಪುಟಗಳಲ್ಲಿ ವಿವರಿಸಿದ್ದಾರೆ. ಮೇಲ್ಕಾಣಿಸಿದ ವ್ಯಾಖ್ಯಾನಗಳು ಶೈಲಿಯ ಮಹತ್ವವನ್ನು ಸಾರುತ್ತವೆ.

ಸಾಹಿತ್ಯ ಸಂದರ್ಭದಲ್ಲಿ ಶೈಲಿ ಎಂದರೆ, ಅಭಿವ್ಯಕ್ತಿ ಮಾಧ್ಯಮದ ವಿವಿಧ ಪರಿಕರಗಳನ್ನೊಳಗೊಂಡ ರೀತಿ ಎಂದರ್ಥ. ಸಾಹಿತಿ ತನ್ನ ಅನುಭವದ ಸಮಷ್ಟಿ ಪ್ರಜ್ಞೆಯನ್ನು ತನ್ನದೇ ಆದ ರೀತಿಯಲ್ಲಿ ಶಾಬ್ದಿಕ ರೂಪದಲ್ಲಿ ಹೊರಹಾಕುವಾಗ 'ಶೈಲಿ' ತನ್ನಿಂದ ತಾನೇ ಅಪ್ರಯತ್ನ ಪೂರಕವಾಗಿ ರೂಪ ಪಡೆದುಕೊಳ್ಳುತ್ತದೆ. ಹಾಗಾಗಿಯೇ ಅನುಭವ ಸಮಷ್ಟಿಯ ಅಭಿವ್ಯಕ್ತಿಯೇ ರೀತಿ ಶೈಲಿ ಎಂದು ಹೇಳಬಹುದು. "ಶೈಲಿ ಪ್ರಧಾನವಾಗಿ ವ್ಯಕ್ತಿನಿಷ್ಠವಾದುದು ನಿಜ. ಆದರೆ ಅದು ಸಮಷ್ಟಿಯ ಮೇಲೆ ಪ್ರಭಾವ ಬೀರುವುದಲ್ಲದೆ, ಅದರಿಂದ ಪ್ರಭಾವಿತವಾಗುವುದೂ ಉಂಟು. ಆದ್ದರಿಂದ ಅದು ಸಾಹಿತಿಯ ವ್ಯಕ್ತಿತ್ವವನ್ನು ಪ್ರತಿಬಿಂಬಿಸುವ ದರ್ಶನವೂ (ಸಾಧನವೂ) ಅಹುದು. ಒಂದು ಸಮಾಜದ ಸಂಸ್ಕೃತಿಯನ್ನು ಬಿಂಬಿಸುವ ದರ್ಶನವೂ ಅಹುದು" (ಜವರೇಗೌಡ ದೇ.; ೧೯೭೮; ಪು. ೧೭೯). ಅಂದರೆ ಒಬ್ಬ ಸಾಹಿತಿಗಳ ಶೈಲಿಯು ವ್ಯಕ್ತಿತ್ವವನ್ನಷ್ಟೇ ಅಲ್ಲ; ಅವರು ಬದುಕಿದ ಸಮಾಜ ಸಂಸ್ಕೃತಿಯನ್ನು ದರ್ಶನ ಮಾಡಿಸುತ್ತದೆ.

ಶೈಲಿಗೆ ಯಾವುದೇ ಒಂದು ನಿರ್ದಿಷ್ಟ, ನಿಖರವಾದ ಮೂರ್ತರೂಪವಿಲ್ಲ. ಭಾಷೆ, ಅಲಂಕಾರ ಮುಂತಾದುವುಗಳನ್ನು ಶೈಲಿ ಒಳಗೊಂಡಿದೆ. ಭಾರತೀಯ ಕಾವ್ಯಮೀಮಾಂಸಕರು ವೈದರ್ಭಿ, ಗೌಡಿ, ಲಾಟಿಯಾ ಮುಂತಾಗಿ ಶೈಲಿಯನ್ನು ಅಭ್ಯಸಿಸಿ ಅದರಲ್ಲಿ ಓಜಸ್ಸು, ಕಾಂತಿ ಇತ್ಯಾದಿ ಗುಣಗಳನ್ನು ಗುರುತಿಸಿದ್ದಾರೆ. ಕುಂತಕನು ಕವಿ ಸ್ವಭಾವಕ್ಕನುಸರಿಸಿ ಸುಕುಮಾರ ವಿಚಿತ್ರ, ಮಧ್ಯಮ ಎಂಬ ಮೂರು ಬಗೆಯ ಕಾವ್ಯಮಾರ್ಗಗಳನ್ನು ಹೇಳಿದ್ದಾನೆ. ಹಿಂದಿನ ರೀತಿ, ಮಾರ್ಗ ಎಂಬ ಪದಗಳಿಗಿಂತ ಶೈಲಿ ಎಂಬ ಪದವು ಭಿನ್ನವಾದದ್ದು. ಕಥಾವಸ್ತುವಿಗೆ ತಕ್ಕಂತೆ ಕಾಲ, ದೇಶ, ಸ್ಥಳ ಇವೆಲ್ಲವನ್ನು ಲಕ್ಷ್ಯದಲ್ಲಿಟ್ಟುಕೊಂಡು ಕಥೆಗಾರರು ತಮ್ಮ ಸಮಕಾಲೀನ ಸಮಾಜವು ಒಪ್ಪುವ ಹಾಗೆ ಬರೆಯುತ್ತಾರೆ.

"ಕವಿಗಳು ಬಳಸಿದ ಪದಗಳಲ್ಲಿ ಕುಶಲತೆ, ಸಂವೇದನಾಶೀಲತೆ, ಶಿಲ್ಪಕಲೆಗಳು ಕಂಡುಬರುವುದರೊಂದಿಗೆ ಬಳಕೆಯಾಗಿರುವ ಪದಗಳು ಖಚಿತ, ನಿಕ್ಷೇಪ, ಮೊನಚು, ಔಚಿತ್ಯಗಳಿಂದ ಕೂಡಿರಬೇಕು. ರಸಮಯತೆ, ಉತ್ಕಟತೆಯನ್ನು ತೋರ್ಪಡಿಸುವಂತಿಲ್ಲ. ವೈವಿಧ್ಯಪೂರ್ಣವಾಗಿರಬೇಕು" (ಕಮಲಮ್ಮ ಶರಣಪ್ಪ ಆವಂಟಿ; ೨೦೦೪; ಪು. ೧೮೩) ಎಂದು ಜಿ.ಎಸ್. ಶಿವರುದ್ರಪ್ಪನವರು ಅಭಿಪ್ರಾಯ ಪಡುತ್ತಾರೆ. ಒಟ್ಟಿನಲ್ಲಿ ಇವೆಲ್ಲವುಗಳನ್ನೊಳಗೊಂಡಿದ್ದರೆ ಶೈಲಿಯು ಸಮರ್ಥ, ಪರಿಪೂರ್ಣವೆನಿಸುತ್ತದೆ.

"ಕಾದಂಬರಿಯ ಶೈಲಿ ಕಥಾವಸ್ತುವಿನಲ್ಲಿಯ ಪಾತ್ರಗಳ ಹೃದ್ಗತವಾದ ನೈಜ ಧ್ವನಿಯಾಗಬೇಕಾದುದು ಅಗತ್ಯವಾಗಿದೆ. ನಮ್ಮಲ್ಲಿ ಕೆಲವು ಲೇಖಕರನ್ನು ಬಿಟ್ಟರೆ ಹೆಚ್ಚು ಜನರು ಶೈಲಿಯ ವಿಷಯವಾಗಿ ಪರಿಶ್ರಮಪಡುವುದಿಲ್ಲ. ಹೀಗಾಗಿ ಭಾಷೆ ತುಂಬಿಕೊಂಡು ಬೆಳೆಯದೆ, ಕ್ಷಯ ಹೊಂದುತ್ತ ನಡೆದಿದೆ. ಇದ್ದ ಭಾಷಾ ಸರಣಿಯನ್ನೇ ಮತ್ತೆ ಮತ್ತೆ ಉಪಯೋಗಿಸಿ ಅದರ ವಾಚ್ಯಾರ್ಥ ಕೂಡ ದುರ್ಬಲವಾಗುತ್ತ ನಡೆದಿದೆ. ಸರಳತೆ ನೀರಸತೆಯಲ್ಲವೆಂಬುದನ್ನು ಲೇಖಕರು ಲಕ್ಷ್ಯದಲ್ಲಿ ಇಡಬೇಕಾಗಿದೆ" (ಕೀರ್ತನಾಥ ಕುರ್ತಕೋಟಿ; ೧೯೮೯; ಪು. ૩೫೯) ಎಂಬ ಕುರ್ತಕೋಟಿಯವರ ಮಾತು ಕಾದಂಬರಿಕಾರನ ಬರವಣಿಗೆಯ ಬಂಧಕ್ಕೆ ನೀಡಿದ ಉತ್ತಮ ನಿದರ್ಶನವಾಗಿದೆ. ಯಾವುದೇ ಶೈಲಿಯ ಅಧ್ಯಯನಕ್ಕೆ ಪ್ರಸ್ತುತ ಮಾತು ಮಾರ್ಗದರ್ಶಿಯಾದಂತಿದೆ. ಕಲೆಯಲ್ಲಿ ಶೈಲಿಯೂ ಒಂದಾಗಿದೆ. ಮಾತು, ಪದ, ವಾಕ್ಯ, ವಿನ್ಯಾಸ, ಸ್ವರಭಾವಗಳ ಸಂಯೋಜನೆ, ಮಾನವರಿಂದ ಉಂಟಾಗುವ ಅರ್ಥ ಇಲ್ಲೆಲ್ಲ ಹಲವು ಬಗೆಯ ಶೈಲಿಯ ಆಯ್ಕೆಗೆ ಅವಕಾಶವಿದೆ. ಲೇಖಕರ ಅಭಿವ್ಯಕ್ತಿ ಅವರ ಶೈಲಿಯಾಗಿ ಪರಿಣಮಿಸುತ್ತದೆ. ಅಭ್ಯಾಸ, ಜೀವನ ದೃಷ್ಟಿ, ಆಯ್ದುಕೊಂಡ ವಿಷಯಗಳೊಂದಿಗೆ ಲೇಖಕರು ಬಾಳಿದ ಕಾಲವೂ ಶೈಲಿಯ ಮೇಲೆ ಪರಿಣಾಮವನ್ನು ಬೀರುತ್ತದೆ. ನಿಜವಾದ ಪ್ರತಿಭಾವಂತ ಲೇಖಕರಿಗೆ ಶೈಲಿಯು ಒಂದು ಸಮಸ್ಯೆ ಅಲ್ಲ. ಅವರ ಪ್ರತಿಭೆಗೆ ಹೊಳೆದ ಕಥಾವಸ್ತುವಿಗೆ ತಕ್ಕ ರೂಪ ಪರಿಕರಗಳೊಂದಿಗೆ ಅದು ಹೊಳೆದಿರುತ್ತದೆ. ಇದು ಸಹಜವಾಗಿ ಬರುವಂಥದ್ದಾದರೂ ಕೆಲವು ಸಾಮಾನ್ಯ ನಿಯಮಗಳು ಇದಕ್ಕಿವೆ.

ವ್ಯಕ್ತಿಯಿಂದ ವ್ಯಕ್ತಿಗೆ ಶೈಲಿಯು ಭಿನ್ನವಾಗುತ್ತದೆ. ಸನ್ನಿವೇಶಕ್ಕೆ ತಕ್ಕಂತೆ ಬೆಡಗು, ನಾಟಕೀಯತೆ, ಅನುಕರಣೀಯ, ಸೂಕ್ಷ್ಮತೆ, ಬೇಸರದ ರೀತಿಯದು ಹೀಗೆ ಬದಲಾಗುತ್ತಾ ಹೋಗುತ್ತದೆ.

ಪ್ರತಿಯೊಬ್ಬ ಬರಹಗಾರೂ ತನಗರಿವಿಲ್ಲದಂತೆ ತನ್ನ ಬರವಣಿಗೆಯಲ್ಲಿ ತನ್ನ ಶೈಲಿಯ ವಿಶಿಷ್ಟ 'ಛಾಪು'ನ್ನು ಒತ್ತಿರುತ್ತಾರೆ. ಅದಕ್ಕಾಗಿಯೇ ಹೆಸರನ್ನು ಮರೆಮಾಡಿ ಓದಿದರೂ ಆ ಬರವಣಿಗೆಯ ರೀತಿ ಮೇಲೆ ಇದು ಇಂಥ ಲೇಖಕನದೇ ಬರವಣಿಗೆ ಎಂದು ಸ್ಪಷ್ಟವಾಗಿ ಗುರುತಿಸಬಹುದು. ಅಂತೆಯೇ ಪಂಪನ ಮಾರ್ಗಶೈಲಿ, ಕುಮಾರವ್ಯಾಸನ ದೇಸೀ ಶೈಲಿ, ಜಾನಪದ ಜೀವನಾಡಿಯನ್ನು ಕರಗತ ಮಾಡಿಕೊಂಡ ಬೇಂದ್ರೆ ಅವರ ಶೈಲಿ, ಪ್ರೌಢ, ಗಂಭೀರ ಶೈಲಿಯ ಕುವೆಂಪು, ಪುಟ್ಟ ಪುಟ್ಟ ಕ್ರಿಯಾಪದ ರಹಿತ ಚುಟುಕು ವಾಕ್ಯಗಳ ಸಿದ್ಧವನಹಳ್ಳಿ ಕೃಷ್ಣಶರ್ಮ. ಹೀಗೆ ವಿವಿಧ ಶೈಲಿಯ ಕುರುಹುಗಳು ಕಣ್ಣಿಗೆ ಒಡೆದು ಕಾಣುವಷ್ಟು ಸ್ಪಷ್ಟವಾಗಿರುತ್ತದೆ. ಒಟ್ಟಿನಲ್ಲಿ ಅಭಿವ್ಯಕ್ತಿ ಮಾಧ್ಯಮವೇ ಶೈಲಿ ಎಂಬುದು ಸರ್ವಸಮ್ಮತ ಅಭಿಪ್ರಾಯ. ಈ ಅಭಿವ್ಯಕ್ತಿಯಲ್ಲಿ ಅನೇಕ ಪರಿಕರಗಳು ಸೇರಿಕೊಳ್ಳುತ್ತವೆ. ಈ ಪರಿಕರಗಳು ಲೇಖಕರಿಂದ ಲೇಖಕರಿಗೆ ಭಿನ್ನವಾಗಿರುತ್ತವೆ.

ಭಾಷೆಯನ್ನು ಬಳಸುವ ರೀತಿಯೇ 'ಶೈಲಿ'. ಸಾಹಿತ್ಯ ಭಾಷೆಗೆ ಹೊದಿಸಿದ 'ಅಲಂಕಾರವೇ ಶೈಲಿ'. ಲೇಖಕನಲ್ಲಿ ಇರಬಹುದಾದ ಅಭಿವ್ಯಕ್ತಿಯ ಪ್ರತ್ಯೇಕತೆಯೇ 'ಶೈಲಿ'. ಅಭಿವ್ಯಕ್ತಿಗೆ ತೀಕ್ಷ್ಣತೆಯನ್ನು ಮುಟ್ಟಿಸುವ ವಸ್ತುವೇ 'ಶೈಲಿ'. ಈ ರೀತಿಯಾಗಿ ಶೈಲಿಗೆ ಬೇರೆ ಬೇರೆ ಅರ್ಥವನ್ನು ಕಲ್ಪಿಸಿದ್ದುಂಟು.

ಲೇಖಕರು ಪಾತ್ರ, ಸನ್ನಿವೇಶ, ಘಟನೆಗಳನ್ನು ಚಿತ್ರಿಸುವಾಗ ಅವರ ಶೈಲಿ ಅತ್ಯಂತ ಪರಿಣಾಮಕಾರಿಯಾಗಿ ಕಂಡುಬರುತ್ತದೆ. ಕಾದಂಬರಿಗಳಲ್ಲಿ ಸಂದರ್ಭಾನುಸಾರವಾಗಿ ಜನಪ್ರಿಯ ಗಾದೆ ಮಾತುಗಳು ಬಳಕೆಗೊಂಡಿವೆ. ಜನರಾಡಿ ಪಳಗಿಸಿದ ಮಾತು ಕಂಡುಬರುತ್ತವೆ. ಅಲ್ಲಲ್ಲಿ ಅರ್ಥಪೂರ್ಣ ಸೂಕ್ತಿಗಳು ಕಂಗೊಳಿಸುತ್ತವೆ. ಗಾದೆ ಮಾತುಗಳು, ಪಡೆನುಡಿಗಳು ಪಕ್ವವಾದ ಬದುಕಿನ ನುಡಿಗಟ್ಟಿನಂತಿದೆ. ನಿಸರ್ಗ ಚಿತ್ರಣ, ಸ್ತ್ರೀವರ್ಣನೆ ಯುದ್ಧ ಸನ್ನಿವೇಶಗಳಲ್ಲಾಗಲಿ, ಲೇಖಕರ ಶೈಲಿ ಎದ್ದು ಕಾಣುತ್ತದೆ.

ಭಾಷೆ ಪಾತ್ರನಿಷ್ಠವಾಗಿದೆ. ಇವರು ಬಳಸಿದ ಭಾಷೆಯಲ್ಲಿ ವೈವಿಧ್ಯತೆ ಕಂಡುಬರುತ್ತವೆ. ಅಲಂಕಾರ ಬದ್ಧವಾದ ಕಾವ್ಯಮಯವಾದ ಭಾಷೆಯಲ್ಲಿ ಉಪಮೆ ರೂಪಕಗಳು ಕಂಡು ಬರುತ್ತವೆ. ವ್ಯವಹಾರಿಕ ಭಾಷೆಯನ್ನು ಅಷ್ಟೇ ವಾಸ್ತವವಾಗಿ ಬಳಸಿಕೊಂಡಿದ್ದಾರೆ. ಹೀಗಾಗಿ ಭಾಷೆಯಿಂದ ಗದ್ಯಕ್ಕೊಂದು ಹೃದ್ಯತೆ ಪ್ರಾಪ್ತವಾಗಿದೆ. ಅವರು ಬಳಸಿದ ಭಾಷೆ ಪಾತ್ರ, ಸ್ವಭಾವಕ್ಕನುಗುಣವಾಗಿ, ವಿಷಯ ಸ್ಪಷ್ಟತೆಯನ್ನು ಸೂಚಿತಗೊಳಿಸುವಲ್ಲಿ ಸಾರ್ಥಕವಾಗಿವೆ.

ಕಾದಂಬರಿಕಾರರ ಭಾಷೆ ಪಾತ್ರ ನಿಷ್ಠವಾದಂತೆ ತಂತ್ರನಿಷ್ಠವೂ ಆಗಿದೆ. ಅದು ಅವರ ಶೈಲಿಯ ಒಂದು ಲಕ್ಷಣವೆಂದರೂ ಸರಿಯೆ. ಕಾದಂಬರಿಯ ವಿಷಯ ಅಥವಾ ವಸ್ತುವಿಗೆ ಅನುಗುಣವಾಗಿ ಭಾಷೆಯನ್ನು ಬಳಸುತ್ತಾರೆ. ಕಾದಂಬರಿಯ ಕಥಾವಸ್ತು ಗಂಭೀರವಾಗಿದ್ದರೆ ಉನ್ನತ ಮಟ್ಟದಲ್ಲಿ, ವೀರ ಪ್ರಧಾನವಾಗಿದ್ದರೆ ಗಂಡು ಭಾಷೆಯಾಗಿ, ಸಾಮಾನ್ಯ-ಸಾಧಾರಣವಿದ್ದರೆ ಭಾಷೆಯೂ ಲಲಿತ ಗಂಭೀರವಾಗಿರುತ್ತವೆ.

ಕಾದಂಬರಿ ಸಾಹಿತ್ಯ ಪ್ರಕಾರದಲ್ಲಿ ಸಂಭಾಷಣೆಗಳಿಗೆ ಒಂದು ವಿಶಿಷ್ಟ ರೀತಿಯ ಆಕರ್ಷಣೆ ಇರುತ್ತವೆ. ಕೆಲವು ಕಾದಂಬರಿಗಳಲ್ಲಿ ಸಂಭಾಷಣೆಗಳೇ ಇಲ್ಲದಿರಬಹುದು. ಲೇಖಕನೇ ನೇರವಾಗಿ

ಕಥೆಯನ್ನು ಸನ್ನಿವೇಶವನ್ನು ವಿವರಿಸುತ್ತಾ ಹೋಗಬಹುದು. ಸಂಭಾಷಣೆಯ ದೃಷ್ಟಿಯಿದ ಕಾದಂಬರಿಗಳನ್ನು ಗಮನಿಸಿದಾಗ ಹಲವು ಸಂಭಾಷಣೆಗಳು ಸ್ಮರಣಾರ್ಹವಾದವು.

ಈ ಹಿನ್ನೆಲೆಯಲ್ಲಿ ಕಾದಂಬರಿಕಾರರು ಅವರವರ ಕಾದಂಬರಿಗಳಲ್ಲಿ ಶೈಲಿಯನ್ನು ಹೇಗೆ ಗುರುತಿಸಿದ್ದಾರೆಂಬುದನ್ನು ಅವಲೋಕಿಸಬಹುದಾಗಿದೆ. ಕಾದಂಬರಿಗಳಲ್ಲಿ ಅವರು ಬಳಸಿದ ಭಾಷೆ, ಆಡುನುಡಿ, ಗಾದೆ ಮಾತು, ಸೂಕ್ತಿಗಳು, ನುಡಿಗಟ್ಟುಗಳು, ಶ್ಲೋಕಗಳು, ವರ್ಣನೆ, ಪ್ರತಿಮೆ-ಸಂಕೇತಗಳು, ಸಂಭಾಷಣೆಗಳು, ಪಾರಿಭಾಷಿಕ ಪದಗಳು ಇವುಗಳನ್ನು ಅಧ್ಯಯನ ಮಾಡುವುದರ ಮೂಲಕ ಅವರ ಶೈಲಿಯನ್ನು ಗುರುತಿಸಬಹುದಾಗಿದೆ.

ಗಿರಿಯ ನವಿಲು ಕಾದಂಬರಿ ಪುಟ್ಟ ಪುಟ್ಟ ಮಾತುಗಳಲ್ಲಿ ಮೂಡಿನಿಂತ ನಾಟಕೀಯ ಶೈಲಿಯೊಂದಿಗೆ ಜೀವಂತಿಕೆಯನ್ನು ಪಡೆಯುತ್ತದೆ. ತಿಪ್ಪೇರುದ್ರಸ್ವಾಮಿ ಅವರ ಶೈಲಿ ಅತ್ಯಂತ ಪರಿಣಾಮಕಾರಿಯೂ ಸರಳವಾಗಿಯೂ ಇದೆ. ಹಳ್ಳಿಗಳ ಪ್ರಾದೇಶಿಕ ಭಾಷೆಯೂ ಅಲ್ಲದೆ ಸರಳ ನುಡಿಯಲ್ಲಿಯೇ ತೀವ್ರತೆಯನ್ನು ಸಂಕ್ಷಿಪ್ತ ವಾಕ್ಯಗಳಲ್ಲಿ ಸಂಕೀರ್ಣತೆಯನ್ನು, ವಿವರಣೆಯ ರೀತಿಯಲ್ಲಿಯೇ ಅರ್ಥಪೂರ್ಣವಾದ ಧ್ವನಿಯನ್ನು ಇವರ ಗದ್ಯಶೈಲಿ ಒಳಗೊಂಡಿದೆ. ತರಂಗಿಣಿ ಕಾದಂಬರಿ ಕಾವ್ಯಮಯವಾದ ಒಟ್ಟು ಕೃತಿಯ ಗುಣಮಟ್ಟವನ್ನು ಹೆಚ್ಚಿಸಿದರೂ ಕೂಡ, ದೀರ್ಘವಾದ ಸಂಭಾಷಣೆಗಳಿಂದಾಗಿ ಭಾಷೆಯು ಅರ್ಥ ಕೆಟ್ಟು ಓದುಗರ ಮೇಲೆ ಪರಿಣಾಮವನ್ನುಂಟುಮಾಡುವುದಿಲ್ಲ. ಅನೇಕ ದೀರ್ಘವಾದ, ನೀರಸವಾದ ಸಂಭಾಷಣೆಗಳಿಂದಾಗಿ ವಾಚ್ಯವಾಗಿದೆ.

'ಗಿರಿಯ ನವಿಲು', 'ಕದಳಿಯ ಕರ್ಪೂರ', 'ತರಂಗಿಣಿ' ಕಾದಂಬರಿಯಲ್ಲಿನ ಸಂಭಾಷಣೆಗಳು ಅಲ್ಲಲ್ಲಿ ಯಥಾವತ್ತಾಗಿ ಪುನರುಕ್ತಿಗೊಂಡಿರುವುದನ್ನು ಕಾಣುತ್ತೇವೆ.

"ಅವನ ಕಣ್ಣಿನಿಂದ ಜಾರುತ್ತಿದ್ದ ಬಿಸಿ ಹನಿಗಳು ಮಹಾದೇವಿಯ ದಟ್ಟ ಕೂದಲ ಪದರನ್ನು ದಾಟಿ ಚರ್ಮವನ್ನು ಸ್ಪರ್ಶಿಸಿದಾಗ ಅವುಗಳಿಗೆ ಎಚ್ಚರವಾಯಿತು. ಅಪ್ಪಾ... ನೀನೂ ಅಳುತ್ತಿರುವೆಯಾ? ಮೆಲ್ಲನೆ ಅಂದಳು, ಅಹುದಮ್ಮಾ... ನಾನು ಮನುಷ್ಯನಲ್ಲವೇ? ನನಗೂ ಹೃದಯವಿಲ್ಲವೇ? (ಬಸವರಾಜ ಕಟ್ಟೀಮನಿ; ೧೯೫೬; ಪು. ೧೦೦).

"ಮಹಾದೇವಿಯ ತಲೆಯನ್ನು ತನ್ನೆದೆಗೆ ಅನಿಸಿಕೊಂಡು ಧಾರಾಕಾರವಾಗಿ ಕಣ್ಣೀರು ಹರಿಸಿದ, ಮಗಳ ನೆತ್ತಿಯನ್ನು ತಂದೆಯ ಕಣ್ಣೀರು ಸೋಂಕಿತು. 'ಅಪ್ಪಾ...ಗಂಡಸಾದ ನೀನು ಅಳುವುದೇ...?' ಎಂದು ಕೇಳಿದಳು".

"ಗಂಡಸಾಗಿ ಅಳುತ್ತಿಲ್ಲ ತಂದೆಯಾಗಿ ಅಳುತ್ತಿರುವೆ ಮಗಳೆ" (ತರಂಗಿಣಿ; ಪು. ೧೦೦)
"ನೀನು ಪಾದದಲ್ಲಿ ಮುಟ್ಟಿದುದನ್ನು ತಲೆಯ ಮೇಲೆ ಹೊರುವವಳು"
"ಕಾಲಿನಲ್ಲಿ ಮುಟ್ಟಿ ಮಾಡ ಹೇಳಿದುದನ್ನು ತಲೆಯಲ್ಲಿ ಹೊತ್ತು ಪೂರೈಸುವೆ"
(ಗಿರಿಯ ನವಿಲು; ೧೯೫೬; ಪು. ೫೨೦)

"ಮನಸ್ಸು ನೀರನ್ನು ಸ್ಪರ್ಶಿಸಿದ ಹೊಸ ಸುಣ್ಣದಂತೆ ಕೊತ ಕೊತ ಕುದಿಯುತ್ತಿತ್ತು".

"ಅಸಹನೆಯಿಂದ ನೀರಿಗೆ ಬಿದ್ದ ಹೊಸ ಸುಣ್ಣದಂತೆ ಕುದಿಯತೊಡಗಿದೆ".

"ಈಚಲ ಮರದ ಕೆಳಗೆ ಒಂದು ಹಾಲಿನ ಗಡಿಗೆ ಇದ್ದರೆ ಅದನ್ನು ಹಾಲು ಅನ್ನದೆ ಸುರೆಯೆಂದು ತಿಳಿಯುವರು".

"ಈಚಲ ಮರದ ಕೆಳಗೆ ಕುಳಿತು ಹಾಲನ್ನು ಕುಡಿದರೂ ಸಾಮಾನ್ಯರು ಹೆಂಡವೆಂದು ಊಹಿಸುವಂತೆ" (ತಿಪ್ಪೇರುದ್ರಸ್ವಾಮಿ; ೧೯೮೧; ಪು. ೩೩೪).

'ಶೂರ ರಾಣಿ ಕೆಳದಿಯ ಚೆನ್ನಮ್ಮಾಜಿ' ಮತ್ತು 'ಚೆನ್ನಿ ಚೆನ್ನಮ್ಮ ಚೆನ್ನಮ್ಮಾಜಿ' ಕಾದಂಬರಿಗಳಲ್ಲಿ ಚೆನ್ನಮ್ಮನ ಮದುವೆಯ ಸಂದರ್ಭದಲ್ಲಿ ಬರುವ ಮಾತುಗಳು ಹೆಚ್ಚು ಕಡಿಮೆ ಒಂದೇ ಬಗೆಯಾಗಿವೆ. ಉದಾಹರಣೆಯಾಗಿ ಈ ಕೆಲವೊಂದು ಮಾತುಗಳನ್ನು ನೋಡಬಹುದು.

'ಅವ್ವಾ ನಮ್ಮ ಮಹಾರಾಜ ಶಿವಪ್ಪ ನಾಯಕರು ಚೆನ್ನಮ್ಮನನ್ನು ಸೊಸೆಯನ್ನಾಗಿ ಸ್ವೀಕರಿಸುವರಂತೆ" (ಶೂರರಾಣಿ ಕೆಳದಿಯ ಚೆನ್ನಮ್ಮಾಜಿ; ಪು. ೧೪).

'ಚೆನ್ನಮ್ಮ ಕೆಳದಿ ರಾಣಿ ಆಗುತ್ತಾಳೆ' (ಚೆನ್ನಿ ಚೆನ್ನಮ್ಮ ಚೆನ್ನಮ್ಮಾಜಿ; ಪು. ೨೪).

'ಮಂತ್ರಿಗಳೇ ನಾವು. ಸಾಮಾನ್ಯ ಶೆಟ್ಟರು ನಂಬಲಿಕ್ಕೆ ಆಗ್ತಾ ಇಲ್ಲ' (ಶೂರರಾಣಿ ಕೆಳದಿಯ ಚೆನ್ನಮ್ಮ; ಪು. ೧೯).

"ತನಗೂ ದೊರೆಗೂ ಯಾವ ಸಂಬಂಧ, ನಾನು ಹೇಳಿ ಕೇಳಿ ವ್ಯಾಪಾರಿ ಈ ವಿಷಯ ನನಗೆ ಭ್ರಮೆ ಎಂಬ ಅನಿಸಿಕೆ" (ಚೆನ್ನಿ ಚೆನ್ನಮ್ಮ ಚೆನ್ನಮ್ಮಾಜಿ; ಪು. ೨೨).

'ವೀರರಾಣಿ ಕಿತ್ತೂರ ಚೆನ್ನಮ್ಮ' ಮತ್ತು 'ವೀರವನಿತೆ ಕಿತ್ತೂರ ಚೆನ್ನಮ್ಮ' ಕಾದಂಬರಿಗಳಲ್ಲಿ ಕಿತ್ತೂರ ಚೆನ್ನಮ್ಮಳು ದತ್ತುಪುತ್ರನನ್ನು ತೆಗೆದುಕೊಳ್ಳುವ ಸಂದರ್ಭದಲ್ಲಿ ಬರುವ ಮಾತುಗಳು ಒಂದೇ ಬಗೆಯಾಗಿವೆ.

"ದತ್ತು ತೆಗೆದುಕೊಳ್ಳಲು ಧಾರವಾಡದಲ್ಲಿರುವ ಕಂಪನಿ ಕಲೆಕ್ಟರ್ ಮಿಸ್ಟರ್ ಥ್ಯಾಕರೆಯ ಅನುಮತಿ ಪಡೆಯಬೇಕು' (ವೀರರಾಣಿ ಕಿತ್ತೂರು ಚೆನ್ನಮ್ಮ; ಪು. ೬೯).

"ನಮ್ಮ ರಾಜಮನೆತನದ ವಿಷಯ ಇದರಲ್ಲಿ ತಲೆ ಹಾಕುವ ಹಕ್ಕು ಇಂಗ್ಲೀಷಿನವರಿಗಿಲ್ಲ" (ವೀರವನಿತೆ ಕಿತ್ತೂರ ಚೆನ್ನಮ್ಮ; ; ಪು. ೬೧).

"ಪೇಶ್ವೆಯವರ ಬದಲಿಗೆ ಈಗ ಇಂಗ್ಲೀಷರೇ ನಮ್ಮ ಒಡೆಯರು ತಾನೇ" (ಅದೇ; ಪು. ೬೧).

ರಾಣಿಯು ಆಂಗ್ಲರ ವಿರುದ್ಧ ಸಮಸ್ತ ಕಿತ್ತೂರು ಪ್ರಜೆಗಳು ಯುದ್ಧ ಮಾಡಬೇಕೆಂದು ಡಂಗುರ ಸಾರಿಸುತ್ತಾಳೆ. ಇದನ್ನು ಕೇಳಿದ ಊರ ಹೊರಗಿದ್ದ ಚೆಲುವಾದಿ ಕೇರಿಯ ಹೆಣ್ಣುಮಕ್ಕಳಿಗೆ ಈ ವಿಷಯವನ್ನು ಗಂಗವ್ವ ತಿಳಿಸುತ್ತಾಳೆ. ಇಲ್ಲಿ ಸ್ತ್ರೀ ಪಾತ್ರಗಳ ಸಂಭಾಷಣೆ ಈ ರೀತಿಯಾಗಿದೆ.

"ನಾವು ಯುದ್ಧ ಮಾಡಬೇಕೇ ಗಂಗವ್ವ" ಎಂದು ಒಬ್ಬ ಚೆಲುವಾದಿ ಹೆಣ್ಣುಮಗಳು ಕೇಳಿದಳು.

"ರಾಣೀ ಸಾಹೇಬರು ಯುದ್ಧಕ್ಕೆ ಹೊರಟಿರುವಾಗ ನಾವು ಸುಮ್ಮನೆ ಕೂಡುವುದಕ್ಕಾಗುತ್ತದೆಯೇ?"

"ಯುದ್ಧ ಮಾಡಿ ನಮಗೆ ಅಭ್ಯಾಸವಿಲ್ಲವಲ್ಲ. ಗಂಗವ್ವ"

"ಕೆಂಪು ಮೂತಿ ಕಂಡ ಕೊಡಲೇ ಕೈಗೆ ಸಿಕ್ಕಿದ್ದು ತೆಗೆದುಕೊಂಡು ಹಾಕಿರವ್ವಾ. ಅದಕ್ಕೆ ಅಭ್ಯಾಸವೇಕೆ ಬೇಕು" ಎಂದಳು (ಕೃಷ್ಣರಾಯ ಅ.ನ.; ೧೯೭೧; ಪು. ೫೦). ಹೀಗೆ ಅವರಿಬ್ಬರ ನಡುವೆ ಸಂಭಾಷಣೆಯು ಮುಂದುವರೆಯುತ್ತದೆ.

ಬಸವರಾಜ ಕಟ್ಟೀಮನಿಯವರು ದಿನಬಳಕೆಯ ಮಾತಿನಂತೆಯೇ ಕಾದಂಬರಿಯಲ್ಲಿಯೂ ಭಾಷೆಯನ್ನು ದುಡಿಸಿಕೊಂಡಿದ್ದಾರೆ. ಇದಕ್ಕೆ ಉದಾಹರಣೆಯಾಗಿ ಅಕ್ಕ ತನ್ನ ಗೆಳತಿಗೆ ಚಂದ್ರಗುಪ್ತ ರಾಜನ ಕಥೆಯನ್ನು ಹೇಳಿದಾಗ ಆನಂತರದ ಸಂಭಾಷಣೆ ಈ ರೀತಿ ಇದೆ.

"ಇದೆಂಥಾ ಬಯಕೆಯೇ ಅವಳದು; ದೇವರನ್ನು ಯಾರಾದರೂ
ಮದುವೆಯಾಗುತ್ತಾರೆಯೇ?
ಯಾಕಾಗಬಾರದು?
ಪರ್ವತ ರಾಜನ ಮಗಳು ಪಾರ್ವತಿಯು ತಪಸ್ಸು ಮಾಡಿ,
ಶಿವನನ್ನು ಮದುವೆಯಾಗಲಿಲ್ಲವೇ?" (ಬಸವರಾಜ ಕಟ್ಟೀಮನಿ; ೧೯೫೬; ಪು. ೭೦).

ಹೀಗೆ ಮುಂದುವರೆಯುವ ಸಂಭಾಷಣೆ ಕಮಲಳ ಸಂಶಯ. ಆಕೆಯ ಸಂಶಯಕ್ಕೆ ತಕ್ಕ ಉತ್ತರ ಒಂದೊಡನೆಯೇ ಹೀಗಿದ್ದರೂ ಸರಿ ಎಂಬ ಒಪ್ಪಿಗೆಯ ಮಾತುಗಳು ದಿನನಿತ್ಯದ ಬಳಕೆಯ ಮಾತಿನ ದಾಟಿಯನ್ನು ಕಾಣಬಹುದು.

'ಶೂರ ರಾಣಿ ಕೆಳದಿಯ ಚೆನ್ನಮ್ಮಾ', 'ರಾಣಿ ಚೆನ್ನಮ್ಮ', 'ವೀರರಾಣಿ ಕೆಳದಿಯ ಚೆನ್ನಮ್ಮ', 'ಚೆನ್ನಿ ಚೆನ್ನಮ್ಮ ಚೆನ್ನಮ್ಮಾಜಿ', ಕಾದಂಬರಿಗಳಲ್ಲಿ ಇತಿಹಾಸ ಸಂದರ್ಭಕ್ಕೆ ಅನುಕೂಲವಾಗುವ ಗ್ರಾಂಥಿಕವಾದ ಪಾರಿಭಾಷಿಕವಾದ ಭಾಷೆಯನ್ನು ಬಳಸಿರುವುದು ಕಂಡು ಬರುತ್ತವೆ. ವ್ಯಾಕರಣಬದ್ಧವಾದ ರಚನೆಗಳಿಂದಾಗಿ ಪದಗಳ ಆಯ್ಕೆಯಿಂದಾಗಿ ಕಾದಂಬರಿಯ ಸಿದ್ಧ ಭಾಷಾರೂಪ ಸೃಷ್ಟಿಯಾದಂತಿದೆ. 'ಪ್ರಭು ನೀವು ನನ್ನನ್ನು ಉಪೇಕ್ಷೆ ಮಾಡಬಾರದು' ಎಂಬ ವಾಕ್ಯರಚನೆಯಾಗಲಿ, 'ಪ್ರಭು', 'ಸ್ವಾಮಿ', 'ಉಪೇಕ್ಷೆ' ಪದಗಳಾಗಲಿ ಸಾಮಾನ್ಯ ಭಾಷಾ ಬಳಕೆಯಲ್ಲಿ ಕಾಣಸಿಗದ ರೂಪುಗಳು, ಕಾದಂಬರಿಗಳ ಲೇಖಕರು ಭಾಷೆಯ ಮೇಲೆ ಅವರು ಸಾಧಿಸಿದ ಪ್ರಭುತ್ವದ ಸಾಕ್ಷಿಯಾಗಿ ಅವರ ಶೈಲಿ ನಿಲ್ಲುತ್ತದೆ. ಲೇಖಕರು ಬಳಸಿದ ಭಾಷೆ ಪಾತ್ರ ಸ್ವಭಾವಕ್ಕನುಗುಣವಾಗಿ, ವಿಷಯ ಸ್ಪಷ್ಟತೆಯನ್ನು ಸೂಚಿತಗೊಳಿಸುವಲ್ಲಿ ಸಾರ್ಥಕವಾಗಿದೆ. ಉದಾಹರಣೆಯಾಗಿ,

"ಪ್ರಭು.... ನೀವು ನನ್ನನ್ನು ಇಷ್ಟೊಂದು ಉಪೇಕ್ಷೆ ಮಾಡಬಾರದು"
'ಏನು ಹಾಗೆಂದರೆ?
'ನನ್ನನ್ನು ನೀವು ಹೊರಗೆ ಕರೆದೊಯ್ಯದೆ ಎಷ್ಟು ದಿನಗಳಾದವು ಗೊತ್ತೇ?'
'ರಾಜಕಾರಣ ಮಹಾರಾಣಿ... ಈಗ ಹೊರಹೋಗಬೇಕೇನು?'

(ಚೆನ್ನಿ ಚೆನ್ನಮ್ಮ ಚೆನ್ನಮ್ಮಾಜಿ; ಪು. ೩೨).

'ಚೆನ್ನಾ'

'ಓ ಸ್ವಾಮಿ'

'ನೀನು ಅದೇ ಚೆನ್ನಾ'

'ಹೌದು, ನೀವೂ ಅದೇ ನನ್ನ ದೇವರು'

'ಅಲ್ಲ ನಾನು ಬದಲಾಗಿದ್ದೇನೆ'

'ನನಗೇನು ಹಾಗೆ ಕಂಡಿಲ್ಲ ಸ್ವಾಮಿ'

(ವೀರರಾಣಿ ಕೆಳದಿಯ ಚೆನ್ನಮ್ಮಾ; ಪು. ೧೯).

"ನನ್ನದು ಸೌಂದರ್ಯವನ್ನು ಸವಿಯುವ ದೃಷ್ಟಿ.... ನಿಮ್ಮದು ಉತ್ಪಾದನೆಯನ್ನು ಹೆಚ್ಚಿಸುವ ದೃಷ್ಟಿ, ಜೀವನಕ್ಕೆ ಎರಡೂ ದೃಷ್ಟಿ ಅವಶ್ಯ".

"ಚೆನ್ನಾ ಕೆಳದಿಯ ರಾಜ್ಯದಲ್ಲಿ ಸಹ್ಯಾದ್ರಿಯ ಸೊಬಗೂ, ಶಿಲ್ಪಕಲೆಯ ಬೆಡಗು ನೋಡುವಂತಿದೆ. ಇನ್ನೂ ನೀವು ನೋಡಬೇಕಾದ ಅರಮನೆಗಳು, ನದಿ ಸರೋವರಗಳು ಸಾಕಷ್ಟಿವೆ" (ಶೂರರಾಣಿ ಕೆಳದಿಯ ಚೆನ್ನಮ್ಮಾಜಿ; ಪು. ೩೮). ಈ ರೀತಿ ಭಾಷೆಯಲ್ಲಿ ಭಾವಪುಷ್ಟಿ ಎದ್ದು ಕಾಣುತ್ತದೆ.

ಶಾಂತಲೆ, ಅಕ್ಕಮಹಾದೇವಿ ದಾನ ದಾಸೋಹಿ ದಾನಮ್ಮ, ಕೆಳದಿ ಚೆನ್ನಮ್ಮ, ಕಿತ್ತೂರ ಚೆನ್ನಮ್ಮ, ಅಬ್ಬಕ್ಕದೇವಿ ಪಾತ್ರಗಳಲ್ಲಿ ಕಂಡು ಬರುವ ಸಂಭಾಷಣೆಗಳು ಸುದೀರ್ಘವಾದ ಉಪನ್ಯಾಸಗಳಂತೆ ಕಂಡರೂ ಅವು ಅಂದಿನ ವೈಚಾರಿಕತೆಯನ್ನು ಪರಿಚಯ ಮಾಡಿಕೊಡುವ ಸಾಧನಗಳಾಗಿವೆ. ಧರ್ಮೋಪದೇಶ ಪರವಾದ ಮಾತುಗಳೂ ಅಷ್ಟೇ ಪರಿಣಾಮಕಾರಿ. ಜೀವನ ದರ್ಶನವೇ ಧರ್ಮದಲ್ಲಿ ಕಂಡಂತಾಗುತ್ತದೆ. ವಿದ್ಯಾಭ್ಯಾಸವನ್ನು ಕುರಿತು ಧರ್ಮಶ್ರದ್ಧೆಯನ್ನು ಕುರಿತು, ಧಾರ್ಮಿಕ ಸಹನೆಯನ್ನು ಕುರಿತು, ನಡೆಯುವ ಚರ್ಚೆಗಳು ಇಂದಿನ ಕಾಲಕ್ಕೂ ಪ್ರಸ್ತುತವಾಗುವಂಥವುಗಳಾಗಿವೆ. ಅಧಿಕಾರ ಮತ್ತು ಮಾನವೀಯತೆಯೇ ಅಂದಿನ ಆಶಯವಾಗಿತ್ತು. ಲೇಖಕರು ಈ ಕಾದಂಬರಿಗಳ ಕೇಂದ್ರ ಪಾತ್ರಗಳ ಮೂಲಕ ಪ್ರತಿಪಾದಿಸಿದ್ದಾರೆ. ಸಂದರ್ಭಾನುಸಾರವಾಗಿ ಜನಪ್ರಿಯ ಗಾದೆ ಮಾತುಗಳು ಕಾದಂಬರಿಗಳುದ್ದಕ್ಕೂ ಹಾಸುಹೊಕ್ಕಾಗಿ ಮೂಡಿಬಂದಿವೆ.

ಶಾಂತಲೆಯ ಶಸ್ತ್ರ ವಿದ್ಯೆ ನೈಪುಣ್ಯದ ಬಗ್ಗೆ ಬಿಟ್ಟಿದೇವ ಮೆಚ್ಚಿಕೊಂಡು ತನ್ನ ತಾಯಿ ಏಚಲಾದೇವಿ ಮತ್ತು ಶಾಂತಲೆಯೊಂದಿಗೆ ಹೇಳುವ ಸಂಭಾಷಣೆಯ ಪ್ರಸಂಗವನ್ನು ಗಮನಿಸಬಹುದು:

"ಸೋತೆನೆಂದು ನನಗೇನು ಬೇಸರವಿಲ್ಲ; ಆದರೆ ನನಗೆ ಏನು ಆಶ್ಚರ್ಯವೆಂದರೆ, ನನಗಿಂತ ಚಿಕ್ಕವಳು ನೀನು, ನಿನ್ನ ಕೋಮಲ ಕಾಲಿನಲ್ಲಿ ನನ್ನ ಯೋಧಕಾಲಿಗಿಂತ ದೃಢತೆ ಹೇಗೆ ಬಂತೆಂಬ ಆಶ್ಚರ್ಯ".

"ಇನ್ನು ಮುಂದೆ ನೀವಿಬ್ಬರೂ ಸ್ಪರ್ಧೆ ಮಾಡಬಾರದು. ಅವನು ಒರಟುತನ ಮಾಡಿ ಚಿತಾವಣೆ ಮಾಡಿದರೂ ನೀವು ಮಾತ್ರ ಎಂದೂ ಅವನೊಡನೆ ಸ್ಪರ್ಧೆ ಮಾಡುವುದಿಲ್ಲವೆಂದು ನನಗೆ ಮಾತು ಕೊಡು" (ನಾಗರಾಜ ಸಿ.ಕೆ.; ೧೯೬೭; ಪು. ೪೨೭). ಇಲ್ಲಿ ತಾಯಿ - ಮಗನ ಸಂಭಾಷಣೆ ಸುಂದರವಾಗಿದೆ.

ಬಿಟ್ಟಿದೇವನಲ್ಲಿ ಶಾಂತಲೆಗೆ ಎಷ್ಟೊಂದು ವಿಶ್ವಾಸ, ಪ್ರೀತಿ ಇತ್ತು ಎಂಬುದನ್ನು ಈ ಕೆಳಗಿನ ಸಂಭಾಷಣೆಯಲ್ಲಿ ನೋಡಬಹುದು.

"ಒಂದು ಸಮಯ ಸನ್ನಿಧಾನ ಬೇರೆ ಲಗ್ನವಾಗುವ ಸಂಭವ ಬಂದರೂ ನಾನು ವಿಚಲಿತಳಾಗುವುದಿಲ್ಲ. ಅವರ ಮೇಲಿರುವ ನನ್ನ ಪ್ರೇಮ ಎಳ್ಳಷ್ಟೂ ಕಡಿಮೆಯಾಗುವುದಿಲ್ಲ. ತಮ್ಮ ತಮ್ಮ ಸ್ವಾರ್ಥಕ್ಕೆ, ಕೊರಳಿಗೆ ಮಾಲೆ ಹಾಕಲು ಬಂದವರು ಕೆಲವೊಮ್ಮೆ ಹೊಣೆ ತಪ್ಪಿ ನಡೆಯುವ ಸಂಭವವುಂಟು. ಆದರೆ ನನ್ನಿಂದ ಮಾತ್ರ ಆ ಕೆಲಸ ಎಂದೂ ಆಗುವುದಿಲ್ಲ" (ಅದೇ; ಪು. ೫೬೬).

ಅಲ್ಲದೆ 'ಶಾಂತಲಾ' ಕಾದಂಬರಿಯಲ್ಲಿ ಬರುವ ಸಂಭಾಷಣೆಗಳನ್ನು ಸಂಕ್ಷಿಪ್ತದಲ್ಲಿ ನೋಡಬಹುದಾಗಿದೆ. 'ಅವ್ವೆ ಸಿಂಹಾಸನದ ಮೇಲೆ ಕುಳಿತವರ ತಲೆ ಯಾವ ಕ್ಷಣದಲ್ಲಿ ಮುಂಡದಿಂದ ಕಳಚಿ ಉರುಳುವುದೊ ಹೇಳಲಾಗುವುದೆ' (ಅಯ್ಯರ್ ಕೆ.ವಿ.; ೧೯೯೫; ಪು. ೫).

ಲಕ್ಷ್ಮಿ ಶಾಂತಲೆಗೆ ಬಿಟ್ಟಿದೇವನನ್ನು ಮದುವೆಯಾಗಲು ಒಪ್ಪಿಗೆ ಇದೆಯಾ ಎಂದು ಕೇಳುವ ಸಂದರ್ಭದಲ್ಲಿ 'ಅಕ್ಕ ನೀನು ರಾಜರನ್ನು ಮದುವೆಯಾಗುತ್ತಿಯೇ ಅರಮನೆಗೆ ಹೊರಟು ಹೋಗುತ್ತೀಯೆ? ಇನ್ನೂ ಅಕ್ಕನ ಸಂಗ ನನಗೆ ದೂರವಾಗುತ್ತದೆಯಲ್ಲವೇ! ಎಂದು ದುಃಖವಾಗುತ್ತದೆ'.

"ಅಯ್ಯೋ ಹುಚ್ಚಿ ನಿನಗೆ ಹೇಳಿದವರಾರೆ?
ಇಲ್ಲದುದನ್ನೆಲ್ಲ ಕಲ್ಪಿಸಿಕೊಂಡು ಬರಿ ದುಃಖ ಪಡುತ್ತಿರುವೆ'
'ನಿನ್ನ ಈ ಕಣ್ಣೀರು ಏಕೆ ಲಕ್ಷ್ಮಿ?'
"ಅಕ್ಕಾ, ಮಗಳನ್ನು ಧಾರೆಯೆರೆದು
ಕೊಟ್ಟ ಕೂಡಲೆ ತಾಯಿ ಹೃದಯ ಕಣ್ಣೀರು ಮಿಡಿಯುತ್ತಲ್ಲವೇ?
ಅಂತೆಯೇ ಈ ನನ್ನ ಕಣ್ಣೀರು"

(ಅದೇ; ಪು. ೬೧, ೬೨).

'ನಾಟ್ಯರಾಣಿ ಶಾಂತಲಾ' ಕಾದಂಬರಿಯಲ್ಲಿ ಬಪ್ಪರಸ ಹಾಗೂ ವಿಷ್ಣುವರ್ಧನರು ಅರಮನೆಯ ಕಾರ್ಯಕ್ರಮಕ್ಕೆ ಶಾಂತಲೆ ಬರುವಳು ಇಲ್ಲವೂ ಎಂದು ಇಬ್ಬರೂ ಹೀಗೆ ಸಂಭಾಷಣೆಗೆ ತೊಡಗುತ್ತಾರೆ.

ಯಾವ ಮನೋಗತ ನೆರವೇರಿಸಿದುದಕ್ಕಾಗಿ ನಿನಗೆ ಬಹುಮಾನಬೇಕು?'
'ಮೂರು ಹೊತ್ತು ಶಾಂತಲೆ, ಶಾಂತಲೆ, ಎಂದು ಜಪ ಮಾಡುತ್ತಿದ್ದಿರಿ".
'ಆಕೆ ಬರುವ ಹಾಗೆ ಮಾಡಿದ್ದೇನೆ. ಸಪ್ತಮಿಯ ಹೊತ್ತಿಗೆ ಬಂದು ಬಿಡುತ್ತಾಳೆ'.
'ರಾಜಮಾತೆಯೇ ಸ್ವತಃ ಆಹ್ವಾನ ಕಳಿಸಿದ್ದಾರಲ್ಲ.
ಅದಕ್ಕಿಂತ ಹೆಚ್ಚಿನ ಮರ್ಯಾದೆಯೇನು ಬೇಕು'.
'ಒಂದು ವೇಳೆ ಅವಳ ತಂದೆ ಮಾತ್ರ ಬಂದರೆ'
'ಎಲ್ಲರನ್ನು ಕರೆತರಬೇಕೆಂದು ಬರೆದಿದ್ದೇವಲ್ಲ'

'ಅವಳು ಬಹಳ ಸ್ವಾಭಿಮಾನಿ ಬಪ್ಪರಸ, ಬರಿಯ ಆಹ್ವಾನಕ್ಕೆ ಬರುವ ಹೆಣ್ಣಲ್ಲ. ಅವಳನ್ನು ಕರೆಸಬೇಕೆಂದು ರಾಜಮಾತೆಯವರು ಇಚ್ಛಿಸಿದ್ದ ಪಕ್ಷದಲ್ಲಿ ರಥಗಳನ್ನು ಅಂಗರಕ್ಷಕರನ್ನು ಕಳುಹಿಸಬೇಕು. ಇಲ್ಲವಾದರೆ ಅವಳು ಬರುವುದು ನನಗೆ ಅನುಮಾನ (ಅದೇ; ಪು. ೨೩೩, ೨೩೪).

ಹೀಗೆ ಗೆಳೆಯರಿಬ್ಬರ ಸಂಭಾಷಣೆ ಸುಂದರವಾಗಿ ಮೂಡಿಬಂದಿದೆ.

ಶಾಂತಲೆ ಮತ್ತು ಬಲ್ಲಾಳರ ನಡುವೆ ರಾಜಕೀಯಕ್ಕೆ ಸಂಬಂಧಿಸಿದಂತೆ ನಡೆಯುವ ಸಂಭಾಷಣೆಯು ದೀರ್ಘವಾಗಿದ್ದರೂ, ಲೇಖಕರ ಸಂಭಾಷಣಾ ಚಾತುರ್ಯಕ್ಕೆ, ವಿಚಾರ ಪ್ರತಿಪಾದನೆಗೆ ಹಾಗೂ ಅವರ ಗದ್ಯ ಶೈಲಿಗೆ ಉತ್ತಮ ನಿದರ್ಶನವಾಗಿದೆ.

"ನೀನು ಹಾಗೆ ರಾಜನಾಗಲೇಬೇಕಾದರೆ ಅದಕ್ಕೆ ತಕ್ಕ ಶಕ್ತಿಯನ್ನು ಸಂಪಾದಿಸಿಕೊಳ್ಳಬೇಕು ಕಂದ".

"ಏನು ಅದು? ಎಷ್ಟು ಅದು?"

"ಅದನ್ನು ಏನು ಎಂದು ಬೇಕಾದರೆ ಹೇಳಿಯೇವು. ಆದರೆ ಎಷ್ಟು ಎಂದು ಹೇಳಲಾಗಲ್ಲ ಮಗುವೆ. ಅದನ್ನು ಎಷ್ಟು ಕೂಡಿಸಿಕೊಂಡರೆ ಅಷ್ಟೂ ಬೇಕು".

"ಹುಂ. ಹೇಳಿಬಿಡಿರಿ ಕೇಳುತ್ತೇನೆ. ಏನು ಅದು?"

"ಅದು ಒಳ್ಳೆಯತನ ಕಂದ".

"ಹಾಗೆಂದರೆ?"

"ನಿನ್ನ ನಾಡಿನ ಜನಗಳಿಗೆ ನೋವು ಆಗದಂತೆ ನಡೆಯುವುದು".

"ನೀವು ಅಂದು ಹೇಳಿದ ಮೇಲೆ ನಾನು ಯಾರನ್ನೂ ಹೊಡೆಯುತ್ತಿಲ್ಲ ಅಮ್ಮಾಜಿ. ಆದರೆ ಈವೊತ್ತು-".

"ಹೊಡೆದರೆ ಮಾತ್ರ ನೋವು ಅಲ್ಲ. ಕೆಟ್ಟ ಮಾತನ್ನಾಡಿದರೆ ಹೊಡೆದುದಕ್ಕಿಂತ ಹೆಚ್ಚಿನ ನೋವು ಅಣ್ಣ. ಅಂತಹ ನೋವನ್ನಾದರೂ ನೀನು ಯಾರಿಗೂ ಕೊಡಬಾರದು".

"ಅಷ್ಟೇ ತಾನೆ?"

"ಅವು ಅಷ್ಟೇ ಅಲ್ಲ. ಮನಸ್ಸಿನಲ್ಲಿ ಕೆಟ್ಟತನವನ್ನು ತುಂಬಿಕೊಂಡು ನೀನು ಸುಮ್ಮನಿದ್ದರೂ ನಿನ್ನಿಂದ ಜನಕ್ಕೆ ನೂರು ತೊಂದರೆ ಆಗಬಹುದು. ರಾಜನಾಗಬೇಕಾದವನು ಎಲ್ಲರಿಗೂ ಒಳ್ಳೆಯದಾಗುವುದನ್ನೇ ಚಿಂತಿಸಬೇಕು".

"ನಾವು ಅವರಿಂದ ಕೆಲಸ ಮಾಡಿಸಬಾರದೇ ಹಾಗಾದರೆ? ಕೆಲಸಕ್ಕೆ ತಕ್ಕ ಜೀತವನ್ನು ಕೊಡುವೆವಲ್ಲ? ಅದು ಒಳ್ಳೆಯದಲ್ಲವೆ?"

"ಅವರ ಹೊಟ್ಟೆಯನ್ನು ನೋಡಿ ಸಾಕಷ್ಟನ್ನು ಕೊಡುವುದು ಒಳ್ಳೆಯದೇ. ಆದರೆ ಕೆಲಸವನ್ನು ಮಾಡಿಸುವವನು ನೀನು, ಅವರೆಲ್ಲ ನಿನ್ನ ಸೇವಕರು ಎಂದುಕೊಳ್ಳುವುದು ತಪ್ಪು. ಏಕೆ ಗೊತ್ತೆ?

ಅವರು ಹುಟ್ಟಿದ ಮೇಲೆ ಎಲ್ಲಿಯಾದರೂ ಕೆಲಸ ಮಾಡಬೇಕು. ಎಲ್ಲಿಯೋ ಮಾಡುವುದನ್ನು ಬಿಟ್ಟು ಇಲ್ಲಿ ಮಾಡುತ್ತಾರೆ. ನಿನಗಾಗಿ ಮಾತ್ರ ಅವರು ಮಾಡುವುದಿಲ್ಲ. ತಾವು ಬದುಕಬೇಕು ಎಂದು ಅವರು ದುಡಿಯುತ್ತಾರೆ".

"ಹಾಗಿದ್ದರೆ ನಮ್ಮ ಬೊಕ್ಕಸದಿಂದ ಕರಣಿಕರು ಅವರಿಗೆ ಹೊನ್ನನ್ನು ಎಣಿಸುವರಲ್ಲಾ?

"ಬೊಕ್ಕಸ ನಮ್ಮದಲ್ಲ. ಅವರದೇ".

"ಏನು ದೊಡ್ಡಮ್ಮಾಜಿ!"

ಹೌದು ಕಂದ ಅವರದೇ. ಹೊನ್ನು ಅಲ್ಲಿ ಕೊಡಬೇಕಾದರೆ ಅರಮನೆಯವರು ನಾವು ಮಣ್ಣನ್ನು ಅಗೆದೆವೆ? ಬೀಜವನ್ನು ಬಿತ್ತಿ ಕಾಳನ್ನು ಬೆಳೆದು ಉಗ್ರಾಣಗಳನ್ನು ತುಂಬಿದೆವೆ?"

"ಇಲ್ಲ".

"ಮತ್ತೆ ಹಾಗೆ ಮಾಡಿದವರು ಯಾರು?"

"ಅವರೇ ನಮ್ಮ ಪ್ರಜೆಗಳು".

"ಅವರು ಬೆಳೆದುದನ್ನು ಮಹಾರಾಜರು ಒಳ್ಳೆಯವರು ಎಂದು ಬೊಕ್ಕಸದಲ್ಲಿ ಇಟ್ಟಿದ್ದಾರೆ. ಕೊಡುವಾಗ ಯಾರಿಗೆ ಎಷ್ಟು ಕೊಡಬೇಕು ಎಂಬುದನ್ನು ನೋಡಿಕೊಳ್ಳುವುದಕ್ಕೆ ಮಾತ್ರ ನಾವು".

"ಹಾಗಿದ್ದರೆ ನಾವು ಉಣ್ಣುವುದು ಏನನ್ನು?"

"ನಿನ್ನ ರಾಜ್ಯದಲ್ಲಿ ಇರುವ ಪ್ರಜೆಗಳು ತಮ್ಮ ಮೇಲೆ ಇತರರು ನುಗ್ಗಿ ಅವರ ಒಡವೆಯನ್ನು ದೋಚಿಕೊಳ್ಳದಂತೆ ನೋಡಿಕೊಳ್ಳಬೇಕು ಎಂದು ನಮ್ಮನ್ನು ಇರಿಸಿದ್ದಾರೆ. ರಾಜರು ನಾವು ಕತ್ತಿಯನ್ನು ಹಿಡಿದು ನಿಂತು ಅವರಿಗೆ ಬರುವ ಕಷ್ಟಗಳನ್ನು ತಡೆಗಟ್ಟಬೇಕು. ಆಗ ಅವರು ಬೆಳೆದ ಬೆಳೆಯಲ್ಲಿ ಇಂತಿಷ್ಟು ಎಂದು ನಮಗೆ ಕೊಡುತ್ತಾರೆ".

"ಓ, ಹಾಗೇನು?"

"ನೀನು ಸೋಮಾರಿಯಾಗಿಯೇ ಅಥವಾ ಇನ್ನೇನಾದರೂ ಆಗಿಯೋ ಅವರು ನಿನಗೆ ವಹಿಸಿರುವ ಕೆಲಸವನ್ನು ಮಾಡಲಿಲ್ಲ ಎನ್ನು-"

"ಏನಾಗುತ್ತದೆ ಆಗ?"

ತಮ್ಮಂತೆ ಸರಿಯಾಗಿ ಕೆಲಸ ಮಾಡುವವನನ್ನು ತಂದುಕೊಳ್ಳುತ್ತಾರೆ".

"ಹಾಗಿದ್ದರೆ ಈ ರತ್ನ ಸಿಂಹಾಸನ, ಹೊಂದಡವುಗಳು, ಈ ಅರಮನೆ, ಇವೆಲ್ಲ?

"ಇವೆಲ್ಲ ಜನಗಳದೇ. ನಾವು ಒಳ್ಳೆಯವರಾದಷ್ಟೂ ಅವರೂ ಒಳ್ಳೆಯವರಾಗುತ್ತಾರೆ. ಇವನ್ನು ಇನ್ನೂ ಹೆಚ್ಚಾಗಿ ಕೊಡುತ್ತಾರೆ. ಅವರದು ಎಂದು ನೀನು ಅನುಭವಿಸಬೇಕು?.

"ಹಾಗಿದ್ದರೆ ಈ ಇಷ್ಟೊಂದನ್ನು ಅವರು ನಮಗೆ ಕೊಟ್ಟಿರಬೇಕಾದರೆ ನನ್ನ ಅಪ್ಪಾಜಿಯವರು ತುಂಬ ಒಳ್ಳೆಯವರಾಗಿರಬೇಕಲ್ಲ?"

"ಅಹುದು. ನಿಮ್ಮ ತಾತಂದಿರು, ಅವರ ತಾತಂದಿರು ಈ ಮನೆತನದಲ್ಲಿ ಬಾಳಿದವರೆಲ್ಲ ಹಾಗೆ ಬದುಕಿದರು. ರಾಜನಾಗಬೇಕು ಎಂದು ಹೇಳುತ್ತಿರುವ ನೀನೂ ಅವರಂತೆ ಆದರೆ ಮಾತ್ರ ಇದನ್ನೆಲ್ಲ ನೀನು ಉಳಿಸಿಕೊಳ್ಳಬಲ್ಲೆ".

"ಹಾಗಿದ್ದರೆ ಚಿಕ್ಕ ಅಮ್ಮಾಜಿಯವರು 'ರಾಜ್ಯ ನಮ್ಮದು, ಎಲ್ಲವನ್ನು ಕೊಡುವರು ನಾವು' ಎಂದು ಏನೇನೋ ಹೇಳಿದರಲ್ಲ".

ಶಾಂತಲಾದೇವಿ ಕ್ಷಣಕಾಲ ಮಾತನಾಡಲಿಲ್ಲ. ಮಗುವಿನ ಮುಖವನ್ನೇ ದಿಟ್ಟಿಸುತ್ತ ಕುಳಿತಳು. ಆಮೇಲೆ ಬಲ್ಲಾಳನೇ ಮತ್ತೆ ಕೇಳಿದನು:

"ಹೇಳಿ ಅಮ್ಮಾಜಿ. ಹಾಗಿದ್ದರೆ ಅದೆಲ್ಲ ಸುಳ್ಳೇನು?"

"ನಮ್ಮ ದುಡಿತಕ್ಕಾಗಿ ಬೆಳೆಯನ್ನು, ಹೊನ್ನನ್ನು, ಕೊಡುವ ಜನ ನಮ್ಮನ್ನು ದೊಡ್ಡವರು ಎಂದು ಕರೆಯುತ್ತಾರೆ. ಆದ್ದರಿಂದ ನಾವು ದೊಡ್ಡವರಾಗಿ ಕಾಣುತ್ತಿದ್ದೇವೆ. ನಿನಗೆ ತಿಳಿಯುವುದಿಲ್ಲ ಎಂದು ಅವರು ಹಾಗೆ ಹೇಳಿರಬೇಕು. ದೇಶದ ಏಳಿಗೆಗಾಗಿ ಎಲ್ಲರೂ ದುಡಿಯಬೇಕು. ಕೆಲಸ ಮಾಡುವಾಗ ನಾವೆಲ್ಲ ಒಂದೇ. ನಾವು ಹೆಚ್ಚಲ್ಲ, ಅವರು ಕಡಿಮೆಯಲ್ಲ".

"ಹಾಗಿದ್ದರೆ ಅಮ್ಮಾಜಿ, ನಾನು ನಾಳೆಯಿಂದ ಯಾವಾಗಲೂ ಅಪ್ಪಾಜಿಯವರ ಪಕ್ಕದಲ್ಲಿಯೇ ಇರುತ್ತೇನೆ. ಅವರು ಏನೇನು ಮಾಡುತ್ತಾರೆ ಎಂಬುದನ್ನು ನೋಡಿಕೊಳ್ಳುತ್ತೇನೆ. ನೀವು ಅಪ್ಪಾಜಿಯವರಿಗೆ ಹೇಳಿ ಅಮ್ಮಾಜಿ".

ಬಲ್ಲಾಳನ ಮುದ್ದು ಮುಖದ ಮೇಲೆ ಮೂಡಿದ ಗೆಲುವು ಶಾಂತಲಾದೇವಿಯ ಮನಸ್ಸಿನ ಕತ್ತಲನ್ನು ಹರಿಸಿತು. ದೇವರು ಮಗುವನ್ನು ಹಾಗೆ ಬೆಳೆಸಿಕೊಡಲಿ ಎಂದು ಪ್ರಾರ್ಥಿಸಿದಳು. ಮಗುವಿನ ತುಂಬುಗೆನ್ನೆಯನ್ನು ತನ್ನ ಕದಪಿನಿಂದ ಮೆಲ್ಲನೊತ್ತಿ "ಆಗಲಿ ಕಂದ, ಹೇಳುತ್ತೇನೆ" ಎಂದಳು(ಸಮೇತನಹಳ್ಳಿ ರಾಮರಾಯ; ೧೯೬೮; ಪು. ೨೦೮-೨೧೧). "ಮನೆಯೇ ಮೊದಲ ಪಾಠ ಶಾಲೆ, ತಾಯಿಯೇ ಮೊದಲ ಗುರು" ಎನ್ನುವಂತೆ ಶಾಂತಲೆಯು ಬಲ್ಲಾಳನಿಗೆ ರಾಜ್ಯನಾದ ಮೇಲೆ ಪ್ರಜೆಗಳೊಂದಿಗೆ ಹೇಗೆ ನಡೆದುಕೊಳ್ಳಬೇಕೆಂಬುದನ್ನು ತಿಳಿಸಿಕೊಡುತ್ತಾಳೆ.

ಸರಳಭಾಷೆಯಲ್ಲಿ ಮೂಡಿಬಂದ 'ಪಟ್ಟಮಹಾದೇವಿ ಶಾನ್ತಲಾದೇವಿ' ಕಾದಂಬರಿಯಲ್ಲಿ ಶಾಂತಲೆಯ ಪಾತ್ರ ಚಿರಸ್ಮರಣೆಯವಾದದ್ದು. ಶಾಸನಗಳಲ್ಲಿ ಬಳಕೆಯಾಗುವ ಪದಗಳ ಜೊತೆಗೆ ಕೆಲವು ಕಡೆ ಹೊಸ ಪದಗಳನ್ನು ಲೇಖಕರು ಬಳಸಿಕೊಂಡಿದ್ದಾರೆ. ಇವರ ಶೈಲಿಗೆ ಸಂಬಂಧಿಸಿದಂತೆ ಈ ದೀರ್ಘವಾದ ಉದಾಹರಣೆಯನ್ನು ನೋಡಬಹುದು.

'ಮಗನ ಹಾಗೆ ನೋಡಿಕೊಳ್ಳಲು ನೀವಿರುವಾಗ ಅವನಿಗೇನು ಕಡಿಮೆ? ಎಂದ ವಿನಯಾದಿತ್ಯ.

'ನಾನಿರುವವರೆಗೆ ಆಮೇಲೆ?'
ಆಮೇಲಿನ ಮಾತು ಈಗೇಕೆ ಅವ್ವ ಎಂದ ವಿನಯಾದಿತ್ಯ
ಅವನ ಕೊರಳ ಶೆರೆ ಏಕೋ ಉಬ್ಬಿಬಂತು

‘ಹಾಗೆಯೇ ಆಗಲಿ ಈಗಿನ್ನು ಮತ್ತೆ ಆ ಮಾತು ಬೇಡ. ಶಿವರಾತ್ರಿ ಕಳೆದ ಸಮಯದಲ್ಲಿ ನಾನು ಉದಯರಾಗ ಹಾಡಿದೆನಲ್ಲವೇ? ಈಗ ಈ ಶಾರದೆಯ ಸನ್ನಿಧಿಯಲ್ಲಿ ಸಂಧ್ಯಾರಾಗ ಹಾಡಬೇಕೆಂದು ಮನಸ್ಸು ಹಾತೊರೆಯುತ್ತಿದೆ, ಹಾಡಲೆ? ಶಿವಕ್ಷೇತ್ರಕ್ಕೆ ಬಂದು ನಿಮಗೆಲ್ಲ ಕತ್ತಲಾದ ಮೇಲೆಯೇ ಸಂಜೆಯ ಆರೋಗಣೆಯಾಗುತ್ತದೆ. ಅದಕ್ಕೆ ತಡವಾಗುತ್ತದೆಯೆಂದರೆ ನಾನು ಹಾಡುವುದಿಲ್ಲ’.

“ನಮಗೆ ತಡವಾಗುವುದು ಹಾಗಿರಲಿ. ನೀವೇ ಈಗ ಐದು ದಿವಸದಿಂದ ಉಪವಾಸ, ಆ ಉಪವಾಸದಲ್ಲಿ ಹಾಡುವುದಾಗಿ ಹೇಳುವಾಗ’ ಎಂದು ಚಟ್ಟಲದೇವಿ ತನ್ನೊಳಗೆ ಅದುಮಿಕೊಂಡಿದ್ದ ವಿಷಯವನ್ನು ಹೊರಗೆಡಹಿದಳು’.

ಏನು ಅಮ್ಮಾಜಿ, ಐದು ದಿನದಿಂದ ನೀನು ಉಪವಾಸವೆ? ಎಂದಾಗ ಆಶ್ಚರ್ಯವಾಗಿ ಮಾಚಿಕಬ್ಬೆ ಕೇಳಿದಳು.

“ಇದೊಂದು ದಿವಸ ಅವ್ವ, ಇಂದು ಶಾರದೆಯ ಧ್ಯಾನ ಮಾಡಿದರೆ ಮುಗಿಯಿತು. ಆ ಮೇಲೆ ನಾನು ಯಾವ ನೇಮಕ್ಕೆ ಅಂಟಿಕೊಂಡಿರುವುದಿಲ್ಲ” ಎಂದಳು ಶಾಂತಲಾದೇವಿ. ‘ಸರಿ ಹಾಗಾದರೆ ಹಾಡಿ ಮುಗಿಸು’ ಆಯಾಸ ಮಾಡಿಕೊಳ್ಳಬೇಡ ಎಂದಳು ಮಾಚಿಕಬ್ಬೆ.

ಶಾನ್ತಲದೇವಿ ಪದ್ಮಾಸನ ಹಾಕಿ ದಕ್ಷಿಣಕ್ಕೆ ಮುಖಮಾಡಿ ಕುಳಿತು ಶಾರದಾ ಸ್ತುತಿಯನ್ನು ಹಾಡತೊಡಗಿದಳು. ನಿರರ್ಗಳವಾಗಿ ಅವಳ ಶಾರೀರದಿಂದ ಹೊಮ್ಮಿ ಬರುತ್ತಿದ್ದ ನಾದ ಅಲ್ಲೆಲ್ಲ ಪಸರಿಸಿತು. ಸನಿಹದಲ್ಲೇ ಇದ್ದ ಬೆಟ್ಟಕ್ಕೆ ಬಡಿದು ಪ್ರತಿಧ್ವನಿತವಾಗುತ್ತಾ ಬಂದಿತು. ಆ ಆನಂದದಲ್ಲಿ ಎಲ್ಲರೂ ಮೈಮರೆತರು, ಹಾಡುತ್ತ ಹಾಡುತ್ತ ಅವಳ ಧ್ವನಿ ಅತಿತಾರಕಕ್ಕೆ ಹೋದಾಗ ನಿಂತುಬಿಟ್ಟರು. ಬಡಿದೆಬ್ಬಿಸಿದವರಂತೆ ಎಲ್ಲರೂ ಕಣ್ಣುಬಿಟ್ಟರು. ಶಾನ್ತಲದೇವಿ ಕಣ್ಮುಚ್ಚಿ ಕಂಬಕ್ಕೆ ಬೆನ್ನೊರಗಿಸಿ ಕುಳಿತಿದ್ದಳು, ಅವಳ ಮುಖದ ಮೇಲೆ ಒಂದು ಬಗೆಯ ಶಾಂತಿಯಿಂದ ಕೂಡಿದ ಕಳೆ ಬೆಳಗುತ್ತಿತ್ತು.

‘ಮಗು ಶಾನ್ತಲೆ’ ಎಂದು ಮಾರಸಿಂಹಯ್ಯ ಕೂಗಿ ಕುಳಿತಲ್ಲಿಂದ ಎದ್ದ, ಎರಡೂ ಹೆಜ್ಜೆ ಇಡುವಷ್ಟರಲ್ಲಿ ತತ್ತರಿಸಿದ. ಹತ್ತಿರದಲ್ಲಿ ಇದ್ದವರು ಹಿಡಿದುಕೊಂಡರು. ಅವನು ಅವರ ಮೇಲೆ ಕುಸಿದು, ‘ಅಯ್ಯೋ! ಏನಾಯಿತಪ್ಪ’ ಎಂದು ಮಾಚಿಕಬ್ಬೆ ಮಗಳ ಬಳಿ ಬಂದು ಹಣೆ ಮುಟ್ಟಿದಳು. ಶಾಂತಲದೇವಿಯ ಕತ್ತುವಾಲಿತು, ಮಾಚಿಕಬ್ಬೆ ಪಾದ ಮುಟ್ಟಿದಳು. ತಣುವುಗೊಡ ತೊಡಗಿತ್ತು. ಇದಕ್ಕೇ ಧ್ಯಾನ ಮಾಡಿದರೆ ಮುಗಿಯಿತು ಎಂದೆಯಾ! ಇದನ್ನು ನೋಡಲು ನಾನು ಬದುಕಿರಬೇಕಾಗಿತ್ತೆ? ನನ್ನನ್ನು ಬೆಳುಗೊಳಕ್ಕೆ ಕರೆದೊಯ್ಯಿರಿ, ಅಲ್ಲಿ ಸಲ್ಲೇಖನ ಮಾಡಿ ನಾನು ಬಿಡುಗಡೆ ಹೊಂದುತ್ತೇನೆ, ಯಾರಿಗೂ ಹೇಳದೆ ಅವಳು ಸಲ್ಲೇಖನ ಮಾಡಿ ಐದು ದಿನದಲ್ಲಿ ಮುಕ್ತಿ ಪಡೆದಳು ಎಂದು ರೋಧಿಸತೊಡಗಿದಳು. ಅವಳ ಉಸಿರು ತಗ್ಗಿತು, ರುದ್ರ ಮೌನ ಅಲ್ಲಿ ಆವರಿಸಿತು.

ದೂರದಿಂದ ಅಶ್ವಗಳ ಖುರಪುಟಧ್ವನಿ ಕೇಳಿಸತೊಡಗಿತು. ಜನರ ಕಿವಿ ಅತ್ತ ಮುರಿದವು, ಎಲ್ಲರ ಕಣ್ಣಲ್ಲೂ ನೀರು ಧಾರಾಕಾರವಾಗಿ ಹರಿಯುತ್ತಿತ್ತು.

ನಾಲ್ಕೆಂಟು ಅಶ್ವಗಳು, ಎರಡು ರಥಗಳು ಬಂದವು. ಮಹಾರಾಜ ಬಿಟ್ಟಿದೇವ ಅಶ್ವದಿಂದ ಇಳಿದ. ಅಲ್ಲಿದ್ದ ಜನಸಮೂಹ ನೋಡಿದ. 'ಪಟ್ಟಮಹಾದೇವಿ ಎಲ್ಲಿ?' ಎಂದು ಕೇಳಿದ, ಯಾರು ಉತ್ತರಿಸಲಿಲ್ಲ, ಅಷ್ಟರಲ್ಲಿ ರಥಗಳಿಂದ ರಾಣಿ ಬಮ್ಮಲದೇವಿ, ರಾಣಿ ರಾಜಲದೇವಿಯರು ಇಳಿದರು. ರೇವಿಮಯ್ಯ ಕಣ್ಣೀರು ಸುರಿಸುತ್ತಾ ಮುಂದೆ ಬಂದು ನಿಂತ 'ಏನಾದೀತು ರೇವಿಮಯ್ಯಾ?'.

ಅಮ್ಮಾಜಿ ಬಿಡುಗಡೆ ಹೊಂದಿದರು. ಹೆಗ್ಗಡೆಗಳು ಮಗಳನ್ನು ಹಿಂಬಾಲಿಸಿದರು. ಸನ್ನಿಧಾನ ಸ್ವಲ್ಪ ಮುಂಚೆ ಬಂದಿದ್ದರೆ? ಅಮ್ಮಾಜಿ ಈಗ ಮೂರು ದಿನದಿಂದ ಸನ್ನಿಧಾನಕ್ಕೆ ಬರಲಿಲ್ಲ ಎಂದು ಬಹಳವಾಗಿ ತಪ್ಪಿಸಿದರು ಎಂದು, ಗಂಟು ಬಿಗಿಯಿತು, 'ಈಗ ದೇವಿ ಎಲ್ಲಿ?' ರೇವಿಮಯ್ಯ ಮಾತನಾಡದೆ ಮುಂದಡಿ ಇಟ್ಟ, ಮಹಾರಾಜ ಬಿಟ್ಟಿದೇವ ರಾಣಿಯರು ಬಮ್ಮಲದೇವಿ, ರಾಜಲಾದೇವಿಯವರು ರೇವಿಮಯ್ಯನನ್ನು ಹಿಂಬಾಲಿಸಿ ಪಟ್ಟಮಹಾದೇವಿಯ ಬಳಿ ಕುಸಿದರು, ಅಲ್ಲಿದ್ದವರೆಲ್ಲರ ದುಃಖವನ್ನು ಅಳೆಯಲು ಸೃಷ್ಟಿಕರ್ತನಿಗೂ ಸಾಧ್ಯವಾಗಿರಲಾರದು, ತಂದೆ ಮತ್ತು ಮಗಳ ಪೂರ್ಣ ಸಂಸ್ಕಾರ ವಿಧಿಗಳು ಶಿವಗಂಗೆಯಲ್ಲಿ ನಡೆದವು, ದಾಳಿಯಲ್ಲಿ ಗೆದ್ದು ಲೊಕ್ಕಿಗುಂಡಿಯಲ್ಲಿ ಶಾರ್ದೂಲ ಪತಾಕೆ ಹಾರಿಸಿ ಬಂದಿ ಬಿಟ್ಟಿದೇವನ ಸಮ್ಮುಖದಲ್ಲಿ ನಂತರ ಮಾಚಿಕಬ್ಬೆ ಬೆಳಗೊಳದಲ್ಲಿ ಸಲ್ಲೇಖನ ವ್ರತ ಮಾಡಿ ಪತಿಯನ್ನು ಮಗಳನ್ನೂ ಸೇರಿಕೊಂಡಳು. ಅಲ್ಲಿಗೂ ಮಹಾರಾಜ ರಾಣಿಯರು ಬಮ್ಮಲಾದೇವಿ ರಾಜಲಾದೇವಿಯವರೊಂದಿಗೆ ಬಂದು ತನ್ನ ಅಶ್ರು ಅರ್ಪಿಸಿದ. ತನ್ನ ಶಿಷ್ಯ ಅಂತ್ಯವನ್ನು ತಾನು ನೋಡುವಂತಾಯಿತಲ್ಲ ಎಂದು ಕೊರಗಿದ ಲೋಕಿಮಯ್ಯ ಅವಳ ಹಾಗೂ ಅವಳ ಮಾತಾಪಿತೃಗಳ ಮರಣವಾರ್ತೆಯನ್ನು ತನಗೆ ತೋರಿದಂತೆ ಬರೆದು ತಂದು ಮಹಾರಾಜನಿಗರ್ಪಿಸಿದ. ಮಹಾರಾಜನು ಅವನ್ನು ನಿಧಾನವಾಗಿ ಓದತೊಡಗಿದ. ಶ್ರೀಮತ್ ಪರಮ ಗಂಭೀರ ಸ್ಯಾದ್ವಾದಾಮೋಘ ಲಾಂಛನಂ ಜೀಯಾತ್ರೈ ಲೋಕನಾಥಸ್ಯಶಾಸನಂ ಜಿನಶಾಸಂ||... ಓದಿದ ನಂತರ ಬಿಟ್ಟಿದೇವನ ಕಣ್ಣಲ್ಲಿ ನೀರು ಹನಿಗೂಡಿದ್ದುದು ಅವನು ಬರಹವನ್ನು ತೊಡೆಯ ಮೇಲಿಟ್ಟುಕೊಂಡಾಗ ಗೋಚರವಾಯಿತು. ಹೀಗೆ ಸಾಗುತ್ತದೆ ಕಾದಂಬರಿಕಾರರ ಶೈಲಿ (ಅಬ್ದುಲ್‌ಬಷೀರ್; ೨೦೧೧; ಪು. ೮೬-೮೭).

ತರಂಗಿಣಿ ಕಾದಂಬರಿಯಲ್ಲಿ ದೀರ್ಘವಾದ ಸಂಭಾಷಣೆಗಳು ಬರುತ್ತವೆ. ಒಮ್ಮೊಮ್ಮೆ ಉಪನ್ಯಾಸದ ಮಾಲಿಕೆಗಳಿಗೆ ಸೇರುವ ಪ್ರವಚನದಂತೆ ಕಂಡುಬರುತ್ತವೆ. ಮತ್ತೊಮ್ಮೆ ಆ ಪಾತ್ರಗಳ ಮುಖಾಂತರ ಮಾತೆ ಮಹಾದೇವಿಯವರೇ ತಮ್ಮ ಸಮಕಾಲೀನ ಜನತೆಗೆ ಧರ್ಮೋಪದೇಶವನ್ನು ಮಾಡುತ್ತಿದ್ದಾರೇನೋ ಎನಿಸುತ್ತದೆ. ಉದಾಹರಣೆಗೆ 'ಈ ಜಗತ್ತು ಬದುಕನ್ನೆಳೆಯುವ ದೇವಸಾಕ್ಷಿಯ ಬದುಕು' (ತರಂಗಿಣಿ; ಪು. ೫೨೫). "ನಿಮ್ಮ ಮಾತು ಬಲು ನಿಜ ದೊಡ್ಡಯ್ಯಾ" ಎನ್ನುವ ಸಂಭಾಷಣೆಗಳು ಒಂದೊಂದು ಪ್ಯಾರಾದಂತೆ ಕಂಡುಬರುತ್ತವೆ. ಕಾದಂಬರಿಕಾರರು ಖಚಿತತೆಯನ್ನು ತರಲು ಉದಾಹರಣೆಗಳೊಂದಿಗೆ ಸಂಭಾಷಣೆಯನ್ನು ಹಿಂಜಿ ಹಿಂಜಿ ಬೆಳೆಸುತ್ತಾರೆ. ಒಂದೊಂದು ಕಡೆ ವಾಕ್ಯಗಳು ಪುನರುಕ್ತವಾಗಿವೆ.

"ಗಿರಿಯ ನವಿಲು" ಕಾದಂಬರಿಯ ಸಂಭಾಷಣೆಗಳಲ್ಲಿ ನಾಟಕೀಯತೆ ಕಂಡು ಬರುತ್ತದೆ. ತಂದೆಯೊಡನೆ ಪ್ರಥಮ ಬಾರಿ ಮಹಾದೇವಿ ಚೆನ್ನಮಲ್ಲಿಕಾರ್ಜುನನ ಗುಡಿಗೆ ಹೋದಾಗ ಆ

ದೇವರಿಗೆ ಮಲ್ಲಿಕಾರ್ಜುನ ಎಂದು ಹೆಸರು ಬರಲು ಕಾರಣವೇನೆಂದು ತಿಳಿದುಕೊಳ್ಳುವ ಪುಟ್ಟಬಾಲಿಕೆಯ ಉತ್ಸುಕತೆ, ಆತುರ, ತಾಯಿ-ಮಗಳ ನಡುವಿನ ವ್ಯವಹಾರ ಸಂಭಾಷಣೆಯ ರೂಪದಲ್ಲಿದೆ.

"ಅಪ್ಪಾಜಿಗೆ ಗೊತ್ತಿದ್ದಷ್ಟು ನನಗೆ ಹೇಗೆ ಗೊತ್ತಾಗಬೇಕು. ಅವರ ಹಾಗೆ ನಾನೇನು ಓದಿದ್ದೇನೆಯೇ"

"ಯಾಕವ್ವಾ ಓದಲಿಲ್ಲ"?

'ನಮಗಾರವ್ವಾ ಕಲಿಸುವರು'?

'ಅಪ್ಪಾಜಿಗೆ ಯಾರು ಕಲಿಸಿದರು'?

'ಗುರುಗಳು'?

'ಅವರು ನಿನಗೂ ಕಲಿಸಲಿಲ್ಲವೇಕೆ'?

(ಬಸವರಾಜ ಕಟ್ಟೀಮನಿ; ೧೯೫೬; ಪು. ೩೭)

ಈ ರೀತಿ ತಾಯಿ-ಮಗಳ ನಡುವೆ ನಡೆಯುವ ಮಾತುಕತೆಯಲ್ಲಿ ಅಕ್ಕಮಹಾದೇವಿ ಚಿಕ್ಕವಯಸ್ಸಿನಲ್ಲಿಯೇ ದಿಟ್ಟತನದಿಂದ ಪ್ರಶ್ನಿಸುವುದನ್ನು ಕಾಣಬಹುದು.

'ವೀರರಾಣಿ ಕಿತ್ತೂರ ಚೆನ್ನಮ್ಮ' ಕಾದಂಬರಿಯಲ್ಲಿ ಬರುವ 'ಚೆನ್ನಮ್ಮ' ಪ್ರಧಾನಿ ಗುರುಪಾದಪ್ಪ, ಮಲ್ಲಪ್ಪಶೆಟ್ಟಿ, ಥ್ಯಾಕರೆಯ ಪ್ರತಿನಿಧಿಯೊಂದಿಗೆ ನಡೆಸುವ ಸಂಭಾಷಣೆಗಳು ಪ್ರಮುಖವಾಗಿವೆ. ಚೆನ್ನಮ್ಮ ಮತ್ತು ಮಲ್ಲಪ್ಪಶೆಟ್ಟಿ ನಡುವಿನ ಸಂಭಾಷಣೆ ಈ ರೀತಿಯಾಗಿದೆ.

ಮಲ್ಲಪ್ಪಶೆಟ್ಟರು "ದತ್ತಕ ಸ್ವೀಕಾರ ಮಾಡಬೇಕಾದರೆ ಧಾರವಾಡದಲ್ಲಿರುವ ಕಲೆಕ್ಟರ್ ಮಿ. ಥ್ಯಾಕರೆ ಸಾಹೇಬರ ಅನುಮತಿ ಪಡೆಯಬೇಕಲ್ಲವೇ? ಎಂದು ಸೂಚಿಸುತ್ತಾರೆ. ಚೆನ್ನಮ್ಮರಾಣಿ ಕೆಣಕಿದ ಫಣಿಯಂತಾದಳು.

"ನಮ್ಮ ಗೃಹಕೃತ್ಯಕ್ಕೆ ಪ್ರವೇಶ ಮಾಡುವುದಕ್ಕೆ ಥ್ಯಾಕರೆ ಸಾಹೇಬರು ಯಾರು?" ಎಂದು ದಿಟ್ಟತನದಿಂದ ಕೇಳಿದಳು.

ಮಲ್ಲಪ್ಪಶೆಟ್ಟಿ - "ಈಗವರೇ ನಮ್ಮ ಪ್ರಭುಗಳು, ಪೇಶ್ವೆಯವರ ಸ್ಥಾನದಲ್ಲಿ ರಾಜ್ಯಾಡಳಿತ ನಡೆಸುತ್ತಿರುವ ಇಂಗ್ಲೀಷಿನವರೇ ನಮ್ಮ ಧಣಿಗಳಲ್ಲವೆ?" 'ಸುಳ್ಳು - ಕಿತ್ತೂರು ಇಂಗ್ಲೀಷ್‌ನವರನ್ನು ಧಣಿಗಳೆಂದು ಎಂದಿಗೂ ಒಪ್ಪಿಕೊಳ್ಳುವುದಿಲ್ಲ".

"ಇಂಗ್ಲೀಷಿನವರ ವಿರುದ್ಧ ನಿಲ್ಲುವುದು ಕಿತ್ತೂರಿನ ಶಕ್ತಿಯಲ್ಲ, ರಾಣಿ ಸಾಹೇಬರೆ"

"ನೋಡುವ, ಕಿತ್ತೂರ ಶಕ್ತಿಯನ್ನು ಪರೀಕ್ಷಿಸುವ ಇಚ್ಚೆ ಇಂಗ್ಲೀಷಿನವರಿಗಿದ್ದರೆ ಪರೀಕ್ಷಿಸಬಹುದು" (ವೀರರಾಣಿ ಚೆನ್ನಮ್ಮ; ಪು. ೬೯) ಎಂದು ಖಡಾಖಂಡಿತವಾಗಿ ಹೇಳುವ ರಾಣಿಚೆನ್ನಮ್ಮ ಅಂದೇ ವೀರಗಟ್ಟಿ ಹಾಕಿ ಮುಂಬರುವ ಅನಾಹುತಗಳನ್ನೆದುರಿಸಲು ಸಿದ್ಧಳಾಗುವ ಆಕೆಯ ವೀರಗುಣವನ್ನು ಈ ಸಂಭಾಷಣೆಯಲ್ಲಿ ಕಾಣಬಹುದು.

ದಾನ ದಾಸೋಹಿ ದಾನಮ್ಮ ಕಾದಂಬರಿಯು ಓದುಗರ ಕುತೂಹಲ ಹಾಗೂ ಆಸಕ್ತಿಯನ್ನು ಪ್ರಾರಂಭದಿಂದ ಕೊನೆಯವರೆಗೂ ಉಳಿಸಿಕೊಂಡು ಹೋಗುವ ನಿರೂಪಣೆ ಶೈಲಿಯನ್ನು ಹೊಂದಿದೆ. ಗಂಗಾಂಬಿಕೆ ಲಿಂಗಧಾರಣೆಯ ಕಾಲಕ್ಕೆ ಬೇಕಾದ ನೆರವನ್ನು ಚೆನ್ನಬಸವಣ್ಣನವರಿಗೆ ನೀಡುತ್ತಿದ್ದಳು. ಆಗ ದಾನಮ್ಮ ಗಂಗಾಂಬಿಕೆಯ ಬಳಿ ಹೋದಾಗ ಅಲ್ಲಿ ನಡೆದ ಸಂಭಾಷಣೆ ಹೀಗಿದೆ.

ದಾನಮ್ಮ:- ಅವ್ವಾ ಹೆಣ್ಣುಮಕ್ಕಳು ಲಿಂಗಧಾರಣೆಯನ್ನು ಅಪೇಕ್ಷಿಸುವವರಿಗೆ ಮಾಡಬಹುದೇ?

ಗಂಗಾಂಬಿಕಾ:- ಬಸವೇಶ್ವರರು ರೂಪಿಸಿದ ಹೊಸ ಸಮಾಜದಲ್ಲಿ ಗಂಡು-ಹೆಣ್ಣು ಎಂಬ ಭೇದವಿಲ್ಲ. ಪುರುಷರಿಗಿರುವ ಧಾರ್ಮಿಕ ಸ್ವಾತಂತ್ರ್ಯ ಸ್ತ್ರೀಯರಿಗೂ ಇದೆ. ಅಂತೆಯೇ ಈ ಕಲ್ಯಾಣದಲ್ಲಿ ಶಿವಶರಣೆಯರು ಅನುಭಾವಿಗಳಾಗಿದ್ದಾರೆ, ವಚನಕಾರ್ತಿಯರಾಗಿದ್ದಾರೆ.

ದಾನಮ್ಮ:- ಅನೇಕರು ವಿವಿಧ ಬಗೆಯ ಕಾಯಕವನ್ನು ಕೈಕೊಂಡು ಆರ್ಥಿಕವಾಗಿ ಸ್ವಾವಲಂಬಿಗಳಾಗಿದ್ದಾರೆ.

ಗಂಗಾಂಬಿಕೆ:- ಹೌದವ್ವ, ಚೆನ್ನಬಸವಣ್ಣಾ ಈ ನನ್ನ ಮಗಳು ದಾನಮ್ಮ ಸಾಮಾನ್ಯಳಲ್ಲ. ಈಕೆಯ ಮುಖ ನೋಡಿದರೆ ವೀರ ಗಣಾಚರ ವೃತ್ತಿಯವಳಾಗುವಂತೆ ತೋರುತ್ತದೆ. ನಿತ್ಯ ಸಾವಿರಾರು ಜನ ಆಕೆಯ ಬಳಿ ಬರುತ್ತಾರೆ. ರೋಗಾದಿಗಳಿಂದ ಮುಕ್ತರಾಗುತ್ತಾರೆ. ಇಚ್ಛಿತ ವರಗಳನ್ನು ಪಡೆದುಕೊಳ್ಳುತ್ತಾರೆ. ಈಕೆಯ ಕೃಪೆಯಿಂದ ಲೌಕಿಕ ತೊಂದರೆಯಿಂದ ಮುಕ್ತರಾಗಿ ದಾನಮ್ಮನನ್ನು ಹಾಡಿ ಹೊಗಳುತ್ತಿದ್ದಾರೆ. ತನ್ನ ಬಳಿ ಬಂದವರು ಇಹ ಸುಖದ ಜೊತೆಗೆ ಪರಸುಖವನ್ನು ಪಡೆಯುವಂತಾಗಲಿ ಎಂದು ಆಶಿಸಿದ್ದಾಳೆ. ಈ ಬಗೆಗೆ ಹಲವಾರು ಸಲ ನನ್ನೊಂದಿಗೆ ಚರ್ಚಿಸಿದ್ದಾಳೆ. ಆಕೆಗೆ ಲಿಂಗಧಾರಣಕ್ರಮವನ್ನು ತಿಳಿಸಿಕೊಡಪ್ಪ" (ಶಾಂತಾದೇವಿ ಮಾಳವಾಡ; ೧೯೯೨; ಪು. ೧೪೦) ಎಂದು ಗಂಗಾಂಬಿಕೆ ನುಡಿಯುತ್ತಾಳೆ.

'ಶೂರರಾಣಿ ಕೆಳದಿಯ ಚೆನ್ನಮ್ಮಾ', 'ವೀರರಾಣಿ ಮಹಾಮುತ್ಸದ್ಧಿ ಕೆಳದಿಯ ಚೆನ್ನಮ್ಮ', 'ಚೆನ್ನಿ ಚೆನ್ನಮ್ಮ ಚೆನ್ನಮ್ಮಾಜಿ', 'ಅಭಯಾರಾಣಿ' 'ವೀರವನಿತೆ ಕಿತ್ತೂರಚೆನ್ನಮ್ಮ' ಕಾದಂಬರಿಗಳಲ್ಲಿ ಬರುವ ಹಲವು ಸಂಭಾಷಣೆಗಳು ಗಮನಾರ್ಹವಾಗಿವೆ. ಚೆನ್ನಮ್ಮಾಜಿಯ ಸಂಭಾಷಣೆ, ಸೋಮಶೇಖರ ನಾಯಕನ ಸಂಭಾಷಣೆ, ಸಿದ್ದಪ್ಪಶೆಟ್ಟರ ಸಂಭಾಷಣೆ, ಮಂತ್ರಿಗಳ ಸಂಭಾಷಣೆ, ಕಿತ್ತೂರಚೆನ್ನಮ್ಮ ವಲ್ಲಪ್ಪಶೆಟ್ಟಿ, ಅಬ್ಬಕ್ಕದೇವಿ ಸಂಭಾಷಣೆ, ಲಕ್ಕಪ್ಪ ಬಂಗರಸರ, ತಿರುಮಲರಾಯರ ಸಂಭಾಷಣೆಗಳು ಹೀಗೆ ಕಾದಂಬರಿಗಳುದ್ದಕ್ಕೂ ಕಾಣುವ ಸಂಭಾಷಣೆಗಳು ಕೇವಲ ಸಂಭಾಷಣೆಗಳಾಗದೆ ಪಾತ್ರಗಳ ಔನ್ನತ್ಯದ ನೆನಪುಗಳಾಗಿ ಕಂಡುಬರುತ್ತವೆ. ಚೆನ್ನಮ್ಮಾಜಿ ಮತ್ತು ಅಬ್ಬಕ್ಕದೇವಿಯ ಕೆಲವೊಂದು ಮಾತುಗಳು ಸ್ವಗತದಂತಿದ್ದು ಆತ್ಮವಿಶ್ಲೇಷಣೆ ಮಾಡಿಕೊಳ್ಳುವಂತಿವೆ. ದೀರ್ಘವಾದ ಅನೇಕ ವಾಕ್ಯಗಳನ್ನು ಎಡೆಬಿಡದೆ ಕಾದಂಬರಿಗಳುದ್ದಕ್ಕೂ ಬಳಸಲಾಗಿದೆ. ಕೆಳದಿ ಚೆನ್ನಮ್ಮ, ಅಬ್ಬಕ್ಕದೇವಿ, ಕಿತ್ತೂರಚೆನ್ನಮ್ಮನ ವಿರೋಚಿತ ಸಾಹಸದಿಂದಾಡುವ ಸಂಭಾಷಣೆ ಮಾತುಗಳನ್ನು ಕೆಲವು ಉದಾಹರಣೆಗಾಗಿ ನೋಡಬಹುದು.

"ಮಹಾರಾಜರ ಆಸರೆಯಲ್ಲಿ ಹೂವಿನಂತಿದ್ದವಳಿಗೆ ಇಂಥ ಗತಿ ಬಂದಿತೇ? ಯಾವನೋ ದುಷ್ಟ ಬಂದು ರಾಜಮಾತೆಗೆ ಜಯವಾಗಲಿ ಎನ್ನುವ ಸಾಹಸವೇ ಅಪ್ಪಾಜಿ. ನನಗೊಂದು

ಮಗುವಿದ್ದರೆ ರಾಜಮಾತೆಯಾಗಿ ರಾಜ್ಯವನ್ನು ಮುನ್ನಡೆಸುತ್ತಿದ್ದೆ. ನನ್ನ ಬಳಿ ಸಾಕಷ್ಟು ಧನಕನಕವಿದೆ, ಬುದ್ಧಿಚಾತುರ್ಯವಿದೆ, ಯುದ್ಧ ಮಾಡಿ ಈ ಕುನ್ನಿಗಳನ್ನು ಗೆಲ್ಲಬಲ್ಲ ಸಾಮರ್ಥ್ಯವಿದ್ದರೂ, ಪತಿ, ಪುತ್ರರಿಲ್ಲದ ಹೆಣ್ಣು ಗತಿಯಿಲ್ಲದವಳಾಗಬೇಕೆ? ಹೆಣ್ಣಿನ ಜೀವನಕ್ಕೆ ಬೆಲೆ ಇಲ್ಲವೆ? ನಾನು ಅಬಲೆಯಲ್ಲ, ಸಬಲೆಯಾಗಿದ್ದೇನೆ. ನನ್ನವರು ನನಗೆ ಸರಿಯಾದ ಯುದ್ಧ ಶಿಕ್ಷಣ ಕೊಟ್ಟಿದ್ದಾರೆ. ಇಂಥವರನ್ನೆಲ್ಲ ಓಡಿಸದಿದ್ದರೆ, ನಾನು ಶೂರ ಸೋಮಶೇಖರನಾಯಕರ ಪತ್ನಿಯಾಗಿ ಏನು ಸಾರ್ಥಕವಾದಂತಾಯಿತು" (ಶಾಂತಾದೇವಿ ಮಾಳವಾಡ; ೧೯೯೮; ಪು. ೨೨೩).

"ಅಜರಾಮರ ಕೀರ್ತಿ ಪಡೆದ ರಾಜ್ಯದ ರಕ್ಷಣೆ ಈಗ ನಮ್ಮಿಂದ ಮಾತ್ರ ಸಾಧ್ಯ! ನೀವು ಧೃತಿಗೆಟ್ಟರೆ ಸರ್ವನಾಶ!" ರಾಣಿ ಉದ್ವೇಗದಿಂದ, ಆಗ ಕೊಡದು ಮಾವ, ಭಾವ, ಗಂಡ ಇವರು ತಮ್ಮ ರಕ್ತಧಾರೆಯೆರೆದು ಕಾಪಾಡಿದ ರಾಜ್ಯವನ್ನು, ಕಾಪಾಡದೆ ನನ್ನ ರಕ್ತವನ್ನು ಉಳಿಸಿಕೊಳ್ಳುವ ಹೇಡಿತನ ನನಗೆ ಬೇಡ! ಪತಿಯ ಕಾರ್ಯವನ್ನು ನಿರ್ವಹಿಸಿ, ಮುಂದುವರಿಸುವುದೇ ಅವನಿಗೆ ಸಲ್ಲಿಸಬೇಕಾದ ಸೇವೆಯೆಂದು ನಂಬುತ್ತೇನೆ" (ಲಕ್ಕಪ್ಪ ಶಿರಹಟ್ಟಿ; ೧೯೯೧; ಪು. ೪೯).

"ರಾಜಾರಾಮರು ನಮ್ಮ ರಾಜ್ಯದಲ್ಲಿ ಇಲ್ಲ. ಈ ರಾಜ್ಯದ ಮೂಲಕ ಹಾಯ್ದುಹೋದ ಸಮಾಚಾರ ತಿಳಿದಿದೆ. ಅವರ ವೇಷ ನಮ್ಮ ಕಾವಲುಗಾರರಿಗೆ ದೊರೆತಿದೆ. ನಮ್ಮ ರಾಜ್ಯದಲ್ಲಿ ನೂರಾರು ಜನ ನಿತ್ಯ ಹೋಗುತ್ತಾರೆ. ಇಲ್ಲದ ರಾಜಾರಾಮರನ್ನು ಎಲ್ಲಿಂದ ತಂದು ಕೊಡೋಣ, ಬೇಕಾದರೆ ಅವರ ಬಟ್ಟೆ ಒಯ್ಯಬಹುದು" (ಶಾಂತಾದೇವಿ ಮಾಳವಾಡ; ೧೯೯೮; ಪು. ೨೨೩).

'ಚೆನ್ನಿಚೆನ್ನಮ್ಮ ಚೆನ್ನಮ್ಮಾಜಿ' ಕಾದಂಬರಿಯಲ್ಲಿ "ಪ್ರಧಾನಿಗಳೇ ನಾನು ಹೆಣ್ಣು, ರಾಣಿಯಾಗಿ ರಾಜ್ಯ ಆಳಲು ಅನರ್ಹಳು ಎಂಬ ಅಪಾದನೆ ನನ್ನ ಮೇಲಿರುವುದು ನಿಮಗೆ ಗೊತ್ತಿಲ್ಲ. ನಾನು ರಾಜ್ಯವನ್ನು ಆಳಬಲ್ಲೆ ಎಂಬುದನ್ನು ಎಲ್ಲರಿಗೂ ತೋರಿಸಬೇಕಾಗಿದೆ. ಈ ಯುದ್ಧ ಮಾಡುವುದು, ವೈರಿ ಸೇನೆಯನ್ನು ಎದುರಿಸುವುದು ಈ ರಾಜ್ಯವಾಳುವುದರ ಒಂದು ಅಂಗ" (ನಾ. ಡಿಸೋಜ; ೨೦೦೧; ಪು. ೧೫೦).

ರಾ.ಮೋ. ವಿಶ್ವಾಮಿತ್ರ ಅವರ 'ಅಭಯರಾಣಿ' ಕಾದಂಬರಿಯಲ್ಲಿ ಅಬ್ಬಕ್ಕರಾಣಿಯು ತನ್ನ ಪ್ರಜೆಗಳಿಗೆ ಒದಗಿದ ಕಷ್ಟವನ್ನು ಯಾವ ರೀತಿ ಪರಿಹರಿಸಬೇಕೆಂದು ತನ್ನ ಮನಸ್ಸಿನಲ್ಲಿಯೇ ಆಲೋಚನೆ ಮಾಡಿಕೊಳ್ಳುತ್ತಾ, ತನ್ನನ್ನು ತಾನೇ ಸ್ವವಿಮರ್ಶೆಗೆ ಒಳಪಡಿಸಿಕೊಳ್ಳುವುದಕ್ಕೆ ಈ ನಿದರ್ಶನವೇ ಉತ್ತಮ ಉದಾಹರಣೆಯಾಗಿದೆ.

"ಹೌದು, ಈ ನಾಡು ನಿನ್ನದು, ತುಳುನಾಡ ರಾಣಿ ನೀನು, ಈ ನಾಡ ಜನರು ನಿನ್ನವರು. ಅವರ ಒಳಿತು ಕೆಡಕು ನಿನ್ನದು".

"ತಾಯಿ ನಾನು"

"ನಿಜವಾಗಿಯೂ ಈ ನಾಡಿನ ತಾಯಿ ನೀನು, ಈ ನಾಡ ಮಕ್ಕಳು ನಿನ್ನ ಮಕ್ಕಳು".

"ಮಕ್ಕಳ ರಕ್ಷಣೆ ತಾಯಿಯ ಕೆಲಸ."

"ಹೌದು. ತಾಯಿ ಮಕ್ಕಳನ್ನು ರಕ್ಷಿಸಬೇಕು. ನೀವೇ ಈ ನಾಡರಾಣಿ. ನಿನಗೆ ಆಚಾರ್ಯರು ಉಪದೇಶಿಸಿಲ್ಲವೇ? ದುರ್ಬಲಸ್ಯ ಬಲೋ ರಾಜಾ ಎನ್ನಲಿಲ್ಲವೇ? ರಾಜಾ ಪ್ರತ್ಯಕ್ಷ ದೇವ ಎಂದಿಲ್ಲವೇ?"

"ಸರಿ, ದುರ್ಬಲರಾದ ಮಕ್ಕಳನ್ನು ಸಶಕ್ತರನ್ನಾಗಿ ಮಾಡಬೇಕು ತಾಯಿ".

"ತಾಯಿಯು ಮಕ್ಕಳ ಸಂಕಟವನ್ನು ನೋಡಿ ಸುಮ್ಮನಿರುವಳೇ? ಮಕ್ಕಳು ಹಾಳಾಗುತ್ತಿರುವುದ್ದನ್ನು ಕಂಡು ತಾಯಿಯಾದವಳು ಸುಮ್ಮನಿರಬಹುದೇ"?

"ಸುಮ್ಮನಿರಬಾರದು ಎಂಬುದು ಸತ್ಯ. ಈ ಭಯಂಕರ ಪರಿಸ್ಥಿತಿಯಲ್ಲಿ ಸುಮ್ಮನಿರುವುದು ಅವಿವೇಕವೇ ನಿಜ".

"ರಾಜನು ಪ್ರತ್ಯಕ್ಷ ದೇವರೆಂದು ಜನರು ನಂಬಿರುವಾಗ ರಾಜನು ಉದಾಸೀನನಾಗಬಹುದು. ನೀನು ರಾಣಿಯಲ್ಲವೇ? ಪ್ರತ್ಯಕ್ಷ ದೇವತೆಯೆಂದು ಶಾಸ್ತ್ರ ಸಾರುತ್ತಿರಲು ರಕ್ಷಣೆಗೈಯ್ಯಬೇಡವೇ? ದೇವತೆ ಕಾಪಾಡದಿದ್ದದಲ್ಲಿ ಮತ್ತಾರು ಕಾಪಾಡುವರು? ರಾಣಿಯಾದ ನೀನು ನಿನ್ನ ಪ್ರಜೆಗಳನ್ನು ಕಾಪಾಡದಿದ್ದಲ್ಲಿ ಮತ್ತೆನ್ನಾರು ಕಾಪಾಡುವರು"?

"ಸರಿ ಪ್ರಜೆಗಳನ್ನು ಸರ್ವಥಾ ರಕ್ಷಿಸತಕ್ಕವಳು ನಾನೇ ಆಗಿರುವೆ".

"ಹಾಗಿದ್ದರೆ ಹಸನ ಮತ್ತು ಅವನ ಸಂಗಾತಿಗಳ ಕೊಲೆಯಾದಂತೆ ಇನ್ನು ನಾಡಿನ ಜನರೆಲ್ಲರ ಕೊಲೆ ಸುಲಿಗೆಯಾಗುವುದಾದರೆ ಅದನ್ನು ನೋಡಿಕೊಂಡು ಸುಮ್ಮನಿರಲಾಗುವುದೇ?"

"ಸಾಧ್ಯವಿಲ್ಲ ಎಂದಿಗೂ ಈ ನಾಡಿನಲ್ಲಿ ಪೋರ್ಚುಗೀಸರು ಅನ್ಯಾಯ ನಡೆಸುವುದಕ್ಕೆ ಸಾಧ್ಯವಿಲ್ಲ. ಅವರ ಕಗ್ಗೋಲೆ ಅನ್ಯಾಯ, ಅನಾಚಾರಗಳನ್ನು ನೋಡಿಕೊಂಡು ಪ್ರತಿಭಟಿಸದೆ ಇದ್ದಲ್ಲಿ ಬದುಕಿಯೂ ಉಪಯೋಗವಿಲ್ಲ".

"ಇಲ್ಲ. ಖಂಡಿತವಾಗಿಯೂ ಇಲ್ಲ. ಪ್ರಜೆಗಳು ಅವರಿಂದಲಾಗಿ ಪಡಬಾರದ ಪಾಡು ಪಡುತ್ತಿರುವಾಗ ರಾಣಿಯಾಗಿದ್ದುಕೊಂಡು ತನ್ನ ಮಕ್ಕಳೇ ಆಗಿರುವ ಪ್ರಜೆಗಳ ರಕ್ಷಣೆ ಮಾಡದೆ ಇದ್ದಲ್ಲಿ ರಾಣಿ ಎಂದು ಕರೆಸಿಕೊಳ್ಳಲು ಅರ್ಹತೆಯಿರಲಾರದು. ಆದ್ದರಿಂದ ಪೋರ್ಚುಗೀಸರ ವಿರೋಧವೇ ರಾಣಿಪಟ್ಟದ ರಕ್ಷಣಾಕವಚ".

"ಹೌದು ಪೋರ್ಚುಗೀಸರನ್ನು ವಿರೋಧಿಸಬೇಕು. ಈ ನಾಡನ್ನು ದೊಡ್ಡದಾದ ಗಂಡಾಂತರದಿಂದ ಪಾರು ಮಾಡಬೇಕು ಎಂದು ಅವಳ ಹೃದಯವು ನುಡಿಯಿತು" (ವಿಶ್ವಾಮಿತ್ರ ರಾ.ಮೋ; ಪು. ೬೨ ರಿಂದ ೬೩). ಲೇಖಕರು ಇಲ್ಲಿ ಆತ್ಮವಿಶ್ಲೇಷಣೆ ಮಾಡಿಕೊಳ್ಳುವ ಶೈಲಿಯನ್ನು ಬಳಸಿದ್ದಾರೆ.

ಕಾವ್ಯಮಯವಾಗಿ ತಮ್ಮ ಕಾದಂಬರಿಯಲ್ಲಿ ಶೈಲಿಯನ್ನು ಬಳಸಿಕೊಂಡ ಸಮೇತನಹಳ್ಳಿ ರಾಮರಾಯರ 'ಸವತಿ ಗಂಧವಾರಣೆ' ಕಾದಂಬರಿಯಲ್ಲಿ ಬರುವ ಸಾಲುಗಳು ಈ ರೀತಿಯಾಗಿವೆ.

೧. ರಂಗಪೂಜೆಯ ಹೆಣ್ಣುಗಳು ಹೊನ್ನಿನಾರತಿಗಳೊಡನೆ ಅರಳಿದ ಹೊಸ ಹೂ ಬೊಗಸೆಗಳೊಡನೆ, ತೇಲಿ ಬಂದರು: ಬಳುಕಿ ಬಂದುದು.

೨. ಹೊಣೆಯನ್ನು ಹೊತ್ತವನು ಪ್ರಾಣವನ್ನು ಬಿಟ್ಟಾನು! ಸಿಡಿ ತಲೆಗೊಟ್ಟು ಮಾನವನನ್ನು ಕಾಪಾಡಿಕೊಂಡಾನು!

೩. ನೀಡುವ ಹೆಣ್ಣುಗಳ ಮನಸ್ಸಿನಲ್ಲಿ ಒಲವು ಇಲ್ಲದಿದ್ದರೆ ಉಣ್ಣುವ ಗಂಡಸಿಗೆ ಉಂಡದ್ದು ಮೈ ಹಿಡಿಯದು.

೪. ಚಂದನದ ಆಸೆಗಾಗಿ ಮರವನ್ನು ಮಂದಿ ಅಕ್ಕರೆಯಿಂದ ಸಾಕುತ್ತಾರೆ. ಬಾಳಿನ ಒಳ್ಳೆಯದನ್ನು ಸಾಧಿಸಿಕೊಳ್ಳಲು ಅವರು ನಿಮ್ಮನ್ನು ಹಾಗೆಯೇ ನಡೆಸಿಕೊಳ್ಳುತ್ತಾರೆ (ಸವತಿ ಗಂಧವಾರಣೆ; ಪು. ೨೦, ೨೪, ೩೪, ೩೮).

### ಸ್ತ್ರೀವರ್ಣನೆ

ತ.ರಾ.ಸು. ಅವರು ರಕ್ತರಾತ್ರಿ ಕಾದಂಬರಿಯಲ್ಲಿ ಸ್ತ್ರೀಯ ಅಂಗಾಂಗಗಳ ವರ್ಣನೆಯನ್ನು ಮಾಡಿದ್ದಾರೆ. ಲಿಂಗಣ್ಣ ನಾಯಕನನ್ನು ಸ್ತ್ರೀವ್ಯಾಮೋಹದಲ್ಲಿ ತೊಡಗಿಸಬೇಕೆಂದು ಸಜ್ಜೆ ಮನೆಗೆ ರಾತ್ರಿಯಲ್ಲಿ ಉಡುಗೊರೆಯಾಗಿ ಹೆಣ್ಣುಮಗಳೊಬ್ಬಳನ್ನು ಕಳುಹಿಸುತ್ತಾನೆ.

"ಆದರೆ ಈ ಬಗೆಯ ಸೌಂದರ್ಯವನ್ನು ಮಾತ್ರ ಆತ ಎಂದಿಗೂ ಕಂಡಿರಲಿಲ್ಲ. ನಾಯಕನ ಎದುರಿಗೆ ನಿಂತದ್ದು ಬರೀ ಸೌಂದರ್ಯವೇ ಅಲ್ಲ. ಅಷ್ಟು ದೂರದಲ್ಲಿದ್ದರೂ ಬರಿವಾಸನೆಯಿಂದಲೇ ಮತ್ತೇರಿಸುವ ಮದ್ಯದಂತಿತ್ತು. ಆ ರೂಪ ವೈಭವ. ಆ ಮುಖ, ಆ ಕಣ್ಣು, ನೀಳ ಕೇಶರಾಶಿ, ಉಟ್ಟ ಬಹು ನವಿರಾದ ಬಟ್ಟೆಯೊಳಗಿನಿಂದ, ಆ ಅರೆಮರೆಯಿಂದ ಮತ್ತಷ್ಟು ಉಜ್ವಲವಾಗಿ ಕಾಣುವ ಅಂಗಸೌಷ್ಠವ, ನಸುಕೆದರಿ ಹಣೆಯ ಮೇಲಾಡುವ ಕುರುಳ ಕುಡಿಯಿಂದ, ಹರಳಿನ ಕಾಲುಂಗುರ ಧರಿಸಿದ, ಅಲತಿಗೆಯ ಬಣ್ಣದಿಂದ ಕೆಂಪಾದ ಪಾದದಲ್ಲಿನವರೆಗೆ ಎದೆಗೆಡಿಸುವ ಮನೋಹರ ಕಲಾಕೃತಿ. ಆಕೆ ಹೆಣ್ಣಲ್ಲ, ವಿಲಾಸದ ಜಲಪಾತ ಯಾವ ಎದೆಯೂ ಅದರಿದಿರು ಉರುಳಿ ಬೀಳದೆ ನಿಲ್ಲಲಾರದು ಎನಿಸಿತು. ತನ್ನೆದುರು, ತನ್ನ ಅಂಗ ಸೌಷ್ಠವವನ್ನು ಮತ್ತಷ್ಟು ಕೆರಳಿಸುವ ರೀತಿಯಲ್ಲಿ, ಕಾಣಿಸುವ ಭಂಗಿಯಲ್ಲಿ ನಿಂತ ಆ ಹೆಣ್ಣನ್ನು ನೋಡಿ ಲಿಂಗಣ್ಣ ನಾಯಕನ ಮನಸ್ಸು ರತಿಕೇಳಿಯ ಜೀವಂತ ಆಹ್ವಾನದಂತಿದ್ದ ಆ ರೂಪಾಸಾನಿಯ ಎದುರಿನಲ್ಲಿ ಮೇಣದ ಬೊಂಬೆಯಂತಾಯಿತು" (ತರಾಸು; ೧೯೬೫; ಪು. ೩೭೧).

### ಪ್ರಕೃತಿಯ ವರ್ಣನೆ

ಪ್ರಕೃತಿಪ್ರಿಯರಾದ ಲೇಖಕರು ಸುಂದರವಾದ ಮಲೆನಾಡಿನ ವರ್ಣನೆಯನ್ನು ಸೊಗಸಾಗಿ ಚಿತ್ರಿಸಿದ್ದಾರೆನ್ನಬಹುದು. ಉದಾಹರಣೆಗೆ "ಭೂಮ್ಯಾಕಾಶಗಳು ನಮ್ಮಂತೆ ಒಂದನ್ನೊಂದಪ್ಪಿ ಕುಳಿತಿವೆ, ಗಾಢಾಂದಕಾರದಲ್ಲಿ ಹೊದಿಕೆ ಹೊದ್ದು ಸ್ತಬ್ಧವಾಗಿ ಮಲಗಿದ ನಿಸರ್ಗವನ್ನು ತುಂಟ ಸೂರ್ಯ ತನ್ನ ಕಿರಣಗಳಿಂದ ಚುಚ್ಚಿ ಎಬ್ಬಿಸುತ್ತಿದ್ದಾನೆ. ಈಗ ಲಗುಬಗೆಯಿಂದ ಎದ್ದ ಭೂದೇವಿ ಸೂರ್ಯನನ್ನು ಕಂಡು ನಾಚಿಕೆಯಿಂದ ತಲೆಬಾಗಿಸಿದಂತಾಗಿದೆ.... ಬೆಟ್ಟಗಳ ತುದಿಗೆ ಬಂದಾಗ ಸೃಷ್ಟಿಕರ್ತನೂ

ಒಬ್ಬ ಜಾದುಗಾರನೆನಿಸುವುದಿಲ್ಲವೆ”. ಇಲ್ಲಿ ಸಹ್ಯಾದ್ರಿ ಶಿಖರದ ಉಷಾಃಕಾಲದ ರಮ್ಯದರ್ಶನವನ್ನು ಲೇಖಕಿ ತನ್ನ ಶಬ್ದಸಂಪತ್ತಿನಿಂದ ಕಲಾತ್ಮಕವಾಗಿ ಸೆರೆಹಿಡಿದಿದ್ದಾರೆನ್ನಬಹುದಲ್ಲದೆ, ತಮ್ಮ ಭಾವನೆಗಳನ್ನು ಅತ್ಯಂತ ಸೂಕ್ಷ್ಮವಾಗಿ ಸೆರೆಹಿಡಿಯುತ್ತಾ, ಓದುಗರಿಗೆ ಸೌಂದರ್ಯಾಭಿರುಚಿಯ ಸವಿಯನ್ನುಣ್ಣಿಸಿದ್ದಾರೆ.

“ಇಂದು ಭೂದೇವಿಗೆ ಪರ್ವತರಾಜನೇ ಪೂಜೆಗೈದ ಸಂತೃಪ್ತಿ ನನಗಾಗಿದೆ. ಪಕ್ಷಿಗಳು ವೇದ-ಮಂತ್ರ ಪಠಿಸುತ್ತಿವೆ. ಬಣ್ಣ ಬಣ್ಣದ ಬೆಡಗಿನ ಕಾಡು ಹೂಗಳು ಕಂಪನ್ನು ಬೀರುತ್ತ, ಪರ್ವತರಾಜನ ಪಾದಕರ್ಪಿತವಾಗುತ್ತಿವೆ” (ಶಾಂತಾದೇವಿ ಮಾಳವಾಡ; ೧೯೯೮; ಪು. ೮೧) ಎಂದು ಬಣ್ಣಿಸುವ ಲೇಖಕಿಯ ಈ ಸುಂದರ ದೃಶ್ಯದಲ್ಲಿ ಪ್ರಕೃತಿ ರೂಪದ ವಿಶೇಷ ಸೌಂದರ್ಯ ದರ್ಶನವಾಗಿದೆ. ಸ್ವರ್ಗ ಬೇರೆಲ್ಲೂ ಇಲ್ಲ. ಸಹ್ಯಾದ್ರಿಯ ಮಡಿಲಲ್ಲಿಯೇ ಇದೆ ಎಂದು ಹೇಳುವಲ್ಲಿ ಲೇಖಕಿಯ ದೃಷ್ಟಿಗೆ ಪ್ರಕೃತಿಲೋಕದ ದೈವೀ ಸೌಂದರ್ಯದ ಭವ್ಯದರ್ಶನವಾಗಿದೆ.

ದೇವುಡು ಅವರ ‘ಚಿನ್ನಾ’ ಕಾದಂಬರಿಯಲ್ಲಿ ಮೂಡಿಬರುವ ವಿಜಯ ವಿಠ್ಠಲದೇವಸ್ಥಾನದ ರಂಗಮಂಟಪದ ವರ್ಣನೆ ಹೀಗಿದೆ:

“ಕಂಭ ಕಂಭಕ್ಕೂ ಹೂವಿನ ಶೃಂಗಾರವಾಗಿ ಸ್ವಾಮಿಯನ್ನು ಇದಿರುಗೊಳ್ಳುವುದಕ್ಕೆ ನಿಂತಿರುವ ದೇವಪುರುಷರಂತಿವೆ. ಹೂವಿನ ತೋರಣಗಳು, ಹೂವಿನ ಹಂಜರ, ಎಲ್ಲವೂ ಸೇರಿ ಪುಷ್ಪ ಸಮುದ್ರದಂತಿದೆ. ಸಣ್ಣ ಗಾಳಿಯಾಡಿ ಆ ಹೂವು ಅಲೆದರೆ ಕ್ಷೀರಸಾಗರದಲ್ಲಿ ಏಳುವ ಅಲೆಗಳಂತೆ ತೋರುತ್ತಿದೆ. ಅದರ ನಡುವೆ ಒಂದು ಹೂವಿನ ಮಂಟಪ, ಏಳೆಡೆಯ ಹಾವು ಹೆಡೆಯನ್ನು ಬಿಚ್ಚಿಕೊಂಡು ತೆಕ್ಕೆಯನ್ನು ಹಾಕಿಕೊಂಡು ಕುಳಿತಿರುವ ಆಕಾರದಲ್ಲಿ ಮಾಡಿದೆ. ಕೊಂಚ ದೂರದಲ್ಲಿ ನಿಂತುಕೊಂಡು ನೋಡಿದರೆ, ಆ ಹೂವಿನ ಹಾವು ಪುರಾಣಗಳಲ್ಲಿ ಹೇಳುವ ಶೇಷನಂತೆ ಕಂಡು, ಕಲ್ಯಾಣ ಮಂಟಪವೇ ಕ್ಷೀರಸಾಗರ, ಆ ಹಾವೇ ಶೇಷ ಎಂಬ ನಂಬಿಕೆಯನ್ನು ಹುಟ್ಟಿಸುವಂತಿದೆ. ಅಲಂಕಾರವೆಲ್ಲ ಆಗಿರುವುದು ಜಾಜಿಯ ಹೂವಿನಿಂದ. ಜಾಜಿಯ ಹೂವಿನ ಆ ಸುವಾಸನೆ ಅಲ್ಲೆಲ್ಲಾ ಹಬ್ಬಿ ಹೋಗಿದೆ. ಅಷ್ಟೇನು? ಹೂವಿನ ಪರಿಮಳ ಅಲ್ಲಿ ಕೆನೆಕಟ್ಟಿರುವಂತೆಯೂ, ಆ ಮಂಟಪದಲ್ಲಿ ಒಂದು ಸಲ ಹೋಗಿ ಸುತ್ತಿಕೊಂಡು ಬಂದರೆ ಮೈಗೆಲ್ಲಾ ಹತ್ತಿಕೊಳ್ಳುವಂತೆಯೂ ಇದೆ” (ದೇವುಡು; ೨೦೦೨; ಪು. ೫). ಈ ಬಗೆಯ ಸವಿವರ ನಿರೂಪಣೆಯೇ ಕಾದಂಬರಿಯ ಜೀವಾಳ ಎನ್ನಬಹುದು.

ಚಿನ್ನಾಸ್ವಾಮಿ ಮತ್ತು ಗೋಪಾಲರಾಯ ಪ್ರೇಮಿಗಳಿಬ್ಬರ ರಮ್ಯವಾದ ಸಂವಾದ ಹೀಗಿದೆ.

‘ಗೋಪಾಲ, ನಿನಗೊಂದು ಗುಟ್ಟು ಬೇಕೇನೋ’

‘ನೀನು ಹೇಳುವುದೆಲ್ಲ ಗುಟ್ಟೆ? ನಿನ್ನ ಗುಟ್ಟು ನಾನು ಕಾಣೆನೆ?’

‘ನಿಜವಾಗಿ ಗೋಪಾಲ, ಈ ಶ್ರೀಶೈಲಕ್ಕೆ ಬಂದಾಗಲಿಂದ ನನಗೆ ಏನೋ ಇಲ್ಲಿಂದ ನಾನು ಹಿಂತಿರುಗಿ ಹೋಗುವುದಿಲ್ಲ ಎನ್ನಿಸಿಬಿಟ್ಟಿದೆ. ಅದರಿಂದಲೇ ಇವೊತ್ತು ನಿನಗೆ ಆ ಮಾತು ಹೇಳಬೇಕು ಎಂತಲೇ ಈ ಕಾಡಿಗೆ ನಿನ್ನನ್ನು ಎಳೆದುಕೊಂಡು ಬಂದೆ’.

‘ಹಾಗೆಂದರೆ?’

‘ನಿಜವಾಗಿ ಕಣೋ? ನಾನಿನ್ನು ಬಹಳ ದಿನ ಬದುಕುವುದಿಲ್ಲ. ಗೋಪು, ಈ ಜನ್ಮದಲ್ಲಿ ನಿನಗೆ ಹೆಂಡತಿಯಾಗಿ ನಿನ್ನ ಜೊತೆಯಲ್ಲಿ ಸಂಸಾರ ಮಾಡಿಕೊಂಡಿರುವ ಭಾಗ್ಯ ಇಲ್ಲದೇ ಹೋಯಿತು. ಇನ್ನೊಂದು ಜನ್ಮಕ್ಕಾದರೂ ಬರಲಿ ಕಣೋ, ಆ ಭಾಗ್ಯ ಕೊಡೋ’

‘ನಿನ್ನ ಮೇಲಿರುವ ಅಭಿಮಾನದಲ್ಲಿ ನೂರರಲ್ಲಿ ಒಂದು ಪಾಲು ಹೆಂಡತಿಯ ಮೇಲೆ ಇಲ್ಲ. ಆದರೂ ಕೈ ಹಿಡಿದವಳು; ಅದರಿಂದ ಅವಳಿಗೆ ದ್ರೋಹ ಮಾಡಲಾರದೆ ಇದ್ದೇನೆ. ನನ್ನ ಹೆಂಡತಿ ಕುಲದೈವ, ನೀನು ಇಷ್ಟದೈವ. ನೀನು ಇನ್ನೊಂದು ಜನ್ಮಕ್ಕಾದರೂ ಹೆಂಡತಿಯಾಗಬೇಕೆಂದೆ. ಇನ್ನೊಂದು ಜನ್ಮದವರೆಗೂ ಏಕೆ? ಇನ್ನು ಮುಂದೆ ನಿನ್ನಲ್ಲಿ ಮದುವೆಯಾದ ಹೆಂಡತಿಯಲ್ಲಿ ಹೇಗಿರಬೇಕೋ ಹಾಗಿರುವೆನು. ಇದಕ್ಕೆ ತಪ್ಪಿದರೆ ನೀನಿಟ್ಟ ಆಣೆ”.

‘ಇಲ್ಲಾಪ್ಪಾ, ಈ ಜನ್ಮ ಎನ್ನಬೇಡ, ಇದು ಸೂಳೆಯ ಜನ್ಮ. ಅರಮನೆಯ ಉಪ್ಪು ತಲೆತಲಾಂತರದಿಂದ ತಿಂದು ಇಂದು ರಾಯರಿಗೆ ಸೆರಗು ಹಾಸದಿದ್ದರೆ ಆದೀತೆ? ಇನ್ನೊಬ್ಬನಿಗೆ ಹಾಸಿ ಎಂಜಲಾದ ಸೆರಗು ನಿನಗೆ ಹಾಸಿ, ನೀನು ನಿನಗೆ ಮೀಸಲಾಗಿರು ಎಂದರೆ ಎಲ್ಲಿಯ ನ್ಯಾಯ? ನೀನು ಗಂಡು, ಗಂಡು ಮೀಸಲಾದರೆ ಹೆಣ್ಣಿಗೆ ಸಂತೋಷ. ಆದರೂ ನನಗೆ ಮೀಸಲಾಗಬೇಕು ಎನ್ನುವುದು ನಾನು ನಿನಗೇ ಹೊರತು ನೀನು ನನಗಲ್ಲ. ನಾನು ಒಂದು ಜನ್ಮವಾದರೂ ನಿನಗೆ ಮೀಸಲು ಮಾಡಬೇಕು. ಗೋಪಾಲ ಈ ಜನ್ಮ ಇಲ್ಲಿಗೆ ಸಾಕು ಕಣೋ. ಹೀಗೇ ನಿನ್ನನ್ನು ತಬ್ಬಿಕೊಂಡು ನಿನ್ನ ತೋಳ ತೆಕ್ಕೆಯಲ್ಲಿ ಪ್ರಾಣಬಿಟ್ಟರೆ ನನ್ನಂಥಾ ಪುಣ್ಯವಂತಳಿಲ್ಲ’ (ಅದೇ; ಪು. ೧೫೪) ಎನ್ನುತ್ತಾಳೆ.

**ಗಾದೆ ಮಾತು ನುಡಿಗಟ್ಟುಗಳು**

ಕಾದಂಬರಿಗಳಲ್ಲಿ ಸಮಯೋಚಿತವಾಗಿ ಗಾದೆ ಮಾತುಗಳು, ನುಡಿಗಟ್ಟುಗಳನ್ನು ಬಳಸಿಕೊಂಡಿದ್ದಾರೆ.

* ‘ಹೆತ್ತ ಗಂಡು ಕೈಹಿಡಿದವಳ ಸ್ವತ್ತು’(ಪಟ್ಟಮಹಾದೇವಿ ಶಾಂತಲಾದೇವಿ; ಪು. ೧೬)
* ‘ಇತೋ ಭ್ರಷ್ಟ ತತೋಭಷ್ಟ’ (ಅದೇ; ಪು. ೧೮)
* ‘ಎರಡೂ ದದ್ದ ಹೊರಕ್ಕೆ ಹಾಕು’
* ‘ಮಗಳಿಗಿಂತ ಶ್ರೇಷ್ಠ ಮುತ್ತೈದೆಯಿಲ್ಲ’
* ‘ಅರಸು ಅಂದರೆ ಊರು ನಡುಗುತ್ತದೆ ಮುದುಕ ಅಂದರೆ ಗಡ್ಡ ನಡುಗುತ್ತದೆ’ (ಅದೇ; ಪು. ೧೮)
* ‘ಅಲ್ಪಸಂಗ ಅಭಿಮಾನ ಭಂಗ’
* ‘ಇಬ್ಬರಿದ್ದರೆ ಏಕಾಂತ ಮೂವರಿದ್ದರೆ ಲೋಕಾಂತ’
* ‘ಬಗ್ಗಿ ನಡೆದರೆ ಬೆನ್ನ ಮೇಲೆ ಗುದ್ದುವವರೆ ಜಾಸ್ತಿ’.

* ‘ಕರವಾಳ ಹಿಡಿದ ಕೈಕಂಸಾಳ ಗೋಲು ಹಿಡಿದಂತೆ (ಅದೇ; ೧೧೫೬)
* ‘ಒಲ್ಲದ ಗಂಡನಿಗೆ ಮೊಸರಲ್ಲಿ ಕಲ್ಲು ಸಿಕ್ಕಿತು’ (ಅದೇ; ೧೮೮೯)
* ‘ಹುಟ್ಟಿನಿಂದ ಬಂದ ಸುಳ್ಳು ಸುಟ್ಟರೂ ಹೋಗದು’ (ಅದೇ; ಪು. ೨೦೫)
* ‘ಕಂಕುಳಲ್ಲಿ ದೊಣ್ಣೆ ಕೈಯಲ್ಲಿ ಶರಣಾರ್ಥಿ’.
* ‘ಸೂಜಿ ಮುಂಭಾರ ಸೂಜಿ ಹಿಂಭಾರ’ (ಅದೇ; ಪು. ೧೬).
* ‘ರೋಗಿ ಬಯಸಿದ್ದು ಹಾಲು ಅನ್ನ; ವೈದ್ಯ ಹೇಳಿದ ಪಥ್ಯವೂ ಹಾಲು ಅನ್ನ ಎನ್ನುವ ಹಾಗಾಯಿತು’ (ನಾಟ್ಯರಾಣಿ ಶಾಂತಲಾ; ಪು. ೧೫).

  ಹಾಲಿನಲ್ಲಿ ಅದ್ದಿದವಳು ನೀರಿನೊಳಗದ್ದಲಾರಳೆ.(ಸವತಿ ಗಂಧವಾರಣೆ; ಪು. ೨೮).
* ನೀಡುವ ಹೆಣ್ಣುಗಳ ಮನಸ್ಸಿನಲ್ಲಿ ಒಲವು ಇಲ್ಲದಿದ್ದರೆ ಉಣ್ಣುವ ಗಂಡನಿಗೆ ಉಂಡದ್ದು ಮೈಹಿಡಿಯದು (ಅದೇ; ಪು. ೩೦).
* “ಕಾಲಿನಲ್ಲಿ ಮುಟ್ಟಿ ಮಾಡಹೇಳಿದುದನ್ನು ತಲೆಯಲ್ಲಿ ಹೊತ್ತು ಪೂರೈಸುವೆ” (ಗಿರಿಯ ನವಿಲು; ಪು. ೫೨೦)
* ‘ಈಚಲ ಮರದ ಕೆಳಗೆ ಕುಳಿತು ಹಾಲನ್ನು ಕುಡಿದರೂ ಸಾಮಾನ್ಯರು ಹೆಂಡವೆಂದು ಊಹಿಸುವಂತೆ’ (ಕದಳಿಯರ ಕರ್ಪೂರ; ಪು. ೩೩೪).
* ‘ನೂರು ನಾಲಿಗೆ ನೂರು ನುಡಿದಾವು’ (ಅದೇ; ಪು. ೬೧೭)
* ‘ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು’.
* ‘ರಾತ್ರಿ ಕಂಡ ಬಾವಿಗೆ ಹಗಲು ಬೀಳುವ ಹಾಗೆ’.
* ಜಾಣರಿಗೆ ಮಾತಿನ ಪೆಟ್ಟು, ದಡ್ಡರಿಗೆ ದೊಣ್ಣೆಪೆಟ್ಟು (ತರಂಗಿಣಿ; ೨೩೬)
* ಉಂಡೂ ಹೋದ ಕೊಂಡು ಹೋದ; ಪು. ೬೫ (ದಾನಚಿಂತಾಮಣಿ; ಪು. ೬೫)
* ರೋಗಿ ಬಯಸಿದ್ದು ಹಾಲು, ವೈದ್ಯ ಕೊಟ್ಟಿದ್ದು ಹಾಲು (ಅಭಯರಾಣಿ; ಪು. ೪)
* ಹೊಳೆ ನೀರಿಗೆ ದೊಣ್ಣಪ್ಪ ನಾಯಕನ ಆಜ್ಞೆಯೇಕೆ (ಅದೇ; ಪು. ೬)
* ಹೆತ್ತವರಿಗೆ ಹೆಗ್ಗಣ ಮುದ್ದು (ಅದೇ; ಪು. ೭)
* ನೀರಿನಲ್ಲಿಟ್ಟ ಹೋಮದಂತಾಗಬಾರದು (ಅದೇ; ಪು. ೨೦)
* ಬೆಲ್ಲದ ಬಳಿಗೆ ನೊಣ ಹಾರುವಂತೆ (ಅದೇ; ಪು. ೨೯)
* ತಾಯಿ ಬಳಿಗೆ ಕರುವೋಡುವಂತೆ (ಅದೇ; ಪು. ೨೯)
* ಹೆಗ್ಗಣಗಳಿಗೆ ಹೆದರಿ ಮನೆಯನ್ನು ಬಿಟ್ಟೋಡಬಹುದೇ (ಅದೇ; ಪು. ೪೨)

* ಮಿಡಿತೆಗಳಿಗಂಜಿ ಬೆಳೆ ಬಳಸದಿರಬಹುದೇ? (ಅದೇ; ಪು. ೪೨)
* ನೋವಾಗುವುದೆಂದು ಗಾಯವನ್ನು ತೊಳೆಯದಿರಬಹುದೇ? (ಅದೇ; ಪು. ೪೨)
* ಮೂರ್ತಿ ಸಣ್ಣದಾದರೂ ಕೀರ್ತಿ ದೊಡ್ಡದು (ಅದೇ; ಪು. ೪೨)
* ಮಾಡಿದ್ದುಣೋ ಮಹಾರಾಯ (ಅದೇ; ಪು. ೪೩)
* ರಾತ್ರಿ ಕಂಡ ಬಾವಿಗೆ ಹಗಲು ಬೀಳುವುದು (ಅದೇ; ಪು. ೪೨)
* ಏನೂ ಕೆಲಸವಿಲ್ಲದವನ ತಲೆ ಹಾಳು ಯೋಚನೆಗಳ ಕಾರ್ಖಾನೆ.
* ಬೇಲಿಯೇ ಹೊಲವನ್ನು ಮೇಯುವ (ಅದೇ; ಪು. ೪೯)
* ಕಬ್ಬಿನ ಗಾಣಕ್ಕೆ ನಮ್ಮ ಕೈಕೊಟ್ಟಂತಾಯಿತು (ಅದೇ; ಪು. ೧೩)
* ಹಾಲಿಗೆ ಹುಳಿ ಹಿಂಡಿದಂತಾಯಿತು (ಅದೇ; ಪು. ೫೨)
* ಊರಮಾರಿಯನ್ನು ಮನೆಗೆ ಕರೆದ ಹಾಗೆ (ಅದೇ; ಪು. ೫೮)
* ಬೆಂಕಿಯನ್ನು ಕೆದರೆ ಕೈ ಸುಟ್ಟುಕೊಂಡು ಹಾಗೆ (ಅದೇ; ಪು. ೫೮)
* ಕೆಟ್ಟ ಮೇಲೆ ಬುದ್ಧಿ ಬಂತು (ಅದೇ; ಪು. ೫೯)
* ಕುಂಬಾರಗೆ ವರುಷ ದೊಣ್ಣೆಗೆ ನಿಮಿಷ (ಅದೇ; ಪು. ೫೯)
* ಹಣ ಕಂಡರೆ ಹೆಣ ಕೂಡ ಬಾಯಿ ಬಿಡುತ್ತದೆ (ಅದೇ; ಪು. ೭೨)
* ಮುಂಡಾಸಿಗೆ ಆಸೆ ಮಾಡಿ ತಲೆಯೇ ಹೋಯಿತು (ಅದೇ; ಪು. ೮೨)
* ಬೆರಳು ತೋರಿಸುವುರಿಂದಲೇ ಹಾಳಾಗುವ ಕುಂಬಳಕಾಯಿ ನಾವೆಲ್ಲ (ಅದೇ; ಪು. ೮೬)
* ಮನುಷ್ಯ ತಾನೊಂದನ್ನು ನೆನೆದರೆ ವಿಧಿ ಇನ್ನೊಂದನ್ನು ಬಗೆಯಿತಲ್ಲಾ (ಅದೇ; ಪು. ೮೬)
* ಅಲ್ಪನಿಗೆ ಆಡಂಬರ ಹೆಚ್ಚು (ಅದೇ; ಪು. ೯೨)
* ಮೀನು ಹಾರಿದರೆ ಎಷ್ಟು ಹಾರೀತು. ಇಟ್ಟ ಹಾರಿದರೆ ಬುಟ್ಟಿಯವರೆಗೆ ಹಾರೀತು (ಅದೇ; ಪು. ೯೧)
* ಮುಳ್ಳನ್ನು ಮುಳ್ಳಿನಿಂದಲೇ ತೆಗೆಯಬೇಕು (ಅದೇ; ಪು. ೮೮)
* ಮೋಸಕ್ಕೆ ಮೋಸದಿಂದಲೇ ಮದ್ದು ಮಾಡಬೇಕು (ಅದೇ; ಪು. ೯೯)
* 'ಶಕ್ತಿಗೆ ನಿಲುಕದ್ದು ಯುಕ್ತಿಗೆ ಬಲಿ ಅಷ್ಟೇ' (ವೀರವನಿತೆ ಒನಕೆ ಓಬವ್ವ; ಪು. ೬)
* ಅವಸರಕ್ಕೆ ಹುಟ್ಟಿದವು ಅರೆಜೀವಿಗಳು ಅನ್ನೋ ಹಾಗಾಗಬಾರದು (ಅದೇ; ಪು. ೩೭)
* ಹಾಲಿನಂಥ ಮನಸ್ಸಿಗೆ ಹುಳಿಹಿಂಡಲು ಬೇಡ (ಅದೇ; ಪು. ೪೩)

* ಕುಂಬಳಕಾಯಿ ಕಳ್ಳ ಎಂದರೆ ಹೆಗಲು ಮುಟ್ಟಿ ನೋಡಿದಂತಾಯಿತು (ವೀರವನಿತೆ ಕಿತ್ತೂರ ಚೆನ್ನಮ್ಮ; ಪು. ೩೫)
* ಬೆಳೆವ ಪೈರು ಮೊಳಕೆಯಲ್ಲೇ (ಅದೇ; ಪು. ೧೪)
* ಒಗ್ಗಟ್ಟಿನಲ್ಲಿ ಬಲವಿದೆ (ಅದೇ; ಪು. ೧೩)
* ಬೆನ್ನಿಗೆ ಚೂರಿಯಿಂದ ಇರಿಯುವವರು (ಅದೇ; ಪು. ೮೬)
* ಮಿಂಚಿ ಹೋದ ಕಾಲಕ್ಕೆ ಚಿಂತಿಸಿ ಫಲವೇನು (ಅದೇ; ಪು. ೮೬)
* ಅನ್ನವಿಟ್ಟ ಮನೆಗೆ ಕನ್ನ ಹಾಕಿದೆ (ಅದೇ; ಪು. ೯೮)
* ಬೇರು ಬಲ್ಲವರಿಗೆ ಎಲೆ ತಿಳಿಯದೆ? (ಚೆನ್ನಾ; ಪು. ೩೫)
* ಮಾರಿ ಒಲಿಯಬೇಕಾಗಿದ್ದರೆ ಕೋಣನನ್ನು ಕಡಿದರಲ್ಲವೇ? ಸುಮ್ಮನೆ ಒಲಿದೀತೆ (ಅದೇ; ಪು. ೩೬)
* ಆಡಿದರೆ ಅರಗಿಳಿ, ಕಡಿದರೆ ನಾಗರಹಾವು
* ಮುಳ್ಳಿನ ಮೇಲೆ ಬಟ್ಟೆ ಹಾಕಿದಂತೆ
* ಆಕಳಿಸುವವನಿಗೆ ಹಾಸಿಗೆ ಹಾಸಿದಂತಾಯಿತು.
* ಬಡವನ ಹೆಂಡತಿ ಬೇಲಿ ಹೂ
* ಕುಣಿಯುವ ಕಾಲಿಗೆ ಗೆಜ್ಜೆ ಕಟ್ಟಿದಂಗಾಯಿತು.
* ಬಯಸಿ ಬಯಸಿ ಕತ್ತಿಗೆ ಮುತ್ತು ಕೊಟ್ಟಂತಾಯಿತು.
* ಕತ್ತಿಯಲ್ಲೇ ಬಿತ್ತಿದುದು ಕತ್ತಿಯಲ್ಲೇ ಕೊಯ್ಲಾಗುತ್ತದೆ.
* ಕ್ರೋಧದ ಮದ್ದಿಗೆ ಕಿಡಿಸೋಕಿದಂತಾಯಿತು.
* ಸೈನಿಕರ ಅತೃಪ್ತಿ ಸೆರಗಿನಲ್ಲಿ ಕಟ್ಟಿಕೊಂಡ ಬೆಂಕಿ
* ಮುಗಿಲು ಕಡಿದು ಬಿದ್ದಾಗ ಛಾವಣಿ ಕಾಪಾಡಬಲ್ಲದೇ?
* ಇದ್ದ ಬದುಕಲ್ಲ, ಸತ್ತ ಸಾವಲ್ಲ (ಕಂಬನಿಯ ಕುಯಿಲು)
* 'ಅರಿತು ನಡೆದರೆ ಆರು ತಲೆ, ಮರೆತು ನಡೆದರೆ ಮುಗಿದ ತಲೆ'.
* "ಸಜ್ಜನರ ಸಹವಾಸ ಹಜ್ಜೇನು ಸವಿದಂತೆ ದುರ್ಜನರ ಸಹವಾಸ ದುರ್ಗತಿಗೆ ನಾಂದಿ" (ವೀರವನಿತೆ ಒನಕೆ ಓಬವ್ವ; ಪು ೩೯)

**ಉಪಮೆ-ರೂಪಕಗಳು**

ಭಾಷೆಯನ್ನು ಎಷ್ಟೇ ನೇರವಾಗಿ ಬಳಸಿಕೊಂಡರೂ, ಬರಹಗಾರರು ಅದರೊಂದಿಗೆ ಬೆರೆಸುವ ಆಲಂಕಾರಿಕ ಭಾಷೆಯಿಂದ ಗದ್ಯಕ್ಕೊಂದು ಹೃದ್ಯತೆ ಪ್ರಾಪ್ತವಾಗುತ್ತದೆ. ಸಹಜವಾಗಿಯೇ ಮೂಡಿಬರುವ

ಅಲಂಕಾರಿಕ ಭಾಷೆ ಓದುಗನಿಗೆ ಆಕರ್ಷಕವಾಗುತ್ತದೆ. ಕಾದಂಬರಿಕಾರರು ತಮ್ಮ ಕೃತಿಗಳಲ್ಲಿ ಸಂದರ್ಭಾನುಸಾರವಾಗಿ ಉಪಯೋಗಿಸಿದ ಉಪಮೆ ರೂಪಕಗಳು ಉಲ್ಲೇಖನೀಯ.

**ಉಪಮೆ ಮತ್ತು ರೂಪಕ ಅಲಂಕಾರಗಳು**

* "ಅಂದವಾಗಿ ಅಲಂಕರಿಸಲ್ಪಟ್ಟ ತೊಟ್ಟಿಲಲ್ಲಿ ಚಂದನದ ಗೊಂಬೆಯಂಥ ಮಗು ಮಲಗಿತ್ತು" (ಗಿರಿಯ ನವಿಲು; ಪು. ೨೯)
* "ಬೆಲ್ಲದ ಬಳಿಗೆ ನೊಣ ಹಾರುವಂತೆ ತಾಯಿ ಬಳಿಗೆ ಕರುವೋಡುವಂತೆ" (ಅಭಯರಾಣಿ; ಪು. ೨)
* "ಕಮಲದಂತೆ ನಮ್ಮ ಬಾಳು"
* "ಹನಿ ಹನಿಯಾಗಿ ಬಿದ್ದರೂ ನೀರು ಕಡೆಗೊಂಡು ದಿನ ಕೊಡುಗಲ್ಲನ್ನೇ ಕಲಿಸುವಂತೆ ಲೋಕದ ಮಾತು ನಿನ್ನ ನಂಬಿಕೆಯನ್ನು ಕೆಡಿಸಬಹುದು" (ಕಂಬನಿಯ ಕುಯಿಲು)
* 'ಹಿಮಾಲಯದ ಮೇಲೆ ಚಂದ್ರೋದಯವಾದಂತೆ, ಅವರ ಮೊಗದ ಮೇಲೆ ಮಂದಹಾಸ ಮೂಡಿತು'.
* 'ಹಳ್ಳಿಯ ಜನ ಕೆರಳಿದ ಕೋಣಗಳಂತೆ ಸೈನಿಕರ ಮೇಲೆ ಬಿದ್ದರು'.
* 'ಮಾತು ಸತ್ತು ಕಡೆದ ವಿಗ್ರಹದಂತೆ ನಿಂತಿದ್ದ ದಾಸಿಗೆ' (ರಕ್ತರಾತ್ರಿ; ಪು. ೧೫೦-೧೫೩)
* 'ವೃತ್ತಿಯಲ್ಲಿ ಹೊಸಬನಾದ ಹಾವಾಡಿಗನ ಅವಸ್ಥೆಯಂತೆ'.
* 'ಬೋನಿನಲ್ಲಿ ಬಿದ್ದ ಪಶುವಿನಂತೆ (ರಾಜ್ಯದಾಹ)
* "ಆದರೆ ಅವು ಕಾದ ಹಂಚಿನ ಮೇಲೆ ಬಿದ್ದ ನೀರಿನಂತೆ ವಿಲಾಸ ಪ್ರಪಂಚದಲ್ಲಿ ಹರಿದು ವ್ಯರ್ಥವಾಗುತ್ತಲಿವೆ" (ಗಿರಿಯ ನವಿಲು)
* 'ರತ್ನವನ್ನು ಎಷ್ಟು ದಿನ ಮುಚ್ಚಿಡಲಾಗುತ್ತೆ'.
* 'ಕಲಿತರೆ ಬರುವ ವಸ್ತುವಲ್ಲ ಪ್ರೀತಿ' (ಗಿರಿಯ ನವಿಲು; ಪು. ೯೫, ೧೫೮)
* 'ಒಳಸಂಚುಗಳ ಮುಳ್ಳು ಪೊದರುಗಳು' (ಕಂಬನಿಯ ಕುಯಿಲು)
* 'ಸೈನ್ಯ ಕ್ರಾಂತಿಯ ಹುಚ್ಚು ಹೊಳೆ'.
* 'ಹೆಮ್ಮೆಯ ಬೆಳಕು' (ರಾಜ್ಯದಾಹ)
* 'ಆನೆಯ ಪ್ರೇತ' (ರಕ್ತರಾತ್ರಿ)
* 'ಸರ್ಪ ಸುಮ್ಮನಿದ್ದ ಮಾತ್ರಕ್ಕೆ ವಿಷ ಕಕ್ಕುವುದನ್ನು ಬಿಟ್ಟೀತೆ' (ವೀರವನಿತೆ ಕಿತ್ತೂರಚೆನ್ನಮ್ಮ; ಪು. ೩೫).
* 'ಸ್ವಾತಿ ಮಳೆಯ ನೀರು ಕಾಯ್ದ ಹಂಚಿನ ಮೇಲೆ ಬಿದ್ದಾಗ ಹಿಂಗುವುದು' (ಗಿರಿಯ ನವಿಲು)

**ಸೂಕ್ತಿಗಳು**

ಕಾದಂಬರಿಯಲ್ಲಿ ಬಹಳಷ್ಟು ಸಂಭಾಷಣಾ ಭಾಗಗಳು ಬರುವುದರಿಂದ ಕಾದಂಬರಿ ಬೇಗ ಓದಿಸಿಕೊಂಡು ಹೋಗುವುದು, ಅಲ್ಲಲ್ಲಿ ಅರ್ಥಪೂರ್ಣ ಸೂಕ್ತಿಗಳು ಕಂಗೊಳಿಸುತ್ತವೆ. ಅವುಗಳಲ್ಲಿ ಕೆಲವು ಹೀಗಿವೆ.

* ಬಹಳ ದೊಡ್ಡವರ ಸ್ನೇಹ ದೊರೆತರೆ ಅದರ ಫಲವಾಗಿ ಸಂಯಮ ಸಹ ರೂಪಿತವಾಗುತ್ತದೆ (ಪಟ್ಟಮಹಾದೇವಿ ಶಾಂತಲಾದೇವಿ; ಪು. ೪೮೯).
* ಮನುಷ್ಯ ರೋಷದ ಫಲವಾಗಿ ಮನುಷ್ಯತ್ವ ಕಳೆದುಕೊಳ್ಳುತ್ತಾನೆ (ಅದೇ; ಪು. ೪೯೩).
* ಪಶ್ಚಾತಾಪವೇ ಎಲ್ಲಕ್ಕಿಂತ ದೊಡ್ಡ ಪ್ರಾಯಶ್ಚಿತ್ತ (ಅದೇ; ಪು. ೬೫೪).
* ಜನತೆಯ ಸಾಮೂಹಿಕ ಧೈರ್ಯವೇ ರಾಷ್ಟ್ರದ ಶಕ್ತಿ (ಅದೇ; ಪು. ೭೦೦).
* ಪ್ರತಿಯೊಬ್ಬ ಮಾನವನನ್ನು ಅವನವನ ಸ್ವಭಾವ ನಡವಳಿಕೆಯಿಂದಲೇ ಅಳೆಯಬೇಕು (ಅದೇ; ೭೧೦).
* ಸ್ವಾತಂತ್ರ್ಯದ ಮುಖ್ಯ ಗುರಿ ಸರ್ವತೋಮುಖವಾದ ರಾಷ್ಟ್ರದ ಏಳಿಗೆ (ಅದೇ; ಪು. ೧೦೩೩).
* ಗೊಣಗುವುದು ಆತ್ಮಸ್ಥೈರ್ಯವಿಲ್ಲದವರ ಗುಣ (ಅದೇ; ಪು. ೧೦೩೬).
* ಶಿಕ್ಷೆ ಮಾನವನನ್ನು ತಿದ್ದಿ ಅವನನ್ನು ಮೇಲಕ್ಕೆ ಏರಿಸುವುದಕ್ಕಿಂತ ಹೆಚ್ಚು ಪ್ರಭಾವಶಾಲಿಯಾಗಿ, ಕ್ಷಮೆ ಅವನನ್ನು ತಿದ್ದಿ ಮೇಲಕ್ಕೇರಿಸುತ್ತದೆ (ಅದೇ; ಪು. ೧೨೪೯).
* ಸ್ವಾರ್ಥಕ್ಕಾಗಿ ಹುಟ್ಟುವ ಕೋಪ ಅನರ್ಥಕಾರಿ. ಪರರ ಏಳಿಗೆಗಾಗಿ, ಒಳಿತಿಗಾಗಿ ಮಾಡುವ ಕೋಪಕ್ಕೂ ಬೆಲೆ ಇದೆ (ಅದೇ; ಪು. ೧೩೧೧).
* ಪಿಸುಣತ್ವ ಮನುಷ್ಯನ ಅತ್ಯಂತ ನೀಚ ಗುಣಗಳಲ್ಲಿ ಒಂದು (ಅದೇ; ಪು. ೧೬೮೮).
* ಮತೀಯ ಘರ್ಷಣೆ ಒಮ್ಮೆ ಆರಂಭವಾದರೆ ಅದು ಬೆನ್ನು ಫಣಿ ಇದ್ದ ಹಾಗೆ, ವಾಸಿಯಾಗುವುದೇ ಇಲ್ಲ (ಅದೇ; ಪು. ೧೬೫೨).
* ಧರ್ಮದ ದುರಾಭಿಮಾನ ಪಾಪಾಸುಕಳ್ಳಿಯಂತೆ ಬೇಗ ಹಬ್ಬುತ್ತದೆ. ಅದು ಹಬ್ಬಲು ತೊಡಗಿದರೆ ಹೆಜ್ಜೆ ಊರಿ ನಿಲ್ಲಲು ಜಾಗವಿರುವುದಿಲ್ಲ (ಅದೇ; ಪು. ೧೬೮೬).
* ಮಾಡುವವನಿಗೆ ತಿನ್ನುವ ಒಂದೊಂದು ಅಗುಳಲ್ಲಿಯೂ ನೂರು ಕೆಲಸ ಅಂಟಿಕೊಂಡಿರುತ್ತವೆ(ಸವತಿ ಗಂಧವಾರಣೆ; ಪು. ೧೫).
* ಗಂಡು ಹೆಣ್ಣಿನ ಸುಖ ಪರಸ್ಪರ ತ್ಯಾಗ ಮಾಡಿದಷ್ಟು ಮಧುರ (ಅದೇ; ಪು. ೫೧).
* ಹಿರಿದಕ್ಕೆ ಕಿರಿದು ಮಣಿಯಬೇಕು (ಅದೇ; ಪು. ೧೩೧).
* ಒಂದನ್ನು ಸೋತು ನೂರನ್ನು ಗೆಲ್ಲುವುದು (ಅದೇ; ಪು. ೧೩೪).

* ಯಾರನ್ನು ಯಾವ ದಾರಿಯಲ್ಲಿ ಒಯ್ದರೆ ಯಾವ ಒಳಿತನ್ನು ಸಾಧಿಸಬಹುದು ಎಂಬುದನ್ನು ಅರಿಯುವುದೂ ಒಂದು ವಿದ್ಯೆಯೇ ಸರಿ (ಅದೇ; ೧೩೫).

* ಹೆತ್ತ ತಾಯಿಯೊಬ್ಬಳ ಆಸೆ ಒಂದು ನಾಡಿನ ಆಸೆಗಿಂತ ಮಿಗಿಲು (ಅದೇ; ೧೪೧).

* ಸಮಾಜದ ಹಿತಕ್ಕಾಗಿ ಹುಟ್ಟಿದ್ದು ರಾಜಕೀಯ (ಅದೇ; ೧೬೫).

* ಧರ್ಮ ಕಾಲದೊಡನೆ ಹೊಂದಿಕೊಳ್ಳುವುದನ್ನು ಕಲಿಯಬೇಕು, ಕಲಿಯದಿದ್ದರೆ ಅದರ ಉಪಕಾರ ಜನತೆಗೆ ಇಲ್ಲದಂತಾಗುತ್ತವೆ. ಜನತೆ ಅನುಸರಿಸದ ಧರ್ಮ ಇದ್ದರೂ ಸತ್ತಂತೆಯೇ (ಅದೇ; ೧೭೨).

* ಒಂದು ನಾಡನ್ನು ನಡೆಸುತ್ತೇನೆ ಎಂದೆನ್ನುವ ವ್ಯಕ್ತಿ ಎಲ್ಲ ಧರ್ಮಗಳ ಒಂದು ಕೊಡಲಾಗಿರಬೇಕು. ಅವನು ಯಾವುದೇ ಒಂದು ನಿರ್ದಿಷ್ಟವಾದ ಧರ್ಮದ ದಾಸನಾಗಿರಬಾರದು. ನಾಡಿನಲ್ಲಿ ಎಲ್ಲ ಧರ್ಮಗಳನ್ನು ಬಳಸಬೇಕು ಎಂಬುದೇ ಅವನ ಹಿರಿಯ ಧರ್ಮವಾಗಿರಬೇಕು. ಸನ್ಯಾಸಿ ಲೋಕದ ಪಾಲಿಗೆ ತಾನು ಇನ್ನಿಲ್ಲ ಎಂದುಕೊಳ್ಳುತ್ತಾನೆ ಮತ್ತು ಕುಲಗಳ ಸೋಂಕು ಅವನನ್ನು ಬಾಧಿಸದು. ಆದರೂ ಲೋಕ ಅವನಿಂದ ಒಳ್ಳೆತವನ್ನು ಬಯಸುತ್ತದೆ. ರಾಜನಾದರೂ ಒಬ್ಬ ಸನ್ಯಾಸಿಯೇ ಹಾಗಿದ್ದರೆ ಮಾತ್ರ ಅವನು ಎಲ್ಲ ಧರ್ಮಗಳನ್ನು ತೊಡಕಿಲ್ಲದೆ ನಡೆಸಬಲ್ಲನು. ಇಲ್ಲವಾದರೆ ಒಂದರ ನಡುವೆ ಇನ್ನೊಂದು ಸಿಕ್ಕಿ ಕಾದಾಡಿಯವು ಅವುಗಳ ತಿಕ್ಕಾಟದಲ್ಲಿ ನಾಡಿನಲ್ಲಿ ಕ್ಷೋಭೆ ಕಂಡಿತು. ಮಂದಿ ಕಂಗಾಲಾದರು (ಅದೇ; ಪು. ೧೭೨).

'ಸವತಿ ಗಂಧವಾರಣೆ' ಕಾದಂಬರಿಯಲ್ಲಿ ಲೇಖಕರು ಬಳ್ಳಿ, ಹೂ, ಹಣ್ಣು ಪದಗಳನ್ನು ಸುಮಾರು ಐವತ್ತಕ್ಕೂ ಹೆಚ್ಚು ಸಲ ಬೇರೆ ಬೇರೆ ಅರ್ಥ ಛಾಯೆಯಲ್ಲಿ (ಅರ್ಥದಲ್ಲಿ) ಸಂಕೇತವಾಗಿ ಬಳಸಿದ್ದಾರೆ.

* ಕೇಶವಾ ನನ್ನ ವಂಶದ ಬಳ್ಳಿಯ ಮುಡಿಯಲ್ಲಿ ಈ ವರ್ಷ ತುಂಬುವುದರೊಳಗಾಗಿ ಒಂದು ಹೂವನ್ನು ಕರುಣಿಸು (ಸವತಿ ಗಂಧವಾರಣೆ; ಪು. ೬).

* ಹುವ್ವಿನ ಕನಸುಗಳೇ ಕಣ್ಣಲ್ಲಿ ಸುಳಿಯಲಿ (ಅದೇ; ಪು. ೯).

* ನಿಮ್ಮ ಸುಖದ ಬಳ್ಳಿ ಒಂದಾದರೂ ಹೂವನ್ನು ಬಿಡಲಿಲ್ಲ ಎಂದು ಅನ್ನಿಸಿತು (ಅದೇ; ಪು. ೯).

* ಒಂದು ಸಾರಿ ಮುಡಿದ ಈ ಮಂದಾರದ ಮೇಲೆ ಬೇರೊಂದು ಮುತ್ತುಗವೇ (ಅದೇ; ಪು. ೧೧).

* ಸಳರು ನೆಟ್ಟ ಬಳ್ಳಿಯೇ ಕುಡಿಯೊಡೆದು ಹೊರವಾಗಿ ಹುವ್ವು ಹಣ್ಣುಗಳನ್ನು ಜನತೆಗೆ ಕೊಡಬೇಕು (ಅದೇ; ಪು. ೨೫).

* ಹೂ ಅರಳುವಂತೆ ನಕ್ಕರೋ ಏನೋ! ಕಾಣಲಿಲ್ಲ (ಅದೇ; ಪು. ೨೭).

* ನಿಮ್ಮ ಮಡಿಲಲ್ಲಿ ಬಿದ್ದ ಅದು ಬೇವಾಗದು ತಾಯಿ, ಹೂವಾಗಿಯೇ ಅರಳಿತು.
* ಅರಮನೆಯಲ್ಲಿ ಕಿರಿಯ ರಾಣಿಯ ಹೂವಿನಂತಹ ಸುಳಿವು ಎಲ್ಲ ಜನಕ್ಕೂ ಹಿತವಾಯಿತು (ಅದೇ; ಪು. ೧೦೭).
* ಹಿರಿಯ ರಾಣಿಯ ಹಣ್ಣು ಹರೆಯವೇ ಸೊಗಸು (ಅದೇ; ಪು. ೧೦೮)
* ಹಾಗಾದರೆ ಅದು ಹಣ್ಣಾದಂತೆಯೇ (ಅದೇ; ಪು. ೧೦೯).
* ಹೂವಾಡಿದ ಮದುವೆಯ ಈ ಹಸಿಯ ದಿನಗಳೇ ಚೆನ್ನ (ಅದೇ; ಪು. ೧೧೦).
* ಹಾಯ್ಗಡದಲ್ಲಿ ರಾಜದಂಪತಿಗಳಿಗೆಂದು ಹೂವಿನದೋಣಿ ಸಿದ್ಧವಾಗಿತ್ತು (ಅದೇ; ಪು. ೧೨೫).
* ವಿಷ್ಣುವರ್ಧನನ ಭೋಗ ಬಿರಿದ ಹೂವಿನಂತೆ ಹಿಗ್ಗಿತು (ಅದೇ; ಪು. ೧೧೨೭).
* ನಿಮ್ಮ ಕೈಯಲ್ಲಿ ದ್ರವ್ಯ ಕಬ್ಬಿನ ಜಿಲ್ಲೆಯಲ್ಲಿ ಹಣ್ಣು ಬಿಟ್ಟಂತೆ (ಅದೇ; ಪು. ೧೩೩).
* ಅಕ್ಕ ನಿಮ್ಮ ತಪಸ್ಸಿನ ಅಖಂಡವಾದ ಪುಣ್ಯ ನಮ್ಮ ಒಡಲಲ್ಲಿ ನಿಂತು ಈ ನಿಮ್ಮ ನೆರಳನಲ್ಲಿ ಹೂ ಅರಳುತ್ತಿದೆ. ಅದು ನಿಮ್ಮದು... ಅದನ್ನು ನಿಮ್ಮ ಅಂಗೈಗಳಲ್ಲಿ ಮೊದಲು ಇಡಬೇಕು, ಅದು ನಮ್ಮ ಆಸೆ (ಅದೇ; ಪು. ೧೪೧).
* ಹೊಯ್ಸಳರ ಹಿರಿನಡತೆಯ ಬಳ್ಳಿ ಒಂದೇ ಗೊಂಚಲಿನಲ್ಲಿ ಎರಡು ಹೂವನ್ನು ಕೊಡದು (ಅದೇ; ಪು. ೧೮೬).
* ಹಸುಳೆಯನ್ನು ಹೂವಿನಂತೆ ಅಂಗೈಗಳಲ್ಲಿರಿಸಿಕೊಂಡು ತೊಟ್ಟಿಲತ್ತ ನಡೆದಳು (ಅದೇ; ಪು. ೧೯೫).
* ನಾವು ಬಂಜೆಯಾಗಿ ಸಳರು ನೆಟ್ಟ ಬಳ್ಳಿಗೆ ಒಂದು ಬೊಗಸೆ ನೀರನ್ನೆರೆಯಲಿಲ್ಲ ಎಂಬುದನ್ನು ಜನತೆ ಬಲ್ಲುದು (ಅದೇ; ಪು. ೧೭೯).
* ಬುಡದ ಬೇರು ಕೊಳೆಯುವಾಗ ನೀರ ಮೇಲಣ ತಾವರೆ ಬಾಡುವಂತೆ (ಅದೇ; ಪು. ೨೦೨).
* ಮನಸ್ಸಿನಲ್ಲಿ ಮೊಳೆದ ವಿಷದ ಬಳ್ಳಿಗೆ ನೀರನ್ನು ಎರೆದಂತಾಯಿತು (ಅದೇ; ಪು. ೨೦೩).
* ತನ್ನ ರಾಣಿ ನಡುವೆ ಹಾದಿಯಲ್ಲಿ ಹೂವನ್ನು ಹರಡಿಯಾರು (ಅದೇ; ಪು. ೨೬೦).
* ಹೂವರಳುವಂತೆ ನಕ್ಕು ಅಂದಳು...
* ವಿಶಾಲ ಮೈದಾನದಲ್ಲಿ ದಳಗಳನ್ನರಳಿಸಿ ನಿಂತ ಹೂವಿನಂತೆ ಹಳ್ಳಿಗಳು (ಅದೇ; ಪು. ೨೮೩).
* ನಿನ್ನ ಮಾತು ಹೂವಿನ ಸರವನ್ನೆತ್ತಿದಂತೆ ಇಲ್ಲವಲ್ಲ? (ಅದೇ; ಪು. ೨೪೪).
* ನಮ್ಮ ಮನಸ್ಸು ಹೂವಿನಂತೆ ಅರಳಿ ನಿಂತಿದೆ (ಅದೇ; ಪು. ೨೯೬).

**ಶ್ಲೋಕ**

* ‘ರಕ್ಷಾರ್ಥಮಸ್ಯ ಸರ್ವಸ್ಯ ರಾಜಾನಮಸೃಜತ್ತ್ರ ಭುಃ’ (ಅಭಯರಾಣಿ; ಪು. ೨)
* ಇಂದ್ರಿಯಾಣಾಂ ಜಯೇಯೋಗಂ
* ಸಮಾತಿಷ್ಟೇದ್ದಿವಾನಿಶಮ್
* ಜಿತೇಂದ್ರಿಯೋಹಿ ಶಕ್ನೋತಿ
* ವಶೇ ಸ್ಥಾಪಯಿತುಂ ಪ್ರಜಾಃ (ಅದೇ; ಪು. ೨)
* “ಕ್ರಿಯಾಸಿದ್ಧಿ; ಸತ್ವೇಭವತಿ ಮಹತಾಂ ನೋಪಕರಣೇ” (ಅದೇ; ಪು. ೩೯)
* “ಪರಸ್ಪರ ವಿವಾದೀತು ವಯಂ ಪಂಚಶತಂಚತೇ
* ಅನ್ಯೈಃ ಸಹ ವಿವಾದೀತುವಯಂ ಪಂಚೊತ್ತರಂಶತಂ” (ಅದೇ; ಪು. ೬)
* “ಸರ್ವತ್ರ ಭಯವರ್ಜನಾ” (ಅದೇ; ಪು. ೩೪)
* “ಜನನೀ ಜನ್ಮ ಭೂಮಿಶ್ಚ ಸ್ವರ್ಗಾದಪೀ ಗರೀಯಸಿ”
  (ವೀರವನಿತೆ ಕಿತ್ತೂರಚೆನ್ನಮ್ಮ; ಪು. ೧)
* ‘ಮೃದೂನಿಕುಸುಮದಪಿ ವಜ್ರಾದಪಿಕಠೋರಾಣಿ’ (ಅದೇ; ಪು. ೧೬)
* ‘ಧರ್ಮೋರಕ್ಷತಿ ರಕ್ಷಿತ’ (ವೀರವನಿತೆ ಒನಕೆ ಓಬವ್ವ; ಪು. ೩೯)

**ಘೋಷ ವಾಕ್ಯಗಳು**

* ‘ತಾಯಿನಾಡು ಸ್ವರ್ಗಕ್ಕಿಂತಲೂ ಮಿಗಿಲು’
* ‘ಸ್ವಾತಂತ್ರ್ಯ ನಮ್ಮ ಜನ್ಮ ಸಿದ್ಧಹಕ್ಕು’ (ವೀರವನಿತೆ ಕಿತ್ತೂರಚೆನ್ನಮ್ಮ; ಪು. ೧)
* ಉತ್ಸಾಂ ಸಾಹಂ ಧೈರ್ಯಂ ಬುದ್ಧಿಃ ಶಕ್ತಿ ಪರಾಕ್ರಮಂ
* ಷಡೇತೇಯತ್ರವರ್ತಂತೇತಂತ್ರದೈವಂ ಪ್ರಸೀದತಿ. (ಅಭಯರಾಣಿ; ಪು. ೩೬)

ಮೂರ ಅಂಕಿಗೆ ವೀರಶೈವರಲ್ಲಿ ಬಹಳ ಮಹತ್ವವಿದೆ.

| | | |
|---|---|---|
| ಬ | ಸ | ವ |
| ಪರನಾದ | ಚರಬಿಂದು | ಹರಕಳೆಗಳಾಗಿವೆ. |

ಅ. ಉ. ಮ. ಕೂಡಿ ಮೂಲ ಮಂತ್ರ ಓಂ ಆಗಿದೆ.

ತೆಂಗಿನಕಾಯಿಗೆ ಮೂರುಕಣ್ಣು

ಬಿಲ್ಪತ್ರೆಗೆ ಮೂರು ದಳ

ಶಿವನಿಗೆ ಮೂರು ಕಣ್ಣು

ಮೂರನೆಯದೇ ಜ್ಞಾನ ಕಣ್ಣು

ಗುರು-ಲಿಂಗ-ಜಂಗಮ ವೀರಶೈವ ತತ್ವದ ತಳಹದಿಯಾಗಿದೆ.

| | | |
|---|---|---|
| ಭಕ್ತಿ | ಜ್ಞಾನ | ವೈರಾಗ್ಯ |
| ಇಷ್ಟಲಿಂಗ | ಪ್ರಾಣಲಿಂಗ | ಭಾವಲಿಂಗ |
| ನಾದ | ಬಿಂದು | ಕಲಾ |

ಇವು ಬೇರೆಯಲ್ಲ.

| | | |
|---|---|---|
| ಸತ್ | ಚಿತ್ | ಆನಂದ |
| ಪರಮಾತ್ಮ | ಚೇತನ | ಆನಂದ |
| ಅರ್ಚನ | ಅರ್ಪಣ | ಅನುಭಾವ |
| ಶುದ್ಧ | ಸಿದ್ಧ | ಪ್ರಸಿದ್ಧ ಪ್ರಸಾದ |

(ದಾನ ದಾಸೋಹಿ ದಾನಮ್ಮ; ಪು. ೩೧೯)

ಒಬ್ಬ ಮನುಷ್ಯನ ಜೀವನದಲ್ಲಿ ಬಾಲ್ಯ, ಯೌವನ, ವೃದ್ಧಾಪ್ಯ ಹೇಗೋ ಹಾಗೆ ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಗಳು ಬೇರೆ ಅಲ್ಲ.

| **ಪಂಚೇಂದ್ರಿಯಗಳು** | | | **ಪ್ರಕಾಶ** |
|---|---|---|---|
| ಕಣ್ಣು | ಬೆಳಕು | ಅಗ್ನಿತತ್ವ | ಶಿವಲಿಂಗ |
| ಕಿವಿ | ಶಬ್ದ | ಆಕಾಶತತ್ವ | ಪ್ರಸಾದಲಿಂಗ |
| ನಾಲಿಗೆ | ರುಚಿ | ಜಲತತ್ವ | ಗುರುಲಿಂಗ |
| ತ್ವಚೆ | ಸ್ಪರ್ಶ | ವಾಯುತತ್ವ | ಜಂಗಮಲಿಂಗ |
| ಮೂಗು | ಗಂಧ | ಪೃಥ್ವಿತತ್ವ | ಆಚಾರಲಿಂಗ |
| ಮನಸ್ಸು | ಅಂತಃಕರುಭಾವ | | ಮಹಾಲಿಂಗ |

(ಅದೇ; ಪು. ೩೩೪)

**ದಾನಮ್ಮ ತನ್ನ ಜೀವನದಲ್ಲಿ ಅಳವಡಿಸಿಕೊಂಡ ಅಷ್ಟಗುಣಗಳು**

ಶಿವಯೋಗ ಸಾಧನೆ

ದಾಸೋಹಂಭಾವ

ಸಂಘಟನಾ ಚತುರತೆ, ಕಾರ್ಯದಕ್ಷತೆ

ಮಧುರಭಾವ, ವೀರವೈರಾಗ್ಯ

ಅನುಭಾವ

ದಾಂಪತ್ಯಯೋಗ

ಕಾಯಕ ನಿಷ್ಠೆ

ಸತ್ಯನಿಷ್ಠುರತೆ

ದಾನಮ್ಮನ ಶಕ್ತಿ ಅದ್ಭುತವಾದುದು. ಆತ್ಮಶಕ್ತಿಯ ಬಲದಿಂದ

ಆಕೆ ನುಡಿದುದೆಲ್ಲ - ಶಿವತತ್ವವಾಯಿತು

ನಡೆದುದು - ಶಿವಪಥವಾಯಿತು

ಆಚಾರವೇ - ಜಂಗಮ

ವಿಚಾರವೇ ಭಕ್ತಳಾಗಿ ಬಾಳಿದಳು. (ಅದೇ; ಪು. ೩೪೮-೩೫೦) ಎಂಬ ಉಲ್ಲೇಖಗಳನ್ನು ಕಾದಂಬರಿಯಲ್ಲಿ ಕಾಣಬಹುದು.

**ಪಾರಿಭಾಷಿಕ ಪದಗಳು**

ಇತಿಹಾಸಕ್ಕೆ ಸಂಬಂಧಪಟ್ಟ ಪರಿಭಾಷಿಕ ಪದಗಳನ್ನು, ಸಮಕಾಲೀನ ಶಬ್ದಗಳನ್ನು, ಅನ್ಯಭಾಷೆಗಳಿಂದ ಸ್ವೀಕರಿಸಿದ ಪದಗಳನ್ನು ಕಾದಂಬರಿಗಳಲ್ಲಿ ಬಳಸಿರುವುದನ್ನು ಕಾಣಬಹುದು. ಉದಾಹರಣೆಯಾಗಿ,

೧ ಆರೋಗಣೆ, ಬಿಜಯ, ಚೀಟಿ, ಮೇನೆ, ಲಾಜೆ, ಮಲಯಜ, ಮೃಗನಾಭಿ, ಜವ್ವಾಜಿ, ಕೇಸರ, ಕವಿಲೆಗಳು, ಉದ್ವೃತ್ತ ಸವತಿ ಗಂಧವಾರಣೆ, ಅಡುಕು (ಶಾಂತಲೆ)

೨. ರಾಯ ಬಿತ್ತರಿಗೆ, ನಚ್ಚಣಿಗರು, ಗೋಳಾಯ್ಲರು, ಹಳಯಿಗೆ, ಇಟ್ಟಿಯ ಪಡಿಯರತಿ, ಗೊತ್ತಳಿ, ಪಟಲ, ತಂಬಾಳ, ವೇಗಾಯ್ಲರು, ಸಮೆ, ಉಡುವುರ್ಚು, (ಸವತಿ ಗಂಧವಾರಣೆ)

೩. ಹೋಸ, ಅನುಜ್ಞೆ, ಕಂಸಾಳ, ಕಲಸ, ಕೋರಿ, ಕುಮಾರಿ, ರಾವಣ, ಪಡಿಯರ, ತಕಲಾತಿ, ಎಸಮ, ಊಳಿಗ, ಬೇಹು, (ಪಟ್ಟಮಹಾದೇವಿ ಶಾಂತಲಾದೇವಿ)

೪. ಪ್ರಾಚೀನ ಪದಗಳ ಬಳಕೆ:- ಕುಮಾರ್ತೆ, ಕೋಶಿಕೆ, ಹಡಿಯಾರ, ಅಂದಳ, ಕಣಬ, ಸಾಹಣೆ, ಪಟ್ಟಸಾಲೆ ಕೊವಳಾಲಪುರ, ವೇಲಾಪುರ, ದೋರಸಮುದ್ರ (ಪಟ್ಟಮಹಾದೇವಿ ಶಾಂತಲಾದೇವಿ)

೫. ಅನ್ಯಭಾಷೆ ಮತ್ತು ಸಮಕಾಲೀನ ಪದಗಳು:- 'ಲಾಯಕ್ಕು', ತೃಷ್ಣಾಗ್ನಿ, ಉಪದ್ಯಾಪಿತನ, ಜಾವ, ಬೈರಾಗಿ, ಜಾಯಮಾನ (ಕದಳಿಯ ಕರ್ಪೂರ) ಶಿಫಾರಸ್ಸು, 'ಯಾರ್‍ರೇ', 'ಬನ್ರೀ', 'ಹೋಗ್ರೀ' (ಗಿರಿಯ ನವಿಲು), 'ಕಾರಖಾನೆ', 'ಉಸ್ತುವಾರಿ' (ವೀರವನಿತೆ ಒನಕೆ ಓಬವ್ವ)

೬. ಜೈನಧರ್ಮದ ವಿಶಿಷ್ಟ ಪದಗಳು:- ೧. ಅಕೃತ್ರಿಮ ಜಿನಾಲಯ, ೨. ಅನುಮೋದನ ಪುಣ್ಯ, ೩. ಅಪರಾಜಿತ, ೪. ಅರಹಂತ, ೫. ಆರ್ಯಿಕೆ, ೬. ಈಶಾನಕಲ್ಪ, ೭. ಊರ್ಜಯಂತ, ೮. ಕರ್ಮ, ೯. ಕಷಾಯ ಸಲ್ಲೇಖನ, ೧೦. ಕುಂದ ಕುಂದ, ೧೧. ಕೈಲಾಸಗಿರಿ, ೧೨. ಗುಣಸ್ಥಾನ, ೧೩. ಚರಿಗೆ, ೧೪. ಚಂಪಾಪುರಿ, ೧೫. ಜನ್ಮಾಭಿಷೇಕ, ೧೬. ಜಿನೇಂದ್ರ, ೧೭. ಜಯಧವಳ, ೧೮. ತೀರ್ಥಂಕರ, ೧೯. ದಿವ್ಯಧ್ವನಿ, ೨೦. ದವಳ, ೨೧. ಪಂಚಕಲ್ಯಾಣ,

೨೨. ಪಂಚ ನಮಸ್ಕಾರ, ೨೩. ಪಂಚ ಪರಮೇಷ್ಠಿ, ೨೪. ಪರೀಷಹ, ೨೫. ಪರಮೌದಾರಿಕಕಾಯ, ೨೬. ಪಾವಾಪುರಿ, ೨೭. ಪಿಂಚ, ೨೮. ಪ್ಯೂಜಿಯಾಮ, ೨೯. ಬಲದೇವ, ೩೦. ಬಂಕಾಪುರ, ೩೧. ರತ್ನತ್ರಯ, ೩೨. ಲೋಚು, ೩೩. ವಾಸುದೇವ, ೩೪. ವಿದೇಹಕ್ಷೇತ್ರ, ೩೫. ವಿಪುಲಾದ್ರಿ, ೩೬. ಶ್ರಾವಕ ಶ್ರಾವಿಕೆ, ೩೭. ಶ್ರೇಣಿಕೆ, ೩೮. ಸಮಯಸಾರ, ೩೯. ಸಮವಸರಣ, ೪೦. ಸಮಾಧಿಮರಣ, ೪೧. ಸಮ್ಮೇಧ ಶಿಖರ, ೪೨. ಸಾಮಾಯಿಕ, ೪೩. ಸಲ್ಲೇಖನ, ೪೪. ಸಿದ್ದಲೋಕ, ೪೫. ಹಂಸೋಪಾನೆ.

೭. ರಣವಾದ್ಯಗಳು ಯುದ್ಧದಲ್ಲಿ ಬಳಸುವ ಶಸ್ತ್ರಾಸ್ತ್ರಗಳು:-

| | | | |
|---|---|---|---|
| ಉರುಮೆ | ಕಹಳೆ | ಡೋಲು | ಕೋವಿ, |
| ಮದ್ದು | ಗುಂಡು | ಕಠಾರಿ | ಗೋಲಿ |
| ತೋಪು | ಕತ್ತಿ | ಭಲ್ಲೆ | ಬಾಣ |
| ಬತ್ತಳಿಕೆ | ಗೂಡಾಣ | (ವೀರವನಿತೆ ಒನಕೆ ಓಬವ್ವ) | |

## ಕಾದಂಬರಿಯ ತಂತ್ರ

ಕಾದಂಬರಿಕಾರನಿಗೆ ತನ್ನ ಅಭಿವ್ಯಕ್ತಿಗಾಗಿ ಬಳಸುವ ಭಾಷೆ ಎಷ್ಟು ಮುಖ್ಯವೋ ಅಷ್ಟೇ ಮುಖ್ಯವಾದುದು ಬರವಣಿಗೆಯ ವಿಧಾನ ಕೂಡ. ತಂತ್ರವೆನ್ನುವುದು ಸಾಹಿತ್ಯಾಭಿವ್ಯಕ್ತಿಯ ಒಂದು ವಿಧಾನ. ಸಾಹಿತ್ಯ ಕೃತಿಯೊಂದನ್ನು ಯಾವ ರೀತಿಯಲ್ಲಿ ಬರೆಯಬೇಕು, ಯಾವ ನಿಟ್ಟಿನಲ್ಲಿ ಕೊನೆ ಮುಟ್ಟಿಸಬೇಕೆಂಬ ವಿಧಾನವೇ ತಂತ್ರವಾಗಿದೆ. ಕಥೆ ಕಾದಂಬರಿಯ ಆತ್ಮವಾದರೆ ತಂತ್ರ ಅದರ ದೇಹವಾಗುತ್ತದೆ. ಹೇಳಲು ಯೋಗ್ಯವಾದ ಕಥೆ - ಹೇಳುವ ರೀತಿ ಎರಡೂ ಹಾಸುಹೊಕ್ಕಾಗಿ ಹೊಂದಿಕೊಂಡರೆ ಕಾದಂಬರಿಯ ಕಲಾ ಕಟ್ಟಡ ಸುಭದ್ರವಾಗುವುದು. ಅರ್ಥಪೂರ್ಣವುಳ್ಳ ಸಂಘಟನೆ, ವಸ್ತು ಅದನ್ನು ಅನಾವರಣಗೊಳಿಸಿ ಅರ್ಥವನ್ನು ಶೋಧಿಸುವುದು ಕಥೆ, ಪಾತ್ರಗಳ ಪರಸ್ಪರ ಸಂಬಂಧವನ್ನು ಕಲಾತ್ಮಕವಾಗಿ ಚಿತ್ರಿಸುವುದು ಇತ್ಯಾದಿಗಳನ್ನು ತಂತ್ರವು ಒಳಗೊಂಡಿದೆ.

ಶಾ.ಮಂ. ಕೃಷ್ಣರಾಯರು ತಂತ್ರಶಬ್ದವನ್ನು ವ್ಯಾಪಕಾರ್ಥದಲ್ಲಿ ಬಳಸಿದ್ದಾರೆ. "ಪಾತ್ರ, ಸಂವಿಧಾನ, ಶೈಲಿ, ಇತಿಮಿತಿ ಜ್ಞಾನ, ನಿರೀಕ್ಷೆ, ಸ್ಫೂರ್ತಿಗಳೆಲ್ಲವೂ ತಂತ್ರದೊಳಗೆ ಅಡಕವಾಗುತ್ತದೆ" (ಕೃಷ್ಣರಾಯ ಶಾ.ಮಂ. (ಸಂ); ೨೦೦೯; ಪು. ೮) ಎಂದಿದ್ದಾರೆ. ಎಡ್ಗರ್ ಅಲೆನ್ ಪೋ ಹೇಳುವಂತೆ "ಆಕರ್ಷಕ ಆರಂಭ, ಕುತೂಹಲವನ್ನು ಕಾಯ್ದುಕೊಂಡು ಹೋಗುವ ಮಧ್ಯ, ಅನಿರೀಕ್ಷಿತ ಅಂತ್ಯಗಳನ್ನೊಳಗೊಂಡ ಕಥಾವಳಿಗಳನ್ನು ಅದು ಹೊಂದಿರತಕ್ಕದ್ದು. ತಂತ್ರಕ್ಕೂ ಲೇಖಕನ ಉದ್ದೇಶ ಸಫಲತೆಗೂ ನಿಕಟವಾದ ಸಂಬಂಧವಿದೆ. ವಸ್ತು, ಉದ್ದೇಶಗಳ ಮೂರ್ತ ರೂಪವನ್ನು ನೀಡುವ ಅಭಿವ್ಯಕ್ತಿಯೇ ತಂತ್ರವಾಗಿದೆ. ಕೃತಿಯ ರಚನಾಶಿಲ್ಪವು ತಂತ್ರದ ಕಟ್ಟಡವನ್ನವಲಂಬಿಸಿರುತ್ತದೆ. ವಸ್ತು ಎಷ್ಟೇ ಗಟ್ಟಿ, ಕುತೂಹಲಕಾರಿಯಾಗಿದ್ದರೂ, ರಚನಾಕ್ರಮವು ಅಸಮರ್ಪಕವಾಗಿದ್ದರೆ ಕೃತಿ ಪರಿಣಾಮಕಾರಿಯಾಗಿರುವುದಿಲ್ಲ. ಧೋರಣೆಯಲ್ಲಿ ಅದು ಸೋಲುತ್ತದೆ. ಹೀಗೆ ಲೇಖಕನ ಉದ್ದೇಶ ಸಫಲತೆಗೂ, ತಂತ್ರಕ್ಕೂ ನಿಕಟ ಸಂಬಂಧವಿದೆ.

ತಂತ್ರವೆಂದರೆ "ಲೇಖಕನ ಸಾಮಗ್ರಿಯಾದ ಅನುಭವ, ತನ್ನ ಬಗ್ಗೆ ಸರಿಯಾಗಿ ಗಮನವನ್ನು ನೀಡಲು ಅವವನ್ನು ಒತ್ತಾಯಿಸುವ ಸಾಧನ, ಲೇಖಕನಿಗೆ ತನ್ನ ವಸ್ತುವನ್ನು ಅನಾವರಣಗೊಳಿಸಲು, ಶೋಧಿಸಲು, ವಿಕಾಸಗೊಳಿಸಲು, ಅದರ ಅರ್ಥವನ್ನು ಸೂಚಿಸಲು ಹಾಗೆಯೇ ಕೊನೆಯದಾಗಿ ವಸ್ತುವನ್ನು ಬೆಲೆಗಟ್ಟಲು ಇರುವ ಏಕಮಾತ್ರ ಸಾಧನವೇ ತಂತ್ರ" (ಗಿರಡ್ಡಿ ಗೋವಿಂದರಾಜು; ೧೯೭೬; ಪು. ೬) ಎಂದು ಗಿರಡ್ಡಿ ಗೋವಿಂದರಾಜು ಅವರು ಅಭಿಪ್ರಾಯಪಡುತ್ತಾರೆ.

ವಸ್ತುವನ್ನು ಯಾವ ರೀತಿಯಲ್ಲಿ ನಿರೂಪಿಸಿದರೆ ಅದರ ಎಲ್ಲ ಸಾಧ್ಯತೆಗಳನ್ನು ಸೂಕ್ತವಾಗಿ ಕಂಡುಕೊಳ್ಳಲು ಸಾಧ್ಯ ಎಂಬ ವಿವೇಚನೆ ಅವಶ್ಯ. ವಸ್ತುವಿನ ನಿರ್ವಹಣಾ ಕ್ರಮವೇ ತಂತ್ರ ಎನಿಸಿಕೊಳ್ಳುತ್ತದೆ. ಅದರ ಅಭಿವ್ಯಕ್ತಿಯ ಕ್ರಮ, ಮೌಲ್ಯಮಾಪನ ಕ್ರಿಯೆಯೇ ತಂತ್ರವಾಗಿದೆ. ಕಥಾ ಸಂವಿಧಾನದ ಬೆಳವಣಿಗೆ, ಉದ್ದೇಶಗಳನ್ನು ಸಾಧಿಸುವ ಕೌಶಲ್ಯ, ಕುತೂಹಲ ಕೆರಳಿಸುವ ಕಥನ ಪದ್ಧತಿ, ಘಟನಾವಳಿಗಳು ಇದರ ಪರಿಧಿಯಲ್ಲಿ ಬರುತ್ತವೆ.

ಕಾದಂಬರಿಯ ರಚನೆಯಲ್ಲಿ ತಂತ್ರಕ್ಕೂ ಉನ್ನತ ಸ್ಥಾನವಿದೆ. ಕಾದಂಬರಿಯ ಪ್ರಕಾರಗಳಿಗೆ ಅನುಸಾರವಾಗಿ ಕಾದಂಬರಿಯಿಂದ ಕಾದಂಬರಿಗೆ ತಂತ್ರ ಭಿನ್ನವಾಗಿರುತ್ತದೆ. ಕಾದಂಬರಿ ಪ್ರಪಂಚದಲ್ಲಿ ಕಾದಂಬರಿಗಳನ್ನು ಕುರಿತು ಒಂಗು ವಿಮರ್ಶೆಯನ್ನು ಕಂಡು ಕಾರಂತರು "ಕಾದಂಬರಿ ತಂತ್ರಕ್ಕಾಗಿ ನಾವು ಬಲು ಸಂಕಟಪಡುವಂತೆ ಕಾಣುತ್ತದೆ" (ಹರಿದಾಸಭಟ್ಟ ಕು.ಶಿ. ಮತ್ತು ತಿರುಮಲೇಶ್ವರ ಭಟ್ಟ ಎನ್. (ಸಂ); ೧೯೭೦; ಪು. ೧೯೮) ಎಂದಿದ್ದಾರೆ. ಈ ಮಾತುಗಳಿಂದ ಲೇಖಕನೊಬ್ಬನ ಹೊಣೆಗಾರಿಕೆ, ಕ್ಲಿಷ್ಟತೆಗಳು ಹೇಗಿವೆ ಎಂಬುದನ್ನು ತಿಳಿಯಲಾಗುತ್ತದೆ. ಹಲವಾರು ಕಾದಂಬರಿಕಾರರು ವಿವಿಧ ತಂತ್ರಗಳನ್ನು ಬಳಸಿಕೊಂಡಿದ್ದಾರೆ. ತಿರುಗು ನೋಟ ತಂತ್ರ, ನಿರೂಪಣಾ ತಂತ್ರ, ಸ್ವಗತ ತಂತ್ರ, ಸುಪ್ತಮಾನೋಲಹರಿ ತಂತ್ರ, ಮನೋವಿಶ್ಲೇಷಣಾ ತಂತ್ರ, ಪತ್ರತಂತ್ರ, ವರ್ಣನಾ ತಂತ್ರ. ಈ ಎಲ್ಲ ವಿಧಾನಗಳನ್ನು ಕಾದಂಬರಿಗಳು ಒಂದಲ್ಲ ಒಂದು ರೀತಿಯಲ್ಲಿ ಒಳಗೊಂಡಿರುತ್ತವೆ.

ಬದುಕಿನ ಒಂದು ಸಮಸ್ಯೆಯನ್ನು ಎತ್ತಿಕೊಂಡು ಬರೆಯ ಹೊರಟ ಲೇಖಕ ಅಷ್ಟೇ ಪರಿಪೂರ್ಣ ತಂತ್ರವನ್ನು ಹೊಂದಿರಬೇಕು. ಏಕೆಂದರೆ ವಸ್ತುವಿನ ಪದರು ಪದರುಗಳನ್ನು ಅಭಿವ್ಯಕ್ತಪಡಿಸುವ ಸಾಮರ್ಥ್ಯ ತಂತ್ರವನ್ನು ಹೊಂದಿರಬೇಕಾಗುತ್ತದೆ. ವಸ್ತುವಿನ ಪೂರ್ಣ ಅಭಿವ್ಯಕ್ತಿಯು ತಂತ್ರದಲ್ಲಿಯೇ ಅಡಗಿರುತ್ತದೆ. ಲೇಖಕನ ಜೀವನ ದೃಷ್ಟಿಯೊಡನೆ ತಂತ್ರವರ್ಗ ಅಂತರ್ಗತ ಸಂಬಂಧ ಹೊಂದಿರಬೇಕು.

ವಾಚಕರಲ್ಲಿ ಕುತೂಹಲ ಕೆರಳಿಸಿಕೊಂಡು ಹೋಗುವ ತಂತ್ರವೊಂದು ವಸ್ತುವಿನಿಂದ ಹೊರಗುಳಿದು ಮೋಹಕವೆನಿಸಿ ವಸ್ತುವನ್ನು ಗೌಣವಾಗಿಸುವ ಸಾಧ್ಯತೆಗಳೂ ಉಂಟು. 'ಮಾತನಾಡಲು ಕೇವಲ ಧ್ವನಿ ಇದ್ದರೆ ಸಾಲದು ಕಲೆಯಿರಬೇಕು' ಎನ್ನುವ ಮಾತಿನಂತೆ ಕೃತಿಯಲ್ಲಿ ಕೇವಲ ವಸ್ತು ಇದ್ದರೆ ಸಾಲದು ಅದರಲ್ಲಿ ಬಳಸುವ 'ತಂತ್ರ'ವೂ ಮುಖ್ಯವಾಗುತ್ತದೆ.

ಒಟ್ಟಾರೆಯಾಗಿ ಕಾದಂಬರಿಕಾರರು ಯಾವ ರೀತಿ ಕತೆಯನ್ನು ಹೇಳಿದರೆ, ವಸ್ತುವಿನ ಎಲ್ಲ ಸಾಧ್ಯತೆಗಳನ್ನು ದುಡಿಸಿಕೊಳ್ಳಲು ಸಾಧ್ಯವೆಂಬುದನ್ನು ಹಲವು ಬಾರಿ ಯೋಚಿಸಬೇಕಾಗುತ್ತೆ. ಸಹಜತೆಗಿಂತ ಇದು ಕಾದಂಬರಿಯ ಜೀವಾಳದ ಪ್ರಶ್ನೆ ವಸ್ತುವಿಗೆ ತಕ್ಕ ತಾಂತ್ರಿಕವಾದ ಅಂಶಗಳ

ಬಳಕೆಯಾಗದಿದ್ದರೆ ಅದು ಓದುಗರಿಗೆ ಸಂಪೂರ್ಣವಾಗಿ ತೆರೆದುಕೊಳ್ಳುವುದಿಲ್ಲ. ಹಾಗಾದಾಗ ಲೇಖಕರು ಹೇಳುವುದೇ ಬೇರೆ, ಕೃತಿಯಲ್ಲಿ ಸಂಭವಿಸುವುದೇ ಬೇರೆಯಾಗುವ ಸಾಧ್ಯತೆಯಿರುತ್ತದೆ. ಹೀಗಾಗಿ ಒಂದು ವಸ್ತುವನ್ನು ಕಾದಂಬರಿಗೆ ಇಳಿಸುವಲ್ಲಿ ಕಥೆಯನ್ನು ಹೆಣೆಯುವಾಗ ಬಳಸುವ ಜಾಣ್ಮೆಯೇ ತಂತ್ರ, ತಂತ್ರ ಇದ್ದರೇನೇ ಕಾದಂಬರಿಗೆ ಜೀವಂತಿಕೆ ಪ್ರಾಪ್ತವಾಗುತ್ತದೆ. ಇಲ್ಲದಿದ್ದರೆ ಕೃತಿ ಸಪ್ಪೆ ಎನಿಸುತ್ತದೆ.

ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಂಡ ಕಾದಂಬರಿಗಳಲ್ಲಿ ಮೂಡಿಬಂದಿರುವ ತಂತ್ರ ಈ ರೀತಿಯಾಗಿವೆ.

ಅಕ್ಕಮಹಾದೇವಿಯ ವಚನಗಳಿಂದಲೇ ಅಕ್ಕನ ವ್ಯಕ್ತಿತ್ವವನ್ನು ನಿರೂಪಿಸುವ ತಂತ್ರವನ್ನು ಬಳಸಲಾಗಿದೆ. 'ಗಿರಿಯ ನವಿಲು', 'ಕದಳಿಯ ಕರ್ಪೂರ, 'ತರಂಗಿಣಿ' ಕಾದಂಬರಿಗಳು ದಂಪತಿಗಳಿಗೆ ಮಕ್ಕಳಿಲ್ಲದ ಕೊರಗಿನಿಂದ ತಮ್ಮ ಕಥಾವಸ್ತುವಿಗೆ ಪ್ರವೇಶ ಮಾಡಿದರೆ, 'ಕದಳಿಯ ಕರ್ಪೂರ' ಕಾದಂಬರಿ ಅಕ್ಕಮಹಾದೇವಿಯ ಬಾಲ್ಯದೊಂದಿಗೆ ಪ್ರಾರಂಭವಾಗುತ್ತದೆ. 'ಅಕ್ಕಮಹಾದೇವಿ', 'ದಾನಮ್ಮ'ಳ ಜನನದ ಹಿನ್ನೆಲೆಯನ್ನು 'ಗಿರಿಯ ನವಿಲು', 'ತರಂಗಿಣಿ', 'ದಾನ ದಾಸೋಹಿ ದಾನಮ್ಮ' ಕಾದಂಬರಿಗಳು ಪ್ರಾರಂಭದಲ್ಲಿಯೇ ಸಾಮಾನ್ಯವಾಗಿ ಹೇಳುತ್ತಾ ಸಾಗಿದರೆ, 'ಕದಳಿಯ ಕರ್ಪೂರ'ದಲ್ಲಿ ಓಂಕಾರ ಮತ್ತು ಲಿಂಗಮ್ಮರ ಸ್ಮರಣೆಯ ಮುಖಾಂತರ ಜನನದ ಹಿನ್ನೆಲೆಯಲ್ಲಿ ಸ್ಪಷ್ಟವಾಗುತ್ತದೆ. ಕಾದಂಬರಿಕಾರರು ಕಥೆಯನ್ನು ಸರ್ವಸಾಕ್ಷಿ ಪ್ರಜ್ಞೆಯಿಂದಲೇ ನಿರೂಪಿಸುತ್ತಾರೆ. 'ಕದಳಿಯ ಕರ್ಪೂರ'ದ ಲೇಖಕರು ಓಂಕಾರ ಮತ್ತು ಲಿಂಗಮ್ಮರ ಸ್ಮರಣೆಯ ಸನ್ನಿವೇಶದಲ್ಲಿ ಮಾತ್ರ ಪ್ರಥಮ ಪುರುಷದಲ್ಲಿ ಕಥೆಯನ್ನು ಹೇಳುತ್ತಾರೆ. 'ತರಂಗಿಣಿ' ಕಾದಂಬರಿಯಲ್ಲಿ ಮತ್ತೊಂದು ಅಂಶ ಕಂಡು ಬರುತ್ತದೆ. ಕಥೆಯನ್ನು ಹೇಳುತ್ತ ಮುಂದುವರೆದಂತೆಯೇ ಅದಕ್ಕೆ ಸಂಬಂಧಿಸಿದ ಘಟನೆಗಳನ್ನು ಚಿತ್ರಿಸಲು ಪುನಃ ಹಿಂದಿನವೆಲ್ಲವನು ಮೆಲುಕು ಹಾಕಲಾಗಿದೆ. 'ತರಂಗಿಣಿ' ಕಾದಂಬರಿಯ ವಸ್ತುವಿನ ದೃಷ್ಟಿಯಿಂದ ಸೂಕ್ಷ್ಮತೆಯನ್ನು ಪಡೆದುಕೊಂಡಿದೆ. ಆದರೆ ಕಥೆಯನ್ನು ನೇರಗೊಳಿಸದೆ, ಅನಾವಶ್ಯಕ ಕಲ್ಪನೆಗಳನ್ನು ಸೃಷ್ಟಿಸಿ ವಾಸ್ತವಗೊಳಿಸಲು ಹೋಗಿದ್ದಾರೆ.

ದಾನಚಿಂತಾಮಣಿ ಕಾದಂಬರಿಯಲ್ಲಿ ಅತ್ತಿಮಬ್ಬೆಯ ಪಾತ್ರವನ್ನು ಕಾದಂಬರಿಕಾರರು ಮೂರನೆಯ ವ್ಯಕ್ತಿಯಾಗಿ ಹೊರಗಿನಿಂದಲೇ ಕತೆಯನ್ನು ನಿರೂಪಿಸುವ ನಿರೂಪಣಾ ತಂತ್ರವನ್ನು ಬಳಸಿಕೊಂಡಿದ್ದಾರೆ. ಕಾದಂಬರಿಯ ಚಿತ್ರಣದಲ್ಲಿ ಅಸಂಖ್ಯಾತ ಪಾತ್ರಗಳನ್ನು ತಂದು ಗೊಂದಲವನ್ನು ಉಂಟುಮಾಡುವುದಿಲ್ಲ. ಕೇವಲ ಐದಾರು ಪಾತ್ರಗಳಿಗೆ ಆದ್ಯತೆ ನೀಡಿರುವ ಕಾರಣ ಕಲ್ಪನೆಗೆ ಹೆಚ್ಚಿನ ಪ್ರಾಧಾನ್ಯತೆಯಿಲ್ಲ.

ಒಮ್ಮೊಮ್ಮೆ ಕಾದಂಬರಿಯಲ್ಲಿ ಕಥಾವಸ್ತು ಹಿಂದೆ ಉಳಿದು ಅಲ್ಲಿ ವರ್ಣನೆ ವಿವರಣೆ ಹೆಚ್ಚಾಗುತ್ತದೆ. ಕಾದಂಬರಿಯ ಆರಂಭವು ಕುತೂಹಲದಿಂದ ಪ್ರಾರಂಭವಾಗಿ ಪ್ರಶ್ನೋತ್ತರಗಳು ಇದ್ದಂತೆ ಭಾಸವಾಗುತ್ತದೆ. ಲೇಖಕರು ಧಾರ್ಮಿಕ ಚೌಕಟ್ಟಿನಲ್ಲಿ ಕಾದಂಬರಿಯನ್ನು ರಚಿಸಿರುವುದರಂದ ಜೈನ ಧರ್ಮದಲ್ಲಿ ಬರುವಂತಹ ಭವಾವಳಿಗಳನ್ನು ಯಥಾವತ್ತಾಗಿ ಹಿನ್ನೋಟ ತಂತ್ರದಂತೆ ಬಳಸಿರುವರು.

ಕದಳಿಯ ಕರ್ಪೂರ ಕಾದಂಬರಿಯಲ್ಲಿ ವೈಚಾರಿಕತೆಯ ನೆಲೆಯನ್ನು ವಿವರಿಸಲು ಅಕ್ಕನ ವಚನಗಳನ್ನು ಸಾಂದರ್ಭಿಕವಾಗಿ ಬಳಸಿ ಅಕ್ಕಮಹಾದೇವಿಯ ಆಧ್ಯಾತ್ಮಿಕ ತೊಳಲಾಟ, ಮಾನಸಿಕ ಸ್ಥಿರತೆ, ತಾತ್ವಿಕತೆಗಳು ಓದುಗರ ಮನಸ್ಸನ್ನು ತಟ್ಟಲು ತಿಪ್ಪೇರುದ್ರಸ್ವಾಮಿ ಅವರು ಬಳಸಿರುವ ಆತ್ಮಾವಲೋಕನ ತಂತ್ರಗಳು ಪರಿಣಾಮಕಾರಿಯಾಗಿವೆ. 'ಶೂರರಾಣಿ ಕೆಳದಿಯ ಚೆನ್ನಮ್ಮಾ' ಕಾದಂಬರಿಯಲ್ಲಿ ಚೆನ್ನಮ್ಮಾಜಿಯ ಬಾಲ್ಯವನ್ನು ನಿರೂಪಿಸುವ ದೃಷ್ಟಿಯಿಂದ ಸಿದ್ಧಶೆಟ್ಟಿ ಮತ್ತು ಗಿರಿಜನಮ್ಮನವರು ಮಕ್ಕಳಿಲ್ಲದೆ ಕೊರಗುವುದರೊಂದಿಗೆ ಕಥೆಯನ್ನು ಪ್ರಾರಂಭಿಸುತ್ತಾರೆ. ಚೆನ್ನಮ್ಮಾಜಿಯ ಜೀವನವನ್ನು ಚಿತ್ರಿಸುವ ದೃಷ್ಟಿಯಿಂದ ಈ ಬದಲಾವಣೆ ಮಾಡಿಕೊಳ್ಳಲಾಗಿದೆ. ಈ ಭಾಗದಲ್ಲಿ ಚೆನ್ನಮ್ಮಾಜಿಯ ಬಾಲ್ಯವನ್ನು ವೀರಶೈವ ಧಾರ್ಮಿಕ ರೀತಿಗಳಾದ ಲಿಂಗಧಾರಣೆ, ನಾಮಕರಣ, ಪ್ರಸಂಗಗಳಿಂದ ಚಿತ್ರಿಸಿರುವುದು ತಾಂತ್ರಿಕತೆ ದೃಷ್ಟಿಯಿಂದ ಯಶಸ್ವಿಯಾಗಿದೆ. ಶಾಂತಾದೇವಿ ಮಾಳವಾಡರು ಕಾದಂಬರಿಯಲ್ಲಿ 'ಆತ್ಮಕಥನದ' ತಂತ್ರವನ್ನು ಬಳಸಿಕೊಂಡಿದ್ದು ಕಂಡು ಬರುತ್ತದೆ. ಅಷ್ಟೇ ಅಲ್ಲದೆ ಚೆನ್ನಮ್ಮಾಜಿಯ ಪಾತ್ರ ಚಿತ್ರಣದೊಂದಿಗೆ, ಕೆಳದಿ ರಾಜಮನೆತನದ ಇತಿಹಾಸವನ್ನು ಸಂಕ್ಷಿಪ್ತವಾಗಿ ತಿಳಿಸಿಕೊಡುವ ತಂತ್ರವನ್ನು ಬಳಸಲಾಗಿದೆ. ಈ 'ಆತ್ಮಕಥನ'ದ ತಂತ್ರವನ್ನು ಶಾಂತಾದೇವಿ ಮಾಳವಾಡರು ತಮ್ಮ ಮತ್ತೊಂದು ಕಾದಂಬರಿಯಾದ 'ದಾನ ದಾಸೋಹಿ ದಾನಮ್ಮ' ಕಾದಂಬರಿಯಲ್ಲಿ ಸಹ ಬಳಸಿದ್ದಾರೆ. ಕೆಲವೊಂದು ಸನ್ನಿವೇಶ ಸಂದರ್ಭಕ್ಕೆ ತಕ್ಕಂತೆ ನೇರ ನಿರೂಪಣಾ ತಂತ್ರವನ್ನು ಬಳಸಿದ್ದನ್ನು ಕಾಣಬಹುದು.

'ಚೆನ್ನಿ ಚೆನ್ನಮ್ಮ ಚೆನ್ನಮ್ಮಾಜಿ' ಕಾದಂಬರಿಯಲ್ಲಿ ನಾ. ಡಿಸೋಜಾ ಅವರು ಮೂರನೇ ವ್ಯಕ್ತಿ ಎಂಬಂತೆ ಹೊರಗಿನಿಂದ ಕತೆಯನ್ನು ನಿರೂಪಿಸುವುದರೊಂದಿಗೆ ಕೆಲವೊಂದು ಸನ್ನಿವೇಶಗಳಲ್ಲಿ ಆತ್ಮನಿರೂಪಣಾ ತಂತ್ರವನ್ನು ಬಳಸಿಕೊಂಡಿದ್ದಾರೆ.

'ಪಟ್ಟಮಹಾದೇವಿ ಶಾನ್ತಲಾದೇವಿ' ಕಾದಂಬರಿಯಲ್ಲಿ ಸಿ.ಕೆ. ನಾಗರಾಜರಾವ್ ಅವರು ನೇರ ನಿರೂಪಣೆಯನ್ನು ಬಳಸದೇ ಪ್ರತಿನಿರೂಪಣೆಯನ್ನು ತೃತೀಯ ಪುರುಷನೊಬ್ಬನ ಮುಖಾಂತರ ಆತ್ಮನಿರೂಪಣೆಯ ರೀತಿಯಲ್ಲಿ ವ್ಯಕ್ತಪಡಿಸಿದ್ದಾರೆ. ಜಕಣಾಚಾರ್ಯ ಪಾತ್ರ ಚಿತ್ರಣವಾಗಲಿ, ಆತ್ಮ ನಿರೂಪಣೆಯ ವಿವರಗಳಾಗಲಿ ಆ ಮೂಲಕ ಶಿಲ್ಪಿಯೊಬ್ಬನ ಜೀವನ ಚಿತ್ರಣ, ಜಕಣಾಚಾರಿಯು ದಾಂಪತ್ಯದಲ್ಲಿ ವಿರಸ ಮೂಡಿ ಸಂಸಾರ ತ್ಯಾಗ ಮಾಡುತ್ತಾನೆ. ತನ್ನ ವಿರಸ ದಾಂಪತ್ಯದ ಕಥೆಯನ್ನು ಸನ್ನಿಧಾನದ ಮುಂದೆ ಹೇಳಿ ಹೃದಯದ ಇಂಗಿತವನ್ನು ಕಡಿಮೆ ಮಾಡಿಕೊಳ್ಳುವ ಸಲುವಾಗಿ ಆತ, ತನ್ನ ಕಥೆಯನ್ನು ನೇರ ನಿರೂಪಣಾ ತಂತ್ರದಲ್ಲಿ ಬಳಸದೆ, ಆತ್ಮ ನಿರೂಪಣಾ ತಂತ್ರದಲ್ಲಿ ಬಳಸಿದ್ದಾರೆ. ಹೊಸ ಸೃಷ್ಟಿಗಳನ್ನು ಹಾಗೂ ಶಾಂತಲೆಯಲ್ಲಿ ಕಂಡುಬರುವ ಪರಮತ ಸಹಿಷ್ಣುತೆ ಇತ್ಯಾದಿ ವಿವರಗಳನ್ನು ತಿಳಿಸುವ ಸಲುವಾಗಿ ಜಕಣಾಚಾರಿಯ ಪಾತ್ರವನ್ನು ಸೃಷ್ಟಿಸಲಾಗಿದೆ.

'ಗಿರಿಯ ನವಿಲು', 'ಕದಳಿಯ ಕರ್ಪೂರ', 'ತರಂಗಿಣಿ ಕಾದಂಬರಿಗಳ ಕಥಾ ನಿರೂಪಣೆಯಲ್ಲಿ ಸೂಕ್ಷ್ಮವಾದ ತಂತ್ರವನ್ನು ಬಳಸಲಾಗಿದೆ. ಇದರಿಂದಾಗಿ ಕಾದಂಬರಿಯ ವಸ್ತುವಿಗೆ ಮಹತ್ವ ಬಂದಿದೆ. ಅಕ್ಕಮಹಾದೇವಿಯ ಮದುವೆ ವಿವರಣೆ, ಯೌವನ ಚಿತ್ರಣ, ಕೌಶಿಕ ಅಕ್ಕನ ಸೌಂದರ್ಯಕ್ಕೆ ಮಾರುಹೋಗುವುದು. ಅಕ್ಕ ಈ ಸಮಸ್ಯೆಯನ್ನು ಎದುರಸಲು ಸಿದ್ಧಳಾಗುವುದು. ಇಲ್ಲೆಲ್ಲ

ಆಧ್ಯಾತ್ಮಿಕ ಜಿಜ್ಞಾಸೆ ಹಾಗೂ ವಿಚಾರ ಪರತೆಯನ್ನು ಅಭಿವ್ಯಕ್ತಿಗೊಳಿಸುವ ಸಲುವಾಗಿ ನಿರೂಪಣಾ ತಂತ್ರವನ್ನು ಬಳಸಿಕೊಂಡಿದ್ದು ಕಂಡುಬರುತ್ತದೆ. ಈ ಮೂರು ಕಾದಂಬರಿಗಳಲ್ಲಿ ಬರುವ ಸ್ತ್ರೀ ಪಾತ್ರಗಳು ಹೆಚ್ಚಾಗಿ ಒಂದಿಲ್ಲ ಒಂದು ರೀತಿಯ ಶೋಷಣೆಗೆ ಒಳಗಾದಂಥವು. ಪ್ರಾರಂಭದ ಪಾತ್ರಗಳು ನೋವು-ಯಾತನೆಗಳನ್ನು ಸಹಿಸಿಕೊಂಡು ಅಸಹಾಯಕರಂತೆ ಕಾಣುತ್ತವೆ. 'ಗಿರಿಯ ನವಿಲು' ಕಾದಂಬರಿಯಲ್ಲಿ ಮಹಾದೇವಿಯು ಶೋಷಣೆಯ ವಿರುದ್ಧ ದನಿ ಎತ್ತುವಂತೆ ಚಿತ್ರಿಸಿದ್ದು, ವ್ಯಕ್ತಿಗತ ಶೋಷಣೆಯನ್ನು ಸಾರ್ವಜನಿಕಗೊಳಿಸುವ ಸಲುವಾಗಿ, ಕಮಲಾಂಬಿಕೆ ಪಾತ್ರವನ್ನು ಸೃಷ್ಟಿಸಿ ಸಂಭಾಷಣೆಯ ಮೂಲಕ ಪ್ರತಿಭಟನೆಯನ್ನು ವ್ಯಕ್ತಗೊಳಿಸುವುದು ಕಟ್ಟೀಮನಿ ಅವರು ಬಳಸಿದ ತಂತ್ರವಾಗಿದೆ. ಕಾದಂಬರಿಕಾರರು ಅತ್ಯಂತ ಪ್ರಜ್ಞಾಪೂರ್ವಕವಾದ ತಂತ್ರವಾಗಿ, ನಿರೂಪಣೆ, ಸ್ಮರಣೆ, ಕನಸುಗಳ ಮೂಲಕ ಆ ಚಿತ್ರಣಗಳನ್ನು ಬಳಸಿಕೊಂಡಿದ್ದಾರೆ.

'ಪಟ್ಟಮಹಾದೇವಿ ಶಾನ್ತಲಾದೇವಿ', 'ಶಾಂತಲಾ', 'ನಾಟ್ಯರಾಣಿ ಶಾಂತಲಾ', 'ಸವತಿ ಗಂಧವಾರಣೆ', 'ವೀರರಾಣಿ ಕಿತ್ತೂರ ಚೆನ್ನಮ್ಮ', ವೀರವನಿತೆ ಕಿತ್ತೂರ ಚೆನ್ನಮ್ಮ', 'ಅಭಯರಾಣಿ', 'ವೀರವನಿತೆ ಒನಕೆ ಓಬವ್ವ', 'ಚೆನ್ನಾ', 'ಕುಮಾರರಾಮ' ಕಾದಂಬರಿಗಳಲ್ಲಿ ಲೇಖಕರು ನೇರ ನಿರೂಪಣಾ ತಂತ್ರವನ್ನು ಬಳಸಿಕೊಂಡಿದ್ದಾರೆ. ಇವು ಐತಿಹಾಸಿಕ ಕಾದಂಬರಿಗಳಾಗಿದ್ದರಿಂದ ಕಥೆಯ ನಿರೂಪಣಾ ತಂತ್ರ ಕಾದಂಬರಿಗಳ ವಸ್ತುವಿಗೆ ತಕ್ಕ ವಾಹಕವಾಗಿದೆ. 'ಪಟ್ಟಮಹಾದೇವಿ ಶಾಂತಲಾದೇವಿ' ಕಾದಂಬರಿಯ ಲೇಖಕರು ಶಾಂತಲೆಗೆ ಅರಸುಮನೆತನಕ್ಕೆ ಪರಿಚಯ ಮತ್ತು ಒಡನಾಟ ಇತ್ತು ಎಂದು ಸ್ಥಾಪಿಸುವ ಸಲುವಾಗಿ ಕಾದಂಬರಿಯ ಪೂರ್ವಭಾಗದಲ್ಲಿ ರಾಜಮನೆತನಗಳು ಮತ್ತು ಇತರ ಸಂಬಂಧಗಳನ್ನು ವಿವರವಾಗಿ ಚಿತ್ರಿಸಿದ್ದಾರೆ. ಇದು ಕಾದಂಬರಿಯ ನಿರೂಪಣಾ ತಂತ್ರ. ಇದೇ ಕಾದಂಬರಿಯ ಒಂದು ಭಾಗದಲ್ಲಿ ಹೊಯ್ಸಳ ಮನೆತನದ ಕಥೆಯನ್ನು ಮತ್ತೊಂದು ಭಾಗದಲ್ಲಿ ವಿಷ್ಣುವರ್ಧನ ಶಾಂತಲೆಯರ ಪಾತ್ರ, ಸಂಭಾಷಣೆ, ಸ್ನೇಹ, ಪ್ರೀತಿ, ಮದುವೆ ಮುಂತಾದ ಘಟನೆಗಳ ವಿವರ ಇದೆ. ಈ ಎಲ್ಲ ಸಂಗತಿಗಳನ್ನು ಗಮನಿಸಿದಾಗ ಲೇಖಕರು ಸಮ ದೃಷ್ಟಿಕೋನ ಭಾವನೆಯನ್ನು ತಂತ್ರವಾಗಿ ಬಳಸಿಕೊಂಡಿದ್ದಾರೆ. ನಾಟ್ಯರಾಣಿ ಶಾಂತಲಾ ಕಾದಂಬರಿಯಲ್ಲಿ ನೇರ ನಿರೂಪಣೆ ಇದೆ. ಕೆಲವೊಂದು ಕಡೆ ನಿರೂಪಣ ದೃಷ್ಟಿಕೋನ ಬದಲಾಗುತ್ತವೆ. ಆದರೂ ಲೇಖಕ ಸರ್ವಸಾಕ್ಷಿತ್ವ ದೃಷ್ಟಿಕೋನವನ್ನು ಹೊಂದಿರುವುದಿಲ್ಲ. ಬದಲಾಗಿ ಆಯಾ ಪಾತ್ರಗಳ ಆ ಕಾಲದ ತಿಳುವಳಿಕೆಗೆ ತನ್ನನ್ನು ಸೀಮಿತಗೊಳಿಸಿಕೊಳ್ಳುವ ನಿರೂಪಣೆಯ ತಂತ್ರ ಬಳಸಿಕೊಂಡಿರುವುದು ಕಂಡುಬರುತ್ತದೆ. ಶಾಂತಲೆಗೆ ಮಕ್ಕಳಿದ್ದು, ಮಗನಿಗೋಸ್ಕರ ಅವಳನ್ನು ಕೊರಗಿಸುವ ಸನ್ನಿವೇಶ ಸೃಷ್ಟಿ ಮಾಡಿಸುವುದರೊಂದಿಗೆ ಸರಳ ನಿರೂಪಣಾ ತಂತ್ರವನ್ನು ಬಳಸಿಕೊಂಡಿದ್ದಾರೆ. ಶಾಂತಲೆಯನ್ನು ಕುರಿತು ರಚನೆಯಾದ ಕಾದಂಬರಿಯಗಳಲ್ಲಿ ದೀರ್ಘ ಚರ್ಚೆಗಳ ಮೂಲಕ ವಿಷಯವಸ್ತುವನ್ನು ಅಳವಡಿಸಿಕೊಳ್ಳುವ ತಂತ್ರವನ್ನು ಬಳಸಲಾಗಿದೆ. ಕಥೆ ಮುಖಾಂತರ ರಾಜಮನೆತನ ಅಥವಾ ರಾಜನೊಬ್ಬ ಸ್ವಇಚ್ಛೆಯಿಂದ ಧರ್ಮಾಂತರ ಮಾಡುವುದು, ಇಂತಹ ಸಂಕ್ರಮಣ ಸ್ಥಿತಿಯಲ್ಲಿ ಪ್ರಜೆಗಳು ಸಂಘರ್ಷಕ್ಕೆ ಇಳಿಯುವುದು, ಸ್ತ್ರೀಯಾದ ಶಾಂತಲೆ ಈ ಸಂದರ್ಭದಲ್ಲಿ ನಿರ್ಣಾಯಕ ಪಾತ್ರವಹಿಸುವುದು. ಸಾರ್ವಕಾಲಿಕವೆನಿಸುವ ಕುಟಿಲತೆ, ಪ್ರಬುದ್ಧತೆ,

ಇತ್ಯಾದಿ ಚಿತ್ರಗಳನ್ನು ಚಿತ್ರಿಸಲು ಕಾದಂಬರಿಕಾರರು ಬಳಸಿದ 'ನಿರೂಪಣಾ ತಂತ್ರ' ಸಮರ್ಪಕವಾಗಿವೆ.

'ಅಭಯರಾಣಿ' ಕಾದಂಬರಿಯಲ್ಲಿ ನೇರ ನಿರೂಪಣ ತಂತ್ರವನ್ನು ರಾ.ಮಾ. ವಿಶ್ವಾಮಿತ್ರ ಅವರು ಬಳಸಿಕೊಳ್ಳುವುದರೊಂದಿಗೆ, ಲೇಖಕರೇ ಮೂರನೆಯ ವ್ಯಕ್ತಿಯಾಗಿ ಕಥೆಯನ್ನು ಹೇಳುತ್ತಾರೆ. ಕಾದಂಬರಿಯಲ್ಲಿ ದೀರ್ಘ ಚರ್ಚೆಗಳ ಮೂಲಕ ವಿಷಯ ವಸ್ತುವನ್ನು ಅಳವಡಿಸಿಕೊಳ್ಳುವ ತಂತ್ರವನ್ನು ಬಳಸಲಾಗಿದೆ. 'ವೀರರಾಣಿ ಕಿತ್ತೂರ ಚೆನ್ನಮ್ಮ' ಮತ್ತು 'ವೀರವನಿತೆ ಕಿತ್ತೂರ ಚೆನ್ನಮ್ಮ' ಕಾದಂಬರಿಯಲ್ಲಿ ನೇರ ನಿರೂಪಣ ತಂತ್ರವನ್ನು ಬಳಸಿದ್ದಾರೆ. ಕೆ.ವಿ. ರಾಜೇಶ್ವರಿ ಅವರು 'ಕಿತ್ತೂರ ಚೆನ್ನಮ್ಮ'ನ ಪಾತ್ರ ಚಿತ್ರಣದೊಂದಿಗೆ ಕಿತ್ತೂರಿನ ಇತಿಹಾಸವನ್ನು ಸಂಕ್ಷಿಪ್ತವಾಗಿ ತಿಳಿಸಿಕೊಡುವ ಸರಳ ತಂತ್ರದ ಬಳಕೆಯಿದೆ. ಕೆಲವೊಂದು ಸಂಭಾಷಣೆಯ ಸಂದರ್ಭದಲ್ಲಿ ಹೊರಗಿನಿಂದ ಕತೆಯನ್ನು ನಿರೂಪಿಸುತ್ತಾರೆ. ದಸರ ಹಬ್ಬದ ಅಂಗವಾಗಿ ಹಮ್ಮಿಕೊಂಡು ಕ್ರೀಡೆಗಳು ಮತ್ತು ಚಿತ್ರದುರ್ಗವನ್ನಾಳಿದ ಮದಕರಿನಾಯಕನ ಇತಿಹಾಸವನ್ನು ತಿಳಿಸುವುದರೊಂದಿಗೆ 'ವೀರವನಿತೆ ಒನಕೆ ಓಬವ್ವ'ಳ ವ್ಯಕ್ತಿತ್ವವನ್ನು ನಿರೂಪಣ ತಂತ್ರದ ಮೂಲಕ ಚಿತ್ರಿಸಿದ್ದಾರೆ. 'ಚಿನ್ನಾಸಾನಿ' ಮಾನವತಿ, ಬಕುಳೆ, ಗಿರಿಜೆ, ಮಲ್ಲವ್ವ ನಾಗತಿ ಮುಂತಾದ ಪಾತ್ರಗಳಲ್ಲಿಯೂ ಸಹ ಲೇಖಕರು ನೇರ ನಿರೂಪಣ ತಂತ್ರವನ್ನು ಬಳಸಿಕೊಂಡಿದ್ದಾರೆ. ಹೀಗೆ ಲೇಖಕರು ಬಳಸಿದ ಭಾಷಾ ಶೈಲಿ, ತಂತ್ರ, ಸಂಭಾಷಣೆಗಳು ಪಾರಿಭಾಷಿಕ ಪದಗಳು, ನುಡಿಗಟ್ಟುಗಳು ಅಲಂಕಾರ, ಸೂಕ್ತಿಗಳು, ಗಾದೆಮಾತುಗಳು ಕಾದಂಬರಿಯುದ್ದಕ್ಕೂ ಸಹೃದಯರನ್ನು ಸ್ಪಂದಿಸುವುದನ್ನು ತಿಳಿಯಬಹುದಾಗಿದೆ.

□□

## ಅಧ್ಯಾಯ : ಏಳು

# ಸಮಾಪನ

ಕನ್ನಡದಲ್ಲಿ ಕಾದಂಬರಿ ಒಂದು ಆಧುನಿಕ ಸಾಹಿತ್ಯ ಪ್ರಕಾರ. ಈ ಪ್ರಕಾರವು ತನ್ನ ಆರಂಭಿಕ ಹಂತದಲ್ಲಿ ಹೆಚ್ಚು ಜನಪ್ರಿಯವಾದುದೇ ಐತಿಹಾಸಿಕ ಕಾದಂಬರಿಗಳ ಮೂಲಕ ಎನ್ನಬಹುದು. ಐತಿಹಾಸಿಕ ಕಾದಂಬರಿಗಳ ಬರವಣಿಗೆ ಪ್ರಾರಂಭಗೊಂಡಿದ್ದು ನಮ್ಮ ದೇಶಕ್ಕೆ ಸ್ವಾತಂತ್ರ್ಯ ಸಿಗುವುದಕ್ಕಿಂತ ಪೂರ್ವದಲ್ಲಿಯೆ. ದಾಸ್ಯದಲ್ಲಿದ್ದ ಜನಕ್ಕೆ ನಮ್ಮ ಹಿಂದಿನ ವೈಭವ. ಉನ್ನತ ಆದರ್ಶಗಳನ್ನು ನೆನಪು ಮಾಡಿಕೊಡುವ ಘನ ಉದ್ದೇಶದಿಂದ ಬಂಗಾಲಿ ಮತ್ತು ಮರಾಠಿ ಭಾಷೆಯಲ್ಲಿ ಮೊಟ್ಟಮೊದಲಿಗೆ ಐತಿಹಾಸಿಕ ಕಾದಂಬರಿಗಳ ರಚನೆ ಪ್ರಾರಂಭವಾಯಿತು. ಬಂಗಾಲಿಯ ಬಂಕಿಮಚಂದ್ರರಂತೆ ಮರಾಠಿಯ ಅಪ್ಟೆ ಅವರೂ, ಸ್ಕಾಟನ ಮಾದರಿಯಲ್ಲಿ ಐತಿಹಾಸಿಕ ರಮ್ಯ ಕಾದಂಬರಿಗಳನ್ನು ಬರೆಯಲಿಕ್ಕೆ ಪ್ರಾರಂಭಿಸಿದರು. ಇವರ ಅನುವಾದಗಳಿಂದಲೇ ಗಳಗನಾಥರು ಮತ್ತು ಬಿ. ವೆಂಕಟಾಚಾರ್ಯರು ಕನ್ನಡದಲ್ಲಿ ಐತಿಹಾಸಿಕ ಕಾದಂಬರಿಗಳ ರಚನೆಗೆ ನಾಂದಿ ಹಾಡಿದರು.

ಇತಿಹಾಸ ನಿರೂಪಣೆ ಹಾಗೂ ಐತಿಹಾಸಿಕ ಕಾದಂಬರಿಗಳ ನಡುವೆ ಗಮನಿಸಬಹುದಾದ ಅಂತರ ಕಂಡುಬರುತ್ತದೆ. ಐತಿಹಾಸಿಕ ಘಟನೆಗಳನ್ನು, ಪಾತ್ರ ವಿವರಗಳನ್ನು ಇತಿಹಾಸ ಗುರುತಿಸುವ ಮತ್ತು ದಾಖಲಿಸುವ ನೆಲೆ ಕಾದಂಬರಿಗಿಂತ ಭಿನ್ನ. ಕಾದಂಬರಿಗಳು ಐತಿಹಾಸಿಕ ಘಟನೆಗಳ ಸುತ್ತ ಜೀವನವನ್ನು ಹೆಣೆದು ಕಥನಗೊಳಿಸುವ ನೆಲೆ, ಇತಿಹಾಸ ನಿರೂಪಣೆಗಿಂತ ಬೇರೆಯಾಗಿರುತ್ತದೆ. ಇತಿಹಾಸ ಈ ಹಿಂದಿನ ರಾಜ-ರಾಜಮನೆತನಗಳ ಆಡಳಿತ ಸಂದರ್ಭಗಳ ಸಾಧನೆಗಳನ್ನು ದಾಖಲೆಗೊಳಿಸುವ ಅಧ್ಯಯನಕ್ಕೆ ಸೀಮಿತವಾಗಿರುತ್ತದೆ. ಇತರ ಜೀವನ ವಿವರಗಳು ಇತಿಹಾಸದಲ್ಲಿ ಗೌಣವಾಗುತ್ತವೆ.

ಚಾರಿತ್ರಿಕವಾಗಿ ಗಮನಿಸಬಹುದಾದ ಪಾತ್ರಗಳ ಬದುಕಿನ ಒಳನೋಟವನ್ನು ನೀಡಿ ಇಂದಿನ ಜೀವನಕ್ಕೆ ನೆರವಾಗುವುದು ಇತಿಹಾಸದ ಕಾಳಜಿ ಆಗಬೇಕಾಗಿದೆ. ಹಿಂದಿನ ಯುಗದ ವ್ಯಕ್ತಿಗಳ, ಗುಣ ಅವಗುಣಗಳನ್ನು ಐತಿಹಾಸಿಕ ಕೃತಿ ದಾಖಲಿಸಬೇಕಾಗುತ್ತದೆ. ಹಿಂದಿನ ಐತಿಹಾಸಿಕ ಸಾಧನೆಗಳು ಹಾಗೂ ಸೋಲುಗಳು ಇಂದು ಹಾಗೂ ಮುಂದಿನ ಜೀವನಕ್ಕೆ ಉದಾಹರಣೆಯಾಗುವ ಸಾಧ್ಯತೆಯನ್ನು ದಾಖಲಿಸುವುದು ಇತಿಹಾಸದ ನಿರೂಪಣೆಯ ಜವಾಬ್ದಾರಿಯಾಗಿರುತ್ತದೆ. ಇತಿಹಾಸದ

ಬಗ್ಗೆ ಉಪೇಕ್ಷೆಯನ್ನು ತಾಳಿರುವ ಇಂದಿನ ಸಮುದಾಯದಲ್ಲಿ ಹಾಗೂ ಸಂಸ್ಕೃತಿಯ ಪುನರ್‌ನಿರ್ಮಾಣದಲ್ಲಿ ಐತಿಹಾಸಿಕ ಕಾದಂಬರಿಗಳು ಬಹುಮುಖ್ಯ ಪಾತ್ರವಹಿಸುತ್ತವೆ. ಈ ಕಾರಣದಿಂದಾಗಿ ಐತಿಹಾಸಿಕ ಕಾದಂಬರಿಗಳು ಸಾಮಾಜಿಕ ಕಾದಂಬರಿಗಳಿಗಿಂತ ಭಿನ್ನವಾಗುತ್ತವೆ ಹಾಗೂ ಹಿಂದಿನ ಸಂಸ್ಕೃತಿಗಳನ್ನು ದಾಖಲಿಸಿಕೊಂಡು ವಿವರಿಸುವ ಕಾರಣ ಈಗಿನ ಸಾಹಿತ್ಯ ಹೆಚ್ಚಿನ ಸಂಖ್ಯೆಯಲ್ಲಿ ನಿರ್ಮಾಣವಾಗುವುದು ಇಂದಿನ ಅವಶ್ಯಕತೆಯೂ ಕೂಡ ಆಗಿದೆ.

"ಐತಿಹಾಸಿಕ ಕಾದಂಬರಿಕಾರರಿಗೆ ಇತಿಹಾಸದಷ್ಟೇ ಕಲ್ಪನೆಯೂ ಆಗತ್ಯ. ಇತಿಹಾಸದ ಎಲುಬಿಗೆ ಕಲ್ಪನೆಯ ರಕ್ತದಾನವಾಗಬೇಕಾದದ್ದು ಅಗತ್ಯ" (ಚಲುವಾದಿ ಎಂ.ಎನ್.; ೨೦೦೯; ಪು. ೧೯೩) ಎಂದು ಹಾ.ಮಾ. ನಾಯಕ ಅವರು ಅಭಿಪ್ರಾಯಪಡುತ್ತಾರೆ. ಚಾರಿತ್ರಿಕ ಕಾದಂಬರಿ ಕಳೆದ ಒಂದು ಯುಗವನ್ನು ಪುನರ್‌ಸೃಷ್ಟಿಸುತ್ತದೆ. ಒಂದು ಸಮುದಾಯದ ಬಾಳು ಸಾಗಬೇಕಾದರೆ, ಹಲವಾರು ಅಂಗಗಳು ವ್ಯವಸ್ಥಿತವಾಗಿ ಪರಸ್ಪರ ಹೊಂದಾಣಿಕೆಯಿಂದ ಕೆಲಸ ಮಾಡಬೇಕಾಗುತ್ತದೆ. ಚಾರಿತ್ರಿಕ ಕಾದಂಬರಿಗಳು ನಮ್ಮ ನಾಡಿನ ಗತವೈಭವದ ಚಿತ್ರಣದೊಂದಿಗೆ ಆ ಕಾಲದ ಜೀವನ, ಆಸೆ, ಅಪೇಕ್ಷೆ, ಸಂಸ್ಕಾರ, ಸಂಸ್ಕೃತಿ, ಭಾಷೆ, ವೇಷಭೂಷಣ, ಆಚಾರ-ವಿಚಾರ, ನ್ಯಾಯ ನೀತಿ, ನಡೆ-ನುಡಿಗಳು ಮುಂತಾದ ಮೌಲ್ಯಗಳ ಪೂರ್ಣ ಪರಿಚಯವನ್ನು ನಮಗೆ ಮಾಡಿಕೊಡುತ್ತವೆ.

ಐತಿಹಾಸಿಕ ಕಾದಂಬರಿಗಳ ಹುಟ್ಟು ಮತ್ತು ಬೆಳವಣಿಗೆಯನ್ನು ಜಾಗತಿಕ ನೆಲೆಯಲ್ಲಿ ಹಾಗೂ ಕನ್ನಡದ ನೆಲೆಯಲ್ಲಿ ಗಮನಿಸಿದಾಗ ಗಣನೀಯ ಪ್ರಮಾಣದ ಹಾಗೂ ಗುಣಮಟ್ಟದ ಕಾದಂಬರಿಗಳು ರಚನೆಯಾಗದಿರುವುದು ವಾಸ್ತವ ಮತ್ತು ನಿರಾಶಾದಾಯಕ ಸಂಗತಿಯಾಗಿದೆ. ಜಾಗತಿಕ ನೆಲೆಯಲ್ಲಿ ಸಂಖ್ಯೆಯ ದೃಷ್ಟಿಯಿಂದ ಗಮನಿಸಿದಾಗ ಐತಿಹಾಸಿಕ ಕಾದಂಬರಿಗಳ ರಚನೆ ಬಹಳ ಕಡಿಮೆ. ಜಾಗತಿಕ ನೆಲೆಯಲ್ಲಿ ಇತಿಹಾಸಕ್ಕೆ ಸ್ಕಾಟನ-ವೇವರ್ಲಿ, ಓಲ್ಡಮಾರ್‍ವಾಲಿಟಿ, ಥ್ಯಾಕರೆ ಅವರ - Henry Esmond. The Virgions, ಲಿಯೋಟಾಲ್‌ಸ್ಟಾಯ್ ಅವರ war and peace, ಚಾರ್ಲ್ಸ್ ಡಿಕೆನ್ಸ್‌ನ - ಬಾರ್ನ್‌ಬಿರಡ್ಜ್, ಗಾರ್ಡನ್ ದೊಂಬಿಯಾ ಇವರೆಲ್ಲರ ಕಾದಂಬರಿಗಳಲ್ಲಿ ಇತಿಹಾಸಕ್ಕೆ ಸಂಬಂಧಪಟ್ಟ ವಿವರ ಕಂಡುಬರುತ್ತದೆ. ವಿನಃ ಚಾರಿತ್ರಿಕ ಮಹಿಳೆಯರನ್ನು ಕುರಿತಾದ ವಿಷಯಗಳು ಅಷ್ಟಾಗಿ ಕಂಡುಬರುವುದಿಲ್ಲ.

ಕನ್ನಡ ಕಾದಂಬರಿಗಳ ಇತಿಹಾಸವನ್ನು ಗಮನಿಸಿದಾಗ ಕಾದಂಬರಿಗಳ ರಚನೆಯಲ್ಲಿ ಪುರುಷರೇ ಮೇಲುಗೈ ಸಾಧಿಸಿದ್ದು ಕಂಡುಬರುತ್ತದೆ. ಮಹಿಳೆಯರು ಕಾದಂಬರಿಗಳ ರಚನೆಯಲ್ಲಿ ತೊಡಗಿಸಿಕೊಂಡಿದ್ದರೂ, ಆರಂಭಿಕ ಹಂತದಲ್ಲಿ ಮಹಿಳೆಯರು ಕೌಟುಂಬಿಕ ಜೀವನ ಮತ್ತು ಸಮಸ್ಯೆಗಳನ್ನು ಕುರಿತು ವರ್ಣನಾತ್ಮಕ ನೆಲೆಯಲ್ಲಿ ಕಾದಂಬರಿಗಳನ್ನು ರಚಿಸಿದ್ದಾರೆ. ಇತ್ತೀಚಿನ ದಿನಗಳಲ್ಲಿ ಮಹಿಳೆ ವೈಚಾರಿಕವಾಗಿ ಗಟ್ಟಿನೆಲೆಯನ್ನು ಸ್ಥಾಪಿಸಿಕೊಂಡು ಸ್ತ್ರೀವಾದಿ ಚಿಂತನೆಯ ನೆಲೆಯಲ್ಲಿ ಕಾದಂಬರಿಗಳನ್ನು ರಚಿಸತೊಡಗಿರುವುದು ಕಂಡುಬರುತ್ತದೆ. ಆಧುನಿಕ ಕನ್ನಡ ಸಾಹಿತ್ಯದ ಇತಿಹಾಸದುದ್ದಕ್ಕೂ ಐತಿಹಾಸಿಕ ಮಹಿಳೆಯರನ್ನು ಕುರಿತಂತೆ ಕಾದಂಬರಿಗಳನ್ನು ರಚಿಸಿದವರಲ್ಲಿ ಮಾತೆಮಹಾದೇವಿ, ಶಾಂತಾದೇವಿ ಮಾಳವಾಡ, ಜಯಲಕ್ಷ್ಮಿ .ಬಿ. ಪಂಡಿತೆ

ಸೀತಮ್ಮ ಬೇಲಿ, ಕೆ.ವಿ. ರಾಜೇಶ್ವರಿ ಮುಂತಾದ ಬೆರಳೆಣಿಕೆಯ ಲೇಖಕಿಯರಷ್ಟೇ ನಮ್ಮ ಗಮನಕ್ಕೆ ಬರುತ್ತಾರೆ.

ಕನ್ನಡದ ಐತಿಹಾಸಿಕ ಮಹಿಳೆಯರ ಕುರಿತಾದ ಸಾಹಿತ್ಯವೆಂದರೆ ಕೇವಲ ಅಕ್ಕಮಹಾದೇವಿ, ಶಾಂತಲೆ, ಕೆಳದಿಚೆನ್ನಮ್ಮ, ಕಿತ್ತೂರುಚೆನ್ನಮ್ಮ, ಅಬ್ಬಕ್ಕ ರಾಣಿ, ಓಬವ್ವ, ಅತ್ತಿಮಬ್ಬೆಯರ ಬಗೆಗಿನ ಸಾಹಿತ್ಯ ಅಷ್ಟೇ ಅಲ್ಲ; ಇತಿಹಾಸದಲ್ಲಿ ಕಂಡುಬರುವ ಬೆಳವಡಿ ಮಲ್ಲಮ್ಮ, ಉಮಾದೇವಿ, ಚಾಂದಲೆ, ಸಾವಳೆ, ರುದ್ರಮ್ಮ, ಅಕ್ಕಾದೇವಿ, ಹೆಳವನಕಟ್ಟೆ ಗಿರಿಯಮ್ಮ ಮುಂತಾದ ಮಹಿಳೆಯರ ಜೀವನದ ಸಿದ್ಧಿ-ಸಾಧನೆಗಳು ಶಾಸನಗಳಲ್ಲಿ, ಸಾಹಿತ್ಯದಲ್ಲಿ ದೊರಕುತ್ತವೆ. ಇವರ ವಿವರಗಳನ್ನು ಗಮನಿಸಿದಾಗ ಮಹಿಳೆ ಆರಂಭದಿಂದಲೂ ವಿವಿಧ ರಂಗಗಳಲ್ಲಿ ತನ್ನನ್ನು ಕ್ರಿಯಾತ್ಮಕವಾಗಿ ತೊಡಗಿಸಿಕೊಂಡು ಸಾಧನೆಗೈದಿರುವುದು ತಿಳಿದುಬರುತ್ತದೆ. ಹೀಗೆ ಸಾಧನೆಗೈದ ಮಹಿಳೆಯರನ್ನು ಕುರಿತಂತೆ ಸಾಮಗ್ರಿಗಳ ಲಭ್ಯತೆ ಇದ್ದರೂ ಸಹ ಇದನ್ನು ಪ್ರತಿನಿಧಿಸಿರುವ ಸಾಹಿತ್ಯ ನಿರ್ಮಾಣವಾಗದಿರುವುದು ವಿಷಾದನೀಯ. ಮಹಿಳಾ ಸಾಹಿತ್ಯವನ್ನು ಕುರಿತು ಈ ಹೇಳಿಕೆ ಕನ್ನಡ ಸಂದರ್ಭದಲ್ಲಿ ಮಾತ್ರವಷ್ಟೇ ಅಲ್ಲ. ಜಾಗತಿಕ ನೆಲೆಯಲ್ಲಿ ಕೂಡ ಇದು ಅನ್ವಯ ವಾಗುವಂತಹದ್ದು.

ಚಾರಿತ್ರಿಕ ಮಹಿಳೆಯರನ್ನು ಕುರಿತಾಗಿ ಶಾಸನಗಳಲ್ಲಿ, ಸಾಹಿತ್ಯಗಳಲ್ಲಿ, ಕಾವ್ಯಗಳಲ್ಲಿ ಉಲ್ಲೇಖಗಳು ಕಂಡುಬರುತ್ತವೆ. ಉದಾಹರಣೆಗೆ ಸಾಹಿತ್ಯದಲ್ಲಿ ಅನೇಕ ಆದರ್ಶ ಸ್ತ್ರೀಯರು ಆಧ್ಯಾತ್ಮದಲ್ಲಿ ಪುರುಷರಷ್ಟೇ ಮುಂದುವರೆದಿರುವರು. ಅಕ್ಕಮಹಾದೇವಿಯನ್ನು ಹೊರತುಪಡಿಸಿ ಆಧ್ಯಾತ್ಮ ಕ್ಷೇತ್ರದಲ್ಲಿ ಅನೇಕ ಶಿವಶರಣೆಯರಾದ ಗೊಗ್ಗವ್ವೆ, ಮಹಾದೇವಿಯಮ್ಮ, ಮೀರಾಬಾಯಿ, ಕಾರಿಕಾಲಮ್ಮೆ, ಅಂಡಾಳ್ ಮೊದಲಾದವರು ಕಂಡುಬಂದರೆ, ಪೌರಾಣಿಕ ನೆಲೆಯಲ್ಲಿ ಸತಿ ಶಿರೋಮಣಿ ಸಾವಿತ್ರಿ, ದೇವತಾ ಆದಿತಿ, ಶಚಿ, ಸತಿ ಆರುಂಧತಿ, ಮೈತ್ರೇಯಿ, ಅನಸೂಯಾ, ದಮಯಂತಿ, ದ್ರೌಪದಿ, ಸೀತೆ, ಮಂಡೋದರಿ ಮೊದಲಾದವರು ಕಾಣುತ್ತಾರೆ. ಶಾಸನಗಳಲ್ಲಿ, ದಾಖಲೆಗಳಲ್ಲಿ ಬಾದಾಮಿ ಚಾಲುಕ್ಯ ರಾಣಿಯರು, ರಾಷ್ಟ್ರಕೂಟ ರಾಣಿಯರು, ಕದಂಬ ಮಯೂರವರ್ಮನ ರಾಣಿಯರಾದ ಅಕ್ಕಾದೇವಿ, ಮೈಳಲದೇವಿ, ಬೆಳವಡಿಮಲ್ಲಮ್ಮ ಇತ್ಯಾದಿ ಮಹಿಳೆಯರನ್ನು ಕುರಿತು ವಿಪುಲವಾದ ಆಕರ ಸಾಮಗ್ರಿಗಳು ದೊರೆತರೂ ಕೂಡ ಚಾರಿತ್ರಿಕ ಹಿನ್ನೆಲೆಯಲ್ಲಿ ಈ ಮಹಿಳೆಯರನ್ನು ಕುರಿತಾದ ಕಾದಂಬರಿಗಳು ರಚನೆಯಾಗಿಲ್ಲ.

ಸಾಹಿತ್ಯಿಕವಾಗಿ ಹಾಗೂ ಶಾಸನಗಳಲ್ಲಿ ಮಹಿಳೆಯರ ವಿಷಯವಾಗಿ ವಿಪುಲವಾಗಿ ಆಕರ ಸಾಮಗ್ರಿಗಳು ದೊರಕುತ್ತವೆ. ಸಾಹಿತ್ಯ, ಶಾಸನ, ಆಕರ ಸಾಮಗ್ರಿಗಳನ್ನು ಬಳಸಿಕೊಂಡು ಸಂಶೋಧನೆಯನ್ನು ಮಾಡಬಹುದಾಗಿದೆ. ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಇತಿಹಾಸ ವಸ್ತುವಿನ ಬಳಕೆ ಕಾದಂಬರಿಗಳಿಗೆ ಹೊಸ ಕ್ರಮವನ್ನು ನೀಡಿತು. ಅಷ್ಟೇ ಅಲ್ಲದೆ ಪ್ರತ್ಯೇಕ ಪ್ರಕಾರವೆಂಬಂತೆ ಪರಿಗಣಿತವಾಯಿತು ಕೂಡ. ಪುರಾಣ, ಕಾವ್ಯ, ಧರ್ಮದಂತಹ ವಿಷಯಗಳನ್ನು ಬಿಟ್ಟು ಬೇರೇನೂ ಸ್ವೀಕರಿಸಿದ ಸಹೃದಯರ ಜಗತ್ತಿಗೆ ಇತಿಹಾಸ ಪ್ರವೇಶವಾದುದು ಅಭಿರುಚಿಯಲ್ಲಿ ನೂತನ ಕ್ರಾಂತಿಯೊಂದನ್ನು ಕಾದಂಬರಿ ಪ್ರಕಾರ ತಂದಿತು. ಐತಿಹಾಸಿಕ ಕಾದಂಬರಿಗಳಲ್ಲಿ ಹೊಸ

